॥ ಶ್ರೀ ॥

ವ್ಯಾಸಮಹರ್ಷಿಪ್ರಣೀತ

# ಶ್ರೀಮಹಾಭಾರತವು

ಕರ್ಣಾಟಕ ವಚನವು.

## ಸಭಾಪರ್ವವು.



ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ ವಿರಚಿತವು.



ಪ್ರಕಾಶಕರು :

ಕರ್ನಾಟಕ ಡೆಪೊ,

1/59 ಸನ್ನಿಧಿ ಬೀದಿ, ತಿರುವಲ್ಲಿಕ್ಕೇಣಿ, ಮದರಾಸು.

ಬೆಲೆ ರೂ. 1-14-0.

1932

# ವಿಷಯಾನುಕ್ರಮಣಿಕೆ.

ಅಧ್ಯಾಯ. ಪುಟ.

## ಮಂತ್ರಪರ್ವವು.

## ಜರಾಸಂಧವಧಪರ್ವವು.



## ದಿಗ್ವಿಜಯಪರ್ವವು.

## ರಾಜಸೂಯಪರ್ವವು.



## ಅರ್ಘಾಹರಣಪರ್ವವು.

## ಶಿಶುಪಾಲವಧಪರ್ವವು.

## ದ್ಯೂತಪರ್ವವು.

## ಅನುದ್ಯೂತಪರ್ವವು.



# ಚಿತ್ರಪಟಗಳ ಪಟ್ಟಿ.

---







# ಶ್ರೀ ಮಹಾಭಾರತವು

## ಸಭಾಪರ್ವವು.

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।
ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥

### ಮಂತ್ರಪರ್ವವು

ಮಯನು, ಅರ್ಜುನನು ತನಗೆ ಮಾಡಿದ ಉಪಕಾರಕ್ಕಾಗಿ ಯಾವ ಪ್ರತ್ಯುಪಕಾರವು ತನ್ನಿಂದಾಗಬೇಕೆಂದು ಕೇಳಲು, ಕೃಷ್ಣನಿಗೆ ಪ್ರತ್ಯುಪಕಾರಮಾಡಿದರೆ, ಅದೇ ತನಗೆ ಮಾಡಿದುದೆಂದು ಹೇಳಿದುದು. ಆಮೇಲೆ ಕೃಷ್ಣಾಜ್ಞೆಯಿಂದ ಮಯನು ಧರ್ಮರಾಜನಿಗಾಗಿ ಒಂದು ಸಭೆಯನ್ನು ನಿರ್ಮಿಸುವುದಕ್ಕೆ ಒಪ್ಪಿದುದು.

ಆಮೇಲೆ ಜನಮೇಜಯನು ವೈಶಂಪಾಯನನನ್ನು ಕುರಿತು, "ಓ ಮಹರ್ಷೀ! ಜಯಶಾಲಿಗಳಲ್ಲಿ ಶ್ರೇಷ್ಠನೂ, ಮಹಾತೇಜಸ್ವಿಯೂ ಆದ ಅರ್ಜುನನು ಮಯನನ್ನು ಆ ವಿಪತ್ತಿನಿಂದ ತಪ್ಪಿಸಿದಮೇಲೆ ಮಾಡಿದುದೇನು? ಆ ವೃತ್ತಾಂತವನ್ನು ನನಗೆ ತಿಳಿಸಬೇಕು" ಎಂದನು.

ಆಗ ವೈಶಂಪಾಯನನು "ರಾಜೇಂದ್ರಾ! ನಿನ್ನ ಪೂರ್ವಿಕರ ಚರಿತ್ರವನ್ನು ಅವಧಾನದಿಂದ ಕೇಳು. ಖಾಂಡವದಹನಕಾಲದಲ್ಲಿ ಅರ್ಜು

ನನು ಮಯನನ್ನು ಪ್ರಾಣಾಪಾಯದಿಂದ ತಪ್ಪಿಸಿದಮೇಲೆ, ಇತರರಾಜರಿಗೆ ದುರ್ಲಭವಾದ ದಿವ್ಯಾಸ್ತ್ರವನ್ನೂ, ಗಾಂಡೀವವೆಂಬ ಉತ್ತಮಧನುಸ್ಸನ್ನೂ, ಅಕ್ಷಯ ಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ, ಒಂದು ದಿವ್ಯ ರಥವನ್ನೂ, ಉತ್ತಮಧ್ವಜಪತಾಕೆಗಳನ್ನೂ ಅಗ್ನಿದೇವನಿಂದ ಪಡೆದು, ಸಂತೋಷದಿಂದ ಮಯನೊಡನೆ ಸುಖಾಸೀನನಾಗಿದ್ದನು. ಅರ್ಜುನನು ತನ್ನನ್ನು ಅಗ್ನಿಯಿಂದ ರಕ್ಷಿಸಿದ ಉಪಕಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಮಯನು ಬಾರಿಬಾರಿಗೂ ಅವನನ್ನು ಕೊಂಡಾಡುತ್ತ, ಅವನ ಮುಂದೆ ಕೈಜೋಡಿಸಿ ಮೃದುವಾಕ್ಯದಿಂದ ಕೃಷ್ಣನೂ ಕೇಳುತ್ತಿರುವ ಹಾಗೆ ಹೀಗೆಂದನು. “ಓ ಕುಂತೀಕುಮಾರಾ! ಕೋಪಗೊಂಡ ಈ ಕೃಷ್ಣನಿಂದಲೂ, ಅತ್ತಲಾಗಿ ದಹಿಸಬೇಕೆಂದಿದ್ದ ಅಗ್ನಿಯಿಂದಲೂ ನನ್ನನ್ನು ನೀನು ರಕ್ಷಿಸಿದೆ. ಈ ಎರಡು ಮಹಾವಿಪತ್ತುಗಳಿಂದಲೂ ನನ್ನನ್ನು ತಪ್ಪಿಸಿ ಕಾಪಾಡಿದ ನಿನಗೆ, ನಾನು ಏನಾದರೂ ಪ್ರತ್ಯುಪಕಾರ ಮಾಡಬೇಕೆಂದಿರುವೆನು. ನನ್ನಿಂದ ನಿನಗೆ ಆಗಬೇಕಾದ ಕಾರ್ಯವಿದ್ದರೆ, ಹೇಳು. ನಾನು ದೈತ್ಯಶಿಲ್ಪಿಯೆಂಬುದು ನಿನಗೂ ತಿಳಿದೇ ಇರಬಹುದು. ಆದುದರಿಂದ ಬೇರೊಬ್ಬರಿಂದ ಸಾಧ್ಯವಲ್ಲದ ಆಶ್ಚರ್ಯಕರವಾದ ಕಾರ್ಯವನ್ನು ನಿನಗಾಗಿ ಮಾಡಿಕೊಡಬೇಕೆಂದಿರುವೆನು” ಎಂದನು.

ಓ ಜನಮೇಜಯರಾಜಾ! ಮಯನು ಹೇಳಿದ ಈ ಮಾತನ್ನು ಕೇಳಿ ಅರ್ಜುನನು ಸ್ವಲ್ಪಹೊತ್ತಿನವರೆಗೆ ತನ್ನಲ್ಲಿತಾನೇ ಆಲೋಚಿಸಿ, ಮಾಯೆಗಳನ್ನು ಬಲ್ಲ ಆ ಮಯನನ್ನು ಕುರಿತು ನಗುತ್ತ ಹೀಗೆಂದು ಹೇಳುವನು. “ಓ ಅಸುರೇಂದ್ರಾ! ನಿನ್ನ ಪ್ರಿಯವಾಕ್ಯದಿಂದಲೇ ನೀನು ನನಗೆ ಎಲ್ಲಾ ಪ್ರತ್ಯುಪಕಾರವನ್ನೂ ಮಾಡಿದಂತಾಯಿತು. ನಿನಗೆ ಮಂಗಳವಾಗಲಿ! ಹೋಗಿಬಾ! ಈಗಿನಂತೆಯೇ ನಮ್ಮಲ್ಲಿ ನಿನ್ನ ಪ್ರೀತಿಯು ಶಾಶ್ವತವಾಗಿರಲಿ. ನಾವೂ ನಿನ್ನಲ್ಲಿ ಇದೇ ಪ್ರೀತಿಯನ್ನು ಸ್ಥಿರವಾಗಿಟ್ಟಿರುವೆವು. ನನ್ನಿಂದ ಉಪಕಾರವನ್ನು ಪಡೆದವರಲ್ಲಿ ನಾನು ಹಿಂತಿರುಗಿ ಯಾವ ಪ್ರಯೋಜನವನ್ನೂ ಪಡೆಯುವವನಲ್ಲ. ಇದು ನನ್ನ ವ್ರತವು” ಎಂದನು.

ಆದಕ್ಕಾ ಮಯನು “ ಓ ಪುರುಷಶ್ರೇಷ್ಠಾ! ಮಹಾತ್ಮನಾದ ನಿನಗೇ ನೋ ಈ ಮಾತು ಯುಕ್ತವಾದುದೇ! ಆದರೆ ನೀನಾಗಿ ಅಪೇಕ್ಷಿಸದಿದ್ದರೂ ನಿನ್ನಲ್ಲಿ ನನಗುಂಟಾದ ವಿಶ್ವಾಸಕ್ಕೆ ಸೂಚಕವಾಗಿ ನನ್ನಿಂದಾದ ಅಲ್ಪಸ್ವಲ್ಪ ಕಾರ್ಯವನ್ನು ನಿನಗೆ ಮಾಡಬೇಕೆಂದು ಬಯಸುವೆನು. ನಾನು ದಾನವರ ಶಿಲ್ಪಿ. ಶಿಲ್ಪಕಾರ್ಯದಲ್ಲಿ ಅಸಾಧಾರಣ ನೈಪುಣ್ಯವುಳ್ಳವನು. ನಿನಗಾಗಿ ಏನಾದರೂ ಅಲ್ಪಸ್ವಲ್ಪವನ್ನು ಮಾಡಿಯೇ ಹೋಗಬೇಕೆಂಬುದು ನನ್ನ ಬಯಕೆ. ಓ ಪಾರ್ಥಾ! ಪೂರ್ವದಲ್ಲಿ ದಾನವರಿಗಾಗಿ ನಾನು ಎಷ್ಟೋ ಪ್ರಾಸಾದಗಳನ್ನು ನಿರ್ಮಿಸಿಕೊಟ್ಟೆನು. ಅನೇಕ ಸುಖ ಭೋಗ ಸಾಮಗ್ರಿಗಳಿಂದ ತುಂಬಿ ರಮಣೀಯಗಳಾದ ವಿಹಾರೋದ್ಯಾನಗಳನ್ನೂ, ನಾನಾಬಗೆಯ ಸರೋವರಗಳನ್ನೂ ನಿರ್ಮಿಸಿರುವೆನು. ಹಾಗೆಯೇ ಆ ದಾನವರಿಗಾಗಿ ನನ್ನಿಂದ, ವಿಚಿತ್ರವಸ್ತ್ರಗಳು, ಕಾಮಗಮನವುಳ್ಳ ರಥಗಳು, ಅಟ್ಟಲೆಗಳಿಂದಲೂ ಪ್ರಾಸಾದಗಳಿಂದಲೂ ತುಂಬಿದ ವಿಶಾಲನಗರಗಳು, ಉತ್ತಮಗಳಾದ ವಿಚಿತ್ರ ವಾಹನಗಳು, ಅಂದವಾಗಿಯೂ, ಸುಖಸಾಮಗ್ರಿಗಳಿಂದ ತುಂಬಿದುದಾಗಿಯೂ ಇರುವ ಬಿಲಗಳು, ಇವೆಲ್ಲ ಸಾವಿರಾರುಸಂಖ್ಯೆಯಿಂದ ನಿರ್ಮಿಸಿ ಕೊಡಲ್ಪಟ್ಟಿರುವುವು. ಆದುದರಿಂದ ನಿನಗೂ ಅದೇ ವಿಧವಾಗಿ ಏನಾದರೂ ಒಂದು ಕೆಲಸವನ್ನು ಮಾಡಬೇಕೆಂದಿರುವೆನು ” ಎಂದನು. ಅದಕ್ಕಾ ಅರ್ಜುನನು “ ಓ ದಾನವಶ್ರೇಷ್ಠಾ! ನಾನು ನಿನ್ನನ್ನು ಪ್ರಾಣಾಪಾಯದಿಂದ ತಪ್ಪಿಸಿದುದಾಗಿ ನೀನೇ ಹೇಳುತ್ತಿರುವೆ. ಇಂತಹ ಸ್ಥಿತಿಯಲ್ಲಿ ನಿನ್ನಿಂದ ನಾನು ಯಾವ ಪ್ರತ್ಯುಪಕಾರವನ್ನೂ ಅಪೇಕ್ಷಿಸಬಾರದು. ನಿನ್ನಿಂದ ಅಲ್ಪಕಾರ್ಯವನ್ನಾದರೂ ಮಾಡಿಸುವುದಕ್ಕೆ ನನಗೆ ಸಮ್ಮತಿಯಿಲ್ಲ. ಆದರೆ, ನೀನು ನನಗಾಗಿ ಏನಾದರೂ ಪ್ರತ್ಯುಪಕಾರವನ್ನು ಮಾಡಬೇಕೆಂದು ಸಂಕಲ್ಪಿಸಿಕೊಂಡಿದ್ದರೆ, ಆ ನಿನ್ನ ಸಂಕಲ್ಪವೂ ವ್ಯರ್ಥವಾಗಬಾರದೆಂಬುದು ನನ್ನ ಉದ್ದೇಶವು. ಆದುದರಿಂದ ನೀನು ನನಗೆ ಏನಾದರೂ ಪ್ರತ್ಯುಪಕಾರವನ್ನು ಮಾಡಬೇಕೆಂದು ಬಯಸುವುದಾದರೆ, ಈ ಶ್ರೀಕೃಷ್ಣನಿಗೆ ಬೇಕಾದುದನ್ನು ನಡೆಸಿಕೊಡು. ಅದು ನನಗೆ ಮಾಡಿದಂತೆಯೇ ಆಗುವುದು ” ಎಂದನು.

ಓ ಜನಮೇಜಯರಾಜಾ! ಅರ್ಜುನನು ಹೀಗೆಂದು ಮಯನಿಗೆ ಹೇಳಿ, ಆಮೇಲೆ ಕೃಷ್ಣನನ್ನು ಪ್ರಾರ್ಥಿಸಲು, ಕೃಷ್ಣನು ತನ್ನಲ್ಲಿ ತಾನೇ ಮಯನಿಂದ ತಾನು ಮಾಡಿಸಬಹುದಾದ ಕೆಲಸವೇನೆಂದು ಸ್ವಲ್ಪಹೊತ್ತಿನವರೆಗೆ ಆಲೋಚಿಸುತ್ತಿದ್ದನು. ಲೋಕನಾಯಕನಾದ ಶ್ರೀಕೃಷ್ಣನು ಹೀಗೆ ತನ್ನ ಮನಸ್ಸಿನಲ್ಲಿಯೇ ಸ್ವಲ್ಪಹೊತ್ತು ಆಲೋಚಿಸಿ "ಮಯನಿಂದ ಧರ್ಮರಾಜನಿಗಾಗಿ ಒಂದು ಸಭಾಮಂಟಪವನ್ನು ನಿರ್ಮಾಣಮಾಡಿಸಬೇಕು" ಎಂದು ನಿಶ್ಚಯಿಸಿಕೊಂಡನು. ಆಮೇಲೆ ಮಯನ ಕಡೆಗೆ ತಿರುಗಿ "ಓ ದಾನವೇಂದ್ರಾ! ನೀನು ಶಿಲ್ಪಿಗಳಲ್ಲಿ ಮೇಲೆನಿಸಿಕೊಂಡವನು. ನೀನು ನಮಗೆ ಏನಾದರೂ ಪ್ರಿಯವನ್ನು ಮಾಡಬೇಕೆಂಬ ಉದ್ದೇಶವುಳ್ಳವನಾಗಿದ್ದರೆ, ಈ ಧರ್ಮರಾಜನ ಮನಸ್ಸಿಗೆ ಒಪ್ಪುವಂತೆ ಒಂದು ಸಭಾಮಂಟಪವನ್ನು ನಿರ್ಮಿಸಿಕೊಡು. ಲೋಕದಲ್ಲಿ ಬೇರೆ ಯಾರೂ ಆ ನಿನ್ನ ಶಿಲ್ಪಚಾತುರ್ಯವನ್ನು ಅನುಕರಿಸುವುದಕ್ಕೆ ಸಾಧ್ಯವಾಗಬಾರದು. ಲೋಕದಲ್ಲಿ ಅದನ್ನು ನೋಡಿದವರೆಲ್ಲರೂ ಆಶ್ಚರ್ಯದಿಂದ ಬೆರಗಾಗುವಂತಿರಬೇಕು. ಅಂತಹ ಸಭೆಯೊಂದನ್ನು ನೀನು ನಿನ್ನ ಚಾತುರ್ಯದಿಂದ ನಿರ್ಮಿಸಿಕೊಡು. ಅದರಲ್ಲಿ ನಿನ್ನ ಶಿಲ್ಪಚಾತುರ್ಯವೆಲ್ಲವನ್ನೂ ಕಾಣಿಸು. ದೇವತೆಗಳು, ದಾನವರು, ಮನುಷ್ಯರು ಇವರೆಲ್ಲರ ಮನಸ್ಸನ್ನೂ ಆಕರ್ಷಿಸುವಂತಿರುವ ನಿನ್ನ ಶಿಲ್ಪಚಾತುರ್ಯಗಳನ್ನೆಲ್ಲ ಆ ಸಭಾನಿರ್ಮಾಣದ ಮೂಲಕವಾಗಿ ನಮಗೆ ತೋರಿಸು" ಎಂದನು. ಓ ಜನಮೇಜಯರಾಜಾ! ಕೃಷ್ಣನು ಹೀಗೆ ತನಗೆ ಆಜ್ಞೆಮಾಡಲು, ಮಯನಿಗೆ ಮಿತಿಮೀರಿದ ಸಂತೋಷವುಂಟಾಯಿತು. ಒಡನೆಯೇ ಅವನು ದೇವವಿಮಾನಕ್ಕೆ ಸಮಾನವಾದ ಒಂದು ಸಭಾಮಂಟಪವನ್ನು ನಿರ್ಮಿಸಲು ಸಂಕಲ್ಪಿಸಿದನು. ಇಷ್ಟರಲ್ಲಿ ಕೃಷ್ಣಾರ್ಜುನರಿಬ್ಬರೂ ಧರ್ಮರಾಜನಿದ್ದಲ್ಲಿಗೆ ಬಂದು, ನಡೆದ ವೃತ್ತಾಂತವನ್ನೆಲ್ಲ ಅವನಿಗೆ ತಿಳಿಸಿದರು. ಮಯನನ್ನು ಕರೆತಂದು ಅವನಿಗೆ ತೋರಿಸಲು, ಧರ್ಮರಾಜನು ಆ ಮಯನನ್ನು ತಕ್ಕ ರೀತಿಯಿಂದ ಸತ್ಕರಿಸಿದನು. ಮಯನೂ ಆ ಸತ್ಕಾರಗಳನ್ನೆಲ್ಲ ಸಂತೋಷದಿಂದ ಪ್ರತಿಗ್ರಹಿಸಿ, ವೃಷಪರ್ವನೆಂಬ ದಾನವರಾಜನು ಬಿಂದುಸರಸ್ಸಿನಲ್ಲಿ ಯಾಗಮಾಡಿದ ಚರಿತ್ರವನ್ನೆಲ್ಲ ವಿವರಿಸುತ್ತ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡನು.

ಮುಂದೆ ಸಭಾನಿರ್ಮಾಣದಲ್ಲಿ ತನ್ನ ಚಾತುರ್ಯವನ್ನೆಲ್ಲ ಹೇಗೆ ತೋರಿಸಬೇಕೆಂಬುದನ್ನು ತನ್ನಲ್ಲಿತಾನೇ ಆಲೋಚಿಸಿಕೊಂಡನು. ಪಾಂಡವರ ಮತ್ತು ಶ್ರೀಕೃಷ್ಣನ ಅಭಿಪ್ರಾಯಕ್ಕೆ ತಕ್ಕಂತೆ ಸಭಾನಿರ್ಮಾಣಕ್ಕಾಗಿ ಒಂದಾನೊಂದು ಶುಭದಿನದಲ್ಲಿ ಕಾರ್ಯಾರಂಭಕ್ಕೆ ಬೇಕಾದ ಮಂಗಳಾಚರಣಗಳನ್ನೆಲ್ಲ ನಡೆಸಿ, ಸಾವಿರಾರುಮಂದಿ ಬ್ರಾಹ್ಮಣರನ್ನು ಪಾಯಸಾನ್ನದಿಂದ ತೃಪ್ತಿಪಡಿಸಿ, ಧನಕನಕಾದಿಗಳನ್ನೂ ಕೊಟ್ಟು ಸಂತೋಷಗೊಳಿಸಿದನು. ಆಮೇಲೆ ಎಲ್ಲಾ ಋತುಗಳ ಗುಣದಿಂದ ಕೂಡಿದುದಾಗಿಯೂ, ದೇವಸಭೆಯಂತೆ ಮನೋಹರವಾಗಿಯೂ ಇರುವ ಒಂದು ಸಭಾಸ್ಥಾನವನ್ನು ನಿರ್ಮಿಸುವುದಕ್ಕಾಗಿ, ಸುತ್ತಲೂ ಹತ್ತುಸಾವಿರಮೊಳಗಳ ಚದರಳತೆಯುಳ್ಳ ನೆಲವನ್ನು ಅಳತೆಮಾಡಿಸಿದನು.

ಇದು ಮೊದಲನೆಯ ಅಧ್ಯಾಯವು.



ಕೃಷ್ಣನು ದ್ವಾರಕೆಗೆ ಹಿಂತಿರುಗಿ ಹೋಗುವಾಗ, ಯುಧಿಷ್ಠಿರಾದಿಗಳು ಅವನಿಗೆ ತಾವೇ ಸಾರಥ್ಯವನ್ನು ಮಾಡಿದುದು. ಅರ್ಧಯೋಜನದವರೆಗೆ ಹೋದಮೇಲೆ ಕೃಷ್ಣಾಜ್ಞೆಯಿಂದ ಪಾಂಡವರು ಹಿಂತಿರುಗಿದುದು.

ಓ ಜನಮೇಜಯರಾಜಾ! ಕೇಳು! ಲೋಕಪೂಜ್ಯನಾದ ಶ್ರೀಕೃಷ್ಣನು ತನ್ನಲ್ಲಿ ಅಸಾಧಾರಣವಿಶ್ವಾಸವುಳ್ಳ ಪಾಂಡವರಿಂದ ಉಪಚರಿಸಲ್ಪಡುತ್ತ, ಅವರ ವಾಸಸ್ಥಳವಾದ ಖಾಂಡವಪ್ರಸ್ಥದಲ್ಲಿಯೇ ಕೆಲವುಕಾಲದವರೆಗೆ ಸುಖವಾಗಿರುತ್ತಿದ್ದನು. ಆಮೇಲೆ ಅವನಿಗೆ ತನ್ನ ತಂದೆಯನ್ನು ನೋಡಬೇಕೆಂಬ ಆತುರವು ಹುಟ್ಟಿತು. ಒಡನೆಯೇ ದ್ವಾರಕೆಗೆ ಹೋಗಲು ನಿಶ್ಚಯಮಾಡಿದನು. ಆದಕ್ಕಾಗಿ ಧರ್ಮರಾಜನ ಅನುಮತಿಯನ್ನು ಪಡೆದು, ಅತ್ತೆಯಾದ ಕುಂತಿಯನ್ನು ಕಾಣಬೇಕೆಂದು ಅವಳಿದ್ದಲ್ಲಿ ಬಂದು, ಅವಳ ಪಾದಗಳನ್ನು ಹಿಡಿದು ನಮಸ್ಕರಿಸಿದನು. ಕುಂತಿಯೂ ಕೃಷ್ಣನನ್ನು ಪುತ್ರಪ್ರೇಮದಿಂದ ಅಪ್ಪಿಕೊಂಡು, ಅವನ ತಲೆಯನ್ನು ಆಘ್ರಾಣಿಸಿ, ಅವನನ್ನು ಕಳುಹಿಸಿಕೊಟ್ಟಳು. ಅಲ್ಲಿಂದ ಕೃಷ್ಣನು ತನ್ನ ತಂಗಿಯಾದ

ಸುಭದ್ರೆಯಯನ್ನು ನೋಡುವುದಕ್ಕಾಗಿ ಬಂದನು. ಅವಳನ್ನು ಕಂಡೊಡನೆ ಕೃಷ್ಣನಿಗೆ ಪ್ರೀತಿಯಿಂದ ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕುತ್ತಿರಲು, ಅವಳಿಗೆ ಹಿತವಾಗಿಯೂ, ಮಿತವಾಗಿಯೂ, ಅರ್ಥವತ್ತಾಗಿಯೂ ಇರುವ ಕೆಲವು ಹಿತವಾದಗಳನ್ನು ನುಡಿದನು. ಅವಳೂ ತನ್ನ ಕಡೆಯುವರಿಗೆ ಹೇಳಬೇಕಾದ ಪ್ರಿಯಸಂದೇಶಗಳನ್ನು ಅವನಲ್ಲಿ ತಿಳಿಸಿ, ಅವನನ್ನು ನಾನಾವಿಧವಾಗಿ ಪೂಜಿಸಿ ತಲೆಬಗ್ಗಿ ನಮಸ್ಕರಿಸಿದಳು. ಆಮೇಲೆ ಕೃಷ್ಣನು ಅವಳಿಗೆ ಸಮಾಧಾನವಾಕ್ಯಗಳನ್ನು ಹೇಳಿ, ಅವಳ ಅನುಮತಿಯನ್ನು ಪಡೆದು, ಅಲ್ಲಿಂದ ಹಿಂತಿರುಗಿ ದ್ರೌಪದಿಯಬಳಿಗೆ ಬಂದು ಅವಳನ್ನು ಕಂಡನು. ಆಮೇಲೆ ಪಾಂಡವಪುರೋಹಿತನಾದ ಧೌಮ್ಯಮಹರ್ಷಿಯಬಳಿಗೆ ಬಂದು, ಅವನಿಗೆ ನಮಸ್ಕರಿಸಿ ತನ್ನ ಪ್ರಯಾಣಕ್ಕೆ ಅವನ ಅನುಮತಿಯನ್ನು ಪಡೆದನು. ದ್ರೌಪದಿಯನ್ನು ಸಮಾಧಾನಗೊಳಿಸಿ, ಸುಭದ್ರೆಯನ್ನು ಕರೆತಂದು ದ್ರೌಪದಿಯ ವಶದಲ್ಲಿ ಬಿಟ್ಟು, ಅಲ್ಲಿಂದ ಅರ್ಜುನನೊಡಗೊಡಗೂಡಿ ತಿರುಗಿ ಇತರ ಪಾಂಡವರಿದ್ದಲ್ಲಿಗೆ ಬಂದನು. ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ ಕೃಷ್ಣನು ಆ ಐದುಮಂದಿ ಸಹೋದರರಿಂದ ಪರಿವೃತನಾಗಿ, ಪ್ರಯಾಣಕಾಲಕ್ಕೆ ಯೋಗ್ಯವಾದ ಮಂಗಳಕಾರ್ಯಗಳನ್ನು ನಡೆಸುವುದಕ್ಕಾಗಿ ಸ್ನಾನಮಾಡಿ ಶುಚಿಯಾಗಿ ಬಂದು, ದೇಹಾಲಂಕಾರಗಳನ್ನು ಮಾಡಿಕೊಂಡು ದೇವತೆಗಳನ್ನೂ, ಬ್ರಾಹ್ಮಣರನ್ನೂ ಪೂಜಿಸಿದನು. ಬ್ರಾಹ್ಮಣರಿಗೆ ನಮಸ್ಕರಿಸಿ, ಗಂಧಪುಷ್ಪಾದಿಗಳಿಂದಲೂ ದಾನಾದಿಗಳಿಂದಲೂ ಸತ್ಕರಿಸಿದನು. ಈ ಕಾರ್ಯಗಳನ್ನೆಲ್ಲ ಮುಗಿಸಿ ಕೃಷ್ಣನು ಪ್ರಯಾಣಸನ್ನದ್ಧನಾಗಿ, ಪಾಂಡವರ ಅರಮನೆಯ ಹೊರಗಿನ ತೊಟ್ಟಿಯನ್ನು ದಾಟಬರುವಷ್ಟರಲ್ಲಿ, ಅಲ್ಲಿ ಅನೇಕ ಬ್ರಾಹ್ಮಣರು ಮೊಸರು, ಗರಿಕೆ, ಅಕ್ಷತೆ, ಪೂರ್ಣಕುಂಭಗಳು, ಫಲಗಳು, ಈ ಮಂಗಳದ್ರವ್ಯಗಳನ್ನೆಲ್ಲ ಇಟ್ಟುಕೊಂಡು ಸ್ವಸ್ತಿವಾಚನಗಳನ್ನು ಮಾಡುತ್ತಿರಲು, ಅವರೆಲ್ಲರಿಗೂ ಯಥೇಷ್ಟವಾದ ದ್ರವ್ಯವನ್ನು ಕೊಟ್ಟು ಪ್ರದಕ್ಷಿಣವನ್ನು ಮಾಡಿದನು. ಆಮೇಲೆ ಕತ್ತಿ, ಗದೆ, ಶಾರ್ಙ್ಗ, ಚಕ್ರ ಮೊದಲಾದ ಸರ್ವಾಯುಧಗಳಿಂದ ಕೂಡಿದುದಾಗಿಯೂ, ಮಂಗಳಕರವಾಗಿಯೂ, ವೇಗಗಮನವುಳ್ಳುದಾಗಿಯೂ ಇರುವ ಗರುಡಧ್ವಜವುಳ್ಳ ತನ್ನ ಸುವರ್ಣರಥವನ್ನೇರಿ, ಒಳ್ಳೇ ಶುಭನಕ್ಷತ್ರವುಳ್ಳ ಶುಭತಿಥಿಯಲ್ಲಿ ಸುಮೂ

ಹೂರ್ತವನ್ನು ನೋಡಿ, ಅಲ್ಲಿಂದ ಪ್ರಯಾಣಹೊರಟನು. ಕೃಷ್ಣನು ಶೈಬ್ಯ ಸುಗ್ರೀವಗಳೆಂಬ ಎರಡು ಉತ್ತಮಾಶ್ವಗಳಮೇಲೆ ಹೂಡಿದ ತನ್ನ ರಥವನ್ನು ಏರಿ ಕುಳಿತೊಡನೆ, ಯುಧಿಷ್ಠಿರನೂ ಅವನ ಹಿಂದೆ ಆ ರಥವನ್ನೇರಿ, ಸಾರಥ್ಯಕ್ಕಾಗಿ ರಥದಲ್ಲಿ ಕುಳಿತಿದ್ದ ದಾರುಕನ ಕೈಯಿಂದ ಕುದುರೆಗಳ ಹಗ್ಗವನ್ನು ತನ್ನ ಕೈಗೆ ತೆಗೆದುಕೊಂಡು, ಆ ದಾರುಕನನ್ನು ಹಿಂದಕ್ಕೊತ್ತರಿಸಿ, ತಾನೇ ಕೃಷ್ಣನಿಗೆ ಸಾರಥ್ಯವನ್ನು ಮಾಡತೊಡಗಿದನು. ಆಮೇಲೆ ಅರ್ಜುನನೂ ಆ ರಥವನ್ನೇರಿ ಕುಳಿತು, ಚಿನ್ನದ ಹಿಡಿಗಳುಳ್ಳ ಬೀಳೀ ಚಾಮರವನ್ನು ಹಿಡಿದು ದುಂಡಗೆ ಸೇಡಿದ ತನ್ನ ತೋಳುಗಳಿಂದ ಅದನ್ನು ಪ್ರದಕ್ಷಿಣವಾಗಿ ಸುತ್ತಿಸುತ್ತಿ ಕೃಷ್ಣನಿಗೆ ಬೀಸುತ್ತಿದ್ದನು. ಅವರಂತೆಯೇ ಭೀಮಸೇನನೂ ರಥವನ್ನೇರಿ ನೂರು ಅಡ್ಡಗಡ್ಡಿಗಳಿಂದ ವಿಶಾಲವಾಗಿಯೂ, ಹೂವಿನ ಜಾಲರಿಗಳಿಂದ ಅಲಂಕೃತನಾಗಿಯೂ, ವೈಡೂರ್ಯ ದಂಡವುಳ್ಳದಾಗಿಯೂ ಇರುವ ಸುವರ್ಣಾಲಂಕೃತವಾದ ಒಂದು ಶ್ವೇತಚ್ಛತ್ರವನ್ನು ತನ್ನ ಕೈಯಿಂದಲೇ ಕೃಷ್ಣನಿಗೆ ಹಿಡಿಯುತ್ತಿದ್ದನು. ಹೀಗೆ ಭೀಮಾರ್ಜುನರೂ, ನಕುಲಸಹದೇವರೂ ಕೃಷ್ಣನನ್ನು ಸುತ್ತಿಮುತ್ತಿ . ಸೇವಿಸುತ್ತಿರಲು, ಋತ್ವಿಕ್ಕುಗಳೂ, ಪುರಜನರೂ ಆ ಕೃಷ್ಣನ ರಥವನ್ನು ಹಿಂಬಾಲಿಸಿ ಹೊರಟರು. ಹೀಗೆ ಕೃಷ್ಣನು ಅನೇಕಪ್ರಿಯಶಿಷ್ಯರಿಂದ ಪರಿವೃತನಾದ ಗುರುವಿನಂತೆ ತನಗೆ ಪ್ರಾಣಸಮಾನರಾದ ಪಂಚಪಾಂಡವರಿಂದ ಪರಿವೃತನಾಗಿ ಶೋಭಿಸುತ್ತ ಪ್ರಯಾಣಬೆಳೆಸಿದನು. ಆಗ ಬ್ರಾಹ್ಮಣೋತ್ತಮನಾದ ಧೌಮ್ಯನು, ಅನೇಕ ವೃದ್ಧಬ್ರಾಹ್ಮಣರಿಂದ ಪರಿವೃತನಾಗಿ, ತಾನಿದ್ದ ರಥದಮೇಲೆ ಅಭಿಮನ್ಯುವನ್ನು ಏರಿಸಿಕೊಂಡು ಕೃಷ್ಣನನ್ನು ಹಿಂಬಾಲಿಸಿ ಹೊರಟನು. ಹೀಗೆ ಕೃಷ್ಣನು ಎಲ್ಲರೊಡನೆ ಪ್ರಯಾಣಮಾಡಿ ಇಂದ್ರಪ್ರಸ್ಥವನ್ನು ದಾಟಿ, ಒಂದು ಹರದಾರಿಯ ದೂರಕ್ಕೆ ಹೋದಮೇಲೆ, ಅರ್ಜುನನನ್ನು ಪ್ರೀತಿಯಿಂದಪ್ಪಿಕೊಂಡು, ಮುಂದಿನ ಪ್ರಯಾಣಕ್ಕೆ ಅನುಮತಿಯನ್ನು ಕೇಳಿ, ತನ್ನನ್ನು ದಾರಿಕಳುಹಿಸುವುದಕ್ಕಾಗಿ ಬಂದವರನ್ನೆಲ್ಲ ಹಿಂತಿರುಗುವಂತೆ ಕೇಳಿಕೊಂಡನು. ಯುಧಿಷ್ಠಿರನನ್ನೂ, ಭೀಮನನ್ನೂ, ನಕುಲಸಹದೇವರನ್ನೂ ಯಥೋಚಿತವಾದ ಪ್ರಿಯವಾಕ್ಯಗಳಿಂದ ಗೌರವಿಸಿದನು. ಧರ್ಮರಾಜನೂ, ಭೀಮನೂ, ಕೃಷ್ಣನನ್ನು ಬಿಗಿದಪ್ಪಿಕೊಂಡರು. ನಕುಲಸಹ

ದೇವರಿಬ್ಬರೂ ಕೃಷ್ಣನಿಗೆ ನಮಸ್ಕರಿಸಿದರು. ಹೀಗೆ ಕೃಷ್ಣನು ಅರ್ಧ ಯೋಜನದೂರಕ್ಕೆ ಪ್ರಯಾಣಮಾಡಿದಮೇಲೆ, ಧರ್ಮರಾಜನನ್ನು ಹಿಂತಿರುಗುವಂತೆ ಹೇಳಿ, ಮುಂದಿನ ಪ್ರಯಾಣಕ್ಕೆ ಅವನ ಅನುಮತಿಯನ್ನು ಕೇಳುತ್ತಾ ಪಾದಗಳೆರಡನ್ನೂ ಮುಟ್ಟಿ ನಮಸ್ಕರಿಸಿದನು. ಆಗ ಧರ್ಮರಾಜನು ಕೃಷ್ಣನನ್ನು ಕೈಹಿಡಿದು ಮೇಲಕ್ಕೆಬ್ಬಿಸಿ, ಅವನ ತಲೆಯನ್ನಾಘ್ರಾಣಿಸಿ, "ಕೃಷ್ಣಾ! ಇನ್ನು ನೀನು ಹೋಗಿ ಬಾ!" ಎಂದು ಅನುಮತಿಯನ್ನು ಕೊಟ್ಟನು. ಆಮೇಲೆ ಕೃಷ್ಣನು ಪಾಂಡವರಿಗೆ ತಾನು ಸಮಯದಲ್ಲಿ ಸಹಾಯಮಾಡುವಂತೆ ವಾಗ್ದಾನವನ್ನು ಮಾಡಿ, ಸಮಸ್ತ ಪರಿವಾರಗಳೊಡನೆ ತನ್ನನ್ನು ಹಿಂಬಾಲಿಸಿ ಬರುತ್ತಿರುವ ಪಾಂಡವರನ್ನು ಹಿಂತಿರುಗಿಸಿ, ಮುಂದಿನ ಪ್ರಯಾಣವನ್ನು ಬೆಳೆಸಿ, ಇಂದ್ರನು ಅಮರಾವತಿಗೆ ಪ್ರಯಾಣಮಾಡುವಂತೆ ದ್ವಾರಕೆಯ ಕಡೆಗೆ ಹೊರಟನು. ಪಾಂಡವರಿಗಾದರೋ ಕೃಷ್ಣನನ್ನು ಎಷ್ಟೆಷ್ಟು ನೋಡಿದರೂ ತೃಪ್ತಿಯಿಲ್ಲದೆ, ತಮ್ಮ ಕಣ್ಣಿಗೆ ಕಾಣುವವರೆಗೂ ಅವನ ರಥವನ್ನು ನೋಡುತ್ತಿದ್ದರು. ರಥವು ಕಣ್ಮರೆಯಾದಮೇಲೆ ತಮ್ಮ ಮನಸ್ಸಿನಿಂದಲೇ ಅವನನ್ನು ಹಿಂಬಾಲಿಸಿದರು. ನೇತ್ರಾನಂದಕರನಾದ ಆ ಶ್ರೀಕೃಷ್ಣನ ರಥವು ಶೀಘ್ರದಲ್ಲಿಯೇ ಕಣ್ಮರೆಯಾಯಿತು. ಇತ್ತಲಾಗಿ ಪಾಂಡವರಿಗೆ ಕೃಷ್ಣನನ್ನಗಲಿ ಹೋಗುವುದಕ್ಕೆ ಮನಸ್ಸಿಲ್ಲದೆ ಅವರು ಎಷ್ಟೋ ಕಷ್ಟದಿಂದ ಹಿಂತಿರುಗಿ ತಮ್ಮ ಪುರಕ್ಕೆ ಬಂದು ಸೇರಿದರು. ಅತ್ತಲಾಗಿ ಕೃಷ್ಣನೂ ಕೂಡ ವೇಗದಿಂದ ರಥವನ್ನು ಬಿಡಿಸಿಕೊಂಡು, ಯಾವಾಗಲೂ ತನ್ನನ್ನು ಬಿಡದೆ ಹಿಂಬಾಲಿಸುತ್ತಿರುವ ವೀರನಾದ ಸಾತ್ಯಕಿಯೊಡನೆಯೂ, ಸಾರಥಿಯಾದ ದಾರುಕನೊಡನೆಯೂ ಗರುಡನಂತೆ ಮಹಾವೇಗದಿಂದ ದ್ವಾರಕೆಗೆ ಬಂದು ಮುಟ್ಟಿದನು.

ಓ ಜನಮೇಜಯರಾಜಾ! ಇತ್ತಲಾಗಿ ಧರ್ಮರಾಜನು ತನ್ನ ಸಹೋದರರೊಡನೆಯೂ ಇಷ್ಟಮಿತ್ರರೊಡನೆಯೂ ಕೂಡಿ, ಅಲ್ಲಿಂದ ಹಿಂತಿರುಗಿ ಪುರವನ್ನು ಪ್ರವೇಶಿಸಿದಮೇಲೆ, ಅವರೆಲ್ಲರನ್ನೂ ಅವರವರ ಮನೆಗೆ ಹೋಗಲು ಅನುಮತಿಸಿ, ತನ್ನ ಪ್ರಿಯೆಯಾದ ದ್ರೌಪದಿಯೊಡನೆ ಸುಖಸಲ್ಲಾಪದಿಂದಿರುತ್ತಿದ್ದನು. ಅತ್ತಲಾಗಿ ಕೃಷ್ಣನೂ ಕೂಡ ತನ್ನ ಪಟ್ಟಣಕ್ಕೆ

ಬಂದೊಡನೆ, ಉಗ್ರಸೇನನೇ ಮೊದಲಾದ ಯಾದವಶ್ರೇಷ್ಠರಿಂದ ವಿಶೇಷ ವಾಗಿ ಸತ್ಕರಿಸಲ್ಪಡುತ್ತ, ವೃದ್ಧನಾದ ತನ್ನ ತಂದೆಯನ್ನೂ, ತಾಯಿಯನ್ನೂ ಆಹುಕನನ್ನೂ, ಅಣ್ಣನಾದ ಬಲರಾಮನನ್ನೂ ಕಂಡು ನಮಸ್ಕರಿಸಿದನು. ಆಮೇಲೆ, ಪ್ರದ್ಯುಮ್ನ, ಸಾಂಬ, ನಿಶಠ, ಚಾರುಧೇಷ್ಣ, ಗದ, ಅನಿರುದ್ಧ, ಭಾನು, ಮುಂತಾದ ತನ್ನ ಮಿತ್ರರೆಲ್ಲರನ್ನೂ ಕಂಡು, ಅವರನ್ನೆಲ್ಲಾ ಪ್ರೇಮ ದಿಂದ ಆಲಿಂಗಿಸಿದನು. ಆಮೇಲೆ ತನ್ನ ಮನೆಗೆ ಹೋಗಲು ಕುಲವೃದ್ಧರ ಅನುಮತಿಯನ್ನು ಪಡೆದು, ರುಕ್ಮಿಣೀದೇವಿಯ ಅಂತಃಪುರಕ್ಕೆ ಬಂದು, ಆ ದಿವ್ಯಮಂದಿರದಲ್ಲಿ ಸುಖದಿಂದಿರುತ್ತಿದ್ದನು.

ಓ ಜನಮೇಜಯರಾಜಾ! ಈ ನಡುವೆ ಇತ್ತಲಾಗಿ ದಾನವಶ್ರೇಷ್ಠ ನಾದ ಮಯನು ಧರ್ಮರಾಜನಿಗಾಗಿ ಶಿಲ್ಪಶಾಸ್ತ್ರಕ್ಕನುಸಾರವಾದ ಸಭೆ ಯನ್ನು ನಿರ್ಮಿಸತೊಡಗಿದನು.

ಇದು ಎರಡನೆಯ ಅಧ್ಯಾಯವು.



ಸಭಾನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳನ್ನು ತರುವುದ ಕ್ಕಾಗಿ ಮಯನು ಬಿಂದುಸರಸ್ಸಿಗೆ ಹೋದುದು. ಗದೆ ಮತ್ತು ಶಂಖ ಮೊದಲಾದ ಹಲವು ಸಾಮಗ್ರಿಗಳನ್ನು ತೆಗೆದುಕೊಂಡು ಖಾಂಡವಪ್ರಸ್ಥಕ್ಕೆ ಬಂದ ಮಯ ನು, ಭೀಮನಿಗೆ ಗದೆಯನ್ನೂ, ಅರ್ಜುನನಿಗೆ ಶಂಖವನ್ನೂ ಕೊಟ್ಟು ಸಭೆಯನ್ನು ನಿರ್ಮಿಸಿದುದು.

ಓ ಜನಮೇಜಯರಾಜಾ! ಇನ್ನು ಮಯನು ಸಭೆಯನ್ನು ನಿರ್ಮಿ ಸಿದ ವೃತ್ತಾಂತವನ್ನು ತಿಳಿಸುವೆನು ಕೇಳು. ಕೃಷ್ಣನು ಧರ್ಮರಾಜನಿ ಗಾಗಿ ಸಭೆಯನ್ನು ನಿರ್ಮಿಸಬೇಕೆಂದು ಹೇಳಿದೊಡನೆ ಮಯನು ಅರ್ಜುನ ನನ್ನು ಕುರಿತು “ಪಾರ್ಥಾ! ನಾನಿನ್ನು ಹೋಗಿಬರಲು ಅನುಮತಿಯನ್ನು ಕೊಡು. ಶೀಘ್ರದಲ್ಲಿಯೇ ನಾನು ತಿರುಗಿ ಬರುವೆನು. ಮೂರು ಲೋಕ

ದಲ್ಲಿಯೂ ಪ್ರಸಿದ್ಧವಾಗಿ, ಎಲ್ಲಾ ಪ್ರಾಣಿಗಳಿಗೂ ಆಶ್ಚರ್ಯವನ್ನುಂಟು ಮಾಡತಕ್ಕ ದೇವಯೋಗ್ಯವಾದ ಒಂದು ಸಭೆಯನ್ನು ಪಾಂಡವರಾದ ನಿಮ್ಮೆಲ್ಲರ ಮನಸ್ಸಿಗೂ ಪ್ರೀತಿಕರವಾಗುವಂತೆ ನಿರ್ಮಿಸಿಕೊಡುವೆನು. ಕೈಲಾಸಪರ್ವತಕ್ಕೆ ಉತ್ತರದಲ್ಲಿ, ಮೈನಾಕಪರ್ವತಕ್ಕೆ ಸಮೀಪವಾಗಿ ಬಿಂದು ಸರಸ್ಸಿನ ತೀರದಲ್ಲಿ, ಹಿಂದೆ ಅಸುರರು ಒಂದು ಯಾಗವನ್ನು ಮಾಡತೊಡಗಿದರು. ಆಗ ನಾನು ವಿಚಿತ್ರವಾಗಿಯೂ, ರತ್ನಮಯವಾಗಿಯೂ ಇರುವ ಸಾಮಗ್ರಿಗಳನ್ನು ಅದಕ್ಕಾಗಿ ಸಂಗ್ರಹಿಸಿಟ್ಟೆನು. ಅವನ್ನೆಲ್ಲ ಸತ್ಯಸಂಧನಾದ ವೃಷಪರ್ವನೆಂಬ ದಾನವರಾಜನ ಸಭೆಯಲ್ಲಿ ಸೇರಿಸಿಟ್ಟಿದ್ದೆನು. ಆ ಸಾಮಗ್ರಿಗಳು ಇನ್ನೂ ಅಲ್ಲಿರುವುದಾದರೆ, ಅವನ್ನೇ ತೆಗೆದುಕೊಂಡುಬಂದು ಧರ್ಮರಾಜನಿಗಾಗಿ ಈಗ ಉತ್ತಮವಾದ ಸಭೆಯೊಂದನ್ನು ನಿರ್ಮಿಸುವೆನು. ಆ ಸಾಮಗ್ರಿಗಳನ್ನು ತಂದರೆ, ಎಲ್ಲರ ಮನಸ್ಸಿಗೂ ಉಲ್ಲಾಸಕರವಾಗಿಯೂ, ವಿಚಿತ್ರವಾಗಿಯೂ, ಕೇವಲ ರತ್ನಮಯವಾಗಿಯೂ ಇರುವ ಸಭೆಯನ್ನು ನಿರ್ಮಿಸಬಹುದು. ಇದಲ್ಲದೆ, ಓ ಧನಂಜಯಾ! ಆ ಬಿಂದು ಸರಸ್ಸಿನಲ್ಲಿ ಒಂದು ಕ್ರೂರವಾದ ಗದೆಯುಂಟು. ಹಿಂದೆ ಯೌವನಾಶ್ವನೆಂಬ ರಾಜನು ಆ ಗದೆಯಿಂದಲೇ ಅನೇಕ ಶತ್ರುಗಳನ್ನು ಕೊಂದು, ಅದನ್ನು ಅಲ್ಲಿ ಬಚ್ಚಿಟ್ಟಿರುವನು. ಬಹಳ ದೊಡ್ಡದಾದ ಆ ಗದೆಯು ಎಷ್ಟು ಭಾರವನ್ನಾದರೂ ತಡೆಯಬಲ್ಲುದು. ಚಿನ್ನದ ಬೊಟ್ಟುಗಳಿಂದ ಚಿತ್ರಿತವಾಗಿ ಬಹಳ ದೃಢವಾಗಿರುವುದು. ಆ ಒಂದೇ ಗದೆಯು ಶತ್ರುಸಂಹಾರ ವಿಷಯದಲ್ಲಿ ಲಕ್ಷಗದೆಗಳಿಗೆ ಸಾಟಿಯೆನಿಸುವುದು. ನಿನಗೆ ಗಾಂಡೀವ ಧನುಸ್ಸು ಹೇಗೋ ಹಾಗೆ ಆ ಗದೆಯು ನಿನ್ನಣ್ಣನಾದ ಭೀಮಸೇನನಿಗೆ ಅನುಗುಣವಾದುದು. ಇದಲ್ಲದೆ ಅರ್ಜುನಾ! ಅಲ್ಲಿ ವರುಣನಿಗೆ ಸಂಬಂಧಪಟ್ಟ ದೇವದತ್ತವೆಂಬ ದೊಡ್ಡ ಶಂಖವೊಂದಿರುವುದು. ಮಹಾಘೋಷವುಳ್ಳ ಅದನ್ನೂ ನಾನು ನಿನಗೆ ತಂದುಕೊಡುವೆನು" ಎಂದನು.

ಓ ಜನಮೇಜಯರಾಜಾ! ಮಯನು ಅರ್ಜುನನೊಡನೆ ಹೀಗೆಂದು ಹೇಳಿ, ಒಡನೆಯೇ ವಾಯುವ್ಯದಿಕ್ಕಿನ ಮಾರ್ಗವಾಗಿ ಹೊರಟು, ಕೈಲಾಸವನ್ನು ದಾಟಿ ಮೈನಾಕಪರ್ವತವಿದ್ದಲ್ಲಿಗೆ ಹೋದನು. ಅಲ್ಲಿ ಹಿರಣ್ಯಶೃಂಗ

ವೆಂಬ ರತ್ನಮಯವಾದ ದೊಡ್ಡ ಪರ್ವತವೊಂದಿರುವುದು. ಅದರ ಸಮೀಪ ದಲ್ಲಿ ಬಿಂದುಸರಸ್ಸೆಂಬ ಒಂದು ಕೊಳವುಂಟು. ಆ ಬಿಂದು ಸರಸ್ಸಿನ ತೀರದಲ್ಲಿಯೇ ಹಿಂದೆ ಭಗೀರಥನು ಗಂಗೆಯನ್ನು ಸಾಕ್ಷಾತ್ಕರಿಸುವುದಕ್ಕಾಗಿ ಅನೇಕ ವರ್ಷಗಳವರೆಗೆ ತಪಸ್ಸುಮಾಡುತ್ತಿದ್ದನು. ಇದಲ್ಲದೆ ಆ ಬಿಂದು ಸರಸ್ಸಿನ ತೀರದಲ್ಲಿಯೇ ಮಹಾತ್ಮನಾದ ಈಶ್ವರನು ಉತ್ತಮವಾದ ನೂರು ದೊಡ್ಡ ಯಾಗಗಳನ್ನು ನಡೆಸಿದನು. ಅಲ್ಲಿ ರತ್ನಖಚಿತಗಳಾದ ಯೂಪ ಸ್ತಂಭಗಳೂ, ಸುವರ್ಣಮಯಗಳಾದ ದೇವಮಂದಿರಗಳೂ, ಶಾಸ್ತ್ರವಿಧಿ ಗಾಗಿ ಮಾತ್ರವೇ ಅಲ್ಲದೆ, ಕೇವಲ ಶೋಭಾರ್ಥವಾಗಿಯೂ ನಿರ್ಮಿಸಲ್ಪಟ್ಟಿ ರುವುವು. ಅಲ್ಲಿಯೇ ಶಚೀಪತಿಯಾದ ಇಂದ್ರನು ಅನೇಕ ಯಾಗಗಳನ್ನು ಮಾಡಿ ಸಿದ್ಧಿಯನ್ನು ಪಡೆದನು. ಭೂತಪತಿಯಾದ(ಶಂಕರನು)(ಬ್ರಹ್ಮನು) ಲೋಕಗಳನ್ನು ಸೃಷ್ಟಿಸಿದಮೇಲೆ ಅಲ್ಲಿಯೇ ನೆಲೆಸಿ, ಸಮಸ್ತಭೂತಗಳಿಂದ ಉಪಾಸಿಸಲ್ಪಡುತ್ತಿರುವನು. ನರನಾರಾಯಣರೂ, ಬ್ರಹ್ಮದೇವನೂ, ಯಮ ನೂ, ಸ್ಥಾಣುವೆಂಬ ರುದ್ರನೂ ಈ ಐದುಮಂದಿಯೂ ಅಲ್ಲಿಯೇ ಸಹಸ್ರ ಯುಗಗಳವರೆಗೆ ತಪೋನಿರತರಾಗಿ ಪರಬ್ರಹ್ಮೋಪಾಸನದಲ್ಲಿರುತ್ತಿರುವರು. ಅಲ್ಲಿಯೇ ವಿಷ್ಣುವು ಧರ್ಮಸ್ಥಾಪನೆಗಾಗಿ ಬಹುವರ್ಷಗಳವರೆಗೆ ಶ್ರದ್ಧೆಯಿಂದ ಯಾಗಗಳನ್ನು ನಡೆಸಿದನು. ಆಗ ಅಲ್ಲಿ ಕೇಶವನು ಸುವರ್ಣಮಾಲಿಕೆ ಗಳಿಂದಲಂಕೃತಗಳಾದ ಯೂಪಗಳನ್ನೂ, ಮನೋಹರಗಳಾದ ದೇವಮಂ ದಿರಗಳನ್ನೂ, ಸಹಸ್ರಲಕ್ಷಸಂಖ್ಯೆಯಿಂದ ನಿರ್ಮಿಸಿರುವನು. ಇದಲ್ಲದೆ ಅಲ್ಲಿ ವಿಷ್ಣುವು ಆ ಯಾಗಕಾಲದಲ್ಲಿ ಲಕ್ಷೋಪಲಕ್ಷ ಸಂಖ್ಯೆಯಿಂದ ದಾನ ಗಳನ್ನೂ ನಡೆಸಿದನು.

ಓ ಜನಮೇಜಯರಾಜಾ! ಮಯನು ನೆಟ್ಟಗೆ ಆ ಬಿಂದುಸರಸ್ಸಿಗೆ ಹೋಗಿ, ಮೊದಲು ಅಲ್ಲಿದ್ದ ಗದೆಯನ್ನೂ, ಶಂಖವನ್ನೂ ತೆಗೆದುಕೊಂಡನು. ಮತ್ತು ಹಿರಣ್ಯಶೃಂಗವೆಂಬ ಆ ಪರ್ವತದಿಂದ ಬಹಳ ಅಂದವಾದ ಕೆಲವು ಶಿಲೆಗಳನ್ನೂ ಸಂಗ್ರಹಿಸಿಕೊಂಡನು. ಅಲ್ಲಿಂದ ವೃಷಪರ್ವನ ಸಭೆಯಲ್ಲಿದ್ದ ಸ್ಫಟಿಕಮಯಗಳಾದ ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು, ಅಲ್ಲಿಯೇ ಆ ಮಹಾವನವನ್ನು ಕಾಯುತ್ತಿದ್ದ ರಾಕ್ಷಸಕಿಂಕರರೊಡನೆ ಅವನ್ನೆಲ್ಲ ಸಾಗಿಸಿ

ಕೊಂಡು ಬಂದನು. ಹೀಗೆ ಮಯನು ಎಲ್ಲವನ್ನೂ ಸಂಗ್ರಹಿಸಿತಂದು, ಅವುಗಳಿಂದ ಸರ್ವರತ್ನಮಯವಾಗಿ, ಮಂಗಳಕರವಾಗಿ, ಮೂರು ಲೋಕಗಳಲ್ಲಿಯೂ ಅಸಮಾನವೆನಿಸಿ ಪ್ರಖ್ಯಾತಿಹೊಂದಿದ ದಿವ್ಯಸಭೆಯೊಂದನ್ನು ನಿರ್ಮಿಸಲು ಸಂಕಲ್ಪಿಸಿದನು. ತಾನು ಅಲ್ಲಿಂದ ತಂದ ಮಹಾಗದೆಯನ್ನು ಭೀಮನಿಗೆ ಕೊಟ್ಟನು. ಯಾವ ಶಂಖದ ಧ್ವನಿಯಿಂದ ಸಮಸ್ತ ಭೂತಗಳೂ ನಡುಗುತ್ತಿದ್ದುವೋ ಅಂತಹ ಉತ್ತಮವಾದ ದೇವದತ್ತವೆಂಬ ಶಂಖವನ್ನು ಅರ್ಜುನನಿಗೆ ಕೊಟ್ಟನು. ಕೆಲವು ಕಾಲದವರೆಗೆ ವಿಶ್ರಾಂತಿಯನ್ನು ತೆಗೆದುಕೊಂಡಮೇಲೆ ಆ ದೈತ್ಯಶಿಲ್ಪಿಯು, ಪಾಂಡವರಿಗಾಗಿ ಸಭೆಯನ್ನು ನಿರ್ಮಿಸುವುದಕ್ಕೆ ಉಪಕ್ರಮಿಸಿದನು. ಮಹಾತ್ಮರಾದ ಪಾಂಡವರ ಮತ್ತು ಶ್ರೀಕೃಷ್ಣನ ಅಭಿಪ್ರಾಯಕ್ಕನುಸಾರವಾಗಿ, ಸಾರ್ವರ್ತುಕಗಳಾದ (ಎಲ್ಲಾ ಋತುಗಳಿಗೆ ಸಂಬಂಧಪಟ್ಟ) ಸಮಸ್ತ ಗುಣಗಳಿಂದ ಕೂಡಿದುದಾಗಿಯೂ, ದೇವಯೋಗ್ಯವಾದ ಸೌಂದರ್ಯವುಳ್ಳದಾಗಿಯೂ, ಸರ್ವಾಲಂಕಾರಭೂಷಿತವಾಗಿಯೂ ಇರುವ ಸಭಾಮಂದಿರವನ್ನು ಕಟ್ಟುವುದಕ್ಕಾರಂಭಿಸಿ, ಆ ನಿರ್ಮಾಣಕಾರ್ಯಕ್ಕೆ ಮೊದಲು ಸಾವಿರಾರುಮಂದಿ ಬ್ರಾಹ್ಮಣರನ್ನು ಪಾಯಸಾನ್ನದಿಂದ ಸಂತೃಪ್ತಿಗೊಳಿಸಿದನು. ಸುತ್ತಲೂ ಹತ್ತುಸಾವಿರ ಅಡಿಗಳ ಚದರಳತೆಯಿಂದ ವಿಶಾಲವಾದ ಆ ಸಭಾಮಂದಿರದಲ್ಲಿ, ಯಾವ ಕಡೆ ನೋಡಿದರೂ ಸುವರ್ಣಮಯಗಳಾದ ವೃಕ್ಷಗಳು ಕಂಗೊಳಿಸುತ್ತಿರುವುವು. ಚಂದ್ರಸೂರ್ಯಾಗ್ನಿಗಳ ಸಭೆಗಳಂತೆ ನೋಡುವವರ ಕಣ್ಣುಗಳನ್ನು ಕೋರೈಸುವಂತಿರುವ ದಿವ್ಯತೇಜಸ್ಸಿನಿಂದ ಬೆಳಗುತ್ತಿರುವುದು. ಸೂರ್ಯಪ್ರಭೆಯನ್ನು ತಿರಸ್ಕರಿಸುವಂತೆ ಅದ್ಭುತ ಕಾಂತಿಯಿಂದ ಜ್ವಲಿಸುತ್ತಿರುವುದು. ಔನ್ನತ್ಯದಿಂದ ಆಕಾಶವನ್ನೆಲ್ಲ ಆವರಿಸಿದ ಮಹಾಮೇಘದಂತೆ ಕಾಣುತ್ತಿರುವುದು. ವಿಶಾಲವಾಗಿಯೂ, ಅತ್ಯಂತ ರಮ್ಯವಾಗಿಯೂ, ನಿಷ್ಕಲ್ಮಷವಾಗಿಯೂ, ನೋಡುವವರಿಗೆ ಉಲ್ಲಾಸಜನಕವಾಗಿಯೂ, ಉತ್ತಮ ದ್ರವ್ಯಸಮೃದ್ಧವಾಗಿಯೂ ಇರುವ ಆ ಸಭೆಗೆ ಮಣಿಮಯವಾದ ಗೋಡೆಗಳು! ರತ್ನದ ಹೆಬ್ಬಾಗಿಲುಗಳು! ವಿಧವಿಧವಾದ ಚಿತ್ರಕಾರ್ಯಗಳು! ಬೆಲೆಯುಳ್ಳ ಅನೇಕ ವಸ್ತುಗಳು! ದೈತ್ಯಶಿಲ್ಪಿಯಾದ ಮಯನ ಶಿಲ್ಪಚಮತ್ಕಾರಗಳೆಲ್ಲವೂ ಕಾಣುವಂತಿರುವ ಕಾರ್ಯನೈಪುಣ್ಯ

ಗಳು! ಇವನ್ನೆಲ್ಲ ನೋಡುವಾಗ, ಶ್ರೀವಿಷ್ಣುವಿನ ಸಭೆಯಾಗಲಿ, ಇಂದ್ರನ ಸುಧರ್ಮೆಯಾಗಲಿ, ಬ್ರಹ್ಮಸಭೆಯಾಗಲಿ ಅದಕ್ಕೆ ಸಾಟಿಯಲ್ಲವೆಂದು ತೋರುವುದು. ಮಹಾಧೀಮಂತನಾದ ಮಯನಿಂದ ನಿರ್ಮಿಸಲ್ಪಟ್ಟ ಆ ಸಭಾಮಂದಿರವು ಅಸಾಧಾರಣ ಸೌಂದರ್ಯದಿಂದೊಪ್ಪುವುದು. ಮಯನಿಂದಾಜ್ಞಾಪಿಸಲ್ಪಟ್ಟ ಕಿಂಕರರೆಂಬ ಎಂಟುಸಾವಿರಮಂದಿ ರಾಕ್ಷಸರು ಅದನ್ನು ರಕ್ಷಿಸುತ್ತಲೂ, ಅವನು ಹೇಳಿದ ಕಡೆಗೆ ಸಾಗಿಸುತ್ತಲೂ ಇರುವರು. ಆ ರಾಕ್ಷಸರೆಲ್ಲರೂ ಗಗನಚಾರಿಗಳು. ಭಯಂಕರವಾದ ದೊಡ್ಡ ಆಕಾರವುಳ್ಳವರು. ಮಹಾಬಲಾಢ್ಯರು. ಕೆಲವರಿಗೆ ಕೆಂಪಾದ ಕಣ್ಣುಗಳು. ಮುತ್ತುಚಿಪ್ಪಿನಂತಿರುವ ಕಿವಿಗಳು. ಒಬ್ಬೊಬ್ಬರೂ ಆಯುಧಧಾರಿಗಳು. ಇಂತಹ ರಾಕ್ಷಸರಿಂದ ಇಷ್ಟಬಂದಕಡೆಗೆ ಸಾಗಿಸಿಕೊಂಡು ಹೋಗಲು ಅನುಕೂಲಿಸುವಂತೆ ನಿರ್ಮಿಸಲ್ಪಟ್ಟ ಆ ಸಭೆಯ ನಡುವೆ, ಮಯನು ಎಣೆಯಿಲ್ಲದ ಒಂದು ಕಮಲಸರೋವರವನ್ನು ನಿರ್ಮಿಸಿದ್ದನು. ಅಲ್ಲಿನ ಕಮಲಗಳಿಗೆ ವೈಡೂರ್ಯದ ದಳಗಳು! ರತ್ನದ ದಿಂಡುಗಳು! ಅಲ್ಲದೆ, ಆ ಕೊಳದಲ್ಲಿ ತಾವರೆ, ಸೌಗಂಧಿಕ ಮೊದಲಾದ ಎಲ್ಲಾ ಬಗೆಯ ಹೂಗಳೂ ತುಂಬಿರುವುವು. ನಾನಾಬಗೆಯ ಪಕ್ಷಿಜಾತಿಗಳು ವಿಹರಿಸುತ್ತಿರುವುವು. ಅದು ಅರಳಿದ ತಾವರೆಗಳಿಂದ ವಿಚಿತ್ರವಾಗಿ ಸುವರ್ಣಮಯಗಳಾದ ಮೀನು ಆಮೆ ಮೊದಲಾದ ಜಲಚರಜಂತುಗಳಿಂದ ಶೋಭಿಸುತ್ತಿರುವುದು. ಅದರ ಸೋಪಾನಗಳೆಲ್ಲವೂ ವಿಚಿತ್ರವಾದ ಸ್ಫಟಿಕಗಳಿಂದ ನಿರ್ಮಿತವಾದುದು. ಅದರ ನೀರು ಸ್ವಲ್ಪಮಾತ್ರವೂ ಕೆಸರಿಲ್ಲದೆ ನಿಷ್ಕಲ್ಮಷವಾಗಿರುವುದು. ಮೃದುವಾದ ತಂಗಾಳಿಯಿಂದ ಅದು ಅಲೆಯಾಡುತ್ತಿರುವುದು. ಮುತ್ತಿನ ಮಣಿಗಳೇ ಆ ಸರೋವರದ ತೀರಪ್ರದೇಶದಲ್ಲಿರುವ ಮಳಲಿನಂತಿರುವುದು. ಅದರ ಸುತ್ತಿನ ಕೈಸಾಲೆಗಳೆಲ್ಲವೂ ರತ್ನಮಯವಾದ ಕಲ್ಲುಚಪ್ಪಡಿಗಳಿಂದ ಹಾಸಲ್ಪಟ್ಟಿರುವುದು. ಉತ್ತಮರತ್ನಗಳಿಂದ ವಿಚಿತ್ರವಾಗಿ ಕೆತ್ತಲ್ಪಟ್ಟ ಆ ಸರೋವರದ ಸಮೀಪಕ್ಕೆ ಬಂದು, ಅನೇಕರಾಜರು ಅದು ಕೊಳವೆಂದು ತಿಳಿಯದೆ ಅದರಲ್ಲಿ ಬೀಳುತ್ತಿರುವರು. ಆ ಕೊಳದ ಸುತ್ತಲೂ ಫಲಪುಷ್ಪಭರಿತಗಳಾದ ನಾನಾಬಗೆಯ ಮಹಾವೃಕ್ಷಗಳು ತಂಪಾದ ನೆರಳನ್ನು ಕೊಡುತ್ತ ಅತ್ಯಂತ ರಮ್ಯವಾಗಿರುವುವು. ಅದರ ಸುತ್ತಿನ ತೋಟಗಳಿಂದ ಯಾವಾಗಲೂ ಪುಷ್ಪಗಳ

ಸುವಾಸನೆಯೂ ಘಮಘಮಿಸುತ್ತಿರುವುದು. ಈ ಮುಖ್ಯ ಸರೋವರವಲ್ಲದೆ ಮಯನಿರ್ಮಿತವಾದ ಆ ಸಭೆಯಲ್ಲಿ ಎಲ್ಲಿ ನೋಡಿದರೂ ಹಲವು ತಾವರೆಕೊಳಗಳು, ಹಂಸ, ಕಾರಂಡವ, ಚಕ್ರವಾಕ ಮೊದಲಾದ ಜಲಪಕ್ಷಿಗಳಿಂದ ಮನೋಹರವಾಗಿರುವುವು. ಮತ್ತು ಆ ಸಭಾಮಂದಿರದ ನಾಲ್ಕುಕಡೆಗಳಿಂದಲೂ, ನೀರಿನಲ್ಲಿಯೂ ನೆಲದಲ್ಲಿಯೂ ಹುಟ್ಟಿದ ಅನೇಕ ಪುಷ್ಪಜಾತಿಗಳ ಸುಗಂಧದೊಡನೆ ತಂಗಾಳಿಯು ಪಾಂಡವರನ್ನು ಸಂತೋಷಗೊಳಿಸುತ್ತಿರುವುದು. ಮಯನು ಇಂತಹ ದಿವ್ಯಸಭೆಯನ್ನು ಹದಿನಾಲ್ಕು ತಿಂಗಳ ಕಾಲದಲ್ಲಿ ಕಟ್ಟಿ ಮುಗಿಸಿ ಬಂದು ಆ ವಿಷಯವನ್ನು ಧರ್ಮರಾಜನಿಗೆ ತಿಳಿಸಿದನು.

ಇದು ಮೂರನೆಯ ಅಧ್ಯಾಯವು.

---

ಯುಧಿಷ್ಠಿರನು ಬ್ರಾಹ್ಮಣಸಂತರ್ಪಣವನ್ನು ಮಾಡಿಸಿ ಆ ಸಭೆಯನ್ನು ಪ್ರವೇಶಿಸಿದುದು. ಋಷಿಗಳೂ, ಕ್ಷತ್ರಿಯರೂ, ದೇವಗಂಧರ್ವಾದಿಗಳೂ ಆ ಸಭೆಗೆ ಬಂದುದು.

ಓ ಜನಮೇಜಯರಾಜಾ! ಕೇಳು! ಮಯನು ಇಂತಹ ಸಭಾಮಂದಿರವನ್ನು ನಿರ್ಮಿಸಿದಮೇಲೆ ಅರ್ಜುನನನ್ನು ನೋಡಿ “ಓ ಸವ್ಯಸಾಚೀ! ಸಮಸ್ತಭೂತಗಳಲ್ಲಿಯೂ ವೀರ್ಯದಲ್ಲಿ ಮೇಲೆನಿಸಿಕೊಂಡ ಕಿಂಕರರೆಂಬ ರಾಕ್ಷಸಗಣವು ನಿನ್ನ ಧ್ವಜಾಗ್ರದಲ್ಲಿ ಯಾವಾಗಲೂ ನೆಲೆಸಿದ್ದು, ನಿನ್ನ ಧನುಷ್ಟಂಕಾರದ ಧ್ವನಿಯನ್ನು ಕೇಳಿದೊಡನೆ ಮೇಘದಂತೆ ಘರ್ಜಿಸುವುದು. ನಿನಗೆ ಅಗ್ನಿದತ್ತವಾದ ಈ ಮಹಾರಥವು ಸೂರ್ಯನಂತೆ ಜ್ವಲಿಸುತ್ತಿರುವುದು. ದೇವಲೋಕದಲ್ಲಿ ಹುಟ್ಟಿದ ಈ ನಿನ್ನ ರಥಾಶ್ವಗಳು ಮಹಾವೇಗವುಳ್ಳವುಗಳು. ಈ ನಿನ್ನ ರಥದಮೇಲಿರುವ ವಾನರಚಿಹ್ನವುಳ್ಳ ಧ್ವಜವೂಕೂಡ ಧೂಮಕೇತುವಿನಂತೆ ಮಹೋನ್ನತವಾಗಿದ್ದರೂ ಮಾಯಾಮಯವಾಗಿ ನಿರ್ಮಿಸಲ್ಪಟ್ಟಿರುವುದರಿಂದ, ದಾರಿಯಲ್ಲಿ ಯಾವ ವೃಕ್ಷಗಳಿಂದಲೂ ತಡೆಯಲ್ಪಡದೆ ಮುಂದೆ ಸರಿಯುವುದು. ಈ ಧ್ವಜವು

ಸಮಯಕ್ಕೆ ತಕ್ಕಂತೆ ನಾನಾವರ್ಣಗಳಿಂದ ಕಾಣಿಸುವುದು. ಈ ನಿನ್ನ ಧ್ವಜವು ಯುದ್ಧರಂಗದಲ್ಲಿ ಎಷ್ಟೋ ಉನ್ನತವಾದ ಬೇರೆ ಧ್ವಜಗಳಿದ್ದರೂ, ಅ ವೆಲ್ಲಕ್ಕಿಂತಲೂ ಉನ್ನತವಾಗಿ ಕಾಣಿಸುವುದನ್ನು ನೀನು ನೋಡುವೆ. ಓ ಪಾಂಡುಪುತ್ರಾ! ವೀರನಾದ ಈ ಹನುಮಂತನು ತನ್ನ ನಿಜಾಕಾರದೊಡನೆ ಯೇ ನಿನ್ನ ಧ್ವಜಾಗ್ರದಲ್ಲಿ ನೆಲೆಸಿರುವನು'' ಎಂಬೀ ಮಾತುಗಳನ್ನು ಮಯನು ಅರ್ಜುನನಿಗೆ ಹೇಳಿ, ಅವನನ್ನು ಪ್ರೇಮದಿಂದಾಲಿಂಗಿಸಿಕೊಂಡು, ಅವನ ಅನುಜ್ಞೆಯನ್ನು ಪಡೆದು ಹೊರಟುಹೋದನು. ಆಮೇಲೆ ಯುಧಿಷ್ಠಿ ರನು ಆ ಸಭಾಪ್ರವೇಶಕಾಲದಲ್ಲಿ ಹಾಲು, ತುಪ್ಪ, ಜೇನು ಮುಂತಾದ ಭೋಜ್ಯ ವಸ್ತುಗಳೊಡಗೂಡಿದ ಪಾಯಸಾನ್ನದಿಂದಲೂ, ನಾನಾವಿಧ ಭಕ್ಷ್ಯಗಳಿಂದಲೂ, ಫಲಮೂಲಗಳಿಂದಲೂ, ಹಂದಿ, ಜಿಂಕೆ, ಮುಂತಾದ ಮೃಗಗಳ ಮಾಂಸದಿಂದಲೂ, ಲಕ್ಷ ಬ್ರಾಹ್ಮಣಸಂತರ್ಪಣೆಯನ್ನು ಮಾಡಿಸಿ ದನು. ಮತ್ತು ಆ ಗೃಹಪ್ರವೇಶಕಾಲದಲ್ಲಿ ಧರ್ಮರಾಜನು ಎಳ್ಳು, ಜೀವಂತಿ ಯೆಂಬ ಮೂಲಿಕೆ, ಹವಿಷ್ಯವೆಂಬ ಪಾಕ, ನಾನಾಬಗೆಯ ಮಧುರಮಾಂಸ ಗಳು, ಭಕ್ಷ್ಯ, ಭೋಜ್ಯ, ಲೇಹ್ಯ, ಪಾನೀಯ ಮೊದಲಾದ ವಿವಿಧಾಹಾರ ಗಳು, ನೂತನ ವಸ್ತ್ರಗಳು, ಪುಷ್ಪಮಾಲಿಕೆಗಳು ಇವುಗಳನ್ನೆಲ್ಲ ನಾನಾದೇಶ ದಿಂದ ಬಂದ ಬ್ರಾಹ್ಮಣರಿಗೆ ಕೊಟ್ಟು ತೃಪ್ತಿಗೊಳಿಸಿದನು. ಅನೇಕ ಬ್ರಾಹ್ಮ ಣರಿಗೆ ಸಾವಿರಾರು ಗೋವುಗಳಂತೆ ಗೋದಾನವನ್ನೂ ಮಾಡಿದನು. ಆ ಬ್ರಾಹ್ಮಣರ ಪುಣ್ಯಾಹ ಮಂತ್ರಘೋಷವು ಸ್ವರ್ಗವನ್ನು ಮುಟ್ಟುವಂತಾ ಯಿತು. ಮಂಗಳವಾದ್ಯಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಧರ್ಮ ರಾಜನು ಆ ನೂತನಗೃಹದಲ್ಲಿ ದೇವತೆಗಳನ್ನು ಪ್ರತಿಷ್ಠಿಸಿ ಪೂಜಿಸಿದನು. ಆ ಗೃಹಪ್ರವೇಶೋತ್ಸವಕಾಲದಲ್ಲಿ ಹಲವು ಮಂದಿ ಜಟ್ಟಿಗಳೂ, ನಟ ವಿಟ ಗಾಯಕರೂ, ಹಾಸ್ಯಗಾರರೂ, ಸೂತಮಾಗಧರೇ ಮೊದಲಾದ ಹೊಗಳು ಭಟರೂ, ಮಹಾತ್ಮನಾದ ಧರ್ಮರಾಜನನ್ನು ವಿನೋದಗೊಳಿಸುತ್ತಿದ್ದರು. ಹೀಗೆ ಧರ್ಮರಾಜನು ಆ ಸಭಾಪ್ರವೇಶಕಾಲದಲ್ಲಿ ತನ್ನ ಸಹೋದರರೊಡ ಗೂಡಿ ದೇವಬ್ರಾಹ್ಮಣ ಪೂಜೆಯನ್ನು ನಡೆಸಿ, ಸ್ವರ್ಗದಲ್ಲಿ ದೇವೇಂದ್ರನು ಹೇಗೋ ಹಾಗೆ ರಮ್ಯವಾದ ಆ ಸಭಾಮಂದಿರದಲ್ಲಿ ತನ್ನ ಎಲ್ಲಾ ಬಂಧುಗ ಳೊಡನೆ ನೆಲೆಸಿದನು. ಅನೇಕ ಮಹರ್ಷಿಗಳೂ, ನಾನಾದೇಶದಿಂದ ಬಂದ

ರಾಜರೂ ಬಂದು ಆ ಸಭೆಯಲ್ಲಿ ಪಾಂಡವರೊಡನೆ ಕಲೆತರು. ಅಸಿತನು, ದೇವಲನು, ಸತ್ಯನು, ಸರ್ಪಿರ್ಮಾಲಿ, ಮಹಾಶಿರಸ್ಸು, ಅರ್ವಾವಸು, ಸುಮಿತ್ರನು, ಮೈತ್ರೇಯನು, ಶುನಕನು, ಬಲಿ, ಬಕದಾಲ್ಭ್ಯರು, ಸ್ಥೂಲಶಿರಸ್ಸು, ವ್ಯಾಸನು, ಶುಕನು, ಸುಮಂತು, ಜೈಮಿನಿ, ಪೌಲನು, ವ್ಯಾಸಶಿಷ್ಯರಾದ ನಾವು, ತಿತ್ತಿರಿ, ಯಾಜ್ಞವಲ್ಕ್ಯನು, ರೋಮಹರ್ಷಣನು, ಅವನ ಮಗನು, ಅಪ್ಸುಹೋಮ್ಯನು, ಧೌಮ್ಯನು, ಅಣಿಮಾಂಡವ್ಯನು, ಕೌಶಿಕನು, ದಾಮೋಷ್ಣೀಷನು, ತ್ರೈಬಲಿ, ಪರ್ಣಾದನು, ಘಟಜಾನುಕನು, ಮೌಂಜಾಯನನು, ವಾಯುಭಕ್ಷನು, ಪರಾಶರಪುತ್ರನಾದ ಸಾರಿಕನು, ಬಲೀವಾಕ ಸಿನೀವಾಕರು, ಸಪ್ತಪಾಲನು, ಕೃತಸ್ರವನು, ಜಾತೂಕರ್ಣನು, ಶಿಖಾವಂತನು, ಆಲಂಬನು, ಪಾರಿಜಾತಕನು, ಮಹಾತ್ಮನಾದ ಪರ್ವತನು, ಮಾರ್ಕಂಡೇಯನೆಂಬ ಋಷಿ, ಪವಿತ್ರಪಾಣಿ, ಸಾವರ್ಣನು, ಭಾಲುಕಿ, ಗಾಲವನು, ಜಂಘಾಬಂಧು, ರೈಭ್ಯನು, ಕೋಪವೇಗನು, ಭೃಗು, ಹರಿಬಭ್ರು, ಕೌಂಡಿನ್ಯನು, ಬಭ್ರುಮಾಲಿ, ಉಶಿಕನಪುತ್ರನಾದ ಕಾಕ್ಷೀವಂತನು, ನಾಚಿಕೇತನು, ಗೌತಮನು, ಪೈಂಗ್ಯ ವಾರಾಹ ಶುನಕರೆಂಬವರು, ಮಹಾತಪಸ್ವಿಯಾದ ಶಾಂಡಿಲ್ಯನು, ಕುಕ್ಕುರನು, ವೇಣುಜಂಘನು, ಕಠಕಾಲಾಪರು, ಈ ಮೊದಲಾಗಿ ಧರ್ಮಜ್ಞರೂ, ಜಿತೇಂದ್ರಿಯರೂ ಆತ್ಮನಿಗ್ರಹಶೀಲರೂ, ವೇದವೇದಾಂಗಪಾರಂಗತರೂ ಆದ ಇನ್ನೂ ಅನೇಕ ಮಹರ್ಷಿಗಳು ಆ ಧರ್ಮರಾಜನ ಸುತ್ತುಮುತ್ತಲೂ ಸೇರಿ ಅವನಿಗೆ ಅನೇಕ ಪುಣ್ಯಕಥೆಗಳನ್ನು ಹೇಳುತ್ತ ಅವನನ್ನು ಸಂತೋಷಗೊಳಿಸುತ್ತಿದ್ದರು. ಹಾಗೆಯೇ ಅನೇಕ ರಾಜಶ್ರೇಷ್ಠರೂ ಧರ್ಮರಾಜನನ್ನು ಸುತ್ತಿ ಮುತ್ತಿ ನೆರೆದು ಅವನನ್ನು ಸೇವಿಸುತ್ತಿದ್ದರು. ಶ್ರೀಮಂತನೂ, ಮಹಾಬಲಾಢ್ಯನೂ, ಧಾರ್ಮಿಕನೂ ಆದ ಮುಂಜಕೇತು, ವಿವರ್ಧನನು, ಸಂಗ್ರಾಮಜಿತ್ತು, ದುರ್ಮುಖನು, ಉಗ್ರಸೇನನು, ಕಕ್ಷಸೇನನು, ಅಪರಾಜಿತನು, ಕ್ಷೇಮಕನು, ಕಾಂಭೋಜರಾಜನಾದ ಕಮಠನು, ಬಲಪರಾಕ್ರಮಸಂಪನ್ನರೂ, ಅಸ್ತ್ರಗಳಲ್ಲಿ ಸುಶಿಕ್ಷಿತರೂ, ಎಣೆಯಿಲ್ಲದ ತೇಜಸ್ಸುಳ್ಳವರೂ ಆದ ಯವನರನ್ನೆಲ್ಲ ವಜ್ರಧಾರಿಯಾದ ಇಂದ್ರನು ಕಾಲಕೇಯರೆಂಬ ದೈತ್ಯರನ್ನು ಹೇಗೋಹಾಗೆ, ಏಕಾಕಿಯಾಗಿ ಯಾವನು ಯುದ್ಧದಲ್ಲಿ ನಡುಗಿಸಿದನೋ, ಅಂತಹ ಮಹಾಬಲವುಳ್ಳ ಕಂಪನನು, ಜಟಾ

ಸುರನು, ಕುಂತಿ, ಮದ್ರಕದೇಶರಾಜರು, ಕಿರಾತರಾಜನಾದ ಪುಳಿಂದನು, ಅಂಗ, ವಂಗ, ಪುಂಡ್ರಕ, ಪಾಂಡ್ಯ, ಓಢ್ರ, ಆಂಧ್ರಕದೇಶಗಳ ರಾಜರು, ಸುಮಿತ್ರನು, ಶತ್ರುನಿಗ್ರಾಹಕನಾದ ಶೈಬ್ಯನು, ಕಿರಾತರಾಜನಾದ ಸುಮನಸ್ಸು, ಯವನರಾಜನು, ಚಾಣೂರನು, ದೇವರಾತನು, ಭೋಜನು, ಭೀಮರಥನು, ಶ್ರುತಾಯುಧನು, ಕಳಿಂಗನು, ಮಧರಾಜನಾದ ಜಯಸೇನನು, ಸುಕರ್ಮನು, ಚೇಕಿತಾನನು, ಪುರು, ಕೇತುಮಂತನು, ವಸುಧಾನನು, ವೈದೇಹನು, ಕೃತಕ್ಷಣನು, ಸುಧರ್ಮನು, ಅನಿರುದ್ಧನು, ಶ್ರುತಾಯು, ಅನೂಪರಾಜನು, ಕ್ರಮಜಿತ್ತು, ಸುದರ್ಶನನು, ಶಿಶುಪಾಲನು, ಅವನ ಮಗನು, ಕರೂಷರಾಜನು, ದೇವತೆಗಳಂತೆ ರೂಪವುಳ್ಳವರೂ, ದುರ್ಜಯರೂ ಆದ ಆಹುಕ, ವಿವೃಧು, ಗದ, ಸಾರಣ, ಅಕ್ರೂರ, ಕೃತವರ್ಮ, ಮೊದಲಾದ ವೃಷ್ಣಿಕುಮಾರರು, ಶಿನಿಪುತ್ರನಾದ ಸತ್ಯಕನು, ಭೀಷ್ಮಕನು, ಆಕೃತಿ, ದ್ಯುಮತ್ಸೇನನು, ಮಹಾಧನುರ್ಧರರಾದ ಕೇಕಯರು, ಸೋಮಕಕುಲದ ಯಜ್ಞಸೇನನು, (ದ್ರುಪದನು) ಮೊದಲಾಗಿ ಇನ್ನೂ ಪ್ರಸಿದ್ಧಕ್ಷತ್ರಿಯರನೇಕರು ಆ ಸಭಾಮಂದಿರದಲ್ಲಿ ನೆರೆದು ಧರ್ಮರಾಜನನ್ನು ಉಪಾಸಿಸುತ್ತಿದ್ದರು. ಇದಲ್ಲದೆ, ಜಿಂಕೆಯಚರ್ಮವನ್ನುಟ್ಟು, ಅರ್ಜುನನಲ್ಲಿ ಶಿಷ್ಯವೃತ್ತಿಯನ್ನವಲಂಬಿಸಿ ಧನುರ್ವಿದ್ಯೆಯನ್ನು ಕಲಿತ ಅನೇಕ ರಾಜಪುತ್ರರೂ ಅಲ್ಲಿ ಬಂದು ನೆರಿದಿದ್ದರು. ರುಕ್ಮಿಣೀಪುತ್ರನಾದ ಪ್ರದ್ಯುಮ್ನನು, ಸಾಂಬನು, ಸ್ವಾತ್ಯಕಿ, ಯುಯುಧಾನನು, ಸುಧರ್ಮನು, ಅನಿರುದ್ಧನು, ಶೈಬ್ಯನು, ಇವರೆಲ್ಲರೂ ಅನೇಕ ಸಂದರ್ಭಗಳಲ್ಲಿ ಅರ್ಜುನನಿಂದ ಧನುರ್ವೇದವನ್ನು ಅಭ್ಯಸಿಸಿದವರು. ಇವರೂ, ಇನ್ನೂ ಅನೇಕ ರಾಜರೂ ಅಲ್ಲಿ ಧರ್ಮರಾಜನನ್ನು ಉಪಾಸಿಸುತ್ತಿದ್ದರು. ಮತ್ತು ಅರ್ಜುನನಿಗೆ ಪ್ರಿಯಮಿತ್ರನಾದ ತುಂಬುರುವೆಂಬ ಗಂಧರ್ವನು ಅಲ್ಲಿ ಸದಾ ಇರುತ್ತಿರುವನು. ಚಿತ್ರಸೇನನೆಂಬ ಗಂಧರ್ವನು ತನ್ನ ಕಡೆಯ ಇಪ್ಪತ್ತೇಳು ಮಂದಿ ಗಂಧರ್ವರೊಡನೆಯೂ, ಅಪ್ಸರಸ್ಸುಗಳೊಡನೆಯೂ ಸೇರಿ, ಆ ಸಭೆಯಲ್ಲಿ ಕುಳಿತಿದ್ದ ಧರ್ಮರಾಜನನ್ನು ತಮ್ಮ ಗಾನಗಳಿಂದ ಸಂತೋಷಗೊಳಿಸುತ್ತಿದ್ದನು. ಗೀತವಾದ್ಯಗಳಲ್ಲಿಯೂ, ಶ್ರುತಿ ಲಯಗಳಲ್ಲಿಯೂ, ದ್ರುತ ಮಧ್ಯ ವಿಲಂಬಿತಗಳೆಂಬ ಕಾಲಪ್ರಮಾಣಗಳಲ್ಲಿಯೂ, ಮಂದ್ರ ಮಧ್ಯಮ ತಾರಗಳೆಂಬ

ಮೂರು ಸ್ಥಾಯಿಗಳಲ್ಲಿಯೂ ನಿಪುಣರಾದ ಅನೇಕಕಿನ್ನರರು ಗಂಧರ್ವರೊಡಗೂಡಿ, ತುಂಬುರುವಿನ ಆಜ್ಞಾನುಸಾರವಾಗಿ, ಶಾಸ್ತ್ರೀಯವಾದ ಆರೋಹಣಾವರೋಹಣಗಳೆಂಬ ತಾನಗಳಿಂದ ಅಲ್ಲಿ ನೆರೆದಿದ್ದ ಎಲ್ಲಾ ಮಹರ್ಷಿಗಳನ್ನೂ, ರಾಜರನ್ನೂ, ಪಾಂಡವರನ್ನೂ ತಮ್ಮ ಗಾನದಿಂದ ಸಂತೋಷಗೊಳಿಸುತಿದ್ದರು. ಹೀಗೆ ಆ ಸಭೆಯಲ್ಲಿ ನೆರೆದಿದ್ದ ಅನೇಕರಾಜರೂ, ಋಷಿಗಳೂ, ಗಂಧರ್ವಾಪ್ಸರಸ್ಸುಗಳೂ, ದೇವತೆಗಳು ಬ್ರಹ್ಮದೇವನನ್ನು ಹೇಗೋ ಹಾಗೆ ಧರ್ಮರಾಜನನ್ನು ಸೇವಿಸುತ್ತಿದ್ದರು.

ಇದು ನಾಲ್ಕನೆಯ ಅಧ್ಯಾಯವು.

{ ನಾರದನು ಆ ಸಭೆಗೆ ಬಂದು ಧರ್ಮರಾಜನಿಗೆ ಕುಶಲಪ್ರಶ್ನ ವ್ಯಾಜದಿಂದ ರಾಜನೀತಿಗಳನ್ನು ತಿಳಿಸಿದುದು. }

ಓ ಜನಮೇಜಯರಾಜಾ! ಕೇಳು! ಹೀಗೆ ಆ ಸಭೆಯಲ್ಲಿ ಮಹಾತ್ಮರಾದ ಪಾಂಡವರೂ, ಇತರ ರಾಜರೂ, ಮತ್ತು ಗಂಧರ್ವರೂ ನೆರೆದು ಕುಳಿತಿದ್ದಾಗ, ದೇವಋಷಿಯಾದ ನಾರದನು ಅಲ್ಲಿಗೆ ಬಂದುಸೇರಿದನು. ಆ ನಾರದನ ಪ್ರಭಾವವನ್ನು ಕೇಳಬೇಕೆ? ಅವನಿಗೆ ತಿಳಿಯದ ಸಂಗತಿಗಳಿಲ್ಲ! ಅವನು ಸಂಚರಿಸದ ಸ್ಥಳಗಳಿಲ್ಲ! ಚತುರ್ವೇದಗಳನ್ನೂ, ಉಪನಿಷತ್ತುಗಳನ್ನೂ ಬಲ್ಲವನು. ಸಮಸ್ತದೇವತೆಗಳಿಂದಲೂ ಪೂಜಿಸಲ್ಪಡತಕ್ಕವನು. ಎಲ್ಲಾ ಇತಿಹಾಸಗಳನ್ನೂ, ಪುರಾಣಗಳನ್ನೂ ಬಲ್ಲವನು. ಯಾಗಾದಿಕಾರ್ಯಕಲ್ಪಗಳ ವಿಶೇಷಗಳೆಲ್ಲವನ್ನೂ ತಿಳಿದವನು. ಸ್ತುತ, ಸ್ತೋಮ, ಗ್ರಹ, ಸ್ತೋಭ, ಪದ, ಕ್ರಮಗಳೆಂಬ ವೇದಮಂತ್ರಪಾಠಗಳ ವಿಶೇಷಗಳನ್ನೂ, ಶಿಕ್ಷೆ, ಮತ್ತು ಅಕ್ಷರವಿಭಾಗಗಳನ್ನೂ ತಿಳಿದವನು. ಸೃಷ್ಟಿಗೆ ಪೂರ್ವದಲ್ಲಿದ್ದ ವಿಷಯಗಳನ್ನೂ, *ಕಲ್ಪಸೂತ್ರಗಳ ಮರ್ಮವನ್ನೂ ತಿಳಿದವನು. ಬ್ರಹ್ಮಚರ್ಯವ್ರತದಲ್ಲಿ ನಿರತನಾದವನು. ಊಹಾಪೋಹಗಳಲ್ಲಿ ನಿಪುಣನು. ಗಾನ ನರ್ತನ ವಿದ್ಯೆಗಳಲ್ಲಿ ನಿತ್ಯಾಸಕ್ತನು. ಎಲ್ಲಾ ವಿಷಯಗ

* ಆಪಸ್ತಂಬಸೂತ್ರ ಮೊದಲಾದುವು ಕಲ್ಪಸೂತ್ರಗಳು.

ಳಲ್ಲಿಯೂ ಅಸಮಾನನೆನಿಸಿದವನು. ನಾಲ್ಕು ವೇದಗಳು, ಆರು ವೇದಾಂಗಗಳು, ತರ್ಕ, ಮೀಮಾಂಸೆ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ರಾಜನೀತಿಗಳೆಂಬ ಅಷ್ಟಾದಶ (ಹದಿನೆಂಟು) ವಿದ್ಯೆಗಳಿಗೂ ಭಂಡಾರದಂತಿರುವವನು. ಮಹಾತೇಜಸ್ವಿ. ನ್ಯಾಯನೀತಿಗಳನ್ನೂ, ಧರ್ಮತತ್ವಗಳನ್ನೂ ಬಲ್ಲವನು. ತನಗೆ ಮೇಲೆನಿಸಿದವನಾರೂ ಇಲ್ಲದವನು. ಕಾರ್ಯಗಳಲ್ಲಿ ಐಕ್ಯ, ಸಂಯೋಗ, ನಾನಾತ್ವ, ಸಮವಾಯಗಳೆಂಬ ವಿಭಾಗಕ್ರಮಗಳನ್ನು ಚೆನ್ನಾಗಿ ಬಲ್ಲವನು. ವಾಚಾಲತ್ವ, ಧೈರ್ಯ, ಬುದ್ಧಿಚಾತುರ್ಯ, ಧಾರಣಶಕ್ತಿ, ಇವುಗಳಲ್ಲಿ ಎಣೆಯಿಲ್ಲದವನು. ನಯಾನಯಗಳನ್ನು ಬಲ್ಲ ಮಹಾ ವಿದ್ವಾಂಸನು. ದೊಡ್ಡದು ಚಿಕ್ಕದೆಂಬ ಪರಾಪರತಾರತಮ್ಯಗಳನ್ನು ತಿಳಿದವನು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ವಿಷಯಗಳನ್ನು ನಿರ್ಧರಿಸತಕ್ಕವನು. ಪ್ರತಿಜ್ಞೆ, ಹೇತು, ಉದಾಹರಣ, ಉಪನಯ, ನಿಗಮನವೆಂಬ ಐದು ಬಗೆಯ ವಾಕ್ಯ ಗುಣದೋಷಗಳನ್ನು ಬಲ್ಲವನು. ಬೃಹಸ್ಪತಿಗಾದರೂ ಮಾತಿನಲ್ಲಿ ಸೋಲದೆ ಮಾತಿಗೆ ಮಾತು ಕೊಟ್ಟು ಸೋಲಿಸಬಲ್ಲವನು. ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ನಿಶ್ಚಯಜ್ಞಾನವುಳ್ಳವನು. ಈ ಬ್ರಹ್ಮಾಂಡದಲ್ಲಿರುವ ಊರ್ಧ್ವಾಧೋಮಧ್ಯಮ ಲೋಕಗಳನ್ನು (ಮೇಲಿನ, ಕೆಳಗಿನ ಮತ್ತು ನಡುವೆ ಇರುವ ಲೋಕಗಳನ್ನೆಲ್ಲ) ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿದ ಮಹಾಜ್ಞಾನಿ. ಸಾಂಖ್ಯ ಮತ್ತು ಯೋಗಶಾಸ್ತ್ರಗಳ ವಿಶೇಷಗಳನ್ನು ಬಲ್ಲವನು. ಲೋಕಕ್ಷೇಮಕ್ಕಾಗಿ ದೇವಾಸುರರಲ್ಲಿ ಕಲಹವನ್ನೊಡ್ಡುವ ಉದ್ದೇಶವುಳ್ಳವನು. ಸಂಧಿ, ವಿಗ್ರಹ, ಮೊದಲಾದ ಷಡ್ಗುಣಗಳನ್ನು ಬಲ್ಲವನು. ಇಂಗಿತಜ್ಞನು. ಸರ್ವಶಾಸ್ತ್ರವಿಶಾರದನು. ಯಾವಾಗಲೂ ಯುದ್ಧದಲ್ಲಿಯೂ, ಸಂಗೀತದಲ್ಲಿಯೂ ಆಸಕ್ತಿಯುಳ್ಳವನು. ಯಾವ ಲೋಕದಲ್ಲಿಯೂ ತಡೆಯಿಲ್ಲದೆ ಸಂಚರಿಸಬಲ್ಲವನು. ಇವೇ ಮೊದಲಾಗಿ ಇನ್ನೂ ಅನೇಕ ಗುಣಗಳಿಂದ ಕೂಡಿದ ನಾರದಮಹರ್ಷಿಯು, ಲೋಕಸಂಚಾರ ಮಾಡುತ್ತ ಆ ಸಭೆಗೆ ಬಂದು ಸೇರಿದನು. ಅವನು ಪಾಂಡವರನ್ನು ನೋಡಬೇಕೆಂದು ಬರುವಾಗ, ಪಾರಿಜಾತ, ಪರ್ವತ, ಸುಮುಖ, ಸೌಮ್ಯರೆಂಬ ನಾಲ್ಕು ಮಂದಿ ದೇವರ್ಷಿಗಳೂ ಅವನನ್ನು ಹಿಂಬಾಲಿಸಿ ಬಂದರು. ಆ ಸಭೆಯಲ್ಲಿ ಕುಳಿ

ತಿದ್ದ ಪಾಂಡವರನ್ನು ಕಂಡೊಡನೆ ನಾರದನು ಧರ್ಮರಾಜನನ್ನು ಜಯಶಬ್ದಗಳಿಂದ ಆಶೀರ್ವದಿಸಿದನು. ಧರ್ಮಜ್ಞನಾದ ಯುಧಿಷ್ಠಿರನುಕೂಡ ತನ್ನ ಸಹೋದರರೆಲ್ಲರೊಡನೆ ಥಟ್ಟನೆ ಇದಿರೆದ್ದು, ವಿನಯದಿಂದ ನಮಸ್ಕರಿಸಿ ಅವನಿಗೆ ಯೋಗ್ಯವಾದ ಉತ್ತಮಾಸನವನ್ನು ಕೊಟ್ಟು, ಅರ್ಘ್ಯಪಾದ್ಯ ಮಧುಪರ್ಕಾದಿಗಳಿಂದಲೂ, ಗೋವಿನಿಂದಲೂ ಅವನನ್ನು ಶಾಸ್ತ್ರೋಕ್ತವಾಗಿ ಸತ್ಕರಿಸಿದನು. ಮತ್ತು ಬೆಲೆಯುಳ್ಳ ರತ್ನಗಳಿಂದಲೂ, ಅವನಿಗೆ ಬೇಕಾದ ಇಷ್ಟವಸ್ತುಗಳಿಂದಲೂ ಪೂಜಿಸಿದನು. ಹೀಗೆ ಪಾಂಡವರಿಂದ ಸತ್ಕೃತನಾದ ನಾರದನು, ಅವರ ಸತ್ಕಾರಗಳಿಂದ ಸಂತುಷ್ಟನಾಗಿ, ಧರ್ಮಕಾಮಾರ್ಥಗಳಿಗೆ ಸಂಬಂಧಪಟ್ಟ ವಿಚಾರಣೆಗಳಿಂದ ಧರ್ಮರಾಜನನ್ನು ಹೀಗೆಂದು ಪ್ರಶ್ನೆಮಾಡುವನು.

"ಓ ಧರ್ಮಪುತ್ರಾ! ಕುಶಲವೆ? ನಿನ್ನ ರಾಜ್ಯಕಾರ್ಯಗಳು ಸರಿಯಾಗಿ ನಡೆಯುತ್ತಿವೆಯೆ? ನೀನು ಸಂಪಾದಿಸುವ ಧನವೆಲ್ಲವೂ ಯೋಗ್ಯ ವಿಷಯಗಳಿಗಾಗಿ ವೆಚ್ಚವಾಗುವುದಷ್ಟೆ? ನಿನ್ನ ಮನಸ್ಸು ಧರ್ಮವಿಚಾರದಲ್ಲಿಯೇ ಉತ್ಸಾಹಗೊಂಡಿರುವುದೆ? ನೀನು ಜೀವನ ಸುಖಗಳನ್ನೂ ಅನುಭವಿಸುತ್ತಿರುವೆಯಾ? ಆ ಸುಖಾನುಭವಗಳಿಂದ ನಿನ್ನ ಮನಸ್ಸು ಕಲುಷಿತವಾಗುವುದಿಲ್ಲವಷ್ಟೆ? ಓ ರಾಜೇಂದ್ರಾ! ನೀನು ಉತ್ತಮಾಧಮ ಮಧ್ಯಮರೆಂಬ ಮೂರು ಬಗೆಯ ಪ್ರಜೆಗಳ ವಿಷಯದಲ್ಲಿ ಧರ್ಮಾರ್ಥಗಳಿಗೆ ವಿರೋಧವಿಲ್ಲದಂತೆ ನಿನ್ನ ಪೂರ್ವಿಕರು ವರ್ತಿಸುತ್ತಿದ್ದ ದಾರಿಯನ್ನನುಸರಿಸಿ ಘನವಾದ ರೀತಿಯಲ್ಲಿ ವರ್ತಿಸುತ್ತಿರುವೆಯಷ್ಟೆ? ನೀನು ಧರ್ಮಕ್ಕಾಗಿ ಅರ್ಥವನ್ನಾಗಲಿ, ಅರ್ಥಕ್ಕಾಗಿ ಧರ್ಮವನ್ನಾಗಲಿ ಕೆಡಿಸದೆ, ಕಾಮಕ್ಕಾಗಿ ಧರ್ಮಾರ್ಥಗಳಿಗಾಗಲಿ ಹಾನಿಬಾರದಂತೆ ನಡೆದುಕೊಳ್ಳುತ್ತಿರುವೆಯಷ್ಟೆ? ಧರ್ಮ, ಅರ್ಥ, ಕಾಮಗಳೆಂಬ ಮೂರು ಪುರುಷಾರ್ಥಗಳನ್ನೂ ನೀನು ಕಾಲದೇಶಾನುಸಾರವಾಗಿ ವಿಭಾಗಿಸಿಕೊಂಡು ಉಚಿತಕಾಲದಲ್ಲಿ ಅವುಗಳನ್ನು ಸೇವಿಸುತ್ತಿರುವೆಯಾ? ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯಗಳೆಂಬ ರಾಜನೀತಿಗೆ ಸಂಬಂಧಪಟ್ಟ ಆರು ಗುಣಗಳೊಡನೆ ನೀನು, ಸಾಮ, ದಾನ, ಭೇದ, ದಂಡ, ಮಂತ್ರ, ಔಷಧ,

ಮಾಯೆಗಳೆಂಬ ಸಪ್ತೋಪಾಯಗಳನ್ನೂ ತಕ್ಕ ರೀತಿಯಲ್ಲಿ ಉಪಯೋಗಿಸು ತ್ತಿರುವೆಯಾ? ನಿನ್ನ ಮತ್ತು ಶತ್ರುಗಳ ಬಲಾಬಲವನ್ನು ಚೆನ್ನಾಗಿ ತಿಳಿದು ಕೊಂಡು, ಶತ್ರುವರ್ಗದ ರಾಷ್ಟ್ರ, ದುರ್ಗ, ರಥ, ಗಜ, ತುರಗ, ಪದಾತಿಗ ಳೆಂಬ ಚತುರಂಗಗಳು, ಅವರ ಕಡೆಯ ಅಧಿಕಾರಿಗಳು, ಅಂತಃಪುರ, ಆಹಾ ರಸಮೃದ್ಧಿ, ಅವರ ಸೈನ್ಯಪರಿಮಾಣ, ಮತ್ತು ಅವರ ರಾಜ್ಯಾದಾಯ, ಅವರ ರಾಜ್ಯದಲ್ಲಿ ಧರ್ಮಪರಿಪಾಲನಕ್ರಮ, ಪಾನಶಾಲೆ, ಮತ್ತು ಅವರ ಅಂತಶ್ಶತ್ರುಗಳೆಂಬೀ ಹದಿನಾಲ್ಕನ್ನೂ ನೀನು ಚೆನ್ನಾಗಿ ಪರೀಕ್ಷಿಸುತ್ತಿರು ವೆಯಾ? ನಿನ್ನ ಮತ್ತು ನಿನ್ನ ಶತ್ರುಗಳ ಸ್ಥಿತಿಗತಿಗಳನ್ನು ಪರಿಶೀಲಿಸಿ, ಸಮಯದಲ್ಲಿ ಶತ್ರುಗಳೊಡನೆ ಸಂಧಿಯನ್ನು ಮಾಡಿಕೊಂಡು ರಾಜಕಾರ್ಯ ಗಳನ್ನು ನಡೆಸುತ್ತ, ಕೃಷಿ, ವ್ಯಾಪಾರ, ಸಂಚಾರಮಾರ್ಗಗಳು, ದುರ್ಗಗಳು, ಸೇತುವೆಗಳು, ಗಜಶಾಲೆ, ಗಣಿಗಳ ಉತ್ಪತ್ತಿ, ಕೆಟ್ಟುಹೋದುದನ್ನು ಸರಿಪ ಡಿಸುವುದು, ಈ ಎಂಟುವಿಚಾರಗಳನ್ನೂ ಚೆನ್ನಾಗಿ ಗಮನಿಸುತ್ತಿರುವೆಯಾ? ನಿನ್ನ ರಾಜ್ಯಾಂಗಗಳೇಳರಲ್ಲಿಯೂ ಲೋಪವೇನೂ ಇಲ್ಲವಷ್ಟೆ? ನಿನ್ನ ಕಡೆ ಯ ರಾಷ್ಟ್ರಾಧಿಕಾರಿ, ಸೈನ್ಯಾಧಿಕಾರಿ, ನ್ಯಾಯಾಧಿಕಾರಿ, ನಿನ್ನ ಮುಖ್ಯಾನು ಚರನು, ಮುಖ್ಯ ಪುರೋಹಿತನು, ಪ್ರಧಾನವೈದ್ಯನು, ಪ್ರಧಾನ ಜ್ಯೋತಿಷ್ಕ ನೆಂಬೀ ಏಳುಮಂದಿ ಸಹಾಯಕರೂ ನಿನ್ನ ಶತ್ರುಗಳ ತಂತ್ರಕ್ಕೊಳಪಟ್ಟಾ ಗಲಿ, ತಮ್ಮ ಅಧಿಕಾರದ ಮತ್ತು ಐಶ್ವರ್ಯದ ಹೆಮ್ಮೆಯಿಂದಾಗಲಿ, ದ್ಯೂ ತಾದಿ ದುರ್ವ್ಯಸನಗಳಿಗೆ ಬಿದ್ದಾಗಲಿ, ತಮ್ಮ ಕಾರ್ಯಗಳಲ್ಲಿ ಉದಾಸೀನರಾ ಗಿಲ್ಲವಷ್ಟೆ? ಅವರೆಲ್ಲರೂ ನಿನ್ನಲ್ಲಿ ನಿಜವಾದ ಅನುರಾಗದಿಂದಿರುವರೆ? ನಿನ್ನ ಗೂಢಚಾರರಿಂದಾಗಲಿ, ನಿನ್ನಿಂದಾಗಲಿ, ನಿನ್ನ ಕಡೆಯ ಮಂತ್ರಿಗ ಳಿಂದಾಗಲಿ, ನಿನ್ನ ರಾಜಕಾರ್ಯಾಲೋಚನೆಗಳೊಂದೂ ಹೊರಬೀಳುವುದಿ ಲ್ಲವಷ್ಟೆ? ನಿನ್ನ ಗೂಢಚಾರರು ನಡೆನುಡಿಗಳೊಂದರಲ್ಲಿಯೂ ಸಂದೇಹಕ್ಕ ವಕಾಶಕೊಡದಂತಿರುವರಷ್ಟೆ? ನಿನ್ನ ಮಿತ್ರರು, ಶತ್ರುಗಳು, ಮತ್ತು ನಿನ್ನ ಲ್ಲಿ ಸ್ನೇಹದ್ವೇಷಗಳೆರಡೂ ಇಲ್ಲದ ಉದಾಸೀನರು, ಈ ಮೂರುವರ್ಗದವರ ಕಾರ್ಯಪ್ರವರ್ತನೆಗಳನ್ನೆಲ್ಲ ನೀನು ಚೆನ್ನಾಗಿ ಕಂಡುಕೊಳ್ಳುತ್ತಿರುವೆಯಾ? ಶತ್ರುಗಳ ವಿಷಯದಲ್ಲಿ ಸಂಧಿಮಾಡಿಕೊಳ್ಳಬೇಕಾದ ಕಾಲದಲ್ಲಿ ಸಂಧಿಯ ನ್ನೂ, ವಿಗ್ರಹ (ಯುದ್ಧ) ವನ್ನು ನಡೆಸಬೇಕಾದ ಕಾಲದಲ್ಲಿ ಯುದ್ಧವನ್ನೂ

ಆಯಾ ಕಾಲೋಚಿತವಾಗಿ ನಡೆಸುತ್ತಿರುವೆಯಾ? ಯಾವ ಪಕ್ಷಕ್ಕೂ ಸೇರದ ಉದಾಸೀನರಲ್ಲಿಯೂ, ಉಭಯ ಪಕ್ಷಕ್ಕೂ ಸಮಾನರಾದ ಮಧ್ಯಸ್ಥರಲ್ಲಿಯೂ ಹೇಗೆ ನಡೆಯಬೇಕೋ ಹಾಗೆ ನಡೆಯುತ್ತಿರುವೆಯಾ?

ಓ ವೀರಾಗ್ರಣೀ! ನಿನಗೆ ಸಮಾನಗುಣವುಳ್ಳವರು, ವೃದ್ಧರು, ಶುದ್ಧರು, ಕಾರ್ಯಾಕಾರ್ಯಗಳನ್ನು ಬಲ್ಲವರು, ಉತ್ತಮಕುಲದವರು, ನಿನ್ನಲ್ಲಿ ನಿಜವಾದ ಪ್ರೀತಿಯುಳ್ಳವರು, ಇಂತಹ ಜನರನ್ನೇ ನಿನ್ನ ಮಂತ್ರಿಗಳನ್ನಾಗಿ ಇಟ್ಟುಕೊಂಡಿರುವೆಯಷ್ಟೆ? ಓ ಭರತಕುಲೋತ್ತಮಾ! ಜಯಕ್ಕೆ ಒಳ್ಳೆ ಮಂತ್ರಾಲೋಚನೆಯೇ ಮೂಲಾಧಾರವು. ಆದುದರಿಂದ ನಿನ್ನ ಮಂತ್ರಾಲೋಚನೆಗಳನ್ನು ರಹಸ್ಯವಾಗಿ ಇಡತಕ್ಕವರೂ, ಶಾಸ್ತ್ರಜ್ಞರೂ ಆದ ಮಂತ್ರಿಗಳಿಂದ ನಿನ್ನ ರಾಜ್ಯವು ಚೆನ್ನಾಗಿ ರಕ್ಷಿಸಲ್ಪಡುತ್ತಿರುವುದೇ? ಅಪ್ಪ ಯುಧಿಷ್ಠಿರಾ! ಅಂತಹ ರಾಜ್ಯಗಳಿಗೆ ಶತ್ರುಗಳಿಂದ ಎಂದಿಗೂ ಅಪಾಯವಿರದು. ನೀನು ನಿನ್ನ ರಾಜಕಾರ್ಯಗಳನ್ನು ಗಮನಿಸದೆ ನಿದ್ರಾವಶನಾಗಿ ತೂಕಡಿಸುತ್ತಿರುವುದಿಲ್ಲವಷ್ಟೆ? ಸಕಾಲದಲ್ಲಿ ಎಚ್ಚರಗೊಂಡಿರುವೆಯಷ್ಟೆ? ರಾತ್ರಿಯ ಕೊನೆಯಭಾಗದಲ್ಲಿ (ಬೆಳಗಿನ ಜಾವಗಳಲ್ಲಿ) ನೀನು ಮರುದಿನಕ್ಕೆ ಸಂಬಂಧಿಸಿದ ಆರ್ಥಿಕವಾದ (ಹಣದ ಸಂಬಂಧವಾದ) ಕಾರ್ಯಾಕಾರ್ಯಗಳನ್ನು ಯೋಚಿಸಿ ನಿರ್ಧರಿಸಿಕೊಳ್ಳುವೆಯಷ್ಟೆ? ನಿನ್ನಷ್ಟಕ್ಕೆ ನೀನೊಬ್ಬನೆಯಾಗಲಿ, ಅಥವಾ ಬಹುಜನಗಳೊಡನೆ ಕಲೆತಾಗಲಿ ನಿನ್ನ ಕಾರ್ಯಗಳನ್ನು ನಿರ್ಧರಿಸುವುದಿಲ್ಲವಷ್ಟೆ? ನಿನ್ನ ಮಂತ್ರಾಲೋಚನೆಗಳೆಲ್ಲವೂ ನಿನ್ನ ರಾಷ್ಟ್ರಗಳ ಮೊತ್ತಕ್ಕೂ ಹರಡದಂತೆ ಇರುವುದೆ? ಪ್ರಯತ್ನದಲ್ಲಿ ಸುಲಭವಾಗಿ, ಫಲದಲ್ಲಿ ಮಹತ್ತಾಗಿರುವ ಕಾರ್ಯಗಳನ್ನೇ ನೀನು ನಿಶ್ಚಯಿಸಿಕೊಂಡು, ಆದಷ್ಟು ಬೇಗನೆ ಅವುಗಳನ್ನಾರಂಭಿಸಿ, ನಡುವೆ ವಿಘ್ನಗಳಿಗೆ ಅವಕಾಶಕೊಡದೆ ನಡೆಸುತ್ತಿರುವೆಯಾ! ನಿನ್ನ ದೇಶದ ವ್ಯವಸಾಯಗಾರರನ್ನೆಲ್ಲ ನೀನು ಚೆನ್ನಾಗಿ ಕಣ್ಣಿಟ್ಟು ನೋಡುತ್ತಿರುವೆಯಾ? ಅವರೆಲ್ಲರೂ ನಿನ್ನಲ್ಲಿಗೆ ನಿರ್ಭಯವಾಗಿ ಬಂದು ತಮ್ಮ ಕೋರಿಕೆಗಳನ್ನು ತಿಳಿಸುತ್ತಿರುವರಷ್ಟೆ? ಸಂದಿಗ್ಧಕಾರ್ಯಗಳನ್ನು ನೀನು ಸ್ವಂತವಾಗಿ ಗಮನಿಸಿ, ಆಯಾ ಕೆಲಸದವರಿಗೆ ಒಪ್ಪಿಸುತ್ತಿರುವೆಯಾ? ರಾಜನಿಗೆ ಇಂತಹ ಕೃಷಿ, ವಾಣಿಜ್ಯಾದಿಗ

ಳಲ್ಲಿ ಸಾಕ್ಷಾತ್ತಾಗಿ ಸಂಬಂಧವಿರಬೇಕಾದುದೇ ರಾಜ್ಯೋನ್ನತಿಗೆ ಮುಖ್ಯ ಕಾರಣವು. ರಾಜೇಂದ್ರಾ! ಆಪ್ತರೂ, ಧನಲೋಭವಿಲ್ಲದವರೂ, ಕುಲಕ್ರಮಾಗತವಾಗಿ ಬಂದವರೂ ಆದ ಜನರನ್ನೇ ನೀನು ಆಯಾ ಕಾರ್ಯಗಳಲ್ಲಿ ನಿಯಮಿಸುತ್ತಿರುವೆಯಾ? ರಾಜಾ! ನೀನು ಆರಂಭಿಸಿದ ಕಾರ್ಯಗಳು ಪೂರ್ಣವಾದಮೇಲೆ, ಅಥವಾ ಸ್ವಲ್ಪ ಹೆಚ್ಚುಕಡಿಮೆಯಾಗಿ ತೀರಿದಮೇಲೆಯೇ ಇತರರಿಗೆ ತಿಳಿಯುತ್ತಿರುವುದಷ್ಟೆ? ನಿನ್ನ ಯಾವ ಕಾರ್ಯಪ್ರಯತ್ನಗಳಾದರೂ ಅವು ಪೂರ್ಣವಾಗಿ ಮುಗಿಯುವುದಕ್ಕೆ ಮೊದಲು ಬೇರೆ ಯಾರಿಗೂ ತಿಳಿಯದೆ ರಹಸ್ಯದಲ್ಲಿರುವುವಷ್ಟೆ? ಧರ್ಮದಲ್ಲಿಯೂ, ಸಮಸ್ತ ಶಾಸ್ತ್ರಗಳಲ್ಲಿಯೂ ನಿಪುಣರಾದ ಉಪಾಧ್ಯಾಯರ ಮೂಲಕವಾಗಿ ನಿನ್ನ ಕಡೆಯ ರಾಜಕುಮಾರರೂ, ಯೋಧಮುಖ್ಯರೂ ಶಿಕ್ಷೆ ಕೊಡಲ್ಪಡುತ್ತಿರುವರಷ್ಟೆ? ಸಾವಿರ ಮಂದಿ ಮೂರ್ಖರನ್ನು ಕೊಟ್ಟು, ಒಬ್ಬ ಪಂಡಿತನನ್ನು ಬೆಲೆಗೆ ಕೊಂಡುಕೊಳ್ಳಬಹುದು. ಕಾರ್ಯಸಂಕಟಗಳಲ್ಲ ಅಂತಹ ಪಂಡಿತನೇ ಕ್ಷೇಮವನ್ನುಂಟುಮಾಡಬಲ್ಲನು. ಅಂತಹ ಪಂಡಿತರನ್ನು ನೀನು ಸಂಪಾದಿಸುತ್ತಿರುವೆಯಷ್ಟೆ? ನಿನ್ನ ದುರ್ಗಗಳೆಲ್ಲವೂ ದನಧಾನ್ಯಗಳಿಂದಲೂ, ಆಯುಧಗಳಿಂದಲೂ, ಶಿಲ್ಪಿಗಳಿಂದಲೂ, ಧನುರ್ಧಾರಿಗಳಿಂದಲೂ, ಯಂತ್ರಗಳಿಂದಲೂ, ಜಲಸಮೃದ್ಧಿಯಿಂದಲೂ ತುಂಬಿರುವುವೆ? ಓ ಧರ್ಮಪುತ್ರಾ! ರಾಜನಿಗೆ ಮಂತ್ರಿಯ ಬಲವೇ ಬಲವು. ಬುದ್ಧಿಶಾಲಿಯೂ, ಶೂರನೂ, ಜಿತೇಂದ್ರಿಯನೂ, ಸಮರ್ಥನೂ ಆದ ಒಬ್ಬ ಮಂತ್ರಿಯಿದ್ದರೂ ಕೂಡ ಅವನು ತನ್ನ ರಾಜನಿಗೂ, ರಾಜಕುಮಾರರಿಗೂ ಉತ್ತಮಸಂಪತ್ತನ್ನು ತಂದು ಕೂಡಿಸಬಲ್ಲನು. ಅಂತಹ ಮಂತ್ರಿಯು ನಿನ್ನಲ್ಲಿರುವನೆ? ಒಬ್ಬರನ್ನೊಬ್ಬರು ತಿಳಿಯದಂತಿರುವ ಮೂರು ಮಂದಿ ಗೂಢಚಾರರ ಮೂಲಕವಾಗಿ ಶತ್ರುಪಕ್ಷದ †ಹದಿನೆಂಟು ತೀರ್ಥಗಳನ್ನೂ (ಅಧಿಕಾರವರ್ಗದವ

---

† (1) ಮಂತ್ರೀ (2) ಪುರೋಹಿತಶ್ಚೈವ(3) ಯುವರಾಜ(4) ಶ್ಚಮೂಪತಿಃ। ಪಂಚಮೋ(5) ದ್ವಾರಪಾಲಶ್ಚ, ಷಷ್ಠೋಂ(6) ತರ್ವೇಶಿಕಸ್ತಥಾ। (7) ಕಾರಾಗಾರಾಧಿಕಾರೀಚ,(8) ದ್ರವ್ಯಸಂಚಯಕೃತ್ತಥಾ। ಕೃತ್ಯಾಕೃತ್ಯೇಷುಚಾರ್ಥಾನಾಂ। ನವಮೋ(9) ವಿನಿಯೋಜಕಃ (10) ಪ್ರವೇಷ್ಟಾ(11) ನಗರಾಧ್ಯಕ್ಷಃ (12) ಕಾರ್ಯನಿರ್ಮಾಣಕೃತ್ತಥಾ। (13) ಧರ್ಮಾಧ್ಯಕ್ಷ (14) ಸ್ಸಭಾಧ್ಯಕ್ಷೋ (15) ದಂಡಪಾಲ ಸ್ತ್ರಿಪಂಚಮಃ। ಷೋಡಶೋ (16) ದು

ರನ್ನೂ) ಸ್ವಪಕ್ಷದ* ಹದಿನೈದು ತೀರ್ಥಗಳನ್ನೂ ನೀನು ಆಗಾಗ ತಿಳಿದು ಕೊಳ್ಳುತ್ತಿರುವೆಯಾ? ಶತ್ರುಗಳಿಗೆ ನಿನ್ನ ರಹಸ್ಯಗಳನ್ನು ತಿಳಿಯಗೊಡಿಸದೆ ಅವರ ನಂಬಿಕೆಗೆ ಪಾತ್ರನಾಗಿಯೇ ಇದ್ದು, ಯಾವಾಗಲೂ ಆ ಶತ್ರುಗಳ ಸ್ಥಿತಿಗತಿಗಳನ್ನೂ, ರಹಸ್ಯವನ್ನೂ ತಿಳಿದುಕೊಳ್ಳುತ್ತಿರುವೆಯಾ? ವಿನೀತನೂ, ಅನೇಕ ವಿಚಾರಗಳನ್ನು ಓದಿ ಅಥವಾ ಕೇಳಿಬಲ್ಲ ಬಹುಶ್ರುತನೂ, ಅಸೂಯಾರಹಿತನೂ, ಮೇಲೆಮೇಲೆ ವಿಷಯಗಳನ್ನು ಪ್ರಶ್ನೆಮಾಡಿ ತಿಳಿಸತಕ್ಕವನೂ, ಕುಲೀನನೂ ಆದ ಪುರೋಹಿತನನ್ನು ನೀನು ಸತ್ಕರಿಸಿ ನಿನ್ನಲ್ಲಿಟ್ಟುಕೊಂಡಿರುವೆಯಾ? ಮತ್ತು ಶಾಸ್ತ್ರವಿಧಿಗಳನ್ನೆಲ್ಲ ತಿಳಿದು, ಬುದ್ಧಿವಂತನೂ, ಋಜುಸ್ವಭಾವವುಳ್ಳವನೂ ಆದ ಅಂತಹ ಪುರೋಹಿತನು, ನಿನ್ನ ಅಗ್ನಿಕಾರ್ಯಗಳಲ್ಲಿ ನಿಯುಕ್ತನಾಗಿ, ಆಯಾ ಕಾಲದಲ್ಲಿ ಹುತಮಾಡಿದದನ್ನೂ, ಮುಂದೆ ಹೋಮಮಾಡಬೇಕಾದುದನ್ನೂ ಸಕಾಲಕ್ಕೆ ನಿನಗೆ ತಿಳಿಸುತ್ತಿರುವನಷ್ಟೆ? ವೇದಾಂಗಗಳನ್ನೆಲ್ಲ ತಿಳಿದವನೂ, ಗ್ರಹನಕ್ಷತ್ರಗತಿಗಳನ್ನು ಬಲ್ಲವನೂ, ಎಲ್ಲಾ ಉತ್ಪಾತಗಳಿಗೂ ಪರಿಹಾರೋಪಾಯಗಳನ್ನು ಹೇಳಬಲ್ಲವನೂ ಆದ ಒಳ್ಳೇ ಬುದ್ಧಿಶಾಲಿಯಾದ ಜ್ಯೋತಿಷ್ಕನು ನಿನ್ನಲ್ಲಿರುವನೇ? ನಿನ್ನ ಸೇವಕರಲ್ಲಿ ಉತ್ತಮಾಧಮಮಧ್ಯಮರನ್ನು ವಿವೇಚನೆಯಿಂದ ತಿಳಿದು, ಉತ್ತಮರನ್ನು ಉತ್ತಮಕಾರ್ಯಗಳಿಗೂ, ಮಧ್ಯಮರನ್ನು ನಡುತರದ ಕಾರ್ಯಗಳಿಗೂ, ಕೀಳುತರದವರನ್ನು ಕೀಳುತರದ ಕಾರ್ಯಗಳಿಗೂ ನಿಯಮಿಸುತ್ತಿರುವೆಯಷ್ಟೆ? ಉಪಧಾಶುದ್ಧರೆಂದರೆ ದಾನಭೇದಾದ್ಯುಪಾಯಗಳಿಂದ ಪರೀಕ್ಷಿಸಲ್ಪಟ್ಟು, ಅವೊಂದಕ್ಕೂ ಒಳಗಾಗದ ಶುದ್ಧರೂ, ಮತ್ತು ಪಿತೃಪಿತಾಮಹ ಪರಂಪರೆಯಾಗಿ ಬಂದವರೂ, ಆದ

---

ರ್ಗಪಾಲಶ್ಚ ತಥಾ(17)ರಾಷ್ಟ್ರಾಂತಪಾಲಕಃ | (18) ಅಟವೀಪಾಲಕಾಂತಾನಿ ತೀರ್ಥಾನ್ಯಷ್ಟಾದಶೈವತು || ಎಂಬಂತೆ ಇವರಿಷ್ಟುಮಂದಿ ಉದ್ಯೋಗಸ್ಥರೂ ಅಷ್ಟಾದಶತೀರ್ಥಗಳೆನಿಸುವರು. ಶತ್ರುರಾಷ್ಟ್ರದಲ್ಲಿರುವ ಈ ಹದಿನೆಂಟು ಮಂದಿಯ ಪ್ರವರ್ತನೆಗಳನ್ನೂ ರಾಜನು ಪಾಷಂಡಾದಿ ವೇಷಧಾರಿಗಳಾದ ಗೂಢಚಾರರ ಮೂಲಕವಾಗಿ ತಿಳಿದುಕೊಳ್ಳುತ್ತಿರಬೇಕು.

* ಹೀಗೆಯೇ ಸ್ವಪಕ್ಷದಲ್ಲಿಯೂ, ಮಂತ್ರಿ, ಯುವರಾಜ, ಪುರೋಹಿತರೆಂಬ ಮೂವರನ್ನು ಬಿಟ್ಟು, ಉಳಿದ ಹದಿನೈದು ಮಂದಿಗಳ ಪ್ರವರ್ತನೆಗಳನ್ನು ಗೂಢಚಾರರ ಮೂಲಕವಾಗಿ ರಾಜನು ತಿಳಿಯುತ್ತಿರಬೇಕು.

ಉತ್ತಮ ಮಂತ್ರಿಗಳನ್ನೇ ನೀನು ದೊಡ್ಡ ಕಾರ್ಯಗಳಲ್ಲಿ ನಿಯೋಗಿಸುತ್ತಿರುವೆಯಷ್ಟೆ? ನೀನು ಕ್ರೂರಶಾಸನಗಳಿಂದ ಪ್ರಜೆಗಳಿಗೆ ಭೀತಿಹುಟ್ಟಿಸುವುದಿಲ್ಲವಷ್ಟೆ? ಮಂತ್ರಿಗಳು ನಿನ್ನ ರಾಜ್ಯವನ್ನು ಸರಿಯಾಗಿ ಆಳುತ್ತಿರುವರೇ? ಕರ್ಮಭ್ರಷ್ಟರಾದ ಪತಿತರು ಕರ್ಮಶೀಲರನ್ನೂ, ಸ್ತ್ರೀಯರು ಮೇಲೆ ಬಿದ್ದು ಬರುವ ಕಾಮಾತುರರನ್ನೂ ಅವಮಾನಗೊಳಿಸುವಂತೆ, ಮಂತ್ರಿಗಳು ನಿನ್ನನ್ನು ಅವಮಾನಗೊಳಿಸುತ್ತಿಲ್ಲವಷ್ಟೆ? ಶೌರ್ಯಧೈರ್ಯೋತ್ಸಾಹಗಳುಳ್ಳವನೂ, ಬುದ್ಧಿಶಾಲಿಯೂ, ಶುದ್ಧನೂ, ದೊಡ್ಡ ಕುಲದಲ್ಲಿ ಹುಟ್ಟಿದವನೂ, ನಿನ್ನಲ್ಲಿ ನಿಜವಾದ ಅನುರಾಗವುಳ್ಳವನೂ, ಸಮರ್ಥನೂ ಆದವನು ನಿನ್ನ ಸೇನಾಧಿಪತ್ಯದಲ್ಲಿರುವನೇ? ನಿನ್ನ ಸೈನ್ಯದಲ್ಲಿರುವ ಪ್ರಧಾನ ವೀರರು ಎಲ್ಲಾ ತರದ ಯುದ್ಧಗಳಲ್ಲಿಯೂ ನೈಪುಣ್ಯವುಳ್ಳವರಾಗಿ, ಎಂತಹ ಯುದ್ಧಕ್ಕೂ ಹಿಂಜರಿಯದವರಾಗಿ, ಒಳ್ಳೇ ಪರಾಕ್ರಮಿಗಳೂ, ಪರಿಶುದ್ಧರೂ ಆಗಿರುವರಷ್ಟೆ? ಅವರನ್ನೆಲ್ಲ ನೀನು ಬಹುಮಾನಿಸಿ ಸತ್ಕರಿಸುತ್ತಿರುವೆಯಾ? ನೀನು ನಿನ್ನ ಸೈನ್ಯಗಳಿಗೆಲ್ಲ ಆಗಾಗ ಕೊಡಬೇಕಾದ ವೇತನಗಳನ್ನೂ, ಭೋಜನಗಳನ್ನೂ (ಭತ್ಯಗಳನ್ನೂ) ಸಕಾಲಕ್ಕೆ ಕೊಟ್ಟು, ಉಚಿತರೀತಿಯಲ್ಲಿ ಸತ್ಕರಿಸುತ್ತಿರುವೆಯಾ? ಆ ವಿಚಾರಗಳಲ್ಲಿ ನೀನು ಲೋಭದಿಂದ ಕೈಹಿಡಿದು, ಅವುಗಳನ್ನೇನೂ ತಪ್ಪಿಸುವುದಿಲ್ಲವಷ್ಟೆ? ಸೈನಿಕರಿಗೆ ಸಕಾಲಕ್ಕೆ ವೇತನಾದಿಗಳನ್ನು ಕೊಡದಿದ್ದರೆ ಅವರು ಬಹಳ ಕಷ್ಟಪಡುವರು. ರಾಜನಲ್ಲಿ ಕೋಪಗೊಂಡು ಇದಿರು ಬೀಳುವರು. ಅದರಿಂದುಂಟಾಗುವ ಅನರ್ಥವು ಬಹಳ ಮಹತ್ತಾದುದೆಂದು ತಿಳಿ.

ನಿನ್ನ ರಾಷ್ಟ್ರದೊಳಗಿನ ಪ್ರಧಾನ ರಾಜಕುಮಾರರೆಲ್ಲರೂ ನಿನ್ನಲ್ಲಿ ಅನುರಕ್ತರಾಗಿರುವರೆ? ಅವರೆಲ್ಲರೂ ನಿನಗಾಗಿ ಯುದ್ಧದಲ್ಲಿ ತಮ್ಮ ಪ್ರಾಣಗಳನ್ನಾದರೂ ಒಪ್ಪಿಸುವುದಕ್ಕೆ ಸಿದ್ಧರಾಗಿರುವರೇ? ನಿನ್ನ ಕಡೆಯವರಲ್ಲಿ ಯಾವನೂ ದುರಾಶೆಯಿಂದ ತಾನೊಬ್ಬನೇ ಅನೇಕವಿಷಯಗಳಲ್ಲಿ ತಲೆಯಿಕ್ಕಿ, ನಿನ್ನ ಮಾತನ್ನೂ ಕೇಳದೆ, ಕಾರ್ಯಗಳಲ್ಲಿ ತನ್ನ ಇಷ್ಟಬಂದಂತೆ ಪ್ರವರ್ತಿಸುವುದಿಲ್ಲವಷ್ಟೆ? ನಿನ್ನ ಸೇವಕರಲ್ಲಿ ಯಾವನಾದರೂ ಒಬ್ಬನು ತನ್ನ ಸಾಮರ್ಥ್ಯದಿಂದ ಒಳ್ಳೇ ಕಾರ್ಯಗಳನ್ನು ನಡೆಸಿದಾಗ,

ಅದಕ್ಕೆ ನಿನ್ನಿಂದ ಅನೇಕ ಸತ್ಕಾರಗಳನ್ನೂ, ಸಂಬಳವನ್ನೂ, ಭೋಜನಾದಿಗಳನ್ನೂ ಪಡೆಯುತ್ತಿರುವನೇ? ವಿದ್ಯಾವಂತರೂ, ವಿನೀತರೂ, ಜ್ಞಾನಿಗಳೂ, ಗುಣವಂತರೂ ಆದ ಜನರನ್ನು ನೀನು ಅರರವರ ಯೋಗ್ಯತೆಗೆ ತಕ್ಕಂತೆ ದಾನಮಾನಾದಿಗಳಿಂದ ಆದರಿಸುತ್ತಿರುವೆಯಾ? ರಾಜೇಂದ್ರಾ! ನಿನಗಾಗಿ ಯಾರು ತಮ್ಮ ಪ್ರಾಣಗಳನ್ನೊಪ್ಪಿಸಿದರೋ, ಯಾರುಯಾರು ವ್ಯಸನಕ್ಕೀಡಾದರೋ, ಅಂತವರ ಹೆಂಡಿರುಮಕ್ಕಳನ್ನು ನೀನು ಚೆನ್ನಾಗಿ ಕಾಪಾಡುತ್ತಿರುವೆಯಾ? ಯುದ್ಧದಲ್ಲಿ ನಿನಗೆ ಭಯಪಟ್ಟು ಅಥವಾ ಬಹಳ ಕ್ಷೀಣದಶೆ ಹೊಂದಿ ನಿನ್ನಲ್ಲಿ ಮರೆಹೊಕ್ಕವರನ್ನೂ, ಪರಾಜಿತರಾದವರನ್ನೂ ನೀನು ಪುತ್ರಪ್ರೇಮದಿಂದ ಪಾಲಿಸುತ್ತಿರುವೆಯಾ? ನಿನ್ನ ಸಮಸ್ತ ಭೂಮಿಯಲ್ಲಿಯೂ ನೀನು ಪ್ರಜೆಗಳಿಗೆಲ್ಲ ತಂದೆಯಂತೆಯೂ, ತಾಯಿಯಂತೆಯೂ, ಇದ್ದುಕೊಂಡು, ಸರ್ವಸಮನಾಗಿ, ಎಲ್ಲರ ವಿಶ್ವಾಸಕ್ಕೆ ಪಾತ್ರನಾಗಿರುವೆಯಾ? ನಿನ್ನ ಶತ್ರುವು ಜೂಜು, ಬೇಟೆ ಮೊದಲಾದ ದುರ್ವ್ಯಸನಗಳಲ್ಲಿ ಬಿದ್ದ ಸಮಯವನ್ನು ನೋಡಿ, ನಿನ್ನ ಮಂತ್ರಬಲ, ಸೇನಾಬಲ, ಕೋಶಬಲಗಳನ್ನೂ ಪರೀಕ್ಷಿಸಿ, ಒಡನೆಯೇ ನೀನು ಅವನಮೇಲೆ ದಂಡೆತ್ತುವ ಪ್ರಯತ್ನಮಾಡುವೆಯಷ್ಟೆ? ನೀನು ನಿನ್ನ ಅದೃಷ್ಟಕಾಲವನ್ನು ನೋಡಿಕೊಂಡು, ನಿನ್ನ *ಪಾರ್ಷ್ಣಿಬಲ, ಮೂಲಬಲಗಳೆರಡನ್ನೂ, ನಿನ್ನ ಕಡೆಯವರ ಕಾರ್ಯೋತ್ಸಾಹವನ್ನೂ ಶತ್ರುಪಕ್ಷದ ಕ್ಷೀಣದಶೆಯನ್ನೂ ಚೆನ್ನಾಗಿ ತಿಳಿದು, ದಂಡಯಾತ್ರೆಯನ್ನಾರಂಭಿಸುತ್ತಿರುವೆಯಷ್ಟೇ? ಮೊದಲು ನಿನ್ನ ಸ್ವದೇಶದಲ್ಲಿರುವ ಸೈನ್ಯಕ್ಕೆ ವೇತನಾದಿಗಳನ್ನು ಕೊಟ್ಟು ಸಂತೋಷಗೊಳಿಸುತ್ತ; ಆಮೇಲೆ ಪರರಾಷ್ಟ್ರದ ಮುಖ್ಯ ಸೈನ್ಯಾಧಿಕಾರಿಗಳಿಗೂ ಅವರವರ ಕೋರಿಕೆಗೆ ತಕ್ಕಂತೆ ಬೆಲೆಯುಳ್ಳ ಉತ್ತಮವಸ್ತುಗಳನ್ನು ರಹಸ್ಯವಾಗಿ ಕೊಟ್ಟು ಸಂತೋಷಗೊಳಿಸುತ್ತಿರುವೆಯಷ್ಟೆ?

---

* ಪಾರ್ಷ್ಣಿಬಲವೆಂದರೆ ತಾನು ಅನ್ಯದೇಶದಮೇಲೆ ದಂಡೆತ್ತಿ ಹೊರಡುವಾಗ, ತನ್ನ ದೇಶದ ನೆರೆಹೊರೆಯವರಲ್ಲಿರುವ ಬೇರೆ ರಾಜರು ರಾಜ್ಯವನ್ನಾಕ್ರಮಿಸದಂತೆ, ರಾಜ್ಯದ ಎಲ್ಲೆಯ ಕಾವಲಿಗಾಗಿ ಇಟ್ಟಿರುವ ಸೈನ್ಯವು. ಮೂಲಬಲವೆಂದರೆ ತನ್ನ ರಾಜ್ಯದೊಳಗೆ ನೆಲೆಗೊಳಿಸಿರುವ ಮುಖ್ಯ ಸೈನ್ಯವು.

ಮೊದಲು ನಿನ್ನನ್ನು ನೀನು ಜಯಿಸಿಕೊಂಡು, (ಜಿತೇಂದ್ರಿಯನಾಗಿದ್ದು) ಆಮೇಲೆ ನಿನ್ನ ಇತರಶತ್ರುಗಳಲ್ಲಿ, ಎಚ್ಚರತಪ್ಪಿದವರೂ, ಜಿತೇಂದ್ರಿಯರಲ್ಲದವರೂ ಆದವರನ್ನು ಜಯಿಸಲು ಪ್ರಯತ್ನಿಸುತ್ತಿರುವೆಯಷ್ಟೆ? ನೀನು ಶತ್ರುಗಳಮೇಲೆ ದಂಡೆತ್ತಿಹೊರಡುವುದಕ್ಕೆ ಮೊದಲು ಕ್ರಮವಾಗಿ, ಸಾಮ, ದಾನ, ಭೇದ, ದಂಡಗಳೆಂಬ ಉಪಾಯಗಳನ್ನು ಯಥಾರೀತಿಯಾಗಿ ಪ್ರಯೋಗಿಸುತ್ತಿರುವೆಯಾ? ಮೊದಲು ನೀನು ನಿನ್ನ ಮೂಲಸ್ಥಾನವನ್ನು ಭದ್ರಪಡಿಸಿಕೊಂಡು, ಆಮೇಲೆ ಶತ್ರುಗಳನ್ನು ಜಯಿಸಲು ಹೋಗುವೆಯಷ್ಟೆ? ನೀನು ದಂಡೆತ್ತಿಹೊರಟಮೇಲೆ ಹೇಗಾದರೂ ಶತ್ರುಗಳನ್ನು ಜಯಿಸುವುದಕ್ಕೆ ಪ್ರಯತ್ನಿಸಿ, ನಿನ್ನಿಂದ ಪರಾಜಿತರಾದವರನ್ನು ಚೆನ್ನಾಗಿ ರಕ್ಷಿಸುತ್ತಿರುವೆಯಾ? ಮೂಲಬಲ, ಭೃತ್ಯಭಲ, ಮಿತ್ರಬಲ, ಆಟವಿಕಬಲವೆಂಬ ನಾಲ್ಕುಬಗೆಯ ವಿಭಾಗಗಳುಳ್ಳ ನಿನ್ನ ಸೈನ್ಯದಲ್ಲಿ ರಥ, ಗಜ, ತುರಗ, ಪದಾತಿಗಳು, ಸೇನಾಪತಿಗಳು, ಕೆಲಸಗಾರರು, ಗೂಢಚಾರರು, ದೇಶಪ್ರಧಾನರು ಎಂಬೀ ಅಷ್ಟಾಂಗಗಳೂ ಸರಿಯಾಗಿದ್ದು, ಒಳ್ಳೇ ಸೇನಾಪತಿಗಳಿಂದ ಚೆನ್ನಾಗಿ ನಡೆಸಲ್ಪಡುತ್ತ, ಅದು ಶತ್ರುನಿಗ್ರಹದಲ್ಲಿ ಸಮರ್ಥವಾಗಿರುವುದೆ? ನಿನ್ನ ಶತ್ರುರಾಷ್ಟ್ರದಲ್ಲಿ ಧಾನ್ಯಗಳನ್ನು ಕುಯ್ಯುವ ಮತ್ತು ಕುಯ್ದು ಧಾನ್ಯಗಳನ್ನು ಸಂಗ್ರಹಿಸಿಡುವ ಕಾಲಗಳನ್ನು ನೋಡುತ್ತಿದ್ದು, ಆ ಸಮಯವನ್ನು ಬಿಡದೆ ನೀನು ದಂಡೆತ್ತಿ ಶತ್ರುಗಳನ್ನು ನಿಗ್ರಹಿಸುತ್ತಿರುವೆಯಷ್ಟೆ? ನಿನ್ನ ದೇಶದಲ್ಲಿಯೂ ಪರದೇಶಗಳಲ್ಲಿಯೂ ನಿನ್ನಿಂದ ನಿಯಮಿಸಲ್ಪಟ್ಟ ಅಧಿಕಾರಿಗಳು ಅನೇಕರಿದ್ದುಕೊಂಡು, ಅಲ್ಲಲ್ಲಿನ ಕಾರ್ಯಗಳನ್ನು ಅನ್ಯೋನ್ಯ ಸಹಕಾರದಿಂದ ಜರುಗಿಸುತ್ತಾ, ಒಬ್ಬರನ್ನೊಬ್ಬರು ಕಾಪಾಡಿಕೊಳ್ಳುತ್ತಿರುವರೆ? ನಿನ್ನ ಭೋಜನಪದಾರ್ಥಗಳನ್ನೂ, ನೀನು ಮೈಮೇಲೆ ಧರಿಸತಕ್ಕ ವಸ್ತ್ರಚಂದನಾದಿಗಳನ್ನೂ, ನೀನು ಆಘ್ರಾಣಿಸತಕ್ಕ ಸುಗಂಧದ್ರವ್ಯಗಳನ್ನೂ, ಅವುಗಳಲ್ಲಿ ವಿಷಸಂಬಂಧವೇನೂ ಇಲ್ಲದಹಾಗೆ, ನಿನಗೆ ಒಳ್ಳೇ ನಂಬಿಕೆಗೆ ಪಾತ್ರರಾದವರೇ ನೋಡಿಕೊಳ್ಳುತ್ತಿರುವರಷ್ಟೆ? ನಿನ್ನ ಬೊಕ್ಕಸ, ಧಾನ್ಯಶಾಲೆ, ವಾಹನಗಳು, ಗೃಹ ನಗರ ದ್ವಾರಗಳು, ಆಯುಧಗಳು, ನಿನ್ನ ವರಮಾನಗಳು, ಇವುಗಳನ್ನೆಲ್ಲ ನಿನ್ನಿಂದ ಶ್ರೇಯಸ್ಸನ್ನು ಪಡೆದು ನಿನ್ನಲ್ಲಿ ಭಕ್ತಿಯುಳ್ಳವರೇ ನೋಡಿಕೊಳ್ಳುತ್ತಿರುವ

ರಷ್ಟೆ? ನಿನ್ನ ಬಾಹ್ಯಾಭ್ಯಂತರ ಸೇವಕರಿಂದ, ಎಂದರೆ ಸೈನಿಕರು ಮೊದಲಾದ ಹೊರಗಿನ ಸೇವಕರಿಂದಲೂ, ಅಡಿಗೆಯವರು ಮುಂತಾಗಿ ಒಳಗಿನ ಸೇವಕರಿಂದಲೂ ನಿನಗಾಗಲಿ, ನಿನ್ನ ಕಡೆಯ ಇತರ ಜನರಿಂದ ಅವರಿಗಾಗಲಿ, ಹಾನಿಬಾರದಂತೆ ಅವರೆಲ್ಲರ ವಿಷಯದಲ್ಲಿ ಎಚ್ಚರಗೊಂಡಿರುವೆಯಾ? ಜೂಜು, ಪಾನ, ಬೇಟೆ, ಸ್ತ್ರೀಯರು ಮುಂತಾದ ವ್ಯಸನಗಳಲ್ಲಿ ನಿನಗಾಗುವ ದುಂದುಗಾರಿಕೆಯ ವೆಚ್ಚವನ್ನು ಪ್ರತಿದಿನವೂ ಬೆಳಗಿನ ಹೊತ್ತು ನಿನ್ನ ಧರ್ಮಾನುಷ್ಠಾನ ಕಾಲದಲ್ಲಿ ಸೇವಕರು ಬಂದು ನಿನಗೆ ತಿಳಿಸದಿರುವರಷ್ಟೆ? ನಿನ್ನ ಆದಾಯದಲ್ಲಿ ಅರ್ಧಪಾಲು, ಕಾಲುಪಾಲು, ಅಥವಾ ಮುಕ್ಕಾಲುಪಾಲಿಗಿಂತ ನಿನ್ನ ವೆಚ್ಚವು ಮೀರಿಹೋಗುವುದಿಲ್ಲವಷ್ಟೆ? ನೀನು ಆಗಾಗ ದೀನದಶೆಯಲ್ಲಿರುವ ಬಂಧುಗಳನ್ನೂ, ಗುರುಗಳನ್ನೂ, ವೃದ್ಧರನ್ನೂ, ವರ್ತಕರನ್ನೂ, ಕೈಗಾರಿಕೆಯವರನ್ನೂ, ಆಶ್ರಿತರನ್ನೂ ಧನಧಾನ್ಯಗಳಿಂದ ತೃಪ್ತಿಗೊಳಿಸುತ್ತಿರುವೆಯಷ್ಟೆ? ನಿನ್ನ ಆದಾಯಗಳ ಲೆಕ್ಕವನ್ನು ನೋಡುವುದಕ್ಕಾಗಿ ನಿಯಮಿಸಲ್ಪಟ್ಟಿರುವ ಗಣಕರು, ಲೇಖಕರು, ಮುಂತಾದ ಉದ್ಯೋಗಸ್ಥರೆಲ್ಲರೂ ಪ್ರತಿದಿನವೂ ಬೆಳಗ್ಗೆ ನಿನ್ನ ಆದಾಯವ್ಯಯಗಳನ್ನು ಕುರಿತು ನಿನಗೆ ತಿಳಿಸುತ್ತಿರುವರಷ್ಟೆ? ಕಾರ್ಯಸಮರ್ಥರಾಗಿಯೂ ನಿನಗೆ ಹಿತೈಷಿಗಳಾಗಿಯೂ ಇರುವ ಸೇವಕರನ್ನು ನೀನು ತಪ್ಪೇನೂ ಇಲ್ಲದೆ ಕೆಲಸದಿಂದ ತಪ್ಪಿಸುವುದಿಲ್ಲವಷ್ಟೆ? ನೀನು ಜನರಲ್ಲಿ ಉತ್ತಮಾಧಮ ಮಧ್ಯಮರನ್ನು ಪರಿಶೀಲಿಸಿ, ಅವರವರಿಗೆ ಅನುಗುಣವಾದ ಕಾರ್ಯಗಳಲ್ಲಿ ಅವರವರನ್ನು ನಿಯಮಿಸುತ್ತಿರುವೆಯಾ? ಲೋಭಿಗಳೂ, ಚೌರ್ಯಸ್ವಭಾವವುಳ್ಳವರೂ, ನಿನ್ನಲ್ಲಿ ದ್ವೇಷಬುದ್ಧಿಯುಳ್ಳವರೂ, ನಡವಡಿಕೆಗಳನ್ನು ಚೆನ್ನಾಗಿ ತಿಳಿಯದವರೂ, ನಿನ್ನ ಕಾರ್ಯಗಳಲ್ಲಿ ತಲೆಯಿಕ್ಕುವುದಿಲ್ಲವಷ್ಟೆ? ಚೋರರೂ, ಲುಬ್ಧರೂ, ಬಾಲರೂ, ಸ್ತ್ರೀಯರೂ, ನಿನ್ನ ರಾಜಕಾರ್ಯಗಳಲ್ಲಿ ತಲೆಯಿಕ್ಕಿ, ಅದರಿಂದ ಪ್ರಜೆಗಳಿಗೆ ಬಾಧೆಯುಂಟಾಗುವುದಕ್ಕೆ ನೀನು ಅವಕಾಶಕೊಡುವುದಿಲ್ಲವಷ್ಟೆ? ನಿನ್ನ ದೇಶದಲ್ಲಿ ವ್ಯವಸಾಯಗಾರರೆಲ್ಲರೂ ತುಷ್ಟಿಹೊಂದಿರುವರೇ? ನಿನ್ನ ದೇಶದಲ್ಲಿ ವಿಸ್ತಾರವಾದ ಕೆರೆ ಕೊಳಗಳಿದ್ದು, ಅವೆಲ್ಲವೂ ಜಲಸಮೃದ್ಧಿಯಿಂದ ಕೂಡಿ, ಎಲ್ಲಾ ಸ್ಥಳಗಳಿಗೂ ಸರಿಯಾದ ವಿಭಾಗಗಳಿಂದ ಏರ್ಪಟ್ಟಿರುವುವೇ? ನಿನ್ನ

ದೇಶದಲ್ಲಿ ಮಳೆಯನೀರನ್ನೇ ನಂಬಿ ನಡೆಸಬೇಕಾದ ಕೃಷಿಯಿಲ್ಲವಷ್ಟೆ? ನಿನ್ನ ದೇಶದ ಕೃಷಿ, ವಾಣಿಜ್ಯ, ಗೋರಕ್ಷಣೆ, ಧನವ್ಯವಹಾರ ಇವೆಲ್ಲವೂ ಒಳ್ಳೇ ಸಾಧುಗಳಿಂದ ಚೆನ್ನಾಗಿ ನಡೆಸಲ್ಪಡುವುವೆ? ಅಪ್ಪ ಯುಧಿಷ್ಠಿರಾ! ಮುಖ್ಯವಾಗಿ ಈ ಮೇಲೆ ಹೇಳಿದ ವ್ಯಾಪಾರಗಳಿಂದಲೇ ದೇಶವು ವೃದ್ಧಿಗೆ ಬರಬೇಕು. ಅದರಿಂದಲೇ ಪ್ರಜೆಗಳು ಸೌಖ್ಯವನ್ನು ಹೊಂದುವರು. ಓ ರಾಜಾ! ನಿನ್ನ ದೇಶದ ಪ್ರತಿಗ್ರಾಮದಲ್ಲಿಯೂ ಒಳ್ಳೇ ಶೂರರೂ, ಬುದ್ಧಿವಂತರೂ ಆದ ಐದುಮಂದಿ ಉದ್ಯೋಗಸ್ಥರು (ಮುಖ್ಯಾಧಿಕಾರಿಯೊಬ್ಬನು, ತೆರಿಗೆಗಳನ್ನು ತೆಗೆಯುವವನು, ವಿವಾದಗಳನ್ನು ತೀರಿಸಿ ಸಮಾಧಾನಗೊಳಿಸತಕ್ಕವನು, ಲೆಕ್ಕವನ್ನು ಬರೆದಿಡತಕ್ಕವನು, ದುಷ್ಟರನ್ನು ಕಂಡುಹಿಡಿದು ಶಿಕ್ಷಿಸತಕ್ಕವನು.) ಈ ಐದುಮಂದಿಯೂ ಅನ್ಯೋನ್ಯ ಸಹಕಾರದಿಂದ ಕೆಲಸ ಮಾಡುತ್ತ ನಿನ್ನ ದೇಶವನ್ನು ವೃದ್ಧಿಗೊಳಿಸುತ್ತಿರುವರೇ? ನಿನ್ನ ರಾಷ್ಟ್ರದ ನಗರಗಳನ್ನು ರಕ್ಷಿಸುವುದಕ್ಕಾಗಿ ಸುತ್ತಿನ ಗ್ರಾಮಗಳು ನಗರಗಳಂತೆಯೂ, ಗ್ರಾಮದ ಸುತ್ತುಮುತ್ತಿನ ಪ್ರದೇಶಗಳು ಗ್ರಾಮಗಳಂತೆಯೂ ಮೇಲೆ ಮೇಲೆ ವೃದ್ಧಿಗೆ ತರಲ್ಪಡುತ್ತಿರುವುವೆ? ನಿನ್ನ ದೇಶದಲ್ಲಿ ಕಳ್ಳರನ್ನು ನಿಗ್ರಹಿಸುವುದಕ್ಕಾಗಿ ಏರ್ಪಟ್ಟ ಉದ್ಯೋಗಸ್ಥರು ತಮ್ಮೊಡನೆ ಸೈನ್ಯಗಳನ್ನು ತೆಗೆದುಕೊಂಡು, ಸಮ ವಿಷಮ ಪ್ರದೇಶಗಳೊಳಗೂ, ಪಟ್ಟಣಗಳೊಳಗೂ ಸಂಚರಿಸುತ್ತಿರುವರೆ? ನೀನು ಸ್ತ್ರೀಯರನ್ನು ಪ್ರೇಮದಿಂದ ನಡೆಸುತ್ತಿರುವೆಯಾ? ಆದರೆ ಅವರನ್ನು ನಂಬಿ ಯಾವ ರಹಸ್ಯವನ್ನೂ ಹೇಳದಿರುವೆಯಷ್ಟೆ? ನೀನು ಕಾಲವಿಳಂಬಕ್ಕೆ ಯೋಗ್ಯವಲ್ಲದ ಏನಾದರೂ ಅಪಾಯಸಂಭವಗಳನ್ನು ಕೇಳಿದೊಡನೆ ಅದರ ಫಲಾಫಲಗಳನ್ನೆಲ್ಲ ಪರ್ಯಾಲೋಚಿಸಿ, ಆಮೇಲೆ ಅಂತಃಪುರದೊಳಗೆ ಹೋಗಿ ಬರೀ ಸಂತೋಷಾನುಭವದಿಂದ ನಿದ್ರಿಸುವುದಿಲ್ಲವಷ್ಟೆ? ನೀನು ಪ್ರತಿದಿನವೂ ರಾತ್ರಿಯಲ್ಲಿ ಮೊದಲು ಎರಡು ಜಾಮುಗಳವರೆಗೆ ಮಾತ್ರ ಸುಖನಿದ್ರೆಯನ್ನನುಭವಿಸಿ, ಮೂರನೆಯ (ಕೊನೆಯ) ಜಾಮವು ಆರಂಭಿಸುವ ಕಾಲದಲ್ಲಿ ಎಚ್ಚರಗೊಂಡು, ಧರ್ಮಾರ್ಥಗಳನ್ನು ಚಿಂತಿಸುತ್ತಿರುವೆಯಾ? ಓ ಪಾಂಡುಕುಮಾರಾ! ನೀನು ಪ್ರತಿದಿನವೂ ಸಕಾಲಕ್ಕೆ ಎಚ್ಚರಗೊಂಡು, ದೇಹಾಲಂಕಾರಗಳನ್ನು ಮಾಡಿಕೊಂಡು, ಕಾಲಜ್ಞರಾದ ಮಂತ್ರಿಗಳೊಡಗೂಡಿ, ಪ್ರಜೆಗಳಿಗೆ

ದರ್ಶನವನ್ನು ಕೊಡುತ್ತಿರುವೆಯಾ? ಕೆಂಪಾದ ಉಡುಪುಗಳನ್ನು ಧರಿಸಿ, ಖಡ್ಗಪಾಣಿಗಳಾಗಿ ಒಳ್ಳೇ ಅಲಂಕೃತರಾದ ಭಟರು ನಿನ್ನ ದೇಹರಕ್ಷಣೆಗಾಗಿ ಯಾವಾಗಲೂ ನಿನ್ನನ್ನು ಸುತ್ತಿಮುತ್ತಿರುವರಷ್ಟೆ? ಯಾರನ್ನು ಶಿಕ್ಷಿಸಬೇಕೋ, ಯಾರನ್ನು ಪೂಜಿಸಬೇಕೋ ಆ ತಾರತಮ್ಯವನ್ನು ಪ್ರತ್ಯೇಕವಾಗಿ ವಿಭಾಗಿಸಿ ತಿಳಿದು, ಅವರು ಮಿತ್ರರಾಗಲಿ, ಶತ್ರುಗಳಾಗಲಿ, ಅವರ ವಿಷಯದಲ್ಲಿ ಯಮನಂತೆ ನೀನು ಸಮವರ್ತಿಯಾಗಿ ನಡೆಯುವೆಯಷ್ಟೆ? ಶಾರೀರಕ ಬಾಧೆಗಳನ್ನು ಔಷಧಪಥ್ಯಗಳಿಂದಲೂ, ಮಾನಸಿಕ ಬಾಧೆಗಳನ್ನು ದೊಡ್ಡವರ ಆಶ್ರಯದಿಂದಲೂ ನೀನು ಆಗಾಗಲೇ ನಿವಾರಿಸುತ್ತಿರುವೆಯಷ್ಟೆ? *ಅಷ್ಟಾಂಗಚಿಕಿತ್ಸೆಯಲ್ಲಿ ಸಮರ್ಥರಾಗಿ ಮತ್ತು ನಿನ್ನಲ್ಲಿ ನಿಜವಾದ ಪ್ರೇಮವುಳ್ಳ ವೈದ್ಯರು ನಿನ್ನ ಚಿಕಿತ್ಸೆಗಿರುವರಷ್ಟೆ? ಅವರೆಲ್ಲರೂ ನಿನಗೆ ಸುಹೃತ್ತುಗಳಾಗಿ, ನಿನ್ನ ಶರೀರಸೌಖ್ಯದಲ್ಲಿ ಅಕ್ಕರೆಯುಳ್ಳವರಾಗಿರುವರೆ? ರಾಜೇಂದ್ರಾ! ನಿನ್ನಲ್ಲಿ ವ್ಯವಹಾರಕ್ಕಾಗಿ ಬಂದ ವಾದಿಪ್ರತಿವಾದಿಗಳ ವಿಷಯದಲ್ಲಿ ನೀನು ಲೋಭದಿಂದಾಗಲಿ, ಗರ್ವದಿಂದಾಗಲಿ, ಅಜ್ಞಾನದಿಂದಾಗಲಿ ನ್ಯಾಯಕ್ಕೆ ವಿರೋಧವಾಗಿ ಹೋಗುವುದಿಲ್ಲವಷ್ಟೆ? ಮತ್ತೊಬ್ಬರ ಮಾತಿನಲ್ಲಿ ನಂಬಿಕೆಯಿಂದಾಗಲಿ, ದಾಕ್ಷಿಣ್ಯದಿಂದಾಗಲಿ, ಧನಾಶೆಯಿಂದಾಗಲಿ, ಅಜ್ಞತೆಯಿಂದಾಗಲಿ ನಿನ್ನಲ್ಲಿ ಆಶ್ರಿತರಾದವರ ಬದುಕನ್ನು ನೀನು ಕೆಡಿಸುವುದಿಲ್ಲದಷ್ಟೆ? ನಿನ್ನ ಪುರಜನರಾಗಲಿ, ದೇಶಜನರಾಗಲಿ, ಶತ್ರುಗಳ ಲಂಚಕ್ಕೊಳಪಟ್ಟು ತಮ್ಮೊಳಗೆ ಗುಂಪುಕೂಡಿ ನಿನ್ನನ್ನು ವಿರೋಧಿಸುವುದಿಲ್ಲವಷ್ಟೆ? ನಿನ್ನಿಂದ ಪೀಡಿತನಾಗಿ ಬಲಹೀನನಾದ ನಿನ್ನ ಶತ್ರುವು, ತನ್ನ ಮಂತ್ರಬಲ ಬುದ್ಧಿಬಲ ಸೇನಾಬಲಗಳಿಂದ ನಿನಗಿಂತ ಮೇಲೆನಿಸಲು ಅವಕಾಶಕೊಡದಂತೆ ನೋಡುತ್ತಿರುವೆಯಷ್ಟೆ? ಪ್ರಧಾನರಾಜರೆಲ್ಲರೂ ನಿನ್ನಲ್ಲಿ ಸ್ನೇಹದಿಂದಿರುವರೆ? ನೀನು ಕರೆಸಿದೊಡನೆ ಅವರು ನಿನ್ನ ಕಾರ್ಯಕ್ಕಾಗಿ ತಮ್ಮ ಪ್ರಾಣಗಳನ್ನಾದರೂ ಬಿಡಲು ಸಿದ್ಧರಾಗಿರುವರೆ? ನಿನಗೆ ಸಮಸ್ತ ವಿದ್ಯೆಗಳಲ್ಲಿಯೂ ಅವುಗಳ ಗುಣಕ್ಕೆ ತಕ್ಕ ಗೌರವಬುದ್ಧಿಯಿರುವುದಷ್ಟೆ? ಸಾಧುಗಳಾದ ಬ್ರಾಹ್ಮಣರ ವಿಷಯದಲ್ಲಿ ನೀನು ಅವರ ಗುಣಕ್ಕೆ

---

* ಶಲ್ಯ, ಶಾಲಾಕ್ಯ, ರೋಗಚಿಕಿತ್ಸೆ, ಭೂತವಿದ್ಯೆ, ಸ್ತ್ರೀಬಾಲವೈದ್ಯ, ವಿಷವೈದ್ಯ, ರಸಾಯನ ತಂತ್ರ, ವಾಜೀಕರಣವೆಂಬಿವು ಅಷ್ಟಾಂಗಗಳು.

ತಕ್ಕ ಗೌರವವನ್ನು ನೀನು ತೋರಿಸುತ್ತಿರುವೆಯಾ? ನಿನ್ನ ಶ್ರೇಯೋಭಿವೃದ್ಧಿಗಾಗಿ ಮಹರ್ಷಿಗಳನ್ನು ಪೂಜಿಸುತ್ತಿರುವೆಯಾ? ಸ್ವರ್ಗಮೋಕ್ಷಗಳಿಗೆ ಕಾರಣಗಳಾದ ನಿತ್ಯದಕ್ಷಿಣೆಗಳನ್ನು ನೀನು ಅವರಿಗೆ ಸಲ್ಲಿಸುತ್ತಿರುವೆಯಾ? ವೇದಪ್ರತಿಪಾದ್ಯಗಳಾಗಿಯೂ, ಪೂರ್ವಿಕರಿಂದ ಆಚರಿಸಲ್ಪಟ್ಟುದಾಗಿಯೂ ಇರುವ ಧರ್ಮಗಳನ್ನು ನಿನ್ನ ಪೂರ್ವೀಕರಂತೆಯೇ ನೀನು ಅಕ್ಕರೆಯಿಂದ ನಡೆಸುತ್ತಿರುವೆಯಷ್ಟೆ? ನಿನ್ನ ಮನೆಗೆ ಬಂದ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನಗಳನ್ನು ನೀನೇ ಪ್ರತ್ಯಕ್ಷವಾಗಿದ್ದು ನಡೆಸುತ್ತ, ಅವರನ್ನು ದಕ್ಷಿಣೆಗಳಿಂದ ಸಂತೋಷಪಡಿಸುತ್ತಿರುವೆಯಾ? ವಾಜಪೇಯ ಪೌಂಡರೀಕ ಮೊದಲಾದ ಯಾಗಗಳನ್ನೆಲ್ಲ ನೀನು ದೃಢಮನಸ್ಸಿನಿಂದಲೂ, ಭಕ್ತಿಯಿಂದಲೂ ನಡೆಸುತ್ತಿರುವೆಯಾ? ಪ್ರತಿದಿನವೂ ನಿನ್ನ ಬಂಧುಗಳನ್ನೂ, ಗುರುಗಳನ್ನೂ, ವೃದ್ಧರನ್ನೂ, ದೇವತೆಗಳನ್ನೂ, ಮಹರ್ಷಿಗಳನ್ನೂ, ಪ್ರಧಾನವಾದ ಅಶ್ವತ್ಥಾದಿ ಪುಣ್ಯವೃಕ್ಷಗಳನ್ನೂ, ಬ್ರಾಹ್ಮಣರನ್ನೂ ನಮಸ್ಕರಿಸುತ್ತಿರುವೆಯಾ? ನೀನು ಮತ್ತೊಬ್ಬರನ್ನು ದುಃಖಕ್ಕಾಗಲಿ, ಕೋಪಕ್ಕಾಗಲಿ ನಿಷ್ಕಾರಣವಾಗಿ ಗುರಿಮಾಡುವುದಿಲ್ಲವಷ್ಟೆ? ಜನಗಳು ಮಂಗಳದ್ರವ್ಯಗಳನ್ನು ಕೈಯಲ್ಲಿಟ್ಟುಕೊಂಡು ನಿನ್ನ ಪಕ್ಕದಲ್ಲಿ ಯಾವಾಗಲೂ ಇರುತ್ತಿರುವರೇ? ನಿನ್ನ ಬುದ್ಧಿಯೂ, ನಡವಳಿಕೆಯೂ, ಧರ್ಮಾರ್ಥಕಾಮಗಳಿಗೂ, ಯಶಸ್ಸಿಗೂ, ದೀರ್ಘಾಯುಸ್ಸಿಗೂ, ಕಾರಣವಾದ ಮಾರ್ಗದಲ್ಲಿ ವರ್ತಿಸುತ್ತಿರುವುದಷ್ಟೆ? ಇಂತಹ ಬುದ್ಧಿಯುಳ್ಳವರಿಗೆ ಎಂದಿಗೂ ರಾಜ್ಯವು ಕೈಬಿಟ್ಟುಹೋಗದು. ಅಂತಹ ರಾಜನು ಭೂಮಿಯನ್ನೆಲ್ಲ ಜಯಿಸಿ, ಮೇಲೆಮೇಲೆ ಅಭಿವೃದ್ಧಿಹೊಂದುತ್ತ ಸುಖದಿಂದಿರುವನು. ಪರಿಶುದ್ಧಾತ್ಮನಾದ ಒಬ್ಬ ಸಾಧುವಿನಮೇಲೆ ಅನ್ಯಾಯವಾಗಿ ಕಳ್ಳತನವು ಹೊರಿಸಲ್ಪಟ್ಟಾಗ, ನ್ಯಾಯಾಧಿಕಾರಿಗಳು ಶಾಸ್ತ್ರನಿಯಮಗಳನ್ನು ಪರಿಶೀಲಿಸದೆ, ಅವನನ್ನು ವಧಿಸುವುದು ಅಥವಾ ದಂಡಿಸುವುದು ಕೇವಲ ಪಾಪಕಾರ್ಯವು. ನಿನ್ನ ಕಡೆಯ ಅಧಿಕಾರಿಗಳು ಅಂತಹ ದುರ್ನೀತಿಯಲ್ಲಿ ಪ್ರವರ್ತಿಸುವುದಿಲ್ಲವಷ್ಟೆ? ನಿಜವಾದ ಅಪರಾಧಿಯೊಬ್ಬನು ಪ್ರತ್ಯಕ್ಷವಾಗಿ ಸಿಕ್ಕಿಬಿದ್ದು, ಅವನ ಅಪರಾಧವನ್ನು ಪ್ರತ್ಯಕ್ಷವಾಗಿ ನೋಡಿ ತಿಳಿದವರಿಂದಲೂ ಅದು ಚೆನ್ನಾಗಿ ನಿರೂಪಿಸಲ್ಪಟ್ಟಾಗ, ಅಂತಹ ದುಷ್ಟನನ್ನು ನಿನ್ನ

ಕಡೆಯ ನ್ಯಾಯಾಧಿಕಾರಿಗಳು ದ್ರವ್ಯಾಶೆಯಿಂದ ಶಿಕ್ಷಿಸದೆ ಬಿಟ್ಟುಬಿಡುವುದಿಲ್ಲವಷ್ಟೆ? ಓ ಪಾರ್ಥ! ಬಡವನಿಗೂ ಭಾಗ್ಯವಂತನಿಗೂ ಒಂದು ವ್ಯವಹಾರವು ಸಂಭವಿಸಿದಾಗ ನಿನ್ನ ಕಡೆಯ ನ್ಯಾಯಾಧಿಕಾರಿಗಳು ಧನವಂತನಲ್ಲಿರುವ ಹಣದ ಗೌರವಕ್ಕಾಗಿ ಅನ್ಯಾಯದ ತೀರ್ಮಾನಕ್ಕೆ ಪ್ರವರ್ತಿಸುವುದಿಲ್ಲವಷ್ಟೆ? ಮಹಾರಾಜಾ! ನಾಸ್ತಿಕತೆ, ಸುಳ್ಳು, ಕೋಪ, ಅಜಾಗರೂಕತೆ, ಕಾರ್ಯಗಳಲ್ಲಿ ವಿಳಂಬಮಾಡುವುದು, ತಿಳಿದವರಲ್ಲಿ ಕಲೆಯದಿರುವುದು, ಸೋಮಾರಿತನ, ಪಂಚೇಂದ್ರಿಯಗಳ ಭೋಗಕ್ಕೆ ವಶನಾಗುವುದು, ಒಬ್ಬನೇ ಕುಳಿತು ಕಾರ್ಯಾಲೋಚನೆಗಳನ್ನು ಮಾಡುವುದು, ಕಾರ್ಯಜ್ಞರಲ್ಲದವರಲ್ಲಿ ಆಲೋಚನೆಮಾಡುವುದು, ನಿಶ್ಚಿಂತವಾದ ಕಾರ್ಯವನ್ನು ಆರಂಭಿಸದೆ, ಕಾಲಕಳೆಯುವುದು, ಮಂತ್ರಾಲೋಚನೆಗಳನ್ನು ರಹಸ್ಯವಾಗಿಡದೆ ಹೊರಗೆ ಬಿಡುವುದು, ಮಂಗಳಕಾರ್ಯಾದಿಗಳನ್ನು ಮಾಡಿಸದಿರುವುದು, ಎಂತವರಿಗಾದರೂ ಇದಿರೆದ್ದು ಮರ್ಯಾದೆಮಾಡದಿರುವುದು, ಇವು ಹದಿನಾಲ್ಕೂ ರಾಜರನ್ನು ಕೆಡಿಸತಕ್ಕ ದೋಷಗಳು. ಈ ದೋಷಗಳೆಲ್ಲವನ್ನೂ ನೀನು ಬಿಟ್ಟಿರುವೆಯಷ್ಟೆ? ರಾಜ್ಯದಲ್ಲಿ ಸ್ಥಿರವಾಗಿ ಬೇರೂರಿದ ರಾಜರೂ ಕೂಡ, ಇಂತಹ ದೋಷಗಳಿಂದ ಪ್ರಾಯಕವಾಗಿ ಕೆಟ್ಟು ಹೋಗುವರು. ರಾಜೇಂದ್ರಾ! ನಿನ್ನ ವೇದಾಧ್ಯಯನಗಳೂ, ನಿನ್ನ ಧನವೂ, ನಿನ್ನ ಭಾರ್ಯೆಯರೂ, ನಿನ್ನ ಶಾಸ್ತ್ರಶ್ರವಣವೂ, ನಿನ್ನಲ್ಲಿ ಸಫಲವಾಗಿರುವಷ್ಟೆ?'' ಎಂದನು.

ಆಗ ಯುಧಿಷ್ಠಿರನು ನಾರದಮುನಿಯನ್ನು ನೋಡಿ, "ಓ ಮಹರ್ಷೀ! ವೇದಗಳು ಸಫಲವಾಗುವುದೆಂದರೇನು? ಧನಕ್ಕೆ ಸಾಫಲ್ಯವು ಹೇಗೆ? ಪತ್ನಿಯರು ಸಫಲರಾಗುವುದು ಹೇಗೆ? ಮತ್ತು ಶಾಸ್ತ್ರಶ್ರವಣಕ್ಕೆ ಸಾಫಲ್ಯವಾವುದು?'' ಎಂದನು. ಅದಕ್ಕಾ ನಾರದನು "ಓ ಧರ್ಮಪುತ್ರಾ! ಕೇಳು. ವೇದಗಳಿಗೆ ಅಗ್ನಿಹೋತ್ರಗಳೇ ಫಲವು. ಸಂಪಾದಿಸಿದ ಹಣಕ್ಕೆ ದಾನಭೋಗಗಳೇ ಫಲವು. ಕೈಹಿಡಿದ ಪತ್ನಿಯರಿಗೆ ರತಿಸೌಖ್ಯವೂ ಮತ್ತು ಸಂತಾನವೂ ಫಲಗಳು. ಶಾಸ್ತ್ರಶ್ರವಣಗಳಿಗೆ ಉತ್ತಮವಾದ ನಡತೆಯೇ ಫಲವು'' ಎಂದನು.

ಓ ಜನಮೇಜಯರಾಜಾ! ನಾರದನು ಹೀಗೆಂದು ಹೇಳಿದಮೇಲೆ ತಿರುಗಿ ಯುಧಿಷ್ಠಿರನನ್ನು ಕುರಿತು "ಓ ಧರ್ಮರಾಜಾ! ಲಾಭಕ್ಕಾಗಿ ದೂರದೇಶಗಳಿಂದ ನಿನ್ನ ದೇಶಕ್ಕೆ ಬರುವ ವರ್ತಕರಲ್ಲೆಲ್ಲ ನಿನ್ನ ದೇಶದ ಸುಂಕದವರು ಉಚಿತವಾದ ಸುಂಕವನ್ನು ತೆಗೆಯುತ್ತಿರುವರಷ್ಟೆ? ನಿನ್ನ ಪಟ್ಟಣದಲ್ಲಿಯೂ, ದೇಶದಲ್ಲಿಯೂ ಇರತಕ್ಕ ವರ್ತಕರು, ಒಳ್ಳೆಯ ಗೌರವಸ್ಥರಾಗಿದ್ದು, ಮರೆಮೋಸಗಳೇನೂ ಇಲ್ಲದೆ ಹೊರಗಿನಿಂದ ಸರಕುಗಳನ್ನು ತರಿಸುತ್ತಿರುವರೆ? ಧರ್ಮಗಳನ್ನು ಬಲ್ಲ ವೃದ್ಧರು ಧರ್ಮಾರ್ಥಯುಕ್ತವಾಗಿ ಹೇಳುವ ಮಾತುಗಳನ್ನು ನೀನು ಗಮನಿಸಿ ಕೇಳುತ್ತಿರುವೆಯಷ್ಟೆ? ನಿನ್ನ ದೇಶದ ಕೃಷಿ, ಗೋರಕ್ಷಣ, ಫಲಪುಷ್ಪಗಳ ಬೆಳೆವಳಿಕೆ, ಮುಂತಾದುವುಗಳಲ್ಲಿ ಲಭಿಸಿದುದನ್ನೂ, ಹಾಲು, ಜೇನುತುಪ್ಪ, ಮುಂತಾದುವುಗಳನ್ನೂ ಬ್ರಾಹ್ಮಣರಿಗೆ ಧರ್ಮಾರ್ಥವಾಗಿಯೇ ಕೊಡುತ್ತಿರುವೆಯಾ? ಮತ್ತು ನಿನ್ನ ದೇಶದ ಶಿಲ್ಪಿಗಳಿಗೆ ಬೇಕಾದ ಸಾಧನಸಾಮಗ್ರಿಗಳನ್ನೂ, ಅವರ ಜೀವಿಕೆಗಾಗಿ ದ್ರವ್ಯವನ್ನೂ ಮೊದಲು ನಾಲ್ಕುತಿಂಗಳವರೆಗೆ ಸಾಕಾಗುವಷ್ಟನ್ನಾದರೂ ನೀನು ಒದಗಿಸಿಕೊಟ್ಟು, ಅವರನ್ನು ಪ್ರೋತ್ಸಾಹಿಸುತ್ತಿರುವೆಯಷ್ಟೆ? ನೀನು ಅವರವರು ಮಾಡಿದ ಕೆಲಸವನ್ನು ಸಾಕ್ಷಾತ್ತಾಗಿ ನೋಡುತ್ತಿರುವೆಯಾ? ಮಾಡಿದ ಕೆಲಸವು ತೃಪ್ತಿಕರವಾಗಿದ್ದಾಗ ಅವರನ್ನು ಪ್ರಶಂಸೆಮಾಡುತ್ತಿರುವೆಯಾ? ಮತ್ತು ಅವರನ್ನು ಸಜ್ಜನರ ಸಭೆಯಲ್ಲಿ ಕೊಂಡಾಡಿ, ಅವರ ಕೆಲಸಕ್ಕೆ ತಕ್ಕ ಬಹುಮಾನವನ್ನು ಕೊಟ್ಟು ಸತ್ಕರಿಸುವೆಯಾ? ಓ ಭರತಶ್ರೇಷ್ಠಾ! ರಾಜನಾದ ನೀನು ಎಲ್ಲಾ ರಾಜ್ಯಸೂತ್ರಗಳನ್ನೂ ನಿನ್ನ ಕೈಯಲ್ಲಿಟ್ಟುಕೊಂಡು ನಡೆಸುತ್ತಿರುವೆಯಾ? ಅದರಲ್ಲಿಯೂ ಮುಖ್ಯವಾಗಿ ಆನೆಗಳು, ಕುದುರೆಗಳು, ರಥಗಳು, ಇವುಗಳಿಗೆ ಸಂಬಂಧಪಟ್ಟ ಸೂತ್ರಗಳು ನಿನ್ನ ಕೈಯಲ್ಲಿಯೇ ಇರುವುವೇ? ಮತ್ತು ಧನುರ್ವೇದ, ಯಂತ್ರಸೂತ್ರಗಳೆರಡೂ ನಿನ್ನ ಮನೆಯಲ್ಲಿ ಚೆನ್ನಾಗಿ ಶಿಕ್ಷಿಸಲ್ಪಡುತ್ತಿರುವುವೆ? ಎಲ್ಲಾ ಅಸ್ತ್ರಗಳೂ, ಬ್ರಹ್ಮದಂಡವೆಂದು ಕರೆಯಲ್ಪಡುವ ಅಭಿಚಾರಕ ಮಂತ್ರಸಿದ್ಧಿಯೂ, (ಶೂನ್ಯ ಅಥವಾ ಮಾಟದ ಮಂತ್ರಗಳು) ಶತ್ರುಗಳನ್ನು ನಾಶಗೊಳಿಸತಕ್ಕ ವಿಷಪ್ರಯೋಗಗಳೆಲ್ಲವೂ ನಿನಗೆ ಚೆನ್ನಾಗಿ ತಿಳಿದಿರುವುವೇ? ನೀನು ನಿನ್ನ ದೇಶವನ್ನೆಲ್ಲ ಅಗ್ನಿಭಯ, ಸರ್ಪಭಯ, ರೋಗ

ಭಯ, ರಾಕ್ಷಸಪಿಶಾಚಾದಿ ಭಯಗಳಿಲ್ಲದಂತೆ ಕಾಪಾಡುತ್ತಿರುವೆಯಾ? ರಾಜಾ! ನೀನು ನಿನ್ನ ದೇಶದಲ್ಲಿರುವ ಕುಂಟರು, ಕುರುಡರು, ಮೂಗರು, ಅಂಗಹೀನರು, ಅಸಹಾಯರು, ಮನೆಮಠಗಳಿಲ್ಲದ ಸನ್ಯಾಸಿಗಳು, ಇವ ರನ್ನೆಲ್ಲ ನಿನ್ನ ತಂದೆಯಂತೆ ಭಾವಿಸಿ ಕಾಪಾಡುತ್ತ ಬರುವೆಯಾ? ನಿದ್ರೆ, ಆಲಸ್ಯ, ಭಯ, ಕೋಪ, ಮೃದುತ್ವ, ಕಾರ್ಯಗಳನ್ನು ವಿಳಂಬಿಸುವು ದೆಂಬೀ ಅನರ್ಥಕಾರಿಗಳಾದ ಆರು ದೋಷಗಳನ್ನೂ ನೀನು ದೂರಮಾಡಿ ರುವೆಯಷ್ಟೆ!" ಎಂದನು.

ಆಗ ಯುಧಿಷ್ಠಿರನು ಬ್ರಾಹ್ಮಣೋತ್ತಮನೆನಿಸಿದ ಆ ನಾರದನ ಪಾದಗಳನ್ನು ಹಿಡಿದು ನಮಸ್ಕರಿಸಿ, ದೇವಸ್ವರೂಪಿಯಾದ ಆ ನಾರದ ನನ್ನು ನೋಡಿ "ಓ ಮಹಾತ್ಮಾ! ನೀನು ಹೇಳಿದಂತೆಯೇ ಎಲ್ಲವನ್ನೂ ನಡೆಸುವೆನು. ನಿನ್ನ ಉಪದೇಶಗಳಿಂದ ನನ್ನ ಬುದ್ಧಿಯು ಈಗ ಎಷ್ಟೋ ಪರಿಪಾಕವನ್ನು ಹೊಂದಿತು" ಎಂದು ಹೇಳಿ, ಅದುಮೊದಲು ನಾರದನು ಹೇಳಿದ ರಾಜನೀತಿಯಲ್ಲಿ ಬಹಳ ಎಚ್ಚರಗೊಂಡಿದ್ದನು. ಓ ಜನಮೇ ಜಯರಾಜಾ! ತಿರುಗಿ ನಾರದನು ಯುಧಿಷ್ಠಿರನನ್ನು ಕುರಿತು "ಎಲೈ ಭಾರತೋತ್ತಮನೇ! ಯಾವ ರಾಜನು ಮೇಲೆ ಹೇಳಿದಂತೆ ನೀತಿಪರ ನಾಗಿದ್ದು ಚಾತುರ್ವರ್ಣ್ಯವನ್ನು ರಕ್ಷಿಸುತ್ತಿರುವನೋ, ಅವನು ಇಹ ಲೋಕದಲ್ಲಿ ಜೀವಾವಧಿ ಸೌಖ್ಯದಿಂದಿದ್ದು, ಆಮೇಲೆ ಇಂದ್ರಸಾಲೋಕ್ಯ ವನ್ನು ಹೊಂದುವನು" ಎಂದನು.

ಇದು ಐದನೆಯ ಅಧ್ಯಾಯವು.



ತನ್ನ ಸಭಾಮಂದಿರವನ್ನು ನೋಡಿ ಹೆಮ್ಮೆಗೊಂಡ ಧರ್ಮರಾಜನು "ಇದರಂತೆ ಲೋಕದಲ್ಲಿ ಬೇರೆ ಯಾವುದಾದರೂ ಸಭೆಯುಂಟೆ ?" ಎಂದು ನಾರದನನ್ನು ಪ್ರಶ್ನೆಮಾಡಲು, ನಾರದನು ಇಂದ್ರಾದಿ ದೇವಸಭೆಗಳನ್ನು ವರ್ಣಿಸಲು ಆರಂಭಿಸಿದುದು.

ಓ ಜನಮೇಜಯರಾಜಾ! ಕೇಳು! ನಾರದನು ಹೇಳಿದ ರಾಜನೀತಿಗಳನ್ನೆಲ್ಲ ಧರ್ಮರಾಜನು ಬಹಳವಾಗಿ ಗೌರವಿಸಿ, ಅವನನ್ನು ಕುರಿತು "ಓ ಮಹಾತ್ಮಾ! ನೀವು ಹೇಳಿದ ಈ ಧರ್ಮನಿರ್ಣಯಗಳೆಲ್ಲವೂ ನ್ಯಾಯಸಮ್ಮತವಾದುವು. ಇವುಗಳನ್ನೆಲ್ಲ ನನ್ನ ಶಕ್ತಿಗೂ, ನ್ಯಾಯಕ್ಕೂ ಅನುಸರಿಸಿ ನಾನು ನಡೆಸುತ್ತಲೇ ಇರುವೆನು. ನಮ್ಮ ಪೂರ್ವರಾಜರು ಧರ್ಮದಿಂದ ಧನವನ್ನು ಆರ್ಜಿಸಿ, ನಡೆಸಬೇಕಾದ ಕಾರ್ಯಗಳನ್ನೆಲ್ಲ ನ್ಯಾಯರೀತಿಯಿಂದಲೇ ನಡೆಸುತಿದ್ದರು. ಅವರು ತಮ್ಮ ಕಾರ್ಯಗಳನ್ನು ಸಕಾರಣವಾಗಿ, ಮತ್ತು ಅರ್ಥಯುಕ್ತವಾಗಿ ನಡೆಸಿ, ಅವುಗಳನ್ನು ಸಫಲಗೊಳಿಸುತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಈಗ ನಾವೂ ಅವರ ಸನ್ಮಾರ್ಗವನ್ನೇ ಅನುಸರಿಸಿ ನಡೆಯಲು ಪ್ರಯತ್ನಿಸುತ್ತಿರುವೆವು. ಆದರೆ, ಅವರೆಲ್ಲರೂ ಮನಸ್ಸನ್ನು ನಿಗ್ರಹಿಸಿದ, ಜಿತೇಂದ್ರಿಯರಾದುದರಿಂದ, ಅವರನ್ನು ಯಥಾವತ್ತಾಗಿ ಅನುಸರಿಸಿಹೋಗುವುದೇನೋ ನಮ್ಮಂತವರಿಗೆ ಅಸಾಧ್ಯವೇ" ಎಂದನು. ಧರ್ಮರಾಜನು ಈ ಮಾತುಗಳನ್ನು ಹೇಳಿ ಮುಗಿಸಿದಮೇಲೆ, ತನಗೆ ರಾಜಧರ್ಮಗಳನ್ನುಪದೇಶಿಸಿದ ನಾರದನನ್ನು ಬಹಳವಾಗಿ ಪೂಜಿಸಿ ಸತ್ಕರಿಸಿದನು. ಆಮೇಲೆ ನಾರದನು ತನ್ನ ಬಳಲಿಕೆಯನ್ನು ತೀರಿಸಿಕೊಂಡು ಸುಖಾಸೀನನಾಗಿ ಕುಳಿತಿದ್ದಾಗ, ಇದೇ ತಕ್ಕ ಸಮಯವೆಂದು ಧರ್ಮರಾಜನು, ತ್ರಿಲೋಕಸಂಚಾರಿಯಾದ ಆ ಮಹರ್ಷಿಯ ಸಮೀಪಕ್ಕೆ ಬಂದು ಅವನ ಸಮೀಪದಲ್ಲಿ ಕುಳಿತು ಹೀಗೆಂದು ಪ್ರಶ್ನೆಮಾಡುವನು.

"ಓ ಮುನೀಂದ್ರಾ! ನೀನು ಸದಾ ಲೋಕಸಂಚಾರಿಯಾಗಿ, ಬಹುಲೋಕಗಳನ್ನು ಸುತ್ತಿ ಅಲ್ಲಲ್ಲಿನ ವಿಶೇಷಗಳನ್ನೆಲ್ಲ ನೋಡಿದವನು. ಆದಿಯಲ್ಲಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಎಲ್ಲಾ ಲೋಕಗಳನ್ನೂ ನೀನು ಮನೋವೇಗ

ದಿಂದ ಸಂಚರಿಸಿ ನೋಡಿಬಂದವನು. ಈ ನನ್ನ ಸಭೆಗೆ ಸಮಾನವಾದ ಅಥವಾ ಇದಕ್ಕಿಂತಲೂ ಅತಿಶಯವಾದ ಬೇರೆ ಯಾವುದಾದರೂ ಸಭೆಯನ್ನು ನೀನು ನೋಡಿದುದುಂಟೇ! ಮುಂದೆಯಾದರೂ ಅಂತಹ ಸಭೆಯನ್ನು ನೀನು ನೋಡುವ ಸಂಭವವುಂಟೇ? ಈ ಸಂಗತಿಯನ್ನು ನನಗೆ ತಿಳಿಸಬೇಕು" ಎಂದನು.

ಆಗ ನಾರದನು ಧರ್ಮರಾಜನ ಮಾತನ್ನು ಕೇಳಿ ನಗುತ್ತ, ಇಂಪಾದ ಮಾತಿನಿಂದ ಅವನನ್ನು ಕುರಿತು "ಅಪ್ಪ ಯುಧಿಷ್ಠಿರಾ! ರತ್ನಮಯವಾದ ಈ ನಿನ್ನ ಸಭೆಯಂತೆ ಮನುಷ್ಯಲೋಕದಲ್ಲಿ ಬೇರೆ ಯಾವ ಸಭೆಯೂ ಇದ್ದುದಾಗಿ ನನಗೆ ತಿಳಿಯಲಿಲ್ಲ. ಇಂತಹ ಉತ್ತಮ ಸಭೆಯನ್ನು ಬೇರೆಲ್ಲಿಯೂ ನಾನು ಇದಕ್ಕೆ ಮೊದಲು ಕಂಡುದೂ ಇಲ್ಲ! ಕೇಳಿದುದೂ ಇಲ್ಲ! ಆದರೆ, ದೇವಸಭೆಗಳಲ್ಲಿ ಇದಕ್ಕಿಂತಲೂ ಎಷ್ಟೋ ವಿಶೇಷಗಳನ್ನು ನಾನು ನೋಡಿರುವೆನು. ನಿನಗೆ ಕೇಳಬೇಕೆಂಬ ಕುತೂಹಲವಿದ್ದರೆ, ಇಂದ್ರ, ಯಮ, ವರುಣ, ಕುಬೇರಾದಿಗಳ ಸಭೆಗಳನ್ನೂ, ಇವೆಲ್ಲಕ್ಕಿಂತಲೂ ಮೇಲೆನಿಸಿ, ಸಮಸ್ತಲೋಕಗಳಲ್ಲಿರುವ ಎಲ್ಲಾ ಭೋಗಗಳಿಗೂ ಆಶ್ರಯವಾಗಿ, ಎಂತಹ ಶ್ರಮವನ್ನೂ ನೀಗಿಸತಕ್ಕುದಾದ ಬ್ರಹ್ಮಸಭೆಯನ್ನೂ ಕುರಿತು ಕೆಲವು ಮುಖ್ಯಸಂಗತಿಗಳನ್ನು ವಿವರಿಸುವೆನು ಕೇಳು. ದೇವ ಮಾನುಷ ಲೋಕಗಳಿಗೆ ಸಂಬಂಧಪಟ್ಟ ಎಲ್ಲಾ ವಿಶೇಷಗಳನ್ನೂ ಆ ಸಭೆಯಲ್ಲಿ ನೋಡಬಹುದು. ಪ್ರಾಪಂಚಿಕವಾದ ಸಮಸ್ತ ಸ್ವರೂಪಗಳೂ ಅದರಲ್ಲಿ ಕಾಣುವುವು. ದೇವತೆಗಳು, ಪಿತೃಗಳು, ಸಾಧ್ಯರು, ಆತ್ಮನಿಗ್ರಹವನ್ನು ಮಾಡಿದ ಅನೇಕಯಜ್ಞಶೀಲರು, ಶಾಂತಿಪ್ರಧಾನರಾದ ಅನೇಕ ಮಹರ್ಷಿಗಳು, ಸದಕ್ಷಿಣಾಕವಾದ ವೇದೋಕ್ತಯಜ್ಞಗಳನ್ನು ನಡೆಸಿದವರು, ಇವರೆಲ್ಲರಿಂದಲೂ ಸೇವಿಸಲ್ಪಡುತ್ತಿರುವ ಆ ದೇವಸಭೆಗಳ ವಿಚಾರವನ್ನು ನಿನಗೆ ತಿಳಿಸುವೆನು" ಎಂದನು. ಆಗ ಯುಧಿಷ್ಠಿರನು ನಾರದನ ಮಾತನ್ನು ಕೇಳಿ ಬಹಳ ಸಂತೋಷಗೊಂಡು, ತನ್ನ ಎಲ್ಲಾ ಸಹೋದರರೊಡನೆಯೂ, ಬ್ರಾಹ್ಮಣರೊಡನೆಯೂ ಕೈಮುಗಿದು "ಓ ಮುನೀಂದ್ರಾ! ಆ ಸಭೆಗಳ ರೀತಿಯನ್ನೆಲ್ಲಾ ಕೇಳಬೇಕೆಂದು ನನಗೆ

ಬಹಳ ಕುತೂಹಲವುಂಟು. ಆ ಸಭೆಯಲ್ಲಿರುವ ವಸ್ತುಗಳೆಂತವು? ಅವುಗಳ ವಿಸ್ತಾರವೆಷ್ಟು? ಅವುಗಳ ಅಗಲವೆಷ್ಟು? ಆ ಸಭೆಗಳಲ್ಲಿರುವ ಬ್ರಹ್ಮಾದಿದೇವತೆಗಳನ್ನು ಸುತ್ತಿಮುತ್ತಿ ಸೇವಿಸುತ್ತಿರುವವರು ಎಂತವರು? ಇಂದ್ರವರುಣಾದಿ ಸಭೆಗಳಲ್ಲಿರುವ ವಿಶೇಷಗಳೇನು? ಇವನ್ನೆಲ್ಲಾ ಕ್ರಮವಾಗಿ ನೀನು ತಿಳಿಸಬೇಕು. ನಮ್ಮೆಲ್ಲರಿಗೂ ಅದನ್ನು ಕೇಳಬೇಕೆಂಬ ಆಸೆಯಿದೆ'' ಎಂದನು. ಆಗ ನಾರದನು, "ಹಾಗಿದ್ದರೆ ಕ್ರಮವಾಗಿ ತಿಳಿಸುವೆನು ಕೇಳು'' ಎಂದು ವರ್ಣಿಸತೊಡಗಿದನು.

ಇದು ಆರನೆಯ ಅಧ್ಯಾಯವು.

---

## ಇಂದ್ರಸಭಾ ವರ್ಣನವು.

"ಓ ಧರ್ಮರಾಜಾ! ಕೇಳು! ದೇವೇಂದ್ರನ ಸಭೆಯು ಒಳ್ಳೆಯ ಶಿಲ್ಪಚಮತ್ಕಾರದಿಂದ ನಿರ್ಮಿತವಾಗಿ, ಕಾಂತಿಯಿಂದ ಜ್ವಲಿಸುತ್ತಿರುವುದು. ಇಂದ್ರನು ಅದನ್ನು ತಾನಾಗಿ ತನ್ನ ಶಕ್ತಿಯಿಂದ ಕಲ್ಪಿಸಿದನು. ಕಾಂತಿಯಿಂದ ಸೂರ್ಯಪ್ರಭೆಯನ್ನು ಜಯಿಸುವಂತಿರುವ ಆ ದಿವ್ಯಸಭೆಯು, ನೂರು ಯೋಜನ ವಿಶಾಲವಾಗಿಯೂ, ನೂರೈವತ್ತು ಯೋಜನಗಳ ಉದ್ದವಾಗಿಯೂ, ಐದು ಯೋಜನಗಳ ಎತ್ತರವಾಗಿಯೂ ಇರುವುದು. ಅದು ಅಂತರಿಕ್ಷದಲ್ಲಿಯೇ ನೆಲೆಗೊಂಡು, ಕೋರಿದಕಡೆಗೆ ಹೋಗುವ ಶಕ್ತಿಯುಳ್ಳುದು! ಮುಪ್ಪು, ವ್ಯಸನ, ಬಳಲಿಕೆ, ಇವೆಲ್ಲವನ್ನೂ ನೀಗಿಸುತ್ತ, ಯಾವಾಗಲೂ ಸೌಖ್ಯಪ್ರದವಾದುದು. ಯಾವ ಅಶ್ಲೀಲವೂ ಇಲ್ಲದೆ ಸದಾ ಮಂಗಳಕರವಾದುದು. ಆ ಸಭೆಯಲ್ಲಿ ಮಂದಿರಗಗೂ, ಆಸನಗಳೂ, ದಿವ್ಯವೃಕ್ಷಗಳೂ ಅನೇಕವಾಗಿರುವುವು. ಅಲ್ಲಿ ದೇವೇಂದ್ರನು ಕಿರೀಟಕುಂಡಲಾದಿಗಳಿಂದ ಅಲಂಕೃತನಾಗಿ, ಪತ್ನಿಯಾದ ಶಚಿಯೊಡಗೂಡಿ ಉತ್ತಮಾಸನದಲ್ಲಿ ಕುಳಿತಿರುವನು. ಕಾಂತಿ, ಸಂಪತ್ತು, ಲಜ್ಜೆ, ಕೀರ್ತಿ, ಸೌಂದರ್ಯದೇವತೆಯೆಂಬ ಐದುಮಂದಿ ಲಕ್ಷ್ಮಿಯರೂ ತನ್ನನ್ನು ಸುತ್ತಿರಲು, "ಮಹೇಂದ್ರಾಣಿ''ಯೆಂಬ ಇಂದ್ರಪದವಿಯ ಅಧಿಷ್ಠಾನದೇವತೆಯು, ಹೀ

ಗೆಂದು ವರ್ಣಿಸಲಾಗದ ರೂಪದಿಂದಲೂ, ಶುದ್ಧವಸ್ತ್ರದಿಂದಲೂ, ಪುಷ್ಪಮಾಲಿಕೆಗಳಿಂದಲೂ ಅಲಂಕೃತಳಾಗಿ ಬೆಳಗುತ್ತಿರುವಳು. ನಡುವೆ ಉತ್ತಮಾಸನದಲ್ಲಿ ಕುಳಿತ ದೇವೇಂದ್ರನನ್ನು ಅಲ್ಲಿ ಯಾವಾಗಲೂ *ಸಪ್ತಮರುತ್ತುಗಳು, ಸಿದ್ಧರು, ದೇವರ್ಷಿಗಳು, ಸಾಧ್ಯರು, ದೇವಗಣಗಳು, ಆದಿತ್ಯರು ಇವರೆಲ್ಲರೂ ಸುವರ್ಣಮಾಲಿಕೆ ಮೊದಲಾದುವುಗಳಿಂದ ಅಲಂಕೃತರಾಗಿ, ತಮ್ಮ ತಮ್ಮ ಅನುಚರರೊಡನೆ ಲೋಕಪ್ರಭುವಾದ ಆತನನ್ನು ಉಪಾಸಿಸುತ್ತಿರುವರು. ಇವರೆಲ್ಲರೂ ಆ ಮಹೇಂದ್ರನಂತೆಯೇ ದಿವ್ಯರೂಪದಿಂದ ಬೆಳಗುತ್ತಿರುವರು. ಮತ್ತು ಅಲ್ಲಿ ಪಾಪರಹಿತರಾಗಿಯೂ, ಜ್ವಲಿಸುವ ಅಗ್ನಿಯಂತೆ ಶುದ್ಧರಾಗಿ ತೇಜಸ್ವಿಗಳಾಗಿಯೂ, ಸೋಮಪಾನಮಾಡಿ ಶೋಕಮೋಹಗಳನ್ನು ನೀಗಿದವರಾಗಿಯೂ ಇರುವ ಪರಾಶರ, ಪರ್ವತ, ಸಾವರ್ಣಿ, ಗಾಲವ, ಏಕತ, ದ್ವಿತ, ತ್ರಿತ, ಶಂಖ, ಲಿಖಿತ, ಗೌರಶಿರಸ್ಸು, ಕೋಪಸ್ವಭಾವವುಳ್ಳ ದುರ್ವಾಸಸ್ಸು, ಶ್ಯೇನ, ದೀರ್ಘತಮಸ್ಸು, ಪವಿತ್ರಪಾಣಿ, ಯಾಜ್ಞವಲ್ಕ್ಯ, ಭಾಲುಕಿ, ಉದ್ದಾಲಕ, ಶ್ವೇತಕೇತು, ತಾಂಡ, ಭಾಂಡಾಯನಿ, ಹವಿಷ್ಮಂತನು ಇವರೆಲ್ಲರೂ ನೆರೆದಿರುವರು. ಮಹಾತ್ಮನೆನಿಸಿದ ಹರಿಶ್ಚಂದ್ರರಾಜನು ಅವರಲ್ಲಿ ಕಲೆತಿರುವನು. ಇದಲ್ಲದೆ ಹೃದ್ಯ, ಉದರ ಶಾಂಡಿಲ್ಯ, ಪರಾಶರಪುತ್ರನಾದ ವ್ಯಾಸಮುನಿ, ಕೃಷೀವಲ, ವಾತಸ್ಕಂಧ, ವಿಶಾಖ, ವಿಧಾತೃ, ಕಾಲ, ಕರಾಲದಂತ, ತ್ವಷ್ಟೃ, ವಿಶ್ವಕರ್ಮ, ತುಂಬುರು ಮುಂತಾದ ಮಹರ್ಷಿಗಳೂ ವಜ್ರಪಾಣಿಯಾದ ಇಂದ್ರನನ್ನು ಸುತ್ತಿ ಸೇವಿಸುತ್ತಿರುವರು. ಇವರಲ್ಲಿ ಅಯೋನಿಜರು ಕೆಲವರು! ಯೋನಿಜರು ಕೆಲವರು! ವಾಯುಭಕ್ಷಕರು ಕೆಲವರು! ಹೋಮಶೇಷದಿಂದಲೇ ಜೀವಿಸತಕ್ಕವರು ಕೆಲವರು! ಮತ್ತು ಅಲ್ಲಿ ಸರ್ವಲೋಕೇಶ್ವರನೂ, ವಜ್ರಪಾಣಿಯೂ ಆದ ಆ ದೇವೇಂದ್ರನನ್ನು, ಸಹದೇವ, ಸುನೀಥ, ವಾಲ್ಮೀಕಿ, ಸಮಿಾಕ, ಸತ್ಯವಾಕ್ಕು, ಮೇಧಾತಿಥಿ, ವಾಮದೇವ, ಪುಲಸ್ತ್ಯ, ಪುಲಹ, ಕ್ರತು, ಮರುತ್ತು, ಮರೀಚಿ, ಸ್ಥಾಣು, ಕಕ್ಷೀವಾನ್, ಗೌತಮ, ತಾರ್ಕ್ಷ್ಯ,

* ಆಹವ, ಪ್ರವಹ, ಸಂವಹ, ಉದ್ವಹ, ನಿವಹ, ಪರಿವಹ, ಪರಾವಹ, ಇವೇಳೂ ಸಪ್ತಮರುತ್ತುಗಳು. ಇವುಗಳಲ್ಲಿ ಒಂದೊಂದೂ ಬೇರೆಬೇರೆಯಾಗಿ ಮೇಘ ಸೂರ್ಯ, ಚಂದ್ರ ಗ್ರಹಾದಿಗಳನ್ನು ನಡೆಸುವುದಾಗಿ ಹೇಳುವರು.

ವೈಶ್ವಾನರ, ಕಾಲವೃಕ್ಷೀಯು, ಆಶ್ರಾವ್ಯ, ಹಿರಣ್ಮಯು, ಸಂವರ್ತ, ದೇವಹವ್ಯ, ವಿಷ್ವಕ್ಸೇನರೆಂಬ ಮಹರ್ಷಿಗಳೂ, ದೇವತಾಸ್ವರೂಪದಿಂದ ಕೂಡಿದ ತೀರ್ಥಗಳೂ, ದಿವ್ಯೌಷಧಿಗಳೂ, ಶ್ರದ್ಧೆ, ಮೇಧೆ, ಸರಸ್ವತಿ, ಧರ್ಮಾರ್ಥಕಾಮಗಳು, ವಿದ್ಯುತ್ತುಗಳು, ಜಲಪೂರ್ಣವಾಗಿ ಗರ್ಜಿಸುತ್ತಿರುವ ಮೇಘಗಳು, ವಾಯುಗಳು, ಪೂರ್ವದಿಗ್ದೇವತೆ, ಯಜ್ಞನಿರ್ವಾಹಿಗಳಾದ *ಇಪ್ಪತ್ತೇಳು ಅಗ್ನಿಗಳು, ಅಗ್ನೀಷೋಮರು, ಇಂದ್ರಾಗ್ನಿಗಳು, ಮಿತ್ರನು, ಸವಿತೃ, ಅರ್ಯಮ, ಭಗ, ವಿಶ್ವೇದೇವತೆಗಳು, ಶುಕ್ರಾಚಾರ್ಯನು, ವಿಶ್ವಾವಸು, ಚಿತ್ರಸೇನನು, ಸುಮನಸ್ಸು, ತರುಣನು, ಯಜ್ಞಪುರುಷರು, ದಕ್ಷಿಣಾದೇವತೆಗಳು, ಗ್ರಹಗಳು, ಸ್ತೋಭಗಳೆಂಬ ಸಾಮವೇದ ಸ್ವರಗಳು, ಯಜ್ಞನಿರ್ವಾಹಕ ಮಂತ್ರಗಳು, ಇವೆಲ್ಲವೂ ಆ ಸಭೆಯಲ್ಲಿ ನೆರೆದಿರುವುವು. ರಂಭೆ, ಊರ್ವಶಿ, ಮೇನಕೆ, ಘೃತಾಚಿ, ಪಂಚಚೂಡೆ, ವಿಪ್ರಚಿತ್ತಿ, ಮುಂತಾದ ಅಪ್ಸರಸಿಯರೂ, ವಿದ್ಯಾಧರರೂ, ದಿವ್ಯರೂಪದಿಂದ ಶೋಭಿತರಾದ ಗಂಧರ್ವರೂ, ನೃತ್ಯವಾದ್ಯಾದಿಗಳಿಂದಲೂ, ಹಾಸ್ಯರಸಗಳಿಂದಲೂ, ಶತಕ್ರತುವಾದ ದೇವೇಂದ್ರನನ್ನು ಸಂತೋಷಗೊಳಿಸುತ್ತಿರುವರು. ಮತ್ತು ಅನೇಕಬ್ರಹ್ಮಋಷಿಗಳೂ, ರಾಜಋಷಿಗಳೂ, ದೇವಋಷಿಗಳೂ, ಆ ದೇವೇಂದ್ರನ ಪರಾಕ್ರಮ ಚರಿತ್ರಗಳನ್ನು ವರ್ಣಿಸುವ ಸ್ತೋತ್ರಗಳಿಂದಲೂ, ಮಂಗಳಾಶಾಸನಗಳಿಂದಲೂ ಉತ್ತೇಜನಗೊಳಿಸುತ್ತಿರುವರು. ಓ ಧರ್ಮಪುತ್ರಾ! ಯಾವಾಗಲೂ ಆ ಸಭೆಯಲ್ಲಿ ದಿವ್ಯಪುಷ್ಪಗಳನ್ನೂ, ದಿವ್ಯಾಭರಣಗಳನ್ನೂ ಧರಿಸಿ, ಅಗ್ನಿಯಂತೆ ಜ್ವಲಿಸುತ್ತಿರುವ ಅನೇಕದೇವತೆಗಳು ನಾನಾವಿಧ ವಿಮಾನಗಳನ್ನೇರಿ ಯಾತಾಯಾತಗಳನ್ನು ಮಾಡುತ್ತಿರುವರು. ಶುಕ್ರ ಬೃಹಸ್ಪತಿಗಳಿಬ್ಬರೂ ಅಲ್ಲಿ ಸದಾ ಇರುತ್ತಿರುವರು. ಇದಲ್ಲದೆ, ಇನ್ನೂ ಅನೇಕಮಹಾತ್ಮರೂ, ವ್ರತನಿಯಮವುಳ್ಳ

---

* ಇಪ್ಪತ್ತೇಳಾಗ್ನಿಗಳಾವುವೆಂದರೆ, ಅಂಗಿರಸ್ಸು, ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ನಿರ್ಮಂಥ್ಯ, ವೈದ್ಯುತ, ಶೂರ, ಸಂವರ್ತ, ಲೌಕಿಕ, ಜಠರ, ವಿಷಗ, ಕ್ರವ್ಯಾತ್, ಕ್ಷೇಮವಾನ್, ವೈಷ್ಣವ, ದಸ್ಯುಮಾನ್, ಬಲದ, ಶಾಂತ, ಪುಷ್ಟ, ವಿಭಾವಸು, ಜ್ಯೋತಿಷ್ಮಾನ್, ಭರತ, ಭದ್ರ, ಸ್ವಿಷ್ಟಕೃತ್, ವಸುಮಾನ್, ಕ್ರತು, ಸೋಮ, ಪಿತೃಮಾನ್ ಎಂಬಿವು ಯಜ್ಞವಾಹಿಗಳಾದ ೨೭ ಅಗ್ನಿಗಳು.

ವರೂ, ಚಂದ್ರನಂತೆ ಪ್ರಿಯದರ್ಶನವುಳ್ಳವರೂ ಆದ ಪುರುಷರೂ ಅಲ್ಲಿ ನೆರೆದಿರುವರು. ಇದಲ್ಲದೆ, ಬ್ರಹ್ಮಾಜ್ಞೆಯಿಂದ ಭೃಗು ಮೊದಲಾದ ಸಪ್ತಋಷಿಗಳು ಅಲ್ಲಿಗೆ ಆಗಾಗ ಬಂದು ಹೋಗುತ್ತಿರುವರು. ರಾಜಾ! ಆ ಇಂದ್ರನ ಸಭೆಗೆ "ಪುಷ್ಕರಮಾಲಿನಿ" ಎಂದು ಹೆಸರು. ಅದನ್ನು ನಾನು ಪ್ರತ್ಯಕ್ಷವಾಗಿ ನೋಡಿರುವೆನು. ಇನ್ನು ಯಮನ ಸಭೆಯ ವರ್ಣನೆಯನ್ನು ಕೇಳು.

ಇದು ಏಳನೆಯ ಅಧ್ಯಾಯವು.

## ಯಮ ಸಭಾ ವರ್ಣನೆ.

"ಯುಧಿಷ್ಠಿರಾ! ಕೇಳು! ಸೂರ್ಯಪುತ್ರನಾದ ಯಮನ ಸಭೆಯೆಂತದೆಂಬುದನ್ನು ಹೇಳುವೆನು. ಅದು ವಿಶ್ವಕರ್ಮನಿಂದ ನಿರ್ಮಿತವಾದುದು. ಅದು ಕೇವಲತೇಜೋಮಯವಾಗಿ, ಉದ್ದದಲ್ಲಿಯೂ, ಅಗಲದಲ್ಲಿಯೂ ನೂರು ಯೋಜನಗಳ ಪ್ರಮಾಣವುಳ್ಳುದು. ಇನ್ನೂ ಅಧಿಕವಿಶಾಲವೆಂದೇ ಹೇಳಬಹುದು. ಸೂರ್ಯಕಾಂತಿಯಂತೆ ಎಲ್ಲಾ ಕಡೆಯೂ ಜ್ವಲಿಸುತ್ತ, ಆಯಾಕಾಲಕ್ಕೆ ತಕ್ಕಂತೆ ಇಷ್ಟಬಂದ ರೂಪವನ್ನು ತಾಳುವುದು. ಅತಿಶೀತವೂ, ಅತ್ಯುಷ್ಣವೂ ಇಲ್ಲದಂತೆ ಯಾವಾಗಲೂ ಮನಸ್ಸಿಗೆ ಹರ್ಷವನ್ನುಂಟುಮಾಡುವುದು. ಅದರಲ್ಲಿರುವವರಿಗೆ ದುಃಖ, ಜರೆ, ಹಸಿವು, ಬಾಯಾರಿಕೆ, ಬೇಸರಿಕೆ, ದೈನ್ಯ, ಬಳಲಿಕೆ, ವಿರೋಧ, ಮೊದಲಾದುದೊಂದೂ ಇರದು. ದೇವ ಮಾನುಷ ಭೋಗಗಳೆಲ್ಲವೂ ಅಲ್ಲಿ ಲಭಿಸುವುವು. ಒಳ್ಳೇ ರಸವತ್ತಾದ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯಾದಿ ಆಹಾರವಸ್ತುಗಳೆಲ್ಲವೂ ಅಲ್ಲಿ ಮನಸ್ಸಿಗೂ, ಬಾಯಿಗೂ, ಬಹಳ ರುಚಿಕರವಾಗಿ, ಮತ್ತು ಸಮೃದ್ಧವಾಗಿ ಸಿಕ್ಕುವುವು. ಸುವಾಸನೆಯುಳ್ಳ ಪುಷ್ಪಮಾಲಿಕೆಗಳೂ, ಕೋರಿದ ಫಲವನ್ನು ಕೊಡತಕ್ಕ ಒಳ್ಳೇ ರಸವುಳ್ಳ ಶೀತೋಷ್ಣಜಲಗಳೂ, ಯಾವಾಗಲೂ ಅಲ್ಲಿ ದೊರೆಯುವುವು. ಪುಣ್ಯಶಾಲಿಗಳಾದ ಅನೇಕ ರಾಜರ್ಷಿಗಳೂ, ಶುದ್ಧರಾದ ಬ್ರಹ್ಮರ್ಷಿಗಳೂ, ಅಲ್ಲಿ ಸಂತೋಷದಿಂದ ಯ

ಮನನ್ನು ಉಪಾಸಿಸುತ್ತಿರುವರು. ಯಯಾತಿ, ನಹುಷ, ಪೂರು, ಮಾಂಧಾತೃ, ಸೋಮಕ, ನೃಗ, ತ್ರಸದಸ್ಯು, ಕೃತವೀರ್ಯ, ಶ್ರುತಶ್ರವಸ್ಸು, ಅರಿಷ್ಟನೇಮಿ, ಸಿದ್ಧ, ಕೃತವೇಗ ಕೃತಿ, ನಿಮಿ, ಪ್ರತರ್ದನ, ಶಿಬಿ, ಮತ್ಸ್ಯ, ಪೃಥುಲಾಕ್ಷ, ಬೃಹದ್ರಥ, ವಾರ್ತ, ಮರುತ್ತ, ಕುಶಿಕ, ಸಾಂಕಾಶ್ಯ, ಸಾಂಕೃತಿ, ಧ್ರುವ, ಚತುರಶ್ವ, ಸದಸ್ಯೋರ್ಮಿ, ಕಾರ್ತವೀರ್ಯ, ಭರತ, ಸುರಥ, ಸುನೀಥ, ನಿಶಠ, ಅನಲ, ದಿವೋದಾಸ, ಸುಮನಸ್ಸು, ಅಂಬರೀಷ, ಭಗೀರಥ, ವ್ಯಶ್ವ, ಸದಶ್ವ, ವಾಧ್ರ್ಯಶ್ವ, ಪೃಥುವೇಗ, ಪೃಥುಶ್ರವಸ್ಸು, ಪೃಷದಶ್ವ, ವಸುಮನಸ್ಸು, ಕ್ಷುಪ, ರುಷದ್ರು, ವೃಷಸೇನ, ಪುರುಕುತ್ಸ, ಧ್ವಜಿ, ರಥಿ, ಆರ್ಷ್ಟಿಷೇಣ, ದಿಲೀಪ, ಉಶೀನರ, ಉಶೀನರಕುಮಾರನಾದ ಪುಂಡರೀಕನು, ಶರ್ಯಾತಿ, ಶರಭ, ಶುಚಿ, ಅಂಗ, ರಿಷ್ಟ, ವೇನ, ದುಷ್ಯಂತ, ಸೃಂಜಯ, ಜಯ, ಭಾಂಗಾಸುರಿ, ಸುನೀಥ, ನಿಷಧ, ವಹೀನರ, ಕರಂಧಮ, ಬಾಹ್ಲೀಕ, ಸುದ್ಯುಮ್ನ, ಮಧು, ಐಲ, ಮರುತ್ತ, ಕಪೋತರೋಮ, ತೃಣಕ, ಸಹದೇವ, ಅರ್ಜುನ, ಸಾಶ್ವ, ಕೃಶಾಶ್ವ, ಶಶಿಬಿಂದು, ದಶರಥಪುತ್ರರಾದ *ರಾಮಲಕ್ಷ್ಮಣರು, ಪ್ರತರ್ದನನು, ಅಲರ್ಕ, ಕಕ್ಷಸೇನ, ಗಯ, ಗೌರಾಶ್ವ, ಜಮದಗ್ನಿಕುಮಾರನಾದ ಪರಶುರಾಮನು, ನಾಭಾಗ, ಸಗರ, ಭೂರಿದ್ಯುಮ್ನ, ಮಹಾಶ್ವ, ಪೃಥಾಶ್ವ, ಜನಕ, ವೇನಪುತ್ರನಾದ ಪೃಥು, ವಾರಿಸೇನ, ಪುರುಜಿತ್ತು, ಜನಮೇಜಯ, ಬ್ರಹ್ಮದತ್ತ, ತ್ರಿಗರ್ತ, ಉಪರಿಚರವಸು, ಇಂದ್ರದ್ಯುಮ್ನ, ಭೀಮಜಾನು, ಗೌರಪೃಷ್ಠ, ಅನಘ, ಲಯ, ಪದ್ಮ, ಮುಚುಕುಂದ, ಭೂರಿದ್ಯುಮ್ನ, ಪ್ರಸೇನಜಿತ್ತು, ಅರಿಷ್ಟನೇಮಿ, ಸುದ್ಯುಮ್ನ, ಪೃಥುಲಾಶ್ವ, ಅಷ್ಟಕ, ನೂರುಮಂದಿ ಮತ್ಸ್ಯರಾಜರು, ನೂರುಮಂದಿ ನೀಪರು, ನೂರುಮಂದಿ ಹಯರು, ನೂರುಮಂದಿ †ಧಾರ್ತರಾಷ್ಟ್ರರು, ಎಂಭತ್ತು ಮಂದಿ ಜನಮೇಜಯರು, ನೂರು ಮಂದಿ ಬ್ರಹ್ಮದತ್ತರು, ನೂರುಮಂದಿ ಈರಿಗಳು, ನೂರುಮಂದಿ ವೀರಿಗಳು, ಇನ್ನೂರು ಮಂದಿ ಭೀ

---

* ವಿಷ್ಣು ಮತ್ತು ಶೇಷಸ್ವರೂಪಿಗಳಾದ ರಾಮಲಕ್ಷ್ಮಣರಿಬ್ಬರೂ ನಿಜರೂಪದಿಂದ ಸ್ವಸ್ಥಾನದಲ್ಲಿದ್ದರೂ, ತಮ್ಮನ್ನು ಉಪಾಸಿಸುವವರನ್ನು ಅನುಗ್ರಹಿಸುವುದಕ್ಕಾಗಿ ರೂಪಾಂತರದಿಂದ ಇಲ್ಲಿ ಕಾಣಿಸುತ್ತಿರುವರೆಂದು ಗ್ರಾಹ್ಯವು.

† ಇಲ್ಲಿ ಹೇಳಿದ ಭೀಷ್ಮ ಧಾರ್ತರಾಷ್ಟ್ರಾದಿಗಳು ಪೂರ್ವಕಲ್ಪದವರೆಂದು ಗ್ರಾಹ್ಯವು.

ಷ್ಮರು, ನೂರು ಮಂದಿ ಭೀಮರು, ನೂರು ಮಂದಿ ಪ್ರತಿವಿಂಧ್ಯರು, ನೂರು ಮಂದಿ ನಾಗರು, ನೂರುಮಂದಿ ಪಲಾಶರು, ನೂರು ಮಂದಿ ಕಾಶಕುಶಾದಿಗಳು, ಶಂತನು, ನಿನ್ನ ತಂದೆಯಾದ ಪಾಂಡು, ಉಶಂಗವ, ಶತರಥ, ದೇವರಾಜ, ಜಯದ್ರಥ, ವೃಷದರ್ಭನೆಂಬ ರಾಜರ್ಷಿ, ಅವನ ಮಂತ್ರಿಗಳು, ಇನ್ನೂ ಹೀಗೆಯೇ ಈ ಭೂಲೋಕದಲ್ಲಿ ಭೂರಿದಕ್ಷಿಣೆಗಳಿಂದ ಹಲವು ದೊಡ್ಡ ಅಶ್ವಮೇಧಯಾಗಗಳನ್ನು ನಡೆಸಿ ಸದ್ಗತಿಯನ್ನು ಹೊಂದಿದ ಶಶಿಬಿಂದುವಂಶದ ಸಾವಿರಾರುಮಂದಿ ರಾಜರೆಲ್ಲ ಆ ಯಮನ ಸಭೆಯಲ್ಲಿರುವರು. ಇದಲ್ಲದೆ ಆ ಸಭೆಯಲ್ಲಿ ಅನೇಕಯಾಗಗಳನ್ನು ನಡೆಸಿ, ತಪಸ್ಸಿದ್ಧಿಯಿಂದ ಯೋಗಶರೀರವನ್ನು ಪಡೆದ ಅಗಸ್ತ್ಯ, ಮತಂಗ, ಕಾಲ, ಮೃತ್ಯುಗಳೆಂಬ ಮಹರ್ಷಿಗಳೂ, ಅಗ್ನಿಷ್ವಾತ್ತಗಳು, *ಫೇನಪರು, ಊಷ್ಮಪರು, ಸುಧಾವಂತರು, ಬರ್ಹಿಷದರೆಂಬ ಪಿತೃಗಳೂ ಅಲ್ಲಿರುವರು. ಮತ್ತು ಕಾಲಚಕ್ರವೂ, ಪೂಜ್ಯನಾದ ಅಗ್ನಿದೇವನೂ ಅಲ್ಲಿರುವನು. ಪಾಪವನ್ನು ಮಾಡಿ ದಕ್ಷಿಣಾಯನದಲ್ಲಿ ಮೃತಿಹೊಂದಿದವರೂ, ಕಾಲವನ್ನು ನಡೆಸುವುದಕ್ಕಾಗಿ ನಿಯಮಿಸಿದ ಯಮಕಿಂಕರರೂ ಅಲ್ಲಿಯೇ ಇರುವರು. ಶಿಂಶುಪಾವೃಕ್ಷ, ಪಲಾಶವೃಕ್ಷ, ಕುಶ, ಕಾಶ, ಮೊದಲಾದ (ದರ್ಭೆ ಮತ್ತು ನೊದೆ) ಪವಿತ್ರವೃಕ್ಷಗಳೂ ಶರೀರದೊಡನೆ ಧರ್ಮರಾಜನನ್ನು ಉಪಾಸಿಸುವುವು. ಓ ಧಮಪುತ್ರಾ! ಆ ಯಮಸಭೆಯಲ್ಲಿ ಹೀಗೆಯೇ ಇನ್ನೂ ಎಷ್ಟೋ ಮಂದಿಯಿರುವರು. ಅವರ ಹೆಸರನ್ನಾಗಲಿ, ಕಾರ್ಯಗಳನ್ನಾಗಲಿ, ಎಣಿಸುವುದೂ ಸಾಧ್ಯವಲ್ಲ. ಅತಿರಮ್ಯವಾಗಿ, ಕಾಮಗಮನಶಕ್ತಿಯುಳ್ಳ ಆ ಸಭೆಯು ಎಷ್ಟು ಜನಕ್ಕಾದರೂ ಇಕ್ಕಟ್ಟಿಲ್ಲದೆ ಸ್ಥಳವನ್ನು ಕೊಡಬಲ್ಲುದು. ವಿಶ್ವಕರ್ಮನು ಬಹುಕಾಲದ ತಪೋಬಲದಿಂದ ಅದನ್ನು ನಿರ್ಮಿಸಿದನು. ಉಗ್ರತಪಸ್ಸಿನಿಂದಲೂ, ವ್ರತಗಳಿಂದಲೂ, ಸತ್ಯ, ಶಾಂತಿ, ಸನ್ಯಾಸಾದಿ ನಿಯಮಗಳಿಂದಲೂ ಪವಿತ್ರರಾದವರೇ ಆ ಸಭೆಗೆ ಹೋಗಬಲ್ಲರು. ಅಲ್ಲಿರುವವರೆಲ್ಲರೂ ತೇಜೋಮಯವಾಗಿ ಜ್ವಲಿಸುವ ಶರೀರವುಳ್ಳವರು. ಒಬ್ಬೊಬ್ಬರೂ ಶುದ್ಧವಾದ ವಸ್ತ್ರಾಭರಣವುಳ್ಳವರು. ವಿಚಿತ್ರ ಪುಷ್ಪಮಾಲಿಕೆಗ

* ಇಲ್ಲಿಂದ ಮುಂದಿರುವ ಮೂವರೂ ಕ್ರಮವಾಗಿ, ನೊರೆ, ಆವಿ, ಅಮೃತವನ್ನು ಪಾನಮಾಡತಕ್ಕವರು. ಬರ್ಹಿಷದರೆಂದರೆ ಅಗ್ನಿಯಲ್ಲಿ ನೆಲೆಗೊಂಡವರು.

ಳಿಂದಲೂ, ಕುಂಡಲಗಳಿಂದಲೂ, ತೋಳ್ಬಳೆಗಳಿಂದಲೂ, ಮುಕ್ತಾಹಾರಗಳಿಂದಲೂ ಶೋಭಿಸುತ್ತಿರುವರು. ಅಲ್ಲಿ ಮಹಾತ್ಮರಾದ ಗಂಧರ್ವರೂ, ಅಪ್ಸರಸ್ಸುಗಳೂ, ನೃತ್ತಗೀತವಾದ್ಯಗಳಿಂದಲೂ, ಹಾಸ್ಯಲಾಸ್ಯಗಳಿಂದಲೂ, ಯಾವಾಗಲೂ ಯಮಧರ್ಮರಾಜನನ್ನು ಸಂತೋಷಗೊಳಿಸುತ್ತಿರುವರು. ಇದರಿಂದ ಆ ಸಭೆಯು ಯಾವಾಗಲೂ ಘಮಘಮಿಸುವ ಸುವಾಸನೆಯಿಂದಲೂ, ಇಂಪಾದ ಗಾನಧ್ವನಿಯಿಂದಲೂ ತುಂಬಿರುವುದು. ದೇವಲೋಕದಿಂದ ಪ್ರತಿದಿನವೂ ಅಲ್ಲಿಗೆ ಕಲ್ಪವೃಕ್ಷದ ದಿವ್ಯಮಾಲಿಕೆಗಳು ಬರುತ್ತಿರುವುವು. ಧಾರ್ಮಿಕರೂ, ರೂಪವಂತರೂ, ಉದಾರಮನಸ್ಕರೂ ಆದ ಲಕ್ಷೋಪಲಕ್ಷ ಮಂದಿ ಪುರುಷರು, ಮಹಾತ್ಮನಾದ ಯಮನನ್ನು ಉಪಾಸಿಸುತ್ತಿರುವರು. ಓ ರಾಜಾ! ಇನ್ನು "ಪುಷ್ಕರಮಾಲಿನಿ"ಯೆಂಬ ವರುಣಸಭೆಯ ವಿವರವನ್ನು ತಿಳಿಸುವೆನು ಕೇಳು" ಎಂದನು.

ಇದು ಎಂಟನೆಯ ಅಧ್ಯಾಯವು.



 ವರುಣ ಸಭಾ ವರ್ಣನವು. 

ಓ ಯುಧಿಷ್ಠಿರಾ! ಕೇಳು! ವರುಣನ ಸಭೆಯು ಎಣೆಯಿಲ್ಲದ ಕಾಂತಿಯುಳ್ಳುದು. ಅಳತೆಯಲ್ಲಿ ಯಮಸಭೆಗೆ ಸಮಾನವಾಗಿ ಮಂಗಳಕರವಾದ ಪ್ರಾಕಾರತೋರಣಗಳಿಂದ ಶೋಭಿಸುತ್ತಿರುವುದು. ಅದು ವಿಶ್ವಕರ್ಮನಿಂದ ನೀರಿನೊಳಗೇ ನಿರ್ಮಿಸಲ್ಪಟ್ಟಿರುವುದು. ರತ್ನಮಯಗಳಾದ ಫಲಪುಷ್ಪಗಳನ್ನು ಬಿಡುತ್ತಿರುವ ಅನೇಕಕಲ್ಪವೃಕ್ಷಗಳಿಂದ ಅದು ಶೋಭಿಸುತ್ತಿರುವುದು. ಆ ವೃಕ್ಷಗಳೆಲ್ಲ ನೀಲ, ಹಳದಿ, ಬಿಳುಪು, ಕಪ್ಪು, ಕೆಂಪು, ಮಿಶ್ರವರ್ಣಗಳು, ಇವುಗಳಿಂದ ಚಿತ್ರವಿಚಿತ್ರಗಳಾಗಿ ಕಾಣುವುವು. ಆ ವೃಕ್ಷಗಳನ್ನು ಸುತ್ತಿ ಬಳ್ಳಿಗಳೂ, ಹಲವುಪೊದೆಗಳೂ ಗೊಂಚಲುಗೊಂಚಲಾದ ಹೂಗಳಿಂದ ಶೋಭಿಸುತ್ತಿರುವುವು. ಅಲ್ಲಿ ವಿಚಿತ್ರವರ್ಣವುಳ್ಳ ಪಕ್ಷಿಗಳು ಮದುರಸ್ವರದಿಂದ ಹಾಡುತ್ತಿರುವುವು. ಆ ಪಕ್ಷಿಗಳ ಅಂದವನ್ನು ಹೀಗೆಂದು ವರ್ಣಿಸುವುದೇ ಸಾಧ್ಯವಲ್ಲ. ಇಂತಹ ಸುಂದರಶರೀರವುಳ್ಳ ಪಕ್ಷಿ

ಗಳು ನೂರುಸಾವಿರ ಲೆಕ್ಕದಿಂದ ಅಲ್ಲಿ ಹಾಡುತ್ತಿರುವುವು. ಆ ವರುಣ ಸಭೆಯು ಅತಿಶೀತಲವೂ ಅಲ್ಲದೆ ಅತ್ಯುಷ್ಣವೂ ಅಲ್ಲದೆ ಯಾವಾಗಲೂ ಸುಖ ಸಂಸ್ಪರ್ಶವುಳ್ಳುದಾಗಿ ಒಳಗೆ ಅನೇಕ ಮಂದಿರಗಳಿಂದಲೂ, ಆಸನಗಳಿಂದ ಲೂ ರಮ್ಯವಾಗಿರುವುದು. ಶುಭ್ರವರ್ಣವುಳ್ಳ ಆ ಸಭೆಯಲ್ಲಿ ವರುಣದೇ ವನು ತನ್ನ ಪತ್ನಿಯಾದ ವಾರುಣಿಯೊಡಗೂಡಿ ದಿವ್ಯ ವಸ್ತ್ರಾಭರಣಗಳಿಂದ ಶೋಭಿತನಾಗಿ ಪ್ರಕಾಶಿಸುತ್ತಿರುವನು. ಆ ವಾರುಣಿಗೆ ಗೌರಿಯೆಂಬ ನಾ ಮಾಂತರವು ಲೋಕಪ್ರಸಿದ್ಧವಾಗಿರುವುದು. ಆದಿತ್ಯರೆಂಬ ದೇವತೆಗಳು, ಪುಷ್ಪಚಂದನಾದಿಗಳಿಂದ ಅಲಂಕೃತರಾಗಿ ಜಲಾಧಿಪತಿಯಾದ ವರುಣ ನನ್ನು ಉಪಾಸಿಸುತ್ತಿರುವರು. ಓ ಧರ್ಮಪುತ್ರಾ ! ಅಲ್ಲಿ ಪ್ರಮುಖರಾದ ಕೆಲವರ ಹೆಸರನ್ನು ಹೇಳುವೆನು ಕೇಳು. ವಾಸುಕಿ, ತಕ್ಷಕ, ಐರಾವತ, ಕೃಷ್ಣ, ಲೋಹಿತ, ಪದ್ಮ, ಚಿತ್ರ, ಕಂಬಳ, ಅಶ್ವತರ, ಧೃತರಾಷ್ಟ್ರ, ಬಲಾ ಹಕ, ಮಣಿಮಂತ, ಕುಂಡಧಾರ, ಕರ್ಕೋಟಕ, ಧನಂಜಯ, ಪಾಣಿ ಮಂತ, ಪ್ರಹ್ರಾದ, ಮೂಷಿಕಾದ, ಜನಮೇಜಯ ಮುಂತಾದ ನಾಗರೆಲ್ಲ ರೂ ಧ್ವಜಗಳಂತೆ ತಮ್ಮ ಹೆಡೆಗಳನ್ನೆತ್ತಿ, ಮಂಡಲಾಕಾರವಾಗಿ ಸುರುಳಿ ಸುತ್ತಿಕೊಂಡು, ವರುಣದೇವನನ್ನು ಎಲ್ಲಾ ಕಡೆಯಲ್ಲಿಯೂ ಉಪಾಸಿಸು ತ್ತಿರುವರು. ಧರ್ಮಾರ್ಥಕಾಮದೇವತೆಗಳೂ, ಅಷ್ಟವಸುಗಳೂ, ಕಪಿಲ ಮಹರ್ಷಿಯೂ ಅಲ್ಲಿರುವರು. ನಾಗರಾಜನಾದ ಆದಿಶೇಷನೂ ಅಲ್ಲಿಯೇ ಇರುವನು. ಜಲಾಧಿಪತಿಯಾದ ವರುಣನು ಆಗಾಗ ಆ ಮಹಾಶೇಷ ನನ್ನು ಅರ್ಘ್ಯಾದ್ಯುಪಚಾರಗಳಿಂದಲೂ, ಆಸನಾದಿಗಳಿಂದಲೂ ಸತ್ಕರಿಸು ತ್ತಿರುವನು. ಆ ಆದಿಶೇಷನ ಆಜ್ಞೆಯನ್ನು ನಿರೀಕ್ಷಿಸುತ್ತ ವಾಸುಕಿ ಮೊದ ಲಾದವರೆಲ್ಲರೂ ಅಲ್ಲಲ್ಲಿ ಕೈಜೋಡಿಸಿ ನಿಂತಿರುವರು. ಆ ಆದಿಶೇಷನ ಅನು ಮತಿಯಾದಮೇಲೆಯೇ ಅವರು ತಮ್ಮತಮ್ಮ ಉಚಿತಾಸನದಲ್ಲಿ ಕುಳ್ಳಿರು ವರು. ಇವರಲ್ಲದೆ ಇನ್ನೂ ಅನೇಕಸರ್ಪಗಳು ಆ ಸಭೆಯಲ್ಲಿರುವುವು. ವಿನತಾಪುತ್ರನಾದ ಗರುಡನು ತನ್ನ ಪರಿವಾರಗಳೊಡನೆ ಬಂದು, ಮಹಾತ್ಮ ನಾದ ವರುಣನನ್ನು ಉಪಾಸಿಸುತ್ತಿರುವನು. ವಿರೋಚನಪುತ್ರನಾದ ಬಲಿ, ಲೋಕವನ್ನೆಲ್ಲ ಜಯಿಸಿದ ನರಕಾಸುರನು, ಸಂಹ್ರಾದನು, ವಿಪ್ರಚಿತ್ತಿ, ಕಾಲಖಂಜರೆಂಬ ದಾನವರು, ಸುಹನು, ದುರ್ಮುಖ, ಶಂಖ, ಸುಮನಸ್ಸು

ಸುಮತಿ, ಘಟೋದರ, ಮಹಾಪಾರ್ಶ್ವ, ಕ್ರಥನ, ಪಿಠರ, ವಿಶ್ವರೂಪ, ಸ್ವರೂಪ, ವಿರೂಪ, ಮಹಾಶಿರಸ್ಸು, ದಶಮುಖರಾವಣನು, ವಾಲಿ, ಮೇಘವಾಸಸ್ಸು, ದಶಾವರನು, ಟಿಟ್ಟಿಭನು, ವಿಟಭೂತನು, ಸಂಹ್ಲಾದನು, ಇಂದ್ರತಾಪನನು, ಈ ಮೊದಲಾದ ದೈತ್ಯ ದಾನವ ಸಂಘಗಳೆಲ್ಲವೂ ಅಲ್ಲಿ ಅಂದವಾದ ಕಿರೀಟಕುಂಡಲಗಳನ್ನೂ, ದಿವ್ಯಮಾಲಿಕೆಗಳನ್ನೂ, ವಸ್ತ್ರಗಳನ್ನೂ, ಧರಿಸಿ ವರುಣನ ಸೇವೆಯಲ್ಲಿರುವರು. ಈ ದಾನವರೆಲ್ಲರೂ ಉತ್ತಮ ವರಗಳನ್ನು ಪಡೆದವರು! ಎಲ್ಲರೂ ಮಹಾ ಶೂರರು! ಎಲ್ಲರೂ ಮರಣರಹಿತರು! ಇವರೆಲ್ಲರೂ ಆ ಸಭೆಯಲ್ಲಿ ಧರ್ಮಪಾಶವೆಂಬ ಮಹಾಯುಧವನ್ನು ಧರಿಸಿರುವ ವರುಣದೇವನನ್ನು ಸದಾ ಉಪಾಸಿಸುತ್ತಿರುವರು. ಹೀಗೆಯೇ ನಾಲ್ಕು ಸಮುದ್ರಗಳೂ, ಭಾಗೀರಥಿಯೆಂಬ ಗಂಗಾನದಿಯೂ, ಕಾಳಿಂದಿ, ವಿದಿಶೆ, ವೇಣಾನದಿ, ನರ್ಮದೆ, ವೇಗವಾಹಿನಿ, ವಿಪಾಶೆ, ಶತದ್ರು, ಚಂದ್ರಭಾಗೆ, ಸರಸ್ವತಿ, ಇರಾವತಿ, ವಿತಸ್ತೆ, ಸಿಂಧು, ದೇವನದಿ, ಗೋದಾವರಿ, ಕೃಷ್ಣವೇಣಿ, ನದಿಗಳಲ್ಲಿ ಶ್ರೇಷ್ಠವೆನಿಸಿದ ಕಾವೇರಿ, ಕಿಂಪುನೆ, ವಿಶಲ್ಯೆ, ವೈತರಣಿ, ಜ್ಯೇಷ್ಠಿಲೆ, ಶೋಣನದ, ಚರ್ಮಣ್ವತಿ, ಪರ್ಣಾಶಿ, ಸರಯು, ವಾರವತ್ಯೆ, ಲಾಂಗಲಿ, ಕರತೋಯೆ, ಆತ್ರೇಯಿ, ಲೌಹಿತ್ಯವೆಂಬ ಮಹಾನದ, ಲಂಘತಿ, ಗೋಮತಿ, ಸಂಧ್ಯೆ, ತ್ರಿಸ್ರೋತಸಿ, ಮೊದಲಾದ ಲೋಕಪ್ರಸಿದ್ಧವಾದ ಪುಣ್ಯನದಿಗಳೂ, ಪುಣ್ಯನದಗಳೂ, ಪುಣ್ಯತೀರ್ಥಗಳೂ, ಸರೋವರಗಳೂ, ಕೆರೆ ಬಾವಿಗಳೂ, ಚಿಲುಮೆಗಳೂ, ಸಣ್ಣ ಕಟ್ಟೆಗಳೂ, ಅಲ್ಲಿ ಶರೀರವತ್ತಾಗಿದ್ದು ವರುಣನನ್ನು ಉಪಾಸಿಸುತ್ತಿರುವುವು. ದಿಕ್ಕುಗಳು, ಭೂಮಿ, ಪರ್ವತಗಳು, ಎಲ್ಲಾ ಜಲಜಂತುಗಳು, ಇವೆಲ್ಲವೂ ಆ ವರುಣಸೇವೆಯಲ್ಲಿರುವುವು. ಆ ಸಭೆಯಲ್ಲಿ ಗಂಧರ್ವರೂ, ಅಪ್ಸರಸ್ಸುಗಳೂ, ಗೀತವಾದ್ಯಾದಿಗಳಿಂದ ವರುಣನನ್ನು ಸ್ತುತಿಸುತ್ತಿರುವರು. ಮತ್ತು ಅಲ್ಲಿ ರತ್ನಸಮೃದ್ಧಗಳಾದ ಪರ್ವತಗಳೂ, ಎಲ್ಲಾ ರಸದ್ರವ್ಯಗಳೂ ಪುರುಷಾಕಾರದಿಂದ ಕಿವಿಗಿಂಪಾದ ಕಥೆಗಳನ್ನು ಹೇಳುತ್ತ ಅಲ್ಲಿರುವುವು. ಸುನಾಭನೆಂಬ ವರುಣನ ಮಂತ್ರಿಯು ತನ್ನ ಮಕ್ಕಳೊಡನೆಯೂ, ಮೊಮ್ಮಕ್ಕಳೊಡನೆಯೂ, ಗೋವೆಂಬ ಹೆಸರುಳ್ಳ ಪುಷ್ಕರನೊಡನೆಯೂ ಸೇರಿ, ವರುಣನನ್ನುಪಾಸಿಸುತ್ತಿರುವನು. ಇವರೆಲ್ಲರೂ ದಿವ್ಯಶರೀರವುಳ್ಳವರಾಗಿ ಆ ವರುಣದೇವನ ಸುತ್ತ

ಲೂ ನೆರೆದಿರುವರು. ಓ ಯುಧಿಷ್ಠಿರಮಹಾರಾಜಾ! ಹಿಂದೆ ನಾನು ಸಂಚಾರವಶದಿಂದ ಆ ವರುಣಸಭೆಗೆ ಹೋದಾಗ ಅದನ್ನು ನೋಡಿ ಬಂದೆನು. ಇನ್ನು ಕುಬೇರನ ಸಭೆಯನ್ನು ವಿವರಿಸುವೆನು ಕೇಳು.

ಇದು ಒಂಭತ್ತನೆಯ ಅಧ್ಯಾಯವು.

ಕುಬೇರಸಭಾ ವರ್ಣನವು.

ರಾಜೇಂದ್ರಾ! ಕುಬೇರಸಭೆಯು ನೂರು ಯೋಜನಗಳ ಉದ್ದವೂ, ಎಪ್ಪತ್ತು ಯೋಜನಗಳ ಅಗಲವೂ ಉಳ್ಳುದು. ಅದು ಶುಭ್ರವಾದ ಕಾಂತಿಯುಳ್ಳುದು. ಕುಬೇರನು ಅದನ್ನು ತಾನೇ ತನ್ನ ತಪೋಬಲದಿಂದ ಪಡೆದನು. ಅದು ಚಂದ್ರಕಾಂತಿಯಿಂದ ಹೊದಿಸಲ್ಪಟ್ಟ ಕೈಲಾಸಶಿಖರದಂತೆ ಅಚ್ಚ ಬಿಳುಪಾಗಿ ಕಾಣುವುದು. ಆ ದಿವ್ಯಸಭೆಯು ಗುಹ್ಯಕರಿಂದ ವಹಿಸಲ್ಪಡುತ್ತ ಆಕಾಶದಲ್ಲಿ ಹರಡಿದಂತೆ ಕಾಣುವುದು. ಎತ್ತರವಾದ ಸುವರ್ಣಪ್ರಾಕಾರಗಳಿಂದ ಶೋಭಿಸುತ್ತ, ಮಹಾರತ್ನಗಳಿಂದ ವಿಚಿತ್ರವಾಗಿ, ಎಂತವರ ಮನಸ್ಸನ್ನೂ ಆಕರ್ಷಿಸುವ ಆ ಸಭಾಮಂದಿರದಲ್ಲಿ, ಯಾವಾಗಲೂ ದಿವ್ಯಗಂಧವು ಘಮಘಮಿಸುತ್ತಿರುವುದು. ಬಿಳೀಮೇಘದಂತೆ ಶಿಖರವುಳ್ಳ ಆ ದಿವ್ಯಸಭೆಯು ಆಕಾಶದಲ್ಲಿ ತೇಲುವಂತೆ ಗಂಭೀರವಾಗಿ ಸಂಚರಿಸುತ್ತಿರುವುದು. ಸುವರ್ಣಾಂಗಗಳಿಂದ ಕೂಡಿದ ಆ ಸಭಾಸ್ಥಾನವು, ಮಿಂಚಿನ ಬಳ್ಳಿಗಳಿಂದಲೇ ಚಿತ್ರಿಸಲ್ಪಟ್ಟಂತೆ ಕಾಣುವುದು. ಅದರಲ್ಲಿ ಧನಾದಿಪತಿಯಾದ ಕುಬೇರನು ವಿಚಿತ್ರವಸ್ತ್ರಾಭರಣಗಳಿಂದಲೂ, ದೇದೀಪ್ಯಮಾನಗಳಾದ ಕರ್ಣಕುಂಡಲಗಳಿಂದಲೂ ಅಲಂಕೃತನಾಗಿ, ಅದ್ಭುತಕಾಂತಿಯಿಂದ ಬೆಳಗುತ್ತಿರುವನು. ಋದ್ಧಿಯೆಂಬ ಆತನ ಪತ್ನಿಯು ಆಭರಣಾಲಂಕೃತವಾದ ಶರೀರದೊಡನೆ ಆತನಸಮೀಪದಲ್ಲಿರುವಳು. ಅಲ್ಲಿ ಕುಬೇರನು ದಿವ್ಯಾಸ್ತರಣದಿಂದಲೂ, ಉತ್ತಮವಾದ ಕಾಲುದಿಂಬಿನಿಂದಲೂ ಕೂಡಿದ, ಸೂರ್ಯಸಮಾನವಾದ ಒಂದು ದಿವ್ಯಾಸನದಲ್ಲಿ ಕುಳಿತಿರುವನು. ವಾಯುವು ನಂದನವನದಲ್ಲಿರುವ ಮಂದಾರವೃಕ್ಷಗಳನ್ನು ಅಲುಗಾಡಿಸಿ, ಅಲಕೆಯೆಂಬ ತಾವರೆ

ಕೊಳದಲ್ಲಿರುವ ಸೌಗಂಧಿಕಪುಷ್ಪಗಳ ಸುವಾಸನೆಗಳನ್ನು ಹೊತ್ತು ತಂದು ಕುಬೇರನ ಮನಸ್ಸನ್ನು ಉಲ್ಲಾಸಗೊಳಿಸುವಂತೆ ಮೆಲ್ಲನೆ ತಂಪಾಗಿ ಬೀಸುತ್ತಿರುವುದು. ಅಲ್ಲಿ ದೇವತೆಗಳೂ, ಗಂಧರ್ವರೂ, ಅಪ್ಸರಸ್ಸುಗಳೊಡಗೂಡಿ, ದಿವ್ಯತಾನಗಳಿಂದ ಗಾನಮಾಡುತ್ತ ಕುಬೇರನನ್ನು ಸಂತೋಷಗೊಳಿಸುತ್ತಿರುವರು. ಮಿಶ್ರಕೇಶಿ, ರಂಭೆ, ಚಿತ್ರಸೇನೆ, ಶುಚಿಸ್ಮಿತೆ, ಚಾರುನೇತ್ರೆ, ಘೃತಾಚಿ, ಮೇನಕೆ, ಪುಂಜಿಕಸ್ಥಲಿ, ವಿಶ್ವಾಚಿ, ಸಹಜನ್ಯೆ, ಪ್ರಮ್ಲೋಚೆ, ಊರ್ವಶಿ, ಇರೆ, ವರ್ಗೆ, ಸಮಿಾಚಿ, ಬುದ್ಬುದೆ, ಲತೆ, ಎಂಬಿವರೇ ಮೊದಲಾಗಿ ಇನ್ನೂ ಸಾವಿರಾರು ಮಂದಿ ಅಪ್ಸರಸ್ತ್ರೀಯರೂ, ನೃತ್ಯಗೀತಗಳಲ್ಲಿ ನಿಪುಣರಾದ ಗಂಧರ್ವರೂ ಅಲ್ಲಿ ಕುಬೇರನನ್ನು ಸೇವಿಸುತ್ತಿರುವರು. ಹೀಗೆ ಆ ಸಭೆಯು ಯಾವಾಗಲೂ ನೃತ್ಯಗೀತವಾದ್ಯಗಳಿಂದಲೂ, ಗಂಧರ್ವರ ಮತ್ತು ಅಪ್ಸರಸ್ಸುಗಳ ಸಮೂಹದಿಂದಲೂ ಅತಿರಮ್ಯವಾಗಿರುವುದು. ಅಲ್ಲಿ ಕಿನ್ನರರೆಂದೂ, ನರರೆಂದೂ ಕರೆಯಲ್ಪಡುವ ಬೇರೆಬೇರೆ ದೇವಜಾತಿಗಳಿರುವರು. ಇದಲ್ಲದೆ ಮಾಣಿಭದ್ರ, ಧನದ, ಶ್ವೇತಭದ್ರ, ಗುಹ್ಯಕ, ಕಶೇರುಕ, ಗಂಡಕುಂಡ, ಪ್ರದ್ಯೋತ, ಮಹಾಬಲ, ಕುಸ್ತುಂಬರು, ಪಿಶಾಚ, ಗಜಕರ್ಣ, ವಿಶಾಲಕ, ವರಾಹಕರ್ಣ, ತಾಮ್ರೋಷ್ಠ, ಫಲಕಕ್ಷ, ಫಲೋದಕ, ಹಂಸಚೂಡ, ಶಿಖಾವರ್ತ, ಹೇಮನೇತ್ರ, ವಿಭೀಷಣ, ಪುಷ್ಪಾನನ, ಪಿಂಗಲಕ, ಶೋಣಿತೋದ, ಪ್ರವಾಲಕ, ವೃಕ್ಷವಾಸಿ, ಅನಿಕೇತ, ಚೀರವಾಸಸ್ಸು, ಮೊದಲಾದ ಇನ್ನೂ ಅನೇಕಯಕ್ಷರು ನೂರುಸಾವಿರ ಸಂಖ್ಯೆಯಿಂದ ಅಲ್ಲಿ ಸೇರಿ ಕುಬೇರನನ್ನು ಸೇವಿಸುತ್ತಿರುವರು. ಅಲ್ಲಿಯೇ ಪೂಜ್ಯಳಾದ ಧನದೇವತೆಯೂ, ನಳಕೂಬರನೂ ಇರುತ್ತಿರುವರು. ನಾನೂ, ನನ್ನಂತೆ ಇನ್ನೂ ಅನೇಕದೇವರ್ಷಿಗಳೂ, ಬ್ರಹ್ಮಋಷಿಗಳೂ ಅಲ್ಲಿರುವೆವು. ಕ್ರವ್ಯಾದರೆಂಬ ಮಾಂಸಾಹಾರಿ ರಾಕ್ಷಸರೂ, ಮಹಾಬಲವುಳ್ಳ ಗಂಧರ್ವರೂ ಅಲ್ಲಿ ಕುಬೇರನ ಸೇವೆಯಲ್ಲಿರುವರು. ಪಶುಪತಿಯೂ, ಉಮಾಪತಿಯೂ, ಶೂಲಧಾರಿಯೂ, ಭಗನ ಕಣ್ಣುಗಳನ್ನು ಕಿತ್ತವನೂ, ತ್ರಿನೇತ್ರನೂ, ಆದ ಪರಮಶಿವನು ಕೂಡ ಪಾರ್ವತಿಯೊಡಗೂಡಿ, ತನ್ನ ಪರಮಾಪ್ತನಾದ ಕುಬೇರನನ್ನು ಸಂತೋಷಗೊಳಿಸುತ್ತ ಅವನ ಸಮಿಾಪದಲ್ಲಿರುವನು. ಆಕಾಶದಲ್ಲಿ ಕುಳ್ಳರೂ, ಗುಜ್ಜಾರಿಗಳೂ, ವಕ್ರರೂ, ರಕ್ತದಂತೆ ಕೆಂಪಾದ ಕಣ್ಣು

ಳ್ಳವರೂ, ಮಹಾಧ್ವನಿಯುಳ್ಳವರೂ, ಮೇದೋಮಾಂಸಗಳನ್ನೇ ಭುಜಿಸತಕ್ಕವರೂ, ನಾನಾಯುಧಧಾರಿಗಳೂ, ವಾಯುವಿನಂತೆ ವೇಗವುಳ್ಳವರೂ ಆದ ಭೂತಪತಿಗಳು ಆ ರುದ್ರನನ್ನು ಸುತ್ತುಮುತ್ತಿ ನೂರಾರು ಸಂಖ್ಯೆಯಿಂದ ನೆರೆದಿರುವುವು. ನಾನಾವಿಧ ವಸ್ತ್ರಾಭರಣಗಳಿಂದಲಂಕೃತರಾದ ಅನೇಕಗಂಧರ್ವಾಧಿಪತಿಗಳು ಆ ಕುಬೇರನ ಸೇವೆಯಲ್ಲಿರುವರು. ವಿಶ್ವಾವಸು, ಹಾಹಾ, ಹೂಹೂ, ತುಂಬುರು, ಪರ್ವತ, ಶೈಲೂಷ, ಚಿತ್ರಸೇನ, ಗೀತಜ್ಞ, ಚಿತ್ರರಥಾದಿಗಳೂ, ಇತರ ಗಂಧರ್ವರೂ ಕುಬೇರನನ್ನು ಉಪಾಸಿಸುತ್ತಿರುವರು. ವಿದ್ಯಾಧರಾಧಿಪತಿಯಾದ ಚಕ್ರಧರ್ಮನು ತನ್ನ ಎಲ್ಲಾ ಸಹೋದರರೊಡನೆ ಅಲ್ಲಿ ಕುಬೇರನ ಸೇವೆಯಲ್ಲಿರುವನು. ನೂರಾರು ಮಂದಿ ಕಿನ್ನರರೂ, ಭಗದತ್ತನೇ ಮೊದಲಾದ ಪೂರ್ವರಾಜರೂ ಅಲ್ಲಿ ಕುಬೇರನನ್ನು ಉಪಾಸಿಸುವರು. ಕಿಂಪುರುಷಪತಿಯಾದ ದ್ರುಮನೂ, ರಾಕ್ಷಸಾಧಿಪತಿಯಾದ ಮಹೇಂದ್ರನೂ, ಗಂಧಮಾಧನನೂ, ಆ ಕುಬೇರನನ್ನು ಉಪಾಸಿಸುತ್ತಿರುವರು. ಅನೇಕ ಯಕ್ಷ ರಾಕ್ಷಸ ಗಂಧರ್ವರೊಡಗೂಡಿ ಧರ್ಮಾತ್ಮನಾದ ವಿಭೀಷಣನು, ತನ್ನ ಒಡಹುಟ್ಟಿದವನಾದ ಕುಬೇರನನ್ನು ಉಪಾಸಿಸುತ್ತಿರುವನು. ಹಿಮಗಿರಿ, ಪಾರಿಯಾತ್ರ, ವಿಂಧ್ಯ, ಕೈಲಾಸ, ಮಂದರ, ಮಲಯ, ದರ್ದುರ, ಮಹೇಂದ್ರ, ಗಂಧಮಾದನ, ಇಂದ್ರಕೀಲ ಸುನಾಭಗಳೆಂಬ ದಿವ್ಯ ಶೈಲಗಳೆರಡು, ಇವೇ ಮೊದಲಾಗಿ ಇನ್ನೂ ಬೇರೆ ಅನೇಕ ಪರ್ವತಗಳು ಮೇರುಪರ್ವತವನ್ನು ಮುಂದಿಟ್ಟುಕೊಂಡು, ಮೂರ್ತಿವಿಶಿಷ್ಟಗಳಾಗಿ ಪೂಜ್ಯನಾದ ಕುಬೇರನನ್ನು ಉಪಾಸಿಸುತ್ತಿರುವುವು. ಪೂಜ್ಯನಾದ ನಂದೀಶ್ವರನೂ, ಮಹಾಕಾಲನೂ, ಕಾಷ್ಠ, ಕುಟೀಮುಖ, ದಂತಿ, ವಿಜಯ, ಶ್ವೇತ, ವೃಷಭ, ಶಂಕುಕರ್ಣ, ಮೊದಲಾದ ಶಿವನ ಪಾರ್ಷದ ಗಣಗಳೆಲ್ಲವೂ ಅಲ್ಲಿರುವುವು. ಈಶ್ವರನ ಮಹಾವೃಷಭವು ಅಲ್ಲಿ ಗಂಭೀರಧ್ವನಿಯಿಂದ ಗರ್ಜಿಸುತ್ತಿರುವುದು. ಇನ್ನೂ ಬೇರೆ ಅನೇಕರಾಕ್ಷಸರೂ, ಪಿಶಾಚರೂ, ಅಲ್ಲಿ ಕುಬೇರನನ್ನು ಸೇವಿಸುತ್ತಿರುವರು. ತ್ರೈಲೋಕ್ಯ ಸೃಷ್ಟಿಕರ್ತನೂ, ದೇವದೇವನೂ, ಬಹುರೂಪನೂ ಆದ ಉಮಾಪತಿಯು ಭೂತಗಣಗಳೊಡನೆ ತನ್ನಲ್ಲಿಗೆ ಬಂದಾಗ, ಕುಬೇರನು ಅವನಿಗೆ ತಲೆಬಗ್ಗಿ ನಮಸ್ಕರಿಸಿ, ಅವನ ಅನುಮತಿಯನ್ನು ಪಡೆದಮೇಲೆಯೇ ತನ್ನ ಆಸನದಲ್ಲಿ ಕುಳಿತುಕೊಳ್ಳು

ವನು. ನವನಿಧಿಗಳಲ್ಲಿ ಪ್ರಧಾನಗಳೆನಿಸಿಕೊಂಡ ಶಂಖ ಪದ್ಮ ನಿಧಿಗಳೆರಡೂ ಇತರ ನಿಧಿಗಳೊಡನೆ ಬಂದು, ಅಲ್ಲಿ ಕುಬೇರನನ್ನು ಉಪಾಸಿಸುವುವು. ಓ ಧರ್ಮಪುತ್ರಾ ! ನಾನು ನೋಡಿಬಂದ ಕುಬೇರನ ಸಭೆಯು ಈ ವಿಧವಾದುದು.''

ಇದು ಹತ್ತನೆಯ ಅಧ್ಯಾಯವು.

## ಬ್ರಹ್ಮಸಭಾ ವರ್ಣನವು.

"ಓ ರಾಜೇಂದ್ರಾ ! ಇನ್ನು ಬ್ರಹ್ಮಸಭೆಯ ವಿಷಯವನ್ನು ತಿಳಿಸುವೆನು ಕೇಳು. ಆ ಸಭೆಯ ಸ್ವರೂಪವನ್ನು ಇಂತದೆಂದು ಹೇಳುವುದಕ್ಕೇ ಸಾಧ್ಯವಲ್ಲ. ಹಿಂದೆ ಕೃತಯುಗದಲ್ಲಿ ಭಗವಂತನಾದ ಸೂರ್ಯನು ಮನುಷ್ಯಲೋಕವನ್ನು ನೋಡುವುದಕ್ಕಾಗಿ ಕೇವಲಲೀಲಾಮಾತ್ರದಿಂದ ಮನುಷ್ಯರೂಪದಿಂದಲೇ ಬರುತಿದ್ದನು. ಹೀಗೆ ಬರುತ್ತಿರುವಾಗ ಮಾರ್ಗವಶದಿಂದ ಬ್ರಹ್ಮಸಭೆಯನ್ನು ನೋಡಿದನು. ಹೀಗೆಂದು ಊಹಿಸುವುದಕ್ಕೂ ಅಸಾಧ್ಯವಾಗಿ, ಮನೋನಿರ್ಮಿತವಾಗಿ, ಅಪ್ರಮೇಯ ಪ್ರಭಾವವುಳ್ಳುದಾಗಿ, ಸಮಸ್ತ ಭೂತಗಳ ಮನಸ್ಸನ್ನೂ ಮರುಳುಗೊಳಿಸತಕ್ಕುದಾಗಿಯೂ ಇರುವ ಆ ಬ್ರಹ್ಮಸಭೆಯನ್ನು ನೋಡಿ, ಅಲ್ಲಿಂದ ಹಿಂತಿರುಗಿ ಬರುತ್ತಿರುವಾಗ, ನಾನು ಅವನನ್ನು ಸಂಧಿಸಿದೆನು. ಆಗ ಅವನು ಆ ಸಭೆಯ ಸ್ವರೂಪವನ್ನು ನನಗೆ ಯಥಾವತ್ತಾಗಿ ಹೇಳಿದನು. ಆ ಸಭೆಯ ಅತಿಶಯಗಳನ್ನೆಲ್ಲ ಕೇಳಿ ನಾನು ಅದನ್ನು ಪ್ರತ್ಯಕ್ಷವಾಗಿ ನೋಡಿಬರಬೇಕೆಂಬ ಕುತೂಹಲದಿಂದ ಸೂರ್ಯನನ್ನು ಕುರಿತು "ಓ ಮಹಾತ್ಮಾ ! ಅಂತಹ ರಮ್ಯವಾದ ಬ್ರಹ್ಮಸಭೆಯನ್ನು ನೋಡಬೇಕೆಂದು ನನಗೆ ಬಹಳ ಕುತೂಹಲವಿರುವುದು. ಯಾವ ತಪಸ್ಸಿನಿಂದ, ಯಾವ ಕರ್ಮಗಳಿಂದ, ಅಥವಾ ಯಾವ ಔಷಧಪ್ರಯೋಗಗಳಿಂದ ಆ ಸಭೆಯನ್ನು ನಾನು ನೋಡಿಬರಬಹುದೋ ಆ ಮಾರ್ಗವನ್ನು ನನಗೆ ತಿಳಿಸಬೇಕು'' ಎಂದೆನು. ಅದಕ್ಕಾ ಸೂರ್ಯನು ನನ್ನನ್ನು ನೋಡಿ, "ಒಂದು ಸಾವಿರ ವರ್ಷಗಳ ವರೆಗೆ

ದೃಢಮನಸ್ಸಿನಿಂದ ಬ್ರಹ್ಮವ್ರತವೆಂಬ ತಪಸ್ಸನ್ನು ಸಾಧಿಸಿದವರೇ ಆ ಸಭೆಯನ್ನು ಪ್ರತ್ಯಕ್ಷವಾಗಿ ನೋಡಬಹುದು" ಎಂದನು. ಒಡನೆಯೇ ನಾನು ಹಿಮವತ್ಪರ್ವತಕ್ಕೆ ಹೋಗಿ, ಅಲ್ಲಿ ದೃಢತಪಸ್ಸನ್ನು ನಡೆಸಿದೆನು. ಆ ತಪಸ್ಸಿನ ಕಾಲಾವಧಿಯು ಮುಗಿದೊಡನೆ ಸೂರ್ಯನು ತಾನೇ ಬಂದು ನನ್ನನ್ನು ಕರೆದುಕೊಂಡು ಹೋಗಿ, ಆ ಬ್ರಹ್ಮಸಭೆಯಲ್ಲಿ ಸೇರಿಸಿದನು. ರಾಜೇಂದ್ರಾ! ಆ ಸಭೆಯ ಸ್ವರೂಪವನ್ನು ಇಂತದೆಂದು ನಾನು ನಿರ್ಣಯಿಸಿ ಹೇಳಲಾರೆನು. ಅದು ಕಣ್ಣಿಂದ ನೋಡುತ್ತಿರುವಾಗಲೇ ಕ್ಷಣಕ್ಷಣಕ್ಕೆ ಬೇರೆ ಬೇರೆ ರೂಪಾಂತರಗಳನ್ನು ತಾಳುವುದು. ಅದರ ಅಳತೆಯನ್ನಾಗಲಿ, ಅದರ ಆಕೃತಿಯನ್ನಾಗಲಿ, ಹೀಗೆಂದು ನಿರ್ಧರಿಸುವುದೇ ಯಾರಿಗೂ ಸಾಧ್ಯವಲ್ಲ. ಅಂತಹ ರೂಪವಿಶೇಷಗಳನ್ನು ಹಿಂದೆ ಯಾವಾಗಲೂ ನಾನು ನೋಡಿದುದಿಲ್ಲ. ಶೀತೋಷ್ಣಗಳೆರಡೂ ಇಲ್ಲದೆ ಅದು ಯಾವಾಗಲೂ ಅತ್ಯಾನಂದಕರವಾಗಿರುವುದು. ಆ ಸಭೆಯಲ್ಲಿರುವವರಿಗೆ ಹಸಿವು, ಬಾಯಾರಿಕೆ, ಬಳಲಿಕೆಗಳೊಂದೂ ಇರುವುದಿಲ್ಲ. ಅದು ನಾನಾವರ್ಣವುಳ್ಳ ಅನೇಕ ರತ್ನಗಳಿಂದ ಕೂಡಿ, ಎಣೆಯಿಲ್ಲದ ಕಾಂತಿಯಿಂದ ಜ್ವಲಿಸುತ್ತಿರುವುದು. ಆಧಾರಸ್ತಂಭಗಳೇ ಇಲ್ಲದೆ ಅದು ಸ್ಥಿರವಾಗಿ ನಿಂತಿರುವುದು. ಅದಕ್ಕೆ ಎಂದಿಗೂ ಚ್ಯುತಿಯಿಲ್ಲ. ಅದರಲ್ಲಿ ಎಣೆಯಿಲ್ಲದ ಕಾಂತಿಯುಳ್ಳ ನಾನಾಬಗೆಯ ದಿವ್ಯವಸ್ತುಗಳು ತುಂಬಿರುವುವು. ಅದರ ಕಾಂತಿಯು ಚಂದ್ರನನ್ನೂ, ಸೂರ್ಯನನ್ನೂ, ಅಗ್ನಿಯನ್ನೂ ಮೀರಿರುವುದು. ಅದು ಸ್ವರ್ಗಕ್ಕೂ ಮೇಲಿದ್ದು ಸೂರ್ಯನನ್ನೇ ಹೆದರಿಸುವಂತೆ ಕಾಣುತ್ತಿರುವುದು. ತನ್ನ ದಿವ್ಯಮಾಯೆಯಿಂದ (ಶಕ್ತಿಯಿಂದ) ತ್ರೈಲೋಕ್ಯವನ್ನೂ ಸೃಷ್ಟಿಸುವ ಲೋಕಪಿತಾಮಹನಾದ ಬ್ರಹ್ಮನು, ಆ ಸಭಾಮಧ್ಯದಲ್ಲಿ ದಿವ್ಯಾಸನದ ಮೇಲೆ ತನಗೆ ಸಮಾನರಿಲ್ಲದೆ ಕುಳಿತಿರುವನು ದಕ್ಷ, ಪ್ರಚೇತಸ್ಸು, ಪುಲಹ, ಮರೀಚಿ, ಕಶ್ಯಪರು, ಭೃಗು, ಅತ್ರಿ, ವಸಿಷ್ಠ, ಗೌತಮ, ಅಂಗಿರಸ್ಸು, ಪುಲಸ್ತ್ಯ, ಕ್ರತು, ಪ್ರಹ್ಲಾದ, ಕರ್ದಮರೆಂಬ ಹದಿನಾಲ್ಕು ಮಂದಿ ಪ್ರಜಾಪತಿಗಳೂ, ಅಥರ್ವಾಂಗೀರಸರು, ವಾಲಖಿಲ್ಯರು, ಮರೀಚಿಪರು ಮುಂತಾದ ಮಹರ್ಷಿಗಳೆಲ್ಲರೂ ಆ ಬ್ರಹ್ಮದೇವನನ್ನು ಸೇವಿಸುತ್ತಿರುವರು. ಮತ್ತು ಮನಸ್ಸು, ಅಂತರಿಕ್ಷ, ವಿದ್ಯೆಗಳು, ವಾಯು, ತೇಜಸ್ಸು, ಭೂಮಿ, ಜಲ

ಶಬ್ದ, ರೂಪ, ರಸ, ಗಂಧ, ಸ್ಪರ್ಶಗಳು, ಪ್ರಕೃತಿವಿಕೃತಿಗಳು, ಈ ಪ್ರಪಂಚ ಸೃಷ್ಟಿಗೆ ಕಾರಣವಾದ ಇತರ ವಸ್ತುಗಳು ಇವೆಲ್ಲವೂ ರೂಪವಿಶಿಷ್ಟಗಳಾಗಿ ಅಲ್ಲಿರುವುವು. ಮಹಾತೇಜಸ್ವಿಯಾದ ಅಗಸ್ತ್ಯನೂ, ತಪೋವೀರ್ಯವುಳ್ಳ ಮಾರ್ಕಂಡೇಯನೂ, ಜಮದಗ್ನಿ, ಭರದ್ವಾಜ, ಸಂವರ್ತ, ಚ್ಯವನ, ದೂರ್ವಾಸ, ಋಷ್ಯಶೃಂಗ, ಯೋಗಾಚಾರ್ಯನಾದ ಸನತ್ಕುಮಾರನು, ಅಸಿತ, ದೇವಲ, ತತ್ತ್ವಜ್ಞನಾದ ಜೈಗೀಷವ್ಯನು, ಇಂದ್ರಿಯಗಳೆಂಬ ಅಂತಃಶತ್ರುಗಳನ್ನು ಜಯಿಸಿದ ಋಷಭನು, ತಪೋಬಲವುಳ್ಳ ಮಣಿಯೆಂಬೀ ಮಹರ್ಷಿಗಳೆಲ್ಲರೂ ಆ ಬ್ರಹ್ಮನ ಸೇವೆಯಲ್ಲಿರುವರು. ಅಷ್ಟಾಂಗವುಳ್ಳ ಆಯುರ್ವೇದವು ಮೂರ್ತಿಮತ್ತಾಗಿ ಅಲ್ಲಿ ನೆಲೆಗೊಂಡಿರುವುದು. ನಕ್ಷತ್ರಗಳೊಡನೆ ಚಂದ್ರನೂ, ಸೂರ್ಯನೂ, ವಾಯುಗಳೂ, ಋತುಗಳೂ, ಸಂಕಲ್ಪವೂ, ಪ್ರಾಣವೂ, ಧರ್ಮಾರ್ಥಕಾಮುಗಳೂ, ಹರ್ಷ, ದ್ವೇಷ, ತಪಸ್ಸು, ದಮ, ಎಂಬಿವೆಲ್ಲವೂ ಆಕಾರವಿಶಿಷ್ಟಗಳಾಗಿ ಮಹಾವ್ರತವನ್ನು ಹಿಡಿದು ಅಲ್ಲಿ ಬ್ರಹ್ಮನನ್ನುಪಾಸಿಸುತ್ತಿರುವುವು. ಗಂಧರ್ವರ ಮತ್ತು ಅಪ್ಸರಸ್ಸುಗಳ ಇಪ್ಪತ್ತೇಳು ಗಣಗಳೂ, ಎಲ್ಲಾ ದಿಕ್ಪಾಲಕರೂ ಆ ಸಭೆಯಲ್ಲಿ ಬಂದು ನೆರೆದಿರುವರು. ಶುಕ್ರ, ಬೃಹಸ್ಪತಿ, ಬುಧ, ಅಂಗಾರಕ, ಶನೈಶ್ಚರ, ರಾಹು ಮುಂತಾದ ಎಲ್ಲಾ ಗ್ರಹಗಳೂ, ವೇದಮಂತ್ರಗಳೂ, ರಥಂತರವೆಂಬ ಸಾಮವೂ, ಹರಿಮಂತ ವಸುಮಂತರೂ, ದ್ವಾದಶಾದಿತ್ಯರೂ, ಅವರಿಗೆ ಅಧಿಪತಿಯಾದ ಸೂರ್ಯನೂ, ಅಗ್ನೀಷೋಮ, ಮಿತ್ರಾವರುಣ, ಮೊದಲಾದ ಜಂಟಿದೇವತೆಗಳೂ, ಸಪ್ತಮರುತ್ತುಗಳೂ, ಅಷ್ಟವಸುಗಳೂ, ವಿಶ್ವಕರ್ಮನೂ, ಎಲ್ಲಾ ಪಿತೃದೇವತೆಗಳೂ, ಎಲ್ಲಾ ಹೋಮದ್ರವ್ಯಗಳೂ, ಋಗ್ಯಜುಸ್ಸಾಮಾಥರ್ವಣವೆಂಬ ನಾಲ್ಕು ವೇದಗಳೂ, ಆರು ವೇದಾಂಗಗಳೂ, ಇತಿಹಾಸಗಳೂ, ಧನುರ್ವೇದವೇ ಮೊದಲಾದ ಉಪವೇದಗಳೂ ಅಲ್ಲಿ ಶರೀರವತ್ತಾಗಿ ಬ್ರಹ್ಮನನ್ನುಪಾಸಿಸುವುವು. ಯಾಗಗಳು, ಸೋಮಲತೆ, ಹವಿಸ್ಸನ್ನು ಭುಜಿಸತಕ್ಕ ದೇವತೆಗಳು, ಸಂಕಟಗಳಿಂದ ಉದ್ಧರಿಸತಕ್ಕ ಸಾವಿತ್ರಿ, ಮೇಧೆ (ಕಲ್ಪನಾಶಕ್ತಿ), ಧೃತಿ (ಜ್ಞಾಪಕಶಕ್ತಿ), ಶ್ರುತಿ (ಶಬ್ದಶಕ್ತಿ), ಪ್ರಜ್ಞೆ (ಜ್ಞಾನಶಕ್ತಿ), ಬುದ್ಧಿ, ಯಶಸ್ಸು, ತಾಳ್ಮೆಯೆಂಬ ಏಳು ಬಗೆಯ ಸರಸ್ವತಿಯರೂ, ಸ್ತೋತ್ರಗಳೂ, ಸಾಮಗಳೂ, ಗಾಥೆಗಳೂ, ತರ್ಕ

ಗಳಿಂದ ಕೂಡಿದ ಭಾಷ್ಯಗಳೂ, ನಾನಾಬಗೆಯ ಕಾವ್ಯ ನಾಟಕಗಳೂ ಕಥೆಗಳೂ, ಆಖ್ಯಾಯಿಕೆಗಳೂ, ಕಾರಿಕೆಗಳೂ, ಮೂರ್ತಿವಿಶಿಷ್ಟಗಳಾಗಿಯೇ ಅಲ್ಲಿರುವುವು. ಗುರುಗಳನ್ನು ಪೂಜಿಸಿದ ಮಹಾಪುಣ್ಯಶಾಲಿಗಳೂ ಅಲ್ಲಿ ನೆರೆದಿರುವರು. ಕ್ಷಣ, ಲವ, ಮುಹೂರ್ತ, ಹಗಲು, ರಾತ್ರಿ, ಪಕ್ಷ, ಮಾಸ, ಋತು, ಸಂವತ್ಸರಗಳೆಂಬ ಕಾಲವಿಭಾಗಗಳೂ, (ಕೃತ, ತ್ರೇತ, ದ್ವಾಪರ, ಕಲಿ, ಯುಗಸಂಧಿಯೆಂಬ) ಐದು ಯುಗಗಳೂ, (ಮಾನುಷ, ದೈವ, ಪೈತ್ರ, ಬ್ರಾಹ್ಮದಿನಗಳೆಂಬ) ನಾಲ್ಕುಬಗೆಯ ದಿನಪರಿಮಾಣಗಳೂ, ಅಕ್ಷಯವಾದ ಕಾಲಚಕ್ರವೂ, ಧರ್ಮಚಕ್ರವೂ ಅಲ್ಲಿ ಯಾವಾಗಲೂ ನೆಲೆಗೊಂಡಿರುವುದು. ದೇವಮಾತೆಯರಾದ ಅದಿತಿ, ದಿತಿ, ದನು, ಸುರಸೆ, ವಿನತೆ, ಇರೆ, ಕಾಲಿಕೆ, ಸುರಭಿ, ಸರಮೆ, ಗೌತಮಿ, ಪ್ರಭೆ, ಕದ್ರು, ರುದ್ರಾಣಿ, ಶ್ರೀದೇವಿ, ಲಕ್ಷ್ಮಿ, ಭದ್ರೆ, ಷಷ್ಠಿ, ಪೃಥಿವಿ, ಹ್ರೀದೇವಿ, ಸ್ವಾಹಾದೇವಿ, ಕೀರ್ತಿ, ಸುರೆ, ಇಂದ್ರಾಣಿ, ಪುಷ್ಟಿ, ಅರುಂಧತಿ, ಸಂವೃತ್ತಿ, ಆಶೆ, ನಿಯತಿ, ಸೃಷ್ಟಿ, ರತಿ ಮೊದಲಾದ ದೇವತಾಸ್ತ್ರೀಯರೂ ಅಲ್ಲಿ ಬ್ರಹ್ಮನನ್ನು ಸೇವಿಸುತ್ತಿರುವರು. ಆದಿತ್ಯರು, ವಸುಗಳು, ರುದ್ರರು, ಮರುತ್ತುಗಳು, ಅಶ್ವಿನೀದೇವತೆಗಳು, ವಿಶ್ವೇದೇವತೆಗಳು, ಸಾಧ್ಯರು, ಮನೋವೇಗವುಳ್ಳ ಪಿತೃಗಳು, ಇವರೆಲ್ಲ ಅಲ್ಲಿ ಬ್ರಹ್ಮನನ್ನು ಉಪಾಸಿಸುತ್ತಿರುವರು. ಭರತೋತ್ತಮಾ! ಪಿತೃದೇವತೆಗಳ ಗಣಗಳಲ್ಲಿ ಏಳು ಬಗೆಯುಂಟು. ಅವರಲ್ಲಿ ನಾಲ್ಕು ಬಗೆಯವರು ಸ್ಪರ್ಶಯೋಗ್ಯವಾದ ದೇಹವುಳ್ಳವರು. ಉಳಿದ ಮೂರು ಬಗೆಯವರು ಸ್ಪರ್ಶಯೋಗ್ಯವಲ್ಲದ ರೂಪಮಾತ್ರವುಳ್ಳವರು. ಮಹಾತ್ಮರಾದ ವೈರಾಜರು, ಅಗ್ನಿಷ್ವಾತ್ತರು, ಸ್ವರ್ಗಚಾರಿಗಳಾಗಿ ಪ್ರಖ್ಯಾತಿಹೊಂದಿದ ಗಾರ್ಹಪತ್ಯರು, ಸೋಮಪರು, ಏಕಶೃಂಗರು, ಚತುರ್ವೇದಿಗಳು, ಕಲರು, ಎಂಬೀ ಏಳುಬಗೆಯ ಪಿತೃಗಳುಂಟು. ನಾಲ್ಕುವರ್ಣಗಳಿಂದಲೂ ಪೂಜಿಸಲ್ಪಡತಕ್ಕ ಇವರನ್ನು ಮೊದಲು ಪುಷ್ಟಿಗೊಳಿಸಿದರೆ, ಆಮೇಲೆ ಇವರಿಂದ ಚಂದ್ರನಿಗೆ ಪುಷ್ಟಿಯುಂಟಾಗಿ ಅವನು ವೃದ್ಧಿಹೊಂದುವನು. ಈ ಪಿತೃದೇವತೆಗಳೆಲ್ಲರೂ ಬ್ರಹ್ಮನ ಸಮೀಪದಲ್ಲಿದ್ದು ಆತನ ಸೇವೆಯನ್ನು ಮಾಡುತ್ತಿರುವರು. ಮತ್ತು ರಾಜೇಂದ್ರಾ! ಅಲ್ಲಿ ರಾಕ್ಷಸರು, ಪಿಶಾಚರು, ದಾನವರು, ಗುಹ್ಯಕರು, ಗರುಡರು, ಗಂಧರ್ವರು, ಪಶುಗಳು,

ಸ್ಥಾವರಜಂಗಮುಗಳು, ಇನ್ನೂ ಎಲ್ಲಾ ಮಹಾಭೂತಗಳೂ ಅಲ್ಲಿ ಬ್ರಹ್ಮನನ್ನು ಉಪಾಸಿಸುವುವು. ದೇವರಾಜನಾದ ಪುರಂದರನೂ, ಯಮನೂ, ಕುಬೇರನೂ, ಪಾರ್ವತೀಸಮೇತನಾದ ಮಹಾದೇವನೂ, ಷಣ್ಮುಖನೂ, ಯಾವಾಗಲೂ ಅಲ್ಲಿಗೆ ಬಂದು, ಅಲ್ಲಿ ಬ್ರಹ್ಮನನ್ನು ಉಪಾಸಿಸುತ್ತಿರುವರು. ಶ್ರೀಮನ್ನಾರಾಯಣನೂ, ದೇವರ್ಷಿಗಳೂ, ವಾಲಖಿಲ್ಯರೂ, ಇನ್ನೂ ಯೋನಿಜರೂ ಅಯೋನಿಜರೂ ಆದ ಅನೇಕಋುಷಿಗಳೂ ಆ ಬ್ರಹ್ಮಸಭೆಯಲ್ಲಿ ಸೇರಿರುವರು. ಓ ಧರ್ಮಪುತ್ರಾ! ಹೆಚ್ಚೇಕೆ? ಈ ಪ್ರಪಂಚದಲ್ಲಿ ಕಾಣಿಸುವ ಸ್ಥಾವರಜಂಗಮುಗಳು ಯಾವಯಾವುವುಂಟೋ, ಅವನ್ನೆಲ್ಲ ಆ ಸಭೆಯಲ್ಲಿಯೇ ನಾನು ಪ್ರತ್ಯಕ್ಷವಾಗಿ ನೋಡಿಬಂದೆನು. ನಿತ್ಯಬ್ರಹ್ಮಚಾರಿಗಳಾದ (ಊರ್ಧ್ವರೇತಸ್ಸುಳ್ಳ) ಎಂಭತ್ತೆಂಟುಸಾವಿರಮಂದಿ ಋುಷಿಗಳೂ, ಸಂತಾನವನ್ನು ಪಡೆದ ಎಂಭತ್ತುಸಾವಿರ ಋುಷಿಗಳೂ ಅಲ್ಲಿರುವರು. ಹೀಗೆ ದೇವತೆಗಳೂ, ಋುಷಿಗಳೂ ಅಲ್ಲಿ ಪ್ರತಿದಿನವೂ ಬ್ರಹ್ಮಸಭೆಗೆ ಬಂದು, ಬ್ರಹ್ಮದೇವನನ್ನು ದರ್ಶನಮಾಡಿ ತಲೆಬಗ್ಗಿ ನಮಸ್ಕರಿಸಿ ಹೋಗುವರು. ತನ್ನಲ್ಲಿಗೆ ಅತಿಥಿಗಳಾಗಿ ಬಂದ ದೇವ, ದಾನವ, ಯಕ್ಷ, ರಾಕ್ಷಸ, ಗರುಡ, ಪನ್ನಗ, ಗಂಧರ್ವ, ನಾಗಾದಿ ದೇವಗಣದವರನ್ನೂ, ಬ್ರಾಹ್ಮಣರನ್ನೂ, ಸರ್ವಭೂತದಯಾಪರನಾದ ಬ್ರಹ್ಮದೇವನು ಅವರವರಿಗೆ ತಕ್ಕ ರೀತಿಯಿಂದ ಆದರಿಸಿ ಕಳುಹಿಸುವನು. ವಿಶ್ವಾತ್ಮಕನಾದ ಆ ಬ್ರಹ್ಮನು ತನ್ನಲ್ಲಿಗೆ ಬಂದವರನ್ನೆಲ್ಲ ಪ್ರಿಯವಾಕ್ಯದಿಂದಲೂ, ಸಮ್ಮಾನಗಳಿಂದಲೂ ಸತ್ಕರಿಸಿ, ಅವರವರ ಕೋರಿಕೆಗಳನ್ನು ಈಡೇರಿಸಿ ಕಳುಹಿಸುವನು. ಹೀಗೆ ಅಲ್ಲಿಗೆ ಬರುತ್ತಲೂ, ಹೋಗುತ್ತಲೂ ಇರುವವರಿಂದ ಆ ಸಭೆಯು ತುಂಬಿ ತುಳುಕುತ್ತ ನಿತ್ಯಾನಂದಪ್ರದವಾಗಿರುವುದು. ಸರ್ವಕಾಂತಿಸಂಪನ್ನವಾಗಿ, ಸದಾ ಬ್ರಹ್ಮರ್ಷಿಗಣಗಳಿಂದ ತುಂಬಿದ ಆ ಬ್ರಹ್ಮಸಭೆಯು, ಆ ಬ್ರಹ್ಮನ ದಿವ್ಯ ತೇಜಸ್ಸಿನಿಂದ ಮತ್ತಷ್ಟು ಶೋಭಾತಿಶಯವನ್ನು ಹೊಂದಿ ಬೆಳಗುತ್ತಿರುವುದು. ಓ ಧರ್ಮರಾಜಾ! ಮನುಷ್ಯಲೋಕದಲ್ಲಿ ನಿನ್ನ ಸಭೆಯು ಹೇಗೋ ಹಾಗೆ ದೇವಲೋಕದಲ್ಲಿ ಮಹಾತಿಶಯವಾದ ಆ ಸಭೆಯನ್ನು ನಾನು ಕಣ್ಣಾರೆ ನೋಡಿಬಂದೆನು. ಹೀಗೆ ನಾನು ಅನೇಕ ದೇವಸಭೆಗಳನ್ನೆಲ್ಲ

ನೋಡಿರುವೆನು. ಈ ನಿನ್ನ ನೂತನಸಭೆಯು ಈ ಲೋಕದಲ್ಲಿ ಎಲ್ಲಕ್ಕಿಂತಲೂ ಮೇಲೆಂಬುದರಲ್ಲಿ ಸಂದೇಹವಿಲ್ಲ'' ಎಂದನು.

ಇದು ಹನ್ನೊಂದನೆಯ ಅಧ್ಯಾಯವು.

ಇಂದ್ರನ ಸಭೆಯಲ್ಲಿದ್ದ ಹರಿಶ್ಚಂದ್ರನ ವಿಷಯವಾಗಿ ಯುಧಿಷ್ಠಿರನು ಪ್ರಶ್ನೆಮಾಡಲು, ಆತನ ವಿಷಯವನ್ನು ಹೇಳುವ ಸಂದರ್ಭದಲ್ಲಿ ನಾರದನು ರಾಜಸೂಯಯಾಗವನ್ನು ಪ್ರಶಂಸಿಸಿ, ಯುಧಿಷ್ಠಿರನಿಗೆ ಆ ವಿಚಾರದಲ್ಲಿ ತಂದೆಯಾದ ಪಾಂಡುವಿನ ಸಂದೇಶವನ್ನು ತಿಳಿಸಿದುದು.

ಆಗ ಯುಧಿಷ್ಠಿರನು ನಾರದನನ್ನು ಕುರಿತು, "ಓ ಮುನೀಂದ್ರಾ! ನೀನು ಹೇಳಿದ ಬೇರೆಬೇರೆ ದೇವಸಭೆಗಳ ವಿಚಾರವನ್ನೆಲ್ಲ ಕೇಳಿದೆನು. ಯಮಸಭೆಯಲ್ಲಿ ಪ್ರಾಯಕವಾಗಿ ಭೂಮಿಯಲ್ಲಿ ಪ್ರಸಿದ್ಧರಾದ ರಾಜರೆಲ್ಲರೂ ಇರುವುದಾಗಿ ತಿಳಿಸಿದೆ. ಹಾಗೆಯೇ ವರುಣನ ಸಭೆಯಲ್ಲಿ ಪ್ರಾಯಕವಾಗಿ ಎಲ್ಲಾ ನಾಗರೂ, ದೈತ್ಯರೂ, ನದ ನದೀ ಸಮುದ್ರಗಳೂ ಇರುವುದಾಗಿ ನಿನ್ನಿಂದ ತಿಳಿಯಿತು. ಕುಬೇರನ ಸಭೆಯಲ್ಲಿ ಯಕ್ಷರೂ, ರಾಕ್ಷಸರೂ, ಗುಹ್ಯಕರೂ, ಗಂಧರ್ವರೂ, ಅಪ್ಸರಸ್ಸುಗಳೂ, ಪೂಜ್ಯನಾದ ಪರಮಶಿವನೂ ಇರುವುದಾಗಿ ತಿಳಿಸಿದೆ. ಪಿತಾಮಹನಾದ ಬ್ರಹ್ಮನ ಸಭೆಯಲ್ಲಿ ಎಲ್ಲಾ ಮಹರ್ಷಿಗಳೂ, ಎಲ್ಲಾ ದೇವತೆಗಳೂ, ಸಮಸ್ತ ವಿದ್ಯೆಗಳೂ ನೆಲೆಗೊಂಡಿರುವುದಾಗಿ ಹೇಳಿದೆ. ಆದರೆ, ಇಂದ್ರಸಭೆಯಲ್ಲಿ ಅನೇಕದೇವಗಂಧರ್ವರೂ, ದೇವರ್ಷಿಗಳೂ ಇರುವುದಾಗಿ ನೀನು ವರ್ಣಿಸುವಾಗ, ಅವರ ನಡುವೆ ಹರಿಶ್ಚಂದ್ರನೆಂಬ ಒಬ್ಬನೇ ರಾಜರ್ಷಿಯ ಹೆಸರನ್ನು ಸೂಚಿಸಿ ಹೇಳಿದೆಯಲ್ಲವೆ? ಆತನೊಬ್ಬನುಮಾತ್ರ ಇಂದ್ರಸಭೆಯಲ್ಲಿ ಸೇರಲು ಕಾರಣವೇನು? ಅವನು ಮಾಡಿದ ಪುಣ್ಯಕರ್ಮವಾಗಲಿ, ತಪಸ್ಸಾಗಲಿ ಎಂಥದು? ಆ ಹರಿಶ್ಚಂದ್ರನು ಇಂದ್ರನೊಡನೆ ಸ್ಪರ್ಧಿಸುವಂತಹ ಆ ಪದವಿಗೆ ಬರಬೇಕಾದರೆ, ಅವನು ಯಾವುದೋ ಅಸಾಧಾರಣಕರ್ಮವನ್ನು ನಡೆಸಿರಬೇಕು. ನನ್ನ ತಂದೆಯಾದ ಪಾಂಡುಮಹಾರಾಜನು ಪಿತೃಲೋಕದಲ್ಲಿರು.

ವುದಾಗಿಯೂ, ನೀನು ಅವನನ್ನು ಕಂಡುಬಂದುದಾಗಿಯೂ ಹೇಳಿದೆ. ಓ ಮುನೀಂದ್ರಾ! ನನ್ನ ತಂದೆಯು ನಿನ್ನೊಡನೆ ಏನಾದರೂ ಹೇಳಿದನೇನು? ಅವನು ಹೇಳಿದ ಸಂಗತಿಯೇನಾದರೂ ಇದ್ದರೆ ಅದನ್ನು ನನಗೆ ತಿಳಿಸ ಬೇಕು. ಅದನ್ನು ಕೇಳಬೇಕೆಂದು ನನಗೆ ಬಹಳ ಕುತೂಹಲವಿದೆ" ಎಂದನು.

ಅದಕ್ಕಾ ನಾರದನು, "ಓ ಧರ್ಮಪುತ್ರಾ! ನೀನು ಹರಿಶ್ಚಂದ್ರರಾಜ ನ ವಿಷಯವನ್ನು ಪ್ರಶ್ನೆಮಾಡಿದುದರಿಂದ, ಅವನ ಪ್ರಭಾವವನ್ನು ಸಂಗ್ರ ಹವಾಗಿ ತಿಳಿಸುವೆನು ಕೇಳು. ಹಿಂದೆ ಇಕ್ಷ್ವಾಕುಕುಲದಲ್ಲಿ ತ್ರಿಶಂಕು ವೆಂಬ ರಾಜನು ಹುಟ್ಟಿ ಅಯೋಧ್ಯೆಗೆ ಅಧಿಪತಿಯಾಗಿದ್ದನು. ಅವನು ವಿಶ್ವಾಮಿತ್ರನ ಅನುಗ್ರಹದಿಂದ ರಕ್ಷಿತನಾದುದು. ಕೇಕಯ ವಂಶದಲ್ಲಿ ಹುಟ್ಟಿದ ಸತ್ಯವತಿಯೆಂಬವಳು ಅವನ ಧರ್ಮಪತ್ನಿ! ಅವಳಿಗೆ ಗರ್ಭ ವುಂಟಾಗಿ ಪ್ರಸವಕಾಲದಲ್ಲಿ ಹರಿಶ್ಚಂದ್ರನೆಂಬ ರಾಜಕುಮಾರನೊಬ್ಬನು ಹುಟ್ಟಿದನು. ಈ ಕುಮಾರನು ಪ್ರವರ್ಧನನಾಗಿ ಮಹಾಬಲಾಢ್ಯನೆನಿಸಿ ಕೊಂಡು, ಎಲ್ಲಾ ರಾಜರಿಗೂ ರಾಜನಾಗಿ, ದೊಡ್ಡ ಚಕ್ರವರ್ತಿಯೆನಿಸಿ ಕೊಂಡನು. ಭೂಮಿಯೊಳಗಿನ ಎಲ್ಲಾ ರಾಜರೂ ಅವನ ಆಜ್ಞಾಧೀನ ರಾಗಿದ್ದರು. ಅವನು ಸುವರ್ಣಾಲಂಕೃತವಾದ ತನ್ನ ಜಯರಥವನ್ನೇರಿ ಹೊರಟು, ಅಸಹಾಯನಾಗಿಯೇ ಸಪ್ತದ್ವೀಪಗಳನ್ನೂ ಜಯಿಸಿ ಬಂದನು. ಪರ್ವತಾರಣ್ಯಗಳೊಡಗೂಡಿದ ಸಮಸ್ತ ಭೂಮಿಯನ್ನೂ ತನ್ನ ಶಸ್ತ್ರಬಲ ದಿಂದ ಜಯಿಸಿ, ಸ್ವಾಧೀನಪಡಿಸಿಕೊಂಡಮೇಲೆ, ಅವನು ರಾಜಸೂಯ ವೆಂಬ ಒಂದು ಮಹಾಯಜ್ಞವನ್ನು ಮಾಡತೊಡಗಿದನು. ಆ ಯಾಗ ಕಾಲದಲ್ಲಿ ಅವನ ಆಜ್ಞೆಯಿಂದ ಎಲ್ಲಾ ರಾಜರೂ ಅಪರಿಮಿತವಾದ ಧನ ವನ್ನು ತಂದೊಪ್ಪಿಸಿದರು. ಆ ಯಜ್ಞಕಾಲದಲ್ಲಿ ಅವರೇ ಬ್ರಾಹ್ಮಣರಿಗೆ ಭೋಜನಗಳನ್ನು ಬಡಿಸುವವರಾಗಿಯೂ ಕೆಲಸಮಾಡಿದರು. ಹರಿಶ್ಚಂದ್ರ ನು ಶಾಸ್ತ್ರೋಕ್ತವಾಗಿ ಆ ಯಜ್ಞವನ್ನು ಪೂರ್ತಿಗೊಳಿಸಿದಮೇಲೆಯೇ ಅವ ನು ರಾಜರಾಜನೆಂಬ ಬಿರುದಿನಿಂದ ಚಕ್ರವರ್ತಿಪದವಿಯಲ್ಲಿ ಅಭಿಷೇಕಿಸ ಲ್ಪಟ್ಟನು. ಆ ಸಂತೋಷಕಾಲದಲ್ಲಿ ಆ ರಾಜನು ಬ್ರಾಹ್ಮಣರಿಗೆ ಭೂರಿ

ದಕ್ಷಿಣೆಗಳನ್ನು ಕೊಟ್ಟುದಲ್ಲದೆ, ತನ್ನಲ್ಲಿ ಯಾರು ಯಾವುದನ್ನು ಯಾಚಿಸಿದರೂ ಅದಕ್ಕೆ ಐದುಮಡಿ ಹೆಚ್ಚಾಗಿಯೇ ಕೊಟ್ಟು ಅವರನ್ನು ಸಂತೋಷಗೊಳಿಸಿದನು. ಕೊನೆಗೆ ಆ ಯಾಗಾಗ್ನಿಯನ್ನು ಉದ್ವಾಸನಮಾಡುವ ಕಾಲವು ಬಂದಾಗ, ನಾನಾದೇಶದಿಂದ ಬಂದ ಬ್ರಾಹ್ಮಣರಿಗೆಲ್ಲ ಬೇಕಾದಷ್ಟು ಸತ್ಕಾರಗಳನ್ನೂ, ಭಕ್ಷ್ಯಭೋಜ್ಯಾದಿಗಳನ್ನೂ, ಧನಕನಕ ರತ್ನಾದಿಗಳನ್ನೂ ಕೊಟ್ಟು, ಸರ್ವವಿಧದಲ್ಲಿಯೂ ಎಲ್ಲರನ್ನೂ ಸಂತೋಷಗೊಳಿಸಿದನು. ಹೀಗೆ ತೃಪ್ತರಾದ ಬ್ರಾಹ್ಮಣರ ಆಶೀರ್ವಾದಬಲದಿಂದಲೂ, ತನ್ನ ಕರ್ಮಬಲದಿಂದಲೂ, ಅವನು ಪರಾಕ್ರಮದಲ್ಲಿಯೂ, ಯಶಸ್ಸಿನಲ್ಲಿಯೂ, ಎಲ್ಲಾ ರಾಜರಿಗಿಂತಲೂ ಮೇಲೆನಿಸಿದನು. ಓ ಧರ್ಮಪುತ್ರಾ! ಈ ಕಾರಣದಿಂದಲೇ ಹರಿಶ್ಚಂದ್ರನು ಬೇರೆ ಎಲ್ಲಾ ರಾಜರಿಗಿಂತಲೂ ಅತಿಶಯವಾದ ಪದವಿಯಲ್ಲಿ ಬೆಳಗುತ್ತಿರುವನೆಂದು ತಿಳಿ! ಹರಿಶ್ಚಂದ್ರನು ರಾಜಸೂಯ ಮಹಾಯಜ್ಞವನ್ನು ಪೂರ್ತಿಗೊಳಿಸಿ, ಸಾಮ್ರಾಜ್ಯಪದವಿಯಲ್ಲಿ ಅಭಿಷಿಕ್ತನಾಗಿ ಇಂದ್ರನ ಪದವಿಯನ್ನು ಸೇರಿದನಲ್ಲವೆ? ಅದರಂತೆಯೇ ರಾಜಸೂಯಯಾಗವನ್ನು ಮಾಡಿದ ಕ್ಷತ್ರಿಯನು ದೇವೇಂದ್ರನೊಡಗೂಡಿ ಸಂತೋಷಿಸುವನು. ಹಾಗೆಯೇ ಯುದ್ಧದಲ್ಲಿ ಭಯಪಟ್ಟು ಓಡಿಹೋಗದೆ ಶತ್ರುಗಳ ಕೈಯಿಂದ ಮರಣಹೊಂದುವವರೂ, ತೀವ್ರತಪಸ್ಸಿನಲ್ಲಿದ್ದು ದೇಹತ್ಯಾಗವನ್ನು ಮಾಡಿದವರೂ, ಆ ಹರಿಶ್ಚಂದ್ರನಂತೆ ಇಂದ್ರನೊಡಗೂಡಿ ರಮಿಸುವರು. ರಾಜಾ! ಇಂದ್ರಸಾನ್ನಿಧ್ಯದಲ್ಲಿ ಹರಿಶ್ಚಂದ್ರನ ವೈಭವವನ್ನು ನೋಡಿ ನಿನ್ನ ತಂದೆಯಾದ ಪಾಂಡುವೂಕೂಡ ಬಹಳ ಆಶ್ಚರ್ಯಗೊಂಡನು. ಇದಕ್ಕಾಗಿ ಅವನು, ನಾನು ಮನುಷ್ಯಲೋಕಕ್ಕೆ ಬರುವುದನ್ನು ತಿಳಿದು, ನನ್ನಲ್ಲಿಗೆ ಬಂದು ವಿನಯದಿಂದ ನಮಸ್ಕರಿಸಿ, ನೀನು ನನ್ನ ಮಗನಾದ ಯುಧಿಷ್ಠಿರನಿಗೆ ನನ್ನ ಮಾತಿನಿಂದ ಹೀಗೆಂದು ತಿಳಿಸಬೇಕು. ವತ್ಸಾ! ನೀನು ಸಮಸ್ತಭೂಮಿಯನ್ನೂ ಜಯಿಸಬಲ್ಲವನು. ಮಹಾವೀರರಾದ ನಿನ್ನ ಸಹೋದರರು ನಿನ್ನ ಆಜ್ಞಾಧೀನರಾಗಿರುವರು. ಆದುದರಿಂದ ನೀನು ರಾಜಸೂಯವೆಂಬ ಉತ್ತಮಯಾಗವನ್ನು ನಡೆಸು. ನೀನು ಆ ಯಾಗವನ್ನು ನಡೆಸಿದರೆ, ಅದರ ಫಲದಿಂದ ನಾನೂ ಹರಿಶ್ಚಂದ್ರಮಹಾರಾಜನಂತೆ ಇಂದ್ರನ ಸಭೆಯಲ್ಲಿ ಅನೇಕಸಂವತ್ಸರಗಳವರೆಗೆ ಸಂ

ತೋಷಿಸುವೆನು. ನೀನು ಹುಟ್ಟಿದುದಕ್ಕೆ ಈ ಕಾರ್ಯವನ್ನು ನಡೆಸಿ, ನನ್ನನ್ನುದ್ಧರಿಸು" ಎಂದು ನಿನಗೆ ಹೇಳುವಂತೆ ನನ್ನನ್ನು ಕೇಳಿಕೊಂಡನು. ನಾನು ಹಾಗೆಯೇ ಆಗಲೆಂದು ನಿನ್ನ ತಂದೆಗೆ ಮಾತುಕೊಟ್ಟು ಬಂದೆನು. ಓ ಪುರುಷಶ್ರೇಷ್ಠಾ! ನೀನು ನಿನ್ನ ತಂದೆಯ ಸಂಕಲ್ಪವನ್ನು ನೆರವೇರಿಸು. ಅದರಿಂದ ನಿನ್ನ ಪೂರ್ವಿಕರಿಗೂ, ನಿನಗೂ ಇಂದ್ರಸಾಲೋಕ್ಯವು ಲಭಿಸುವುದು. ನಿನ್ನ ಪೂರ್ವಿಕರೊಡನೆ ನೀನೂ ಪರಲೋಕದಲ್ಲಿ ಒಂದಾಗಿರಬಹುದು. ಆದರೆ, ಧರ್ಮಪುತ್ರಾ! ಈ ಮಹಾಯಜ್ಞಕ್ಕೆ ವಿಘ್ನಗಳುಂಟಾಗುವುದು ಹೆಚ್ಚು! ಯಜ್ಞವಿಘಾತಿಗಳಾದ ಬ್ರಹ್ಮರಾಕ್ಷಸರು ಅದರಲ್ಲಿ ಹುಳುಕನ್ನೇ ಹುಡುಕುತ್ತಿರುವರು. ಸ್ವಲ್ಪ ದೋಷವುಂಟಾದರೂ ಅದರಿಂದ ಯಜ್ಞವು ಕೆಡುವುದಲ್ಲದೆ ಅನರ್ಥಕ್ಕೂ ಕಾರಣವಾಗುವುದು. ಈ ಯಾಗಕಾಲದಲ್ಲಿ ಯಾವುದಾದರೂ ಒಂದು ನೆವದಿಂದ ಕ್ಷತ್ರಿಯರಲ್ಲಿ ಲೋಕಕ್ಷಯಕಾರಣವಾದ ದೊಡ್ಡ ಯುದ್ಧವುಂಟಾಗಿ, ಕ್ಷತ್ರಿಯರಿಗೆ ನಾಶವುಂಟಾಗಬಹುದು. ಆದುದರಿಂದ ಇವನ್ನೆಲ್ಲ ನೀನು ಆಲೋಚಿಸಿ, ಎಚ್ಚರಿಕೆಯಿಂದ ಹೇಗೆ ನಡೆಸಬೇಕೋ ಹಾಗೆ ನಡೆಸು. ಬ್ರಾಹ್ಮಣಾದಿ ಚತುರ್ವರ್ಣಗಳ ಧರ್ಮಗಳನ್ನು ಕಾಪಾಡುವುದರಲ್ಲಿ ನೀನು ಬಹಳ ಎಚ್ಚರಗೊಂಡಿರು. ನೀನು ರಾಜ್ಯದಲ್ಲಿ ಸ್ಥಿರವಾಗಿದ್ದು, ಉತ್ತರೋತ್ತರಾಭಿವೃದ್ಧಿಯಿಂದ ಸಂತೋಷಹೊಂದು. ಬ್ರಾಹ್ಮಣರನ್ನು ದಾನದಿಂದ ತೃಪ್ತಿಗೊಳಿಸು. ನೀನಾಗಿ ಪ್ರಶ್ನೆಮಾಡಿದುದರಿಂದ ನಿನಗೆ ನಾನು ಇಷ್ಟು ವಿವರಗಳನ್ನು ತಿಳಿಸಬೇಕಾಯಿತು. ಇನ್ನು ನಾನು ಹೊರಡುವೆನು. ನನಗೆ ಅನುಮತಿಯನ್ನು ಕೊಡು ಶ್ರೀಕೃಷ್ಣನ ಪಟ್ಟಣವಾದ ದ್ವಾರಕಾನಗರಿಗೆ ನಾನು ಹೋಗಬೇಕಾಗಿದೆ" ಎಂದನು.

ಓ ಜನಮೇಜಯರಾಜಾ! ನಾರದಮುನಿಯು ಪಾಂಡವರಮುಂದೆ ಈ ಮಾತನ್ನು ಹೇಳಿ, ತನ್ನೊಡನೆ ಬಂದಿದ್ದ ಇತರ ಮಹರ್ಷಿಗಳೊಡನೆ ಅಲ್ಲಿಂದ ಹಿಂತಿರುಗಿದನು. ನಾರದನು ಹೊರಟುಹೋದಮೇಲೆ ಇತ್ತಲಾಗಿ ಧರ್ಮರಾಜನು ತನ್ನ ತಮ್ಮಂದಿರೊಡನೆ ಕಲೆತು ಮುಂದೆ ರಾಜಸೂಯವೆಂಬ ಮಹಾಯಾಗವನ್ನು ನಡೆಸುವುದಕ್ಕಾಗಿ ಯೋಚಿಸುತಿದ್ದನು.

ಇದು ಹನ್ನೆರಡನೆಯ ಅಧ್ಯಾಯವು.

ಧರ್ಮರಾಜನು ರಾಜಸೂಯಯಾಗವನ್ನು ನಡೆಸುವುದಕ್ಕೆ ನಿಶ್ಚಯಿಸಿ ದೂತರಮೂಲಕವಾಗಿ ಕೃಷ್ಣನನ್ನು ಕರೆಯಿಸಿ, ತನ್ನ ಉದ್ದೇಶವನ್ನು ಕೃಷ್ಣನಿಗೆ ತಿಳಿಸಿದುದು.

ನಾರದನು ರಾಜಸೂಯವೃತ್ತಾಂತವನ್ನು ಹೇಳಿಹೋದಮೇಲೆ, ಧರ್ಮರಾಜನಿಗೆ ಅದೇ ಚಿಂತೆಯು ಪ್ರಬಲವಾಯಿತು. ದೊಡ್ಡದಾಗಿ ನಿಟ್ಟುಸಿರನ್ನು ಬಿಡುತಿದ್ದನು. ಅವನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಮಹಾತ್ಮರಾದ ಪುರಾತನ ರಾಜರ್ಷಿಗಳ ಪ್ರಭಾವವನ್ನೂ, ಯಾಗಮಾಡಿದವರಿಗೆ ದೊರೆಯುಬಹುದಾದ ಉತ್ತಮಲೋಕಗಳನ್ನೂ, ಅದರಲ್ಲಿಯೂ ವಿಶೇಷವಾಗಿ ಹರಿಶ್ಚಂದ್ರನಿಗೆ ಲಭಿಸಿದ ಅಸಾಧಾರಣಪದವಿಯನ್ನೂ ಕೇಳಿ ಯುಧಿಷ್ಠಿರನಿಗೆ, ಹೇಗಾದರೂ ಆ ದೊಡ್ಡ ಕಾರ್ಯವನ್ನು ನಡೆಸಿಯೇ ತೀರಬೇಕೆಂಬ ಸಂಕಲ್ಪವು ಹುಟ್ಟಿತು. ಆ ವಿಚಾರವನ್ನು ಕುರಿತು ಆಲೋಚಿಸುವುದಕ್ಕಾಗಿ ತನ್ನ ಸಭಾಸದರೆಲ್ಲರನ್ನೂ ಕರೆಸಿದನು. ಅವರೆಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿ, ಅವರಿಂದ ತಾನೂ ಪ್ರತಿಸತ್ಕಾರಗಳನ್ನು ಹೊಂದಿ, ಅವರೊಡನೆ ಆಲೋಚಿಸಿ, ಕೊನೆಗೆ ರಾಜಸೂಯವನ್ನು ನಡೆಸುವುದಾಗಿಯೇ ನಿಶ್ಚಯಿಸಿಕೊಂಡನು. ಧರ್ಮರಾಜನಾದರೋ ಅದ್ಭುತವಾದ ಬಲಪರಾಕ್ರಮವುಳ್ಳವನು. ಆದರೂ ಕೇವಲಧರ್ಮಚಿಂತೆಯಲ್ಲಿಯೇ ಇರತಕ್ಕವನು. ಲೋಕಕ್ಕೆಲ್ಲ ಯಾವುದು ಹಿತವೋ ಅದನ್ನೇ ಆದರಿಸತಕ್ಕವನು. ಸಮುಸ್ತ ಧರ್ಮಗಳನ್ನೂ ಬಲ್ಲ ಆ ಧರ್ಮರಾಜನು, ಎಲ್ಲಾ ಪ್ರಜೆಗಳನ್ನೂ ಸಮಭಾವದಿಂದ ಆದರಿಸುತ್ತ, ಎಲ್ಲರಿಗೂ ಹಿತವನ್ನೇ ಮಾಡುತಿದ್ದನು. ಅವನಿಗೆ ಕೋಪವಾಗಲಿ, ಹೆಮ್ಮೆಯಾಗಲಿ ಲವಮಾತ್ರವೂ ಇರಲಿಲ್ಲ. "ಅವರವರಿಗೆ ನ್ಯಾಯವಾಗಿ ಸೇರಬೇಕಾದುದೆಲ್ಲ ಲೋಪವಿಲ್ಲದೆ ಸೇರಲಿ! ಧರ್ಮಕ್ಕೆ ಜಯವಿರಲಿ!" ಎಂಬ ಮಾತುಗಳು ಹೊರತು, ಅವನ ರಾಜ್ಯದಲ್ಲಿ ಬೇರೆ ಮಾತುಗಳೇ ಕಿವಿಗೆ ಬೀಳುತ್ತಿರಲಿಲ್ಲ. ಹೀಗೆ ಆ ಧರ್ಮರಾಜನು ಎಲ್ಲಾ ಪ್ರಜೆಗಳನ್ನೂ ಪುತ್ರವಾತ್ಸಲ್ಯದಿಂದ ಪೋಷಿಸುತ್ತಿರಲು, ಪ್ರಜೆಗಳೆಲ್ಲರೂ ಅವನನ್ನು ತಂದೆಯಂತೆ ಪ್ರೀತಿಸುತಿದ್ದರು. ಲೋಕದಲ್ಲಿ ಅವನನ್ನು ದ್ವೇಷಿಸತಕ್ಕವನು ಒಬ್ಬನಾದರೂ ಇರಲಿಲ್ಲ. ಇದರಿಂದ ಅವನಿಗೆ ಅಜಾತಶತ್ರುವೆಂಬ ಹೆಸರುಂಟಾಯಿತು. ಧರ್ಮರಾಜನು ಪ್ರಜೆಗಳನ್ನೆಲ್ಲ

ಪುತ್ರವಾತ್ಸಲ್ಯದಿಂದ ಆದರಿಸುವನು. ಭೀಮನು ನ್ಯಾಯದಿಂದ ರಾಜ್ಯ ಪರಿಪಾಲನ ಕಾರ್ಯವನ್ನು ನಡೆಸುವನು. ಅರ್ಜುನನು ಶತ್ರುಗಳನ್ನೆಲ್ಲಾ ಅಡಗಿಸಿ, ದೇಶಕ್ಕೂ, ಪ್ರಜೆಗಳಿಗೂ ಅಪಾಯವಿಲ್ಲದಂತೆ ಕಾಪಾಡುವನು. ನಕುಲನು ಕಪ್ಪಕಾಣಿಕೆಗಳನ್ನೆಲ್ಲಾ ಕ್ರಮವಾಗಿ ಬರಮಾಡುತ್ತ, ಸ್ವಭಾವ ದಿಂದಲೇ ಎಲ್ಲರಲ್ಲಿಯೂ ವಿನೀತನಾಗಿ, ಸಲಿಗೆಯಿಂದ ನಡೆದುಕೊಳ್ಳುವನು. ಮಹಾಧೀಮಂತನಾದ ಸಹದೇವನು ಪ್ರಜೆಗಳನ್ನು ನೀತಿಧರ್ಮಗಳಲ್ಲಿ ನಡೆ ಸುತ್ತಿರುವನು. ಹೀಗೆ ಐದುಮಂದಿ ಪಾಂಡವರೂ ತಮ್ಮೊಳಗೆ ಬೇರೆಬೇರೆ ಕಾರ್ಯಗಳನ್ನು ಹಂಚಿಕೊಂಡು, ದೇಶಪರಿಪಾಲನವನ್ನು ನಡೆಸುತ್ತಿದ್ದುದ ರಿಂದ, ಜನರಲ್ಲಿ ಅನ್ಯೋನ್ಯ ಕಲಹವಾಗಲಿ, ಶತ್ರುಚೋರಾದಿ ಭೀತಿಗಳಾ ಗಲಿ ಇಲ್ಲದೆ, ಜನರೆಲ್ಲರೂ ತಮ್ಮತಮ್ಮ ಕರ್ಮಗಳಲ್ಲಿ ನಿರತರಾಗಿದ್ದರು. ಸಮೃದ್ಧಿಯಾಗ ಮಳೆಸುರಿದು, ದೇಶವೆಲ್ಲಾ ಧನಧಾನ್ಯಸಮೃದ್ಧಿಯುಳ್ಳು ದಾಗಿತ್ತು. ಹಣವನ್ನು ಬಡ್ಡಿಗೆ ಕೊಟ್ಟು ತೆಗೆಯುವುದು, ಯಜ್ಞಕಾರ್ಯ ಗಳು, ಗೋರಕ್ಷಣೆ, ಕೃಷಿ, ವಾಣಿಜ್ಯ ಮೊದಲಾದುವುಗಳೆಲ್ಲ ಆ ಪಾಂಡ ವರ ಧರ್ಮಪರಿಪಾಲನದಿಂದ ಬಹಳ ತೃಪ್ತಿಕರವಾಗಿ ನಡೆಯುತಿದ್ದಿತು. ಪ್ರಜೆಗಳು ರಾಜನಿಗೆ ಕೊಡಬೇಕಾದ ಆಯಾ ವರ್ಷದ ತೆರಿಗೆಗಳನ್ನು ಸಲ್ಲಿ ಸಲಾರದೆ ಸಾಲವಾಗಿ ನಿಲ್ಲಿಸಿಕೊಳ್ಳುವುದಾಗಲಿ, ಬಲಾತ್ಕರಿಸಿ ಪ್ರಜೆಗಳಿಂದ ತೆರಿಗೆಗಳನ್ನು ತೆಗೆಯುವುದಾಗಲಿ, ರೋಗಭಯ, ಅಗ್ನಿಭಯಾದಿಗಳಾಗಲಿ, ಯಾವುದೂ ಇಲ್ಲದೆ, ಆ ಯುಧಿಷ್ಠಿರನ ಧರ್ಮಪರಿಪಾಲನದಿಂದ ರಾಜ್ಯ ವೆಲ್ಲವೂ ಯಾವಾಗಲೂ ಸುಖಮಯವಾಗಿದ್ದಿರು. ಆ ರಾಜ್ಯದಲ್ಲಿ ಕಳ್ಳ ರಿಂದಾಗಲಿ, ಮೋಸಗಾರರಿಂದಾಗಲಿ, ರಾಜರಲ್ಲಿ ಅನ್ಯೋನ್ಯಮನಸ್ತಾಪ ದಿಂದಾಗಲಿ, ರಾಜನ ಕಡೆಯ ಅಧಿಕಾರಿಗಳಿಂದಾಗಲಿ ಯಾರಿಗೂ ಯಾವ ತೊಂದರೆಯೂ ಇದ್ದುದಾಗಿ ಕಿವಿಗೆ ಬೀಳುತ್ತಿರಲಿಲ್ಲ. ಧರ್ಮರಾಜನ ಸಂಧಿ, ವಿಗ್ರಹ, ಮೊದಲಾದ ಷಡ್ಗುಣಗಳಿಂದ ಪರಾಜಿತರಾದ ಅನೇಕ ಸಾಮಂತರಾಜರು, ಧರ್ಮರಾಜನಿಗೆ ಪ್ರಿಯವನ್ನುಂಟುಮಾಡುವುದಕ್ಕೂ, ಅವನ ಸೇವೆಗೂ ಸಿದ್ಧರಾಗಿ, ತಮ್ಮತಮ್ಮ ಕಪ್ಪವನ್ನು ಸಲಿಸಬೇಕೆಂದು ನಾ ನಾಬಗೆಯ ವರ್ತಕರ ಗುಂಪಿನನಡುವೆ ತಾವೂ ಕಪ್ಪಕಾಣಿಕೆಗಳನ್ನು ಕೈಯ ಲ್ಲಿ ಹಿಡಿದು ಬಾಗಿಲಲ್ಲಿ ಕಾದಿರುವರು. ಧರ್ಮದಲ್ಲಿಯೇ ನೆಲೆಗೊಂಡ ಯು

ಧಿಷ್ಠಿರನ ರಾಜ್ಯವು ಪುರೋವೃದ್ಧಿಯನ್ನು ಹೊಂದುತ್ತಿತ್ತು. ಕಾಮಲೋಭಗಳಿಗೆ ವಶರಾಗಿ, ಸಿಕ್ಕಿದಹಾಗೆ ವೆಚ್ಚಮಾಡತಕ್ಕ ದುಂದುಗಾರರಿಂದಕೂಡ, ಆ ದೇಶದ ಸಂಪತ್ತಿಗೆ ಕುಂದುಕೊರತೆಯಿಲ್ಲದೆ ಅದರ ಐಶ್ವರ್ಯವು ಮೇಲೆಮೇಲೆ ಅಭಿವೃದ್ಧಿಹೊಂದುತಿದ್ದಿತು. ರಾಜಾಧಿರಾಜನೆನಿಸಿದ ಆ ಯುಧಿಷ್ಠಿರನಾದರೋ ತಾನೇ ಚೆನ್ನಾಗಿ ಒಳಹೊಕ್ಕು ಎಲ್ಲವನ್ನೂ ಪರಿಶೀಲಿಸತಕ್ಕವನು ಎಲ್ಲಾ ಗುಣಗಳಿಂದ ತುಂಬಿದವನು. ಎಲ್ಲವನ್ನೂ ತಾಳ್ಮೆಯಿಂದ ಸಹಿಸಬಲ್ಲವನು. ಎಲ್ಲಕ್ಕೂ ಮುಖ್ಯ ಪ್ರಭುವೆನಿಸಿದವನು. ಮಹಾಯಶಸ್ವಿಯಾದ ಅಂತಹ ಯುಧಿಷ್ಠಿರನ ಆಳ್ವಿಕೆಗೊಳವಟ್ಟ ಆ ದೇಶದಲ್ಲಿ, ಗೊಲ್ಲರು ಮೊದಲುಗೊಂಡು ಬ್ರಾಹ್ಮಣರವರೆಗೆ ಎಲ್ಲಾ ಪ್ರಜೆಗಳೂ, ತಮ್ಮ ರಾಜನನ್ನು ತಮ್ಮ ತಾಯಿತಂದೆಗಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರು.

ಇಂತಹ ಧರ್ಮರಾಜನು, ಮಂತ್ರಿಗಳನ್ನೂ, ಸಹೋದರರನ್ನೂ ಕರೆಸಿಕೊಂಡು, ರಾಜಸೂಯಯಾಗವನ್ನು ಕುರಿತು ಅವರನ್ನು ಬಾರಿಬಾರಿಗೂ ಪ್ರಶ್ನೆಮಾಡಿದನು. ಆಗ ಆ ಮಂತ್ರಿಗಳೆಲ್ಲರೂ ಏಕವಾಕ್ಯದಿಂದ ಹೀಗೆಂದು ಹೇಳುವರು. “ಓ ರಾಜೇಂದ್ರಾ! ರಾಜಸೂಯಯಾಗದಿಂದ ಅಭಿಷೇಕಿಸಲ್ಪಟ್ಟವನು, ವರುಣನಂತೆ ಉತ್ತಮಪದವಿಯಲ್ಲಿ ಬೆಳಗುವನು ರಾಜನಾದವನು ಅಂತಹ ಯಾಗದಿಂದ ಪೂರ್ಣವಾದ ಸಾಮ್ರಾಜ್ಯಪದವಿಯನ್ನು ಅಪೇಕ್ಷಿಸುವುದೂ ನ್ಯಾಯವೇ. ಅಂತಹ ಪದವಿಗೆ ಯೋಗ್ಯವಾದ ಗುಣಗಣಗಳಿಂದ ಕೂಡಿದ ನೀನು, ರಾಜಸೂಯವನ್ನು ನಡೆಸುವುದಕ್ಕೆ ಇದು ತಕ್ಕ ಸಮಯವೆಂದೇ ನಿನ್ನ ಮಿತ್ರರೆಲ್ಲರ ಅಭಿಪ್ರಾಯವು. ಅದರಲ್ಲಿ ವ್ರತನಿಷ್ಠರಾದ ಋತ್ವಿಕ್ಕುಗಳು ಸಾಮಮಂತ್ರಪೂರ್ವಕವಾಗಿ ಆರು ಅಗ್ನಿಗಳನ್ನು ಪ್ರತಿಷ್ಠಿಸಿ, ಹೋಮಕಾರ್ಯವನ್ನು ನಡೆಸುವರು. ಎಣೆಯಿಲ್ಲದ ಕ್ಷತ್ರಿಯ ಸಂಪತ್ತುಳ್ಳ ನಿನಗೆ, ಅಂತಹ ಮಹಾಯಾಗವನ್ನು ಮಾಡುವುದಕ್ಕೆ ಇದೇ ಸಕಾಲವೆಂದು ತಿಳಿ. ನೀನು ಯೋಚಿಸಿದಾಗಲೇ ಆ ಕಾರ್ಯವನ್ನು ನಡೆಸಬಹುದು. ಅದಕ್ಕಾಗಿ ನಿನಗೆ ಸಮಯನಿರೀಕ್ಷಣೆಯೇ ಬೇಕಾದುದಿಲ್ಲ. ಈ ಯಾಗವು ನಿರ್ವಿಘ್ನವಾಗಿ ಮುಗಿದಮೇಲೆ, ಕೊನೆಗೆ ಸಾಮ್ರಾಜ್ಯಾಭಿಷೇಕವನ್ನು ಹೊಂದುವ ರಾಜನಿಗೆ, ಎಲ್ಲಾ ಯಾಗಗಳಿಂದುಂಟಾಗುವ ಫಲ

ವೂ ಲಭಿಸುವುದು. ಆ ಯಾಗಕ್ಕೆ ಅಂಗಗಳಾದ ದರ್ವೀಹೋಮಾದಿಕಾರ್ಯಗಳನ್ನೆಲ್ಲ ಮುಗಿಸಿದಮೇಲೆ, ಆ ರಾಜನು **'ಸರ್ವಜಿತ್'** ಎಂದರೆ ಎಲ್ಲವನ್ನೂ ಜಯಿಸಿದವನೆಂಬ ಬಿರುದಿಗೆ ಪಾತ್ರನಾಗುವನು. ಓ ರಾಜೇಂದ್ರಾ! ಇನ್ನು ನಿನಗೆ ಚಿಂತೆಯೇಕೆ? ನಿನಗೂ ಯಾಗಮಾಡುವುದಕ್ಕೆ ಸಾಮರ್ಥ್ಯವುಂಟು. ನಾವೆಲ್ಲರೂ ನಿನ್ನ ಆಜ್ಞಾಧೀನರಾಗಿ ನಡೆಯಲು ಸಿದ್ಧರಾಗಿರುವೆವು. ಆ ಯಾಗವನ್ನು ನೀನು ಬಹುಶೀಘ್ರದಲ್ಲಿ ಮುಗಿಸುವೆ. ಇನ್ನು ವಿಚಾರವಿಲ್ಲದೆ ಯಾಗವನ್ನಾರಂಭಿಸುವುದಕ್ಕೆ ಯತ್ನಿಸು" ಎಂದರು. ಹೀಗೆ ಧರ್ಮರಾಜನ ಮಂತ್ರಿಗಳೂ, ಇಷ್ಟಜನರೂ, ಬೇರೆಬೇರೆಯಾಗಿಯೂ, ಒಟ್ಟಾಗಿಯೂ ಆ ಕಾರ್ಯಕ್ಕೆ ಪ್ರೋತ್ಸಾಹವನ್ನು ಕೊಟ್ಟರು. ಹೀಗೆ ತನ್ನ ಮಂತ್ರಿಗಳು ಸಾರವತ್ತಾಗಿಯೂ, ನಿಸ್ಸಂಕೋಚವಾಗಿಯೂ, ಹಿತವಾಗಿ ವಾಗಿಯೂ ಹೇಳಿದ ಮಾತನ್ನು ಕೇಳಿ ಧರ್ಮರಾಜನು, ತನ್ನ ಮನಸ್ಸಿನಲ್ಲಿಯೇ ಅವುಗಳನ್ನೆಲ್ಲ ಆಮೋದಿಸಿ, ತನ್ನ ಸಾಮರ್ಥ್ಯವನ್ನೂ ಪರಿಶೀಲಿಸಿ, ತನ್ನಲ್ಲಿಯೂ ತಾನು ಉಚಿತರೀತಿಯನ್ನು ಆಲೋಚಿಸಿ, ಕೊನೆಗೆ ಆ ಯಾಗವನ್ನು ನಡೆಸಬೇಕೆಂದೇ ಮನಸ್ಸಿನಲ್ಲಿ ನಿರ್ಧರಿಸಿಕೊಂಡನು. ಆಮೇಲೆ ಆ ಯುಧಿಷ್ಠಿರನು, ತಿರುಗಿ ತನ್ನ ನಾಲ್ಕುಮಂದಿ ಸಹೋದರರನ್ನೂ, ಸಮರ್ಥರಾದ ಋತ್ವಿಕ್ಕುಗಳನ್ನೂ, ಮಂತ್ರಿಗಳನ್ನೂ, ಪುರೋಹಿತರಾದ ಧೌಮ್ಯರನ್ನೂ, ವ್ಯಾಸಮಹರ್ಷಿಯನ್ನೂ ಕರೆಸಿಕೊಂಡು ಅವರೊಡನೆ ಆಲೋಚಿಸಿದನು. ವಿರಾಟದ್ರುಪದರು, ಸಾತ್ಯಕಿ, ಯುಧಾಮನ್ಯು, ಉತ್ತಮೌಜಸ್ಸು, ಅಭಿಮನ್ಯು, ಉಪಪಾಂಡವರು ಎಲ್ಲರನ್ನೂ ಕರೆಸಿಕೊಂಡನು. ಹೀಗೆ ಅವರೆಲ್ಲರನ್ನೂ ಸೇರಿಸಿಕೊಂಡು ಧರ್ಮರಾಜನು "ಎಲೈ ಪ್ರಿಯಬಂಧುಗಳೇ! ರಾಜಸೂಯವೆಂಬ ಮಹಾಯಾಗವನ್ನು ನಡೆಸಬೇಕೆಂದು ಉದ್ದೇಶವಿದೆ. ಈ ಉದ್ದೇಶವು ಹೇಗೆ ಫಲಕಾರಿಯಾಗುವುದೋ ಆ ಮಾರ್ಗವನ್ನು ನೀವು ತಿಳಿಸಬೇಕು. ಚಕ್ರವರ್ತಿಗಳಿಗೆ ಯೋಗ್ಯವಾದ ಆ ಮಹಾಯಾಗದಲ್ಲಿ ಅಪೇಕ್ಷೆಯುಳ್ಳ ನನಗೆ ನೀವು ತಕ್ಕ ದಾರಿಯನ್ನು ತೋರಿಸಬೇಕು" ಎಂದನು. ಆಗ ಅವರೆಲ್ಲರೂ ಏಕವಾಕ್ಯದಿಂದ "ಓ ಮಹಾರಾಜಾ! ಇದಕ್ಕೆ ನೀನು ಯೋಚಿಸಬೇಕಾದುದೇನು? ಧರ್ಮಜ್ಞನಾದ ನೀನು ರಾಜಸೂಯವೆಂಬ

ಮಹಾಯಾಗವನ್ನು ಮಾಡುವುದಕ್ಕೆ ಅರ್ಹನಾಗಿರುವೆ" ಎಂದರು. ಮಹರ್ಷಿಗಳೂ, ಋತ್ವಿಕ್ಕುಗಳೂ ಈ ಮಾತನ್ನು ಹೇಳಲು, ಎಲ್ಲಾ ಸಹೋದರರೂ, ಮಂತ್ರಿಗಳೂ ಅದನ್ನು ಏಕವಾಕ್ಯದಿಂದ ಅನುಮೋದಿಸಿದರು. ಹಾಗಿದ್ದರೂ ಧರ್ಮರಾಜನು ಬಹಳ ಪ್ರಾಜ್ಞನಾದುದರಿಂದ, ಲೋಕಹಿತವನ್ನುದ್ದೇಶಿಸಿ, ಆ ಯಾಗವನ್ನು ಆರಂಭಿಸುವುದರಲ್ಲಿರುವ ಗುಣಾವಗುಣಗಳನ್ನು ತನ್ನಲ್ಲಿ ತಾನೇ ದೂರದೃಷ್ಟಿಯಿಂದ ಆಲೋಚಿಸಿದನು. ಆಗ ಅವನು ತನ್ನ ಮನಸ್ಸಿನಲ್ಲಿ "ಲೋಕದಲ್ಲಿ ತನ್ನ ಶಕ್ತಿಯನ್ನೂ, ದೇಶಕಾಲಗಳನ್ನೂ, ತನ್ನ ಆದಾಯವ್ಯಯಗಳನ್ನೂ ಚೆನ್ನಾಗಿ ವಿಮರ್ಶಿಸಿ ಕಾರ್ಯವನ್ನಾರಂಭಿಸುವುದೇ ಬುದ್ಧಿಮಂತನ ಲಕ್ಷಣವು. ಅಂಥವನು ಎಂದಿಗೂ ವ್ಯಸನಕ್ಕೀಡಾಗನು. ಆದರೆ ತನ್ನ ಯೋಚನೆಯನ್ನು ಮಾತ್ರವೇ ನಂಬಿಕೊಂಡು, ಇಂತಹ ದೊಡ್ಡ ಕಾರ್ಯವನ್ನಾರಂಭಿಸುವುದೂ ಅನುಚಿತವು" ಎಂದು ಯೋಚಿಸಿ 'ಈ ಕಾರ್ಯನಿಶ್ಚಯವನ್ನು ಮಾಡುವುದಕ್ಕೆ ಮೊದಲು ಶ್ರೀಕೃಷ್ಣನೊಡನೆ ಆಲೋಚಿಸಿ ಅವನ ಅಭಿಪ್ರಾಯವನ್ನು ತಿಳಿಯಬೇಕೆ'ಂದು ನಿಶ್ಚಯಿಸಿದನು. ಸಮಸ್ತ ಲೋಕಗಳಿಗೂ ಮೇಲೆನಿಸಿದವನೂ, ಅಪ್ರಮೇಯಸ್ವಭಾವವುಳ್ಳವನೂ, ಮಹಾಬಾಹುವೂ, ಜನ್ಮರಹಿತನೂ, ಸ್ವೇಚ್ಛೆಯಿಂದಲೇ ಜನ್ಮವೆತ್ತಿದವನೂ ಆದ ಆ ಭಗವಂತನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ "ಆ ಭಗವಂತನಿಗೆ ತಿಳಿಯದುದೊಂದಿಲ್ಲ! ಅವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ! ಅವನು ಅಕ್ರಮವಾದ ಕಾರ್ಯವೊಂದನ್ನೂ ಸಹಿಸುವವನಲ್ಲ! ಆದುದರಿಂದ ಅವನಲ್ಲಿ ವಿಚಾರಮಾಡದೆ ಈ ಕಾರ್ಯವನ್ನಾರಂಭಿಸಬಾರದು" ಎಂದು ನಿಶ್ಚಯಿಸಿಕೊಂಡು ತನ್ನ ಗುರುವಿನ ಬಳಿಗೆ ಹೇಗೋಹಾಗೆ, ಸರ್ವಲೋಕಜನಕನಾದ ಶ್ರೀಕೃಷ್ಣನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು. ಆ ದೂತನು ಒಡನೆಯೇ ಮಹಾವೇಗವುಳ್ಳ ಒಂದು ರಥವನ್ನೇರಿ ದ್ವಾರಕೆಯಲ್ಲಿದ್ದ ಕೃಷ್ಣನನ್ನು ಕಂಡು ಕೈಜೋಡಿಸಿ ನಿಂತು, "ವಾಸುದೇವಾ! ನಮ್ಮ ರಾಜನಾದ ಯುಧಿಷ್ಠಿರನು ತನ್ನ ಎಲ್ಲಾ ಸಹೋದರರೊಡನೆಯೂ, ವ್ಯಾಸ, ಧೌಮ್ಯ, ವಿರಾಟ, ದ್ರುಪದಾದಿಗಳೊಡನೆಯೂ ನಿನ್ನ ದರ್ಶನಕ್ಕಾಗಿ ನಿರೀಕ್ಷಿಸುತ್ತಿರುವನು" ಎಂದನು.

ಓ ಜನಮೇಜಯರಾಜಾ! ಇಂದ್ರಸೇನನೆಂಬ ಆ ದೂತನು ಈ ಮಾತನ್ನು ತಿಳಿಸಿದೊಡನೆ, ಕೃಷ್ಣನು ತನ್ನ ದರ್ಶನಕ್ಕಾಗಿ ನಿರೀಕ್ಷಿಸುತ್ತಿರುವ ಧರ್ಮರಾಜನನ್ನು ಕಾಣಲು, ಅವನಿಗಿಂತಲೂ ಹೆಚ್ಚು ಆತುರವುಳ್ಳವನಾಗಿ ಪ್ರಯಾಣಕ್ಕೆ ಸಿದ್ಧನಾದನು. ತನ್ನ ಪ್ರಯಾಣವೃತ್ತಾಂತವನ್ನು ತಂದೆಯಾದ ವಸುದೇವನಿಗೂ, ತನ್ನ ಮಿತ್ರರಿಗೂ ತಿಳಿಸಿ, ಅವರ ಅನುಮತಿಯನ್ನು ಪಡೆದು ಆ ದೂತನೊಡನೆಯೇ ರಥವನ್ನೇರಿ ಅನೇಕ ದೇಶಗಳನ್ನು ದಾಟಿ ಇಂದ್ರಪ್ರಸ್ಥದಲ್ಲಿ ಧರ್ಮರಾಜನ ಬಳಿಗೆ ಬಂದನು. ಕೃಷ್ಣನನ್ನು ಕಂಡೊಡನೆ ಧರ್ಮರಾಜನೂ, ಭೀಮನೂ ತಂದೆಯಂತೆ ಅವನನ್ನು ಪೂಜಿಸಲು, ಕೃಷ್ಣನು ಅವರನ್ನು ಸಹೋದರಪ್ರೀತಿಯಿಂದ ಆದರಿಸಿ, ಅಲ್ಲಿಂದ ಹೊರಟು ಅತ್ತೆಯಾದ ಕುಂತಿಯನ್ನು ಕಂಡನು. ಆಮೇಲೆ ಅರ್ಜುನನನ್ನು ಕಂಡು, ತನಗೆ ಪರಮಾಪ್ತನಾದ ಅವನೊಡನೆ ಸಂತೋಷದಿಂದ ಸ್ವಲ್ಪ ಹೊತ್ತು ವಿನೋದಿಸಿದನು. ನಕುಲಸಹದೇವರು ಅವನನ್ನು ಆಚಾರ್ಯನಂತೆ ಭಾವಿಸಿ ಪೂಜಿಸಿದರು. ಹೀಗೆ ಕೃಷ್ಣನು ಎಲ್ಲರನ್ನೂ ಕಂಡುಬಂದು ಉಚಿತಾಸನದಲ್ಲಿ ಕುಳಿತು ವಿಶ್ರಾಂತಿಯನ್ನು ತೆಗೆದುಕೊಂಡಮೇಲೆ, ತಕ್ಕ ಸಮಯವನ್ನು ನೋಡಿ ಧರ್ಮರಾಜನು ಅವನಲ್ಲಿಗೆ ಬಂದು ತನ್ನ ಉದ್ದೇಶವನ್ನು ಹೀಗೆಂದು ತಿಳಿಸಿದನು. “ಕೃಷ್ಣಾ! ಈಗ ನಾನು ರಾಜಸೂಯವೆಂಬ ಯಾಗವನ್ನು ನಡೆಸಬೇಕೆಂದು ಕೋರುವೆನು. ಆದರೆ, ಅದು ಬರೀ ಇಚ್ಛಾಮಾತ್ರದಿಂದಲೇ ನಡೆಯತಕ್ಕ ಕಾರ್ಯವಲ್ಲ. ಕಾರ್ಯವು ಹೇಗೆ ನಡೆಯಬೇಕೋ ಅದನ್ನು ನೀನು ಬಲ್ಲೆ. ಯಾವನಿಗೆ ಎಲ್ಲವೂ ಸಾಧ್ಯವೋ, ಯಾವನು ಎಲ್ಲರಲ್ಲಿಯೂ ಪೂಜಿಸಲ್ಪಡುವನೋ, ಯಾವನು ರಾಜರಿಗೆಲ್ಲ ರಾಜನಾಗಿ ಸರ್ವೇಶ್ವರನೆನಿಸಿಕೊಂಡಿರುವನೋ, ಅಂತಹ ರಾಜನೇ ರಾಜಸೂಯಯಾಗವನ್ನು ನಡೆಸುವುದಕ್ಕೆ ಅರ್ಹನು. ಅಂತಹ ಮಹಾಯಾಗವನ್ನು ನಡೆಸುವುದು ಈಗ ನನಗೆ ಸಾಧ್ಯವೆಂದು ಈ ನನ್ನ ಮಿತ್ರರೆಲ್ಲರೂ ನನ್ನನ್ನು ಪ್ರೋತ್ಸಾಹಿಸುತ್ತಿರುವರು. ಕೃಷ್ಣಾ! ಈ ವಿಷಯದಲ್ಲಿ ನನಗೆ ದೃಢನಿಶ್ಚಯವುಂಟಾಗಬೇಕಾದರೆ ನಿನ್ನ ಮಾತಿನಿಂದಲೇ ಉಂಟಾಗಬೇಕು.' ಮಂತ್ರಿಗಳಲ್ಲಿ ಕೆಲವರು ಕೇವಲಸ್ನೇಹಭಾವದಿಂದಲೇ ಮಾತಾಡುತ್ತ, ಮುಂದಿನ ಕಷ್ಟಗಳನ್ನು ಯೋಚಿಸಿನೋಡ

ಲಾರರು. ಬೇರೆ ಕೆಲವರು ತಮ್ಮ ಪ್ರಯೋಜನವನ್ನು ದೃಷ್ಟಿಯಲ್ಲಿಟ್ಟು ಪ್ರಿಯವಾಕ್ಯಗಳನ್ನೇ ಆಡುವರು. ಬೇರೆ ಕೆಲವರು ತಮಗೆ ಯಾವುದು ಚಿತವೋ ಅದೇ ಮತ್ತೊಬ್ಬರಿಗೂ ಸಮ್ಮತವೆಂದು ಭಾವಿಸುವರು. ಒಂದು ಕಾರ್ಯಾಲೋಚನೆಯಲ್ಲಿ ಕೊಡತಕ್ಕ ಅಭಿಪ್ರಾಯಗಳೆಲ್ಲವೂ ಹೀಗೆಯೇ ನಾನಾವಿಧಗಳಾಗಿರುವುವು. ನೀನಾದರೋ ಇಂತಹ ಕಾರಣಗಳೊಂದನ್ನೂ ಲಕ್ಷಿಸದೆ, ಕಾಮ ಕ್ರೋಧಗಳನ್ನು ಬಿಟ್ಟು ಲೋಕಕ್ಕೆ ಯಾವುದು ಹಿತವೋ, ಮತ್ತು ಅವರವರಿಗೆ ಯಾವುದು ಯೋಗ್ಯವೋ ಅದನ್ನೇ ಯಥಾವತ್ತಾಗಿ ತಿಳಿಸತಕ್ಕವನು. ಆದುದರಿಂದ ಈ ವಿಚಾರದಲ್ಲಿ ನಿನ್ನ ಅಭಿಪ್ರಾಯವನ್ನು ನನಗೆ ತಿಳಿಸಬೇಕು'' ಎಂದನು.

ಇದು ಹದಿಮೂರನೆಯ ಅಧ್ಯಾಯವು.



## ಶ್ರೀಕೃಷ್ಣನು ಪ್ರಸ್ತಾವವಶದಿಂದ ಜರಾಸಂಧನ ಶೌರ್ಯವನ್ನು ಯುಧಿಷ್ಠಿರನಿಗೆ ತಿಳಿಸಿದುದು.

ಆಗ ಕೃಷ್ಣನು ಧರ್ಮರಾಜನನ್ನು ''ಮಹಾರಾಜಾ! ನೀನು ಸಮಸ್ತಗುಣಗಳಿಂದಲೂ ರಾಜಸೂಯಯಾಗವನ್ನು ನಡೆಸುವುದಕ್ಕೆ ಅರ್ಹನೆಂಬುದು ನಿಜವೇ. ಆದರೆ ಆ ವಿಷಯದಲ್ಲಿ ಆಲೋಚಿಸಬೇಕಾದ ಕೆಲವು ಅಂಶಗಳುಂಟು. ನೀನು ಎಲ್ಲವನ್ನೂ ತಿಳಿದವನಾಗಿದ್ದರೂ, ನಾನು ಒಂದೆರಡು ಮಾತುಗಳನ್ನು ಹೇಳುವೆನು. ಈಗ ಭೂಮಿಯಲ್ಲಿ ಕ್ಷತ್ರಿಯರೆಂದು ಹೇಳಿಸಿಕೊಳ್ಳುವವರೆಲ್ಲರೂ ಪೂರ್ವದಲ್ಲಿ ಪರಶುರಾಮನು ಕೊಲ್ಲದೆ ಬಿಟ್ಟ ಕ್ಷತ್ರಿಯಸಂತತಿಯವರು. ಓ ರಾಜಾ! ಕ್ಷತ್ರಿಯರಿಗೆ ಕುಲಪರಂಪರೆಯಾಗಿ ಬಂದ ಒಂದು ಸಂಕಲ್ಪವುಂಟು. ಅದನ್ನು ಅವರು ಉಪದೇಶವಾಕ್ಯದಂತೆ ಅನುಸರಿಸಿ ನಡೆಯುತ್ತಿರುವ ಸಂಗತಿಯೂ ನಿನಗೆ ತಿಳಿದುದೇ. ಲೋಕದಲ್ಲಿ ತನಗೆ ಸಮಕಾಲಿಕರಾದ ಬೇರೆ ಎಲ್ಲಾ ರಾಜರನ್ನೂ ಅಡಗಿಸಿ ಆಳಬಲ್ಲವನಾವನೋ, ಅಂತವನೇ ರಾಜಸೂಯಯಾಗವನ್ನು ಮಾಡಲು ಅರ್ಹತೆಯುಳ್ಳವನೆಂಬುದು ರಾಜರಲ್ಲಿ ಕುಲಪರಂಪರೆಯಾಗಿ ಬಂದ ಒಂದು ನಿರ್ಣ

ಯುವು. ಈಗಿನ ಕ್ಷತ್ರಿಯರಲ್ಲಿ ಅನೇಕರಾಜಸಂತತಿಯುವರೂ, ಸಾಮಾನ್ಯ ಕ್ಷತ್ರಿಯರೂ, ಐಲನೆಂಬ ಪುರೂರವನ ಮತ್ತು ಇಕ್ಷ್ವಾಕುವಿನ ವಂಶಕ್ಕೆ ಸೇರಿದವರು. ಅಂತಹ ರಾಜಕುಲಗಳು ಈಗ ನೂರೊಂದಿರುವುವೆಂದು ತಿಳಿ. ಅವುಗಳಲ್ಲಿ ಯಯಾತಿಕುಲಕ್ಕೆ ಸೇರಿದ ಭೋಜಸಂತತಿಯು ಬಹಳವಾಗಿ ವಿಸ್ತರಿಸಿ, ಗುಣದಲ್ಲಿಯೂ ಮೇಲೆನಿಸಿಕೊಂಡಿದೆ. ಅದು ನಾಲ್ಕು ದಿಕ್ಕುಗಳಲ್ಲಿಯೂ ವಿಸ್ತಾರವಾಗಿ ವ್ಯಾಪಿಸಿದೆ. ಅನೇಕಕ್ಷತ್ರಿಯರು ಈಗ ಆ ಸಂತತಿಯುವರ ಸಂಪತ್ತನ್ನೇ ಆಶ್ರಯಿಸಿ, ಅವರನ್ನು ಉಪಾಸಿಸುತ್ತ ಬದುಕುತ್ತಿರುವರು. ಅದರೆ ಈಚೆಗೆ ಜರಾಸಂಧನೆಂಬ ಮಗಧರಾಜನು ತನ್ನ ಪರಾಕ್ರಮದಿಂದ, ಇತರ ರಾಜರನ್ನೆಲ್ಲ ಜಯಿಸಿ, ಭೋಜಕುಲದವರ ಸಂಪತ್ತನ್ನೂ ತಗ್ಗಿಸಿ, ರಾಜರಿಗೆಲ್ಲ ತಾನೇ ಅಧಿರಾಜನೆಂದು ಅಭಿಷೇಕವನ್ನು ಮಾಡಿಸಿಕೊಂಡಿರುವನು. ಅವನು ತನ್ನ ಪರಾಕ್ರಮದಿಂದ ಎಲ್ಲಾ ರಾಜರ ತಲೆಯನ್ನೂ ಮೆಟ್ಟಿ ನಿಂತಿರುವನು. ಅವನು ಮಧ್ಯದೇಶವನ್ನೆಲ್ಲ ಆಳುತ್ತ, ನಮ್ಮಲ್ಲಿ ರಾಜರಿಗೆಲ್ಲ ವಿರೋಧವನ್ನು ಹುಟ್ಟಿಸಲು ಪ್ರಯತ್ನಿಸಿರುವನು. ಮಹಾರಾಜಾ! ಯಾವ ರಾಜನು ಪ್ರಭುಶಕ್ತಿಯಿಂದ ಪ್ರಬಲನಾಗಿರುವನೋ, ಲೋಕವೆಲ್ಲ ಯಾವನೊಬ್ಬನಿಗೇ ವಶವಾಗಿರುವುದೋ, ಅಂತವನೇ ಸ್ವಶಕ್ತಿಯಿಂದ ಸಾಮ್ರಾಜ್ಯವನ್ನು ಪಡೆದವನಾಗುವನು. ಈಗ ಜರಾಸಂಧನು ಅಂತಹ ಪ್ರಾಬಲ್ಯದಲ್ಲಿರುವನು. ರಾಜೇಂದ್ರಾ! ಮಹಾಪರಾಕ್ರಮಿಯೆಂದು ಹೆಸರುಗೊಂಡ ಶಿಶುಪಾಲನೆಂಬ ಚೇದಿರಾಜನು ಕೂಡ, ಜರಾಸಂಧನನ್ನಾಶ್ರಯಿಸಿ ಅವನ ಸೇನಾಪತಿಯಾಗಿರುವನಲ್ಲವೆ? ಹೀಗೆಯೇ ಕಪಟಯುದ್ಧವನ್ನು ಮಾಡತಕ್ಕವನೂ, ಮಹಾಬಲಾಢ್ಯನೂ, ಕರೂಶದೇಶದ ರಾಜನೂ ಆದ ದಂತವಕ್ರನೂ ಆ ಜರಾಸಂಧನಲ್ಲಿ ಶಿಷ್ಯನಂತೆ ಆಶ್ರಯಿಸಿಕೊಂಡಿರುವನು. ಮಹಾವೀರನೆನಿಸಿದ ಹಂಸಡಿಂಭಕರೆಂಬವರಿಬ್ಬರೂ ಆ ಜರಾಸಂಧನನ್ನು ಆಶ್ರಯಿಸಿರುವರು. ಮತ್ತು ಕರೂಶದೇಶಕ್ಕೆ ಸಂಬಂಧಪಟ್ಟ ಕರಭನೂ, ವಕ್ರದಂತನೂ, ತಲೆಯಲ್ಲಿ ಅದ್ಭುತಮಣಿಯೆಂಬ ದಿವ್ಯಮಣಿಯನ್ನು ಧರಿಸಿದ ಮೇಘವಾಹನನೆಂಬವನೂ, ಮುರನರಕಾಸುರರಿಬ್ಬರನ್ನೂ ನಿಗ್ರಹಿಸಿದ ಅಪಾರಸೇನಾಬಲವುಳ್ಳವನಾಗಿ, ವರುಣನಂತೆ ಪಶ್ಚಿಮದಿಕ್ಕನ್ನೆಲ್ಲ ತನ್ನ ವಶಮಾಡಿಕೊಂಡ ಯವನಾಧಿಪತಿ

ಯಾದ ಕಾಲಯವನನೂ, ಇವರೆಲ್ಲರೂ ಆ ಜರಾಸಂಧನನ್ನೇ ಆಶ್ರಯಿಸಿ ಕೊಂಡಿರುವರು. ಓ ಧರ್ಮರಾಜಾ! ನಿನ್ನ ತಂದೆಗೆ ಸ್ನೇಹಿತನೂ, ವೃದ್ಧನೂ ಆದ ಭಗದತ್ತನೂ ಕೂಡ, ತನ್ನ ಮಾತಿನಿಂದಲೂ, ಕಾರ್ಯದಿಂದಲೂ, ಜರಾಸಂಧನಿಗೇ ತಗ್ಗಿ ನಡೆಯುವನು. ಆದರೆ ಮನಸ್ಸಿನಲ್ಲಿ ಮಾತ್ರ ಅವನು ನಿನ್ನ ತಂದೆಯಲ್ಲಿ ಹೇಗೋ ಹಾಗೆಯೇ ನಿನ್ನಲ್ಲಿಯೂ ಪ್ರೇಮವನ್ನಿಟ್ಟಿರುವನು. ಪಶ್ಚಿಮದಿಕ್ಕಿನಲ್ಲಿಯೂ, ದಕ್ಷಿಣದಿಕ್ಕಿನ ಕೊನೆಯಲ್ಲಿಯೂ ಕುಂತಿದೇಶವನ್ನು ವೃದ್ಧಿಗೊಳಿಸಿ ಶೂರನೆನಿಸಿಕೊಂಡ ನಿನ್ನ ಮಾವನಾದ ಪುರುಜಿತ್ತೆಂಬವನೊಬ್ಬನು ಮಾತ್ರ ನಿನ್ನಲ್ಲಿ ಸ್ನೇಹಭಾವದಿಂದ ನಿನಗೆ ಅಧೀನನಾಗಿರುವನು. ಈ ಲೋಕದಲ್ಲಿ ತಾನೇ ಪುರುಷೋತ್ತಮನೆಂದು ಹೇಳಿಕೊಳ್ಳುತ್ತ, ನನ್ನ ಚಿಹ್ನಗಳಾದ ಶಂಖಚಕ್ರಾದಿಗಳನ್ನೆಲ್ಲ ಸದಾ ಮೈಮೇಲೆ ಹೊತ್ತುಕೊಂಡು, ಪೌಂಡ್ರಕವಾಸುದೇವನೆಂದು ಲೋಕದಲ್ಲಿ ಪ್ರಸಿದ್ಧಿಹೊಂದಿ, ವಂಗ, ಪುಂಡ್ರ ಕಿರಾತದೇಶಗಳಿಗೆಲ್ಲ ಅಧಿಪತಿಯೆನಿಸಿ, ಅನೇಕ ಸೇನೆಗಳೊಡನೆ ಚೇದಿದೇಶದಲ್ಲಿದ್ದ ಆ ಮೂಢಾತ್ಮನು ಹಿಂದೆ ನನ್ನ ಕೈಗೆ ಸಿಕ್ಕಿದ್ದಾಗ, ನಾನು ಅವನನ್ನು ಕೊಲ್ಲದೆ ಬಿಟ್ಟೊಡನೆ, ಅವನು ಹೋಗಿ ಆ ಜರಾಸಂಧನನ್ನು ಆಶ್ರಯಿಸಿದನು. ಭೋಜಕುಲರಾಜನಾದ ಭೀಷ್ಮಕನು ಅಸ್ತ್ರವಿದ್ಯೆಯಲ್ಲಿ ನಿಪುಣನೆನಿಸಿ, ಪಾಂಡ್ಯರನ್ನೂ, ಕ್ರಥಕೈಶಿಕರನ್ನೂ ಜಯಿಸಿದವನು. ಅವನ ಸಹೋದರನಾದ ಆಕೃತಿಯೆಂಬವನು ಪರಶುರಾಮನಿಗೆ ಸಮಾನನಾದ ಶೂರನು. ಆ ಭೀಷ್ಮಕನಿಗೆ ಈ ಭೂಮಿಯ ನಾಲ್ಕನೆಯ ಒಂದು ಭಾಗವು ಸ್ವಾಧೀನವಾಗಿದ್ದಿತು. ಅಂತಹ ಶತ್ರುವಿಜಯಿಯಾದ ಭೀಷ್ಮಕನುಕೂಡ ಮಗಧರಾಜನಾದ ಜರಾಸಂಧನ ಕೈಯಲ್ಲಿ ಅಡಗಿರುವನು. ನಾವು ಭೀಷ್ಮಕನಿಗೆ ಸಮೀಪಬಂಧುಗಳಾಗಿದ್ದರೂ, ಅವನಿಗೆ ಅನೇಕ ವೇಳೆಗಳಲ್ಲಿ ಪ್ರಿಯವನ್ನುಂಟುಮಾಡಿದ್ದರೂ, ಅವನಲ್ಲಿ ನಾವು ನಮ್ರತೆಯನ್ನು ತೋರಿಸುತಿದ್ದರೂ, ಅವನು ನಮ್ಮನ್ನು ಲಕ್ಷ್ಯಮಾಡದೆ, ಆ ನಮ್ಮ ವಿರೋಧಿಯೊಡನೆಯೇ ಸೇರಿಕೊಂಡು, ನಮಗೆ ಅಪ್ರಿಯವನ್ನು ಮಾಡುವುದರಲ್ಲಿಯೇ ನಿಶ್ಚಯಬುದ್ಧಿಯುಳ್ಳವನಾಗಿರುವನು. ರಾಜೇಂದ್ರಾ! ಅವನು ತನ್ನ ಕುಲವನ್ನಾಗಲಿ, ತನ್ನ ಬಲವನ್ನಾಗಲಿ ತಿಳಿದುಕೊಳ್ಳದೆ, ಜರಾಸಂಧನ ಪ್ರಖ್ಯಾತಿಗೆ ಮರುಳಾಗಿ ಅವನನ್ನಾಶ್ರಯಿಸಿಕೊಂಡಿರುವನು.

ಹಾಗೆಯೇ ಉತ್ತರದಿಕ್ಕಿನಲ್ಲಿರುವ ಹದಿನೆಂಟು ಮನೆತನಕ್ಕೆ ಸೇರಿದ ಭೋಜರೂ ಜರಾಸಂಧನಿಗೆ ಭಯಪಟ್ಟು ಪಶ್ಚಿಮದಿಕ್ಕಿಗೆ ಹೋಗಿಸೇರಿದರು. ಮತ್ತು ಶೂರಸೇನರು, ಭದ್ರಕಾರರು, ಬೋಧರು, ಶಾಲ್ವರು, ಪಟಚ್ಚರರು, ಸುಸ್ಥಲರು, ಸುಕುಟ್ಟರು, ಕುಳಿಂದರು, ಕುಂತಿಗಳು, ಶಾರ್ವ್ವಾಯನರು, ದಕ್ಷಿಣಪಾಂಚಾಲರು, ಪೂರ್ವದಿಕ್ಕಿನ ಕುಂತಿಗಳು, ಕೋಸಲರು, ಮತ್ಸ್ಯರು, ಸನ್ನ್ಯಸ್ತಪಾದರು, ಮುಂತಾದ ನಾನಾದೇಶಾಧಿಪತಿಗಳು ತಮ್ಮ ಸಹೋದರರೊಡನೆಯೂ, ಭೃತ್ಯರೊಡನೆಯೂ ಕೂಡಿಕೊಂಡು, ಜರಾಸಂಧನ ಭಯಕ್ಕಾಗಿ ಉತ್ತರದಿಕ್ಕನ್ನು ಬಿಟ್ಟು ದಕ್ಷಿಣದಿಕ್ಕಿನಲ್ಲಿ ಸೇರಿದರು. ಪಾಂಚಾಲರೂ ಇದೇ ಭಯಕ್ಕಾಗಿ ತಮ್ಮ ರಾಜ್ಯವನ್ನು ಬಿಟ್ಟು ನಾನಾಕಡೆಗಳಿಗೆ ಚದರಿಹೋಗಿರುವರು. ಆಗಿನ ಯುದ್ಧದಲ್ಲಿ ಜರಾಸಂಧರಾಜಧಾನಿಯಾದ ಗಿರಿವ್ರಜದಿಂದ ಮೊದಲನೆಯ ಮಗಧಸೈನ್ಯವು ಹೊರಡುವುದಕ್ಕೆ ಮುಂಚೆಯೇ, ಪಾಂಚಾಲರು ಭಯಪಟ್ಟು ಪಲಾಯಿತರಾದರು. ಪೂರ್ವದಲ್ಲಿ ಉಗ್ರಸೇನಪುತ್ರನಾದ ಕಂಸನು ಕೇವಲ ಬುದ್ಧಿಹೀನನಾಗಿ, ತನ್ನ ಬಂಧುಗಳನ್ನೆಲ್ಲ ನಿಗ್ರಹಿಸಿ, ಜರಾಸಂಧನ ಕನ್ಯೆಯರೂ, (ಜರಾಸಂಧಪುತ್ರನಾದ) ಸಹದೇವನ ತಂಗಿಯರೂ ಆದ ಅಸ್ತಿ, ಪ್ರಾಸ್ತಿಯರೆಂಬ ಕನ್ಯೆಯರಿಬ್ಬರನ್ನೂ ಮದುವೆಯಾದನು. ಜರಾಸಂಧನ ಬಲದಿಂದಲೇ ಬುದ್ಧಿಹೀನನಾದ ಕಂಸನು ತನ್ನ ಕಡೆಯವರನ್ನೆಲ್ಲ ನಿರಾಕರಿಸಿ ಬಹಳ ಹೆಮ್ಮೆಗೊಂಡಿದ್ದನು. ಅವನಲ್ಲಿ ಇದೊಂದು ದೊಡ್ಡ ಅನೀತಿಯಾಯಿತು. ಭೋಜಕುಲದ ರಾಜರಲ್ಲಿ ವೃದ್ಧರಾದವರು, ದುರಾತ್ಮನಾದ ಆ ಕಂಸನ ಬಾಧೆಯನ್ನು ತಡೆಯಲಾರದೆ, ತಮ್ಮ ಕುಲದ ಬಂಧುವರ್ಗವನ್ನು ಕಾಪಾಡಬೇಕೆಂಬ ಉದ್ದೇಶದಿಂದ, ಆಹುಕನ ಕುಮಾರಿಯನ್ನು ಅಕ್ರೂರನಿಗೆ ಕೊಟ್ಟು ವಿವಾಹಮಾಡಿ ಅವನನ್ನು ನಮ್ಮಲ್ಲಿಗೆ ಕಳುಹಿಸಿಕೊಟ್ಟರು. ಆಗ ನಾನು ಅಣ್ಣನಾದ ಬಲರಾಮನೊಡನೆ ಹೊರಟು, ಕಂಸನನ್ನು ಕೊಂದು ಆ ಬಂಧುಗಳ ಕೋರಿಕೆಯನ್ನು ಈಡೇರಿಸಿದೆನು. ನಾನು ಕಂಸನನ್ನು ಕೊಂದಾಗ ನನ್ನಣ್ಣನು ಸುನಾಮನನ್ನು ಕೊಂದನು. ಮೊದಲು ಕಂಸನನ್ನು ಕೊಂದು, ಜರಾಸಂಧನ ಭಯದಿಂದ ಕಳವಳಿಸುತಿದ್ದ ಬಂಧುಗಳನ್ನೆಲ್ಲ ನಾನೂ, ಬಲರಾಮನೂ ಅಲ್ಲಲ್ಲಿ ಹೋಗಿ ಅಪಾಯದಿಂದ ರಕ್ಷಿಸಿ ಸಮಾಧಾನಗೊಳಿಸುತಿ

ದ್ದೆವು. ಆದರೆ ಜರಾಸಂಧನ ಭಯವು ಮೇಲೆಮೇಲೆ ಮಿತಿಮೀರಿಹೋಗುತ್ತ, ಜರಾಸಂಧನೂ ಮೇಲೆಮೇಲೆ ಪ್ರಬಲನಾಗುತ್ತ ಬಂದಾಗ, ನಾನೂ, ಹದಿನೆಂಟು ಭೋಜಕುಲದವರೂ ಸೇರಿ (ಊರುಬಿಟ್ಟು ಹೋಗುವುದಾಗಿ) ಒಂದು ಆಲೋಚನೆಯನ್ನು ಮಾಡಿದೆವು. ಶತ್ರುಸಂಹಾರಕಗಳಾದ ಅನೇಕಮಹಾಸ್ತ್ರಗಳಿಂದ ಎಡೆಬಿಡದೆ ಮುನ್ನೂರು ವರ್ಷಗಳವರೆಗೆ ಯುದ್ಧಮಾಡಿದರೂ, ಆ ಜರಾಸಂಧನ ಸೈನ್ಯವನ್ನು ಕೊಲ್ಲಲಾರದೆ ಹೋದೆವು. ಏಕೆಂದರೆ, ಬಲದಲ್ಲಿ ದೇವಸಮಾನರಾದ ಹಂಸ ಡಿಂಭಕರೆಂಬವರಿಬ್ಬರೂ ಆ ಜರಾಸಂಧನಿಗೆ ಬೆಂಬಲವಾಗಿ ಅವನ ಪಕ್ಕದಲ್ಲಿದ್ದರು. ಅವರಿಬ್ಬರೂ ಅಸ್ತ್ರಗಳಿಂದ ಮರಣವಿಲ್ಲದವರು. ಅವರಿಬ್ಬರೂ ಒಬ್ಬರನ್ನೊಬ್ಬರು ಬಿಟ್ಟಗಲದೆ ಯಾವಾಗಲೂ ಜತೆಯಾಗಿಯೇ ಇರತಕ್ಕವರು. ಜರಾಸಂಧನೂ ಅಸಮಾನ ಪರಾಕ್ರಮಿ. ಈ ಮೂವರೂ ಸೇರಿದಾಗ, ಮೂರು ಲೋಕಗಳೂ ಅವರ ಪರಾಕ್ರಮಕ್ಕೆ ಸಾಲದೆಂದೇ ನನ್ನ ಅಭಿಪ್ರಾಯವು. ನನಗೆ ಮಾತ್ರವಲ್ಲ. ಭೂಮಿಯೊಳಗಣ ಸಮಸ್ತರಾಜರಿಗೂ ಇದೇ ಅಭಿಪ್ರಾಯವಿದ್ದಿತು. ನಾನೇ ನೇರವಾಗಿ ಆ ಜರಾಸಂಧನೊಡನೆ ಹದಿನೆಂಟು ಸಾರಿ ಯುದ್ಧವನ್ನು ತೊಡಗಿದರೂ, ಅವನನ್ನು ಕೊಲ್ಲಲು ಸಾಧ್ಯವಾಗಲಿಲ್ಲ. ಕೊನೆಗೆ ಹದಿನೆಂಟನೆಯ ಸಾರಿ ನಡೆದ ಯುದ್ಧದಲ್ಲಿ, ಅಣ್ಣನಾದ ಬಲರಾಮನಿಂದ ಹಂಸನೆಂಬ ಹೆಸರುಳ್ಳ ರಾಜನೊಬ್ಬನು ಹತನಾದನು. ಹಂಸನು ಹತನಾದನೆಂಬ ಈ ಸುದ್ದಿಯು ಯಾರಿಂದಲೋ ಆ ಡಿಂಭಕನ ಕಿವಿಗೆ ಬಿದ್ದಿತು. ಆಗ ಅವನು ತನ್ನ ಸಂಗಡಿಗನಾದ ಹಂಸನೇ ಸತ್ತನೆಂದು ಭ್ರಮಿಸಿ, 'ಹಂಸನನ್ನಗಲಿ ನಾನು ಕ್ಷಣಮಾತ್ರವೂ ಜೀವಿಸಿರಲಾರೆ'ನೆಂದು ಹೇಳುತ್ತ ಆ ಡಿಂಭಕನು ಯಮುನಾನದಿಯಲ್ಲಿ ಬಿದ್ದು ಮುಳುಗಿ ಸತ್ತನು. ಆಮೇಲೆ ಡಿಂಭಕನು ಸತ್ತ ವೃತ್ತಾಂತವು ಹಂಸನ ಕಿವಿಗೆ ಬೀಳಲು, ಒಡನೆಯೇ ಅವನೂ ಕೂಡ, ಡಿಂಭಕನನ್ನು ಬಿಟ್ಟು ತಾನು ಬದುಕಿರಲಾರೆನೆಂದು ಅದೇ ಯಮುನಾನದಿಗೆ ಹೋಗಿ ಮುಳುಗಿ ಪ್ರಾಣವನ್ನು ಬಿಟ್ಟನು. ಹೀಗೆ ಹಂಸ, ಡಿಂಭಕರಿಬ್ಬರೂ ಆತ್ಮಹತ್ಯೆಯಿಂದ ಸಾಯಲು, ಆ ಸುದ್ದಿಯನ್ನು ಕೇಳಿ ಜರಾಸಂಧನಿಗೆ ಮಹಾ ವ್ಯಸನವಾಯಿತು. ಒಡನೆಯೇ ಅವನು ಧೈರ್ಯಗುಂದಿದವನಾಗಿ ಯುದ್ಧರಂಗವನ್ನು ಬಿಟ್ಟು ತನ್ನ ಪುರಕ್ಕೆ ಹಿಂತಿರುಗಿದನು.

ಹೀಗೆ ಅವನು ಹೊರಟುಹೋದಮೇಲೆ ನಾವೆಲ್ಲರೂ ನೆಮ್ಮದಿಯಿಂದ ಹಿಂತಿರುಗಿ ಮಧುರೆಗೆ ಬಂದು ವಾಸಮಾಡುತಿದ್ದೆವು. ಆದರೇನು? ನಾನು ಕಂಸನನ್ನು ಕೊಂದಮೇಲೆ, ಜರಾಸಂಧನ ಕನ್ಯೆಯರಾದ ಅಸ್ತಿಪ್ರಾಸ್ತಿಯರಿಬ್ಬರಿಗೂ ವೈಧವ್ಯವುಂಟಾಯಿತಷ್ಟೆ? ಗಂಡನನ್ನು ಕಳೆದುಕೊಂಡ ದುಃಖದಿಂದ, ಆ ಹೆಂಗಸರು ತಂದೆಯ ಬಳಿಗೆ ಬಂದು, ತಮ್ಮ ಪತಿಯನ್ನು ಕೊಂದವನನ್ನು ಕೊಲ್ಲದೆ ಬಿಡಬಹುದೆ'' ಎಂದು ಬಾರಿಬಾರಿಗೂ ರೇಗಿಸುತಿದ್ದರು. ಅದರಿಂದ ಅವನು ನಮ್ಮಮೇಲೆ ಆಗಾಗ ದಂಡೆತ್ತಿ ಬರುವ ಸಂಭವವಿದ್ದಿತು. ಆಗ ನಮಗೆ ಮಧುರೆಯಲ್ಲಿ ನಿಲ್ಲುವುದಕ್ಕೆ ಧೈರ್ಯವಿಲ್ಲದೆ, ಹಿಂದಿನ ಉಪಾಯವನ್ನೇ ಆಲೋಚಿಸಿ ಅದನ್ನು ಬಿಟ್ಟುಹೋಗಬೇಕಾಯಿತು. ನಾವೆಲ್ಲರೂ ಆ ಜರಾಸಂಧನ ಭಯಕ್ಕಾಗಿ, ನಮ್ಮ ಅಪಾರಸಂಪತ್ತನ್ನೆಲ್ಲ ಸೇರಿಸಿ ಬೇರೆಬೇರೆ ಒಬ್ಬೊಬ್ಬರು ಸ್ವಲ್ಪಸ್ವಲ್ಪವಾಗಿ ಎತ್ತಿಕೊಂಡು, ಪುತ್ರ, ಮಿತ್ರ, ಜ್ಞಾತಿಬಾಂಧವರೊಡನೆ ಊರನ್ನು ಬಿಟ್ಟು, ಅದಕ್ಕೆ ಪಶ್ಚಿಮದಲ್ಲಿ ರೈವತಕವೆಂಬ ಪರ್ವತದಮೇಲೆ ಕುಶಸ್ಥಲಿಯೆಂಬ ರಮ್ಯವಾದ ನಗರಿಯಲ್ಲಿ ವಸತಿಮಾಡಿಕೊಂಡೆವು. ಓ ರಾಜಾ! ಅಲ್ಲಿನ ದುರ್ಗಗಳನ್ನೆಲ್ಲ ದೇವತೆಗಳಿಗೂ ದುರ್ಗಮವಾಗುವಂತೆ ಬಲಪಡಿಸಿರುವೆವು. ಅಬಲೆಯರಾದ ಹೆಂಗಸರು ಕೂಡ ಅಲ್ಲಿ ನಿಂತು ಯುದ್ಧಮಾಡಬಲ್ಲರು. ಇನ್ನು ಮಹಾರಥರಾದ ವೃಷ್ಣಿಗಳ ಮಾತೇನು? ಈಗ ನಾವು ಅಲ್ಲಿ ಏನೇನೂ ಭಯವಿಲ್ಲದೆ ವಾಸಮಾಡುತ್ತಿರುವೆವು. ಆ ಪರ್ವತದಲ್ಲಿ ಸ್ಥಳವು ಸಿಕ್ಕಿದಮೇಲೆ ಮಧುವಂಶದವರಿಗೆಲ್ಲ ಇನ್ನು ತಾವು ಜರಾಸಂಧನನ್ನು ಜಯಿಸಿದಂತೆಯೇ ಎಂಬ ಧೈರ್ಯವುಂಟಾಗಿ, ನಿರ್ಭಯವಾಗಿ ಸಂತೋಷದಿಂದಿರುವರು.

ಓ ರಾಜಾ! ಹೀಗೆ ಜರಾಸಂಧನು ನಮಗೆ ಆಗಾಗ ನಾನಾವಿಧವಾಗಿ ಬಹಳ ಬಾಧೆಯನ್ನು ಕೊಡುತ್ತಿದ್ದಗೂ, ನಾವು ನಮ್ಮ ಸಾಮರ್ಥ್ಯದಿಂದ ಎದೆಗುಂದದೆ, ಎಲ್ಲರೂ ಒಂದಾಗಿ ಗೋಮಂತವೆಂಬ ಪರ್ವತಶಿಖರವನ್ನಾಶ್ರಯಿಸಿ ಅಲ್ಲಿ ನೆಮ್ಮದಿಯಿಂದಿರುವೆವು. ಅಲ್ಲಿ ನಾವು ವಾಸಮಾಡುವ ಸ್ಥಳವು ಮೂರುಯೋಜನಗಳ ಉದ್ದವುಳ್ಳದಾಗಿ, ಒಂದೊಂದು ಯೋಜನದಷ್ಟು ವಿಸ್ತಾರವುಳ್ಳ ಮೂರು ಶಿಖರಗಳುಳ್ಳದಾಗಿದೆ. ಒಂ

ದೊಂದು ಯೋಜನದ ಕೊನೆಯಲ್ಲಿಯೂ, ಒಳ್ಳೇ ವೀರಪುರುಷರಿಂದ ರಕ್ಷಿತಗಳಾದ ತೋರಣದ ಬಾಗಿಲುಳ್ಳ ನೂರುನೂರು ದ್ವಾರಗಳುಂಟು. ಅದು ಒಳ್ಳೇ ಯುದ್ಧಸಮರ್ಥರಾದ ಹದಿನೆಂಟುಮಂದಿ ರಾಜರಿಂದ ಪಾಲಿತವಾಗಿದೆ. ನಮ್ಮ ಕುಲದಲ್ಲಿ ಹದಿನೆಂಟುಸಾವಿರಮಂದಿ ಜ್ಞಾತಿಗಳುಂಟು. ಅದರಲ್ಲಿ ಆಹುಕನ ಮಕ್ಕಳು ನೂರುಮಂದಿ. ಅವರಲ್ಲಿ ಒಬ್ಬೊಬ್ಬನೂ ದೇವತೆಗಳಿಗಿಂತಲೂ ಮೇಲಾದವನು. ಸಹೋದರಸಹಿತನಾದ ಚಾರುದೇಷ್ಣನು, ಚಕ್ರದೇವನು, ಸಾತ್ಯಕಿ, ನಾನು, ನನ್ನಣ್ಣನಾದ ಬಲರಾಮನು, ಸಾಂಬನು, ಪ್ರದ್ಯುಮ್ನನು ಈ ಏಳುಮಂದಿಯೂ ರಥಿಕರು. ಇನ್ನು ಉಳಿದವರಲ್ಲಿ ಕೃತವರ್ಮನು, ಅನಾಧೃಷ್ಟಿ, ಸಮೀಕನು, ಸಮಿತಿಂಜಯನು, ಶಂತನು, ಶಂಕು, ಕುಂತಿ ಇವರೇಳುಮಂದಿಯೂ ಮಹಾರಥರು. [ಪ್ರದ್ಯುಮ್ನ, ಅನಿರುದ್ಧ, ಭಾನು, ಅಕ್ರೂರ, ಸಾರಣ, ನಿಶಠ, ಗದರೆಂಬೀ ಏಳುಮಂದಿಯೂ ಮಹಾರಥರು.] ವಿಕ್ರಮ, ಝಿಲ್ಲಿ, ಬಭ್ರು, ಉದ್ಧವ, ವಿಡೂರಥ, ವಸುದೇವ, ಉಗ್ರಸೇನರೆಂಬೀ ಏಳುಮಂದಿ ಮಂತ್ರಿಶ್ರೇಷ್ಠರೂ, ಅಂಧಕಭೋಜನೆಂಬ ವೃದ್ಧರಾಜನೂ, ಅವನ ಮಕ್ಕಳಾದ ಪ್ರಸೇನಜಿತ್ತು ಮತ್ತು ಯಮಲನೆಂಬ ಇಬ್ಬರು ಮಕ್ಕಳೂ ಈ ಹತ್ತು ಮಂದಿಯೂ ಪ್ರಬಲ ಸೈನ್ಯವುಳ್ಳವರು. ಎಣಿಯಿಲ್ಲದ ವೀರ್ಯವುಳ್ಳವರು. ವಜ್ರದಂತೆ ದೃಢದೇಹವುಳ್ಳವರು. ಅಲ್ಲದೆ, ಆ ಪ್ರಸೇನಜಿತ್ತು ಮತ್ತು ಯಮಲರೆಂಬ ರಾಜಕುಮಾರರಲ್ಲಿ ಯಥೇಚ್ಛವಾಗಿ ಸುವರ್ಣವನ್ನು ಕೊಡತಕ್ಕ ಸ್ಯಮಂತಕಮಣಿಯಿರುವುದರಿಂದ, ಅವರು ಕುಬೇರನಂತೆ ಶ್ರೀಮಂತರಾಗಿರುವರು. ಈ ಹತ್ತುಮಂದಿಯೂ, ತಮಗೆ ನಿವಾಸವಾದ ಕುಶಸ್ಥಲಿಯು ಗಿರಿದುರ್ಗದ ನಡುವೆ ಇರುವುದರಿಂದ ನಿರ್ಭಯವಾಗಿ ನೆಮ್ಮದಿಯಿಂದಿರುವರು. ಇದಲ್ಲದೆ, ಪಾಂಡವರಾದ ನೀವೂ ನಮಗೆ ಯಾವಾಗಲೂ ಬೆಂಬಲವಾಗಿರತಕ್ಕವರು. ಅದಿರಲಿ! ಆ ಜರಾಸಂಧನು ಸಮಸ್ತವೈಭವಗಳಿಂದಲೂ, ರಾಜಗುಣಗಳಿಂದಲೂ ನಮ್ಮೆಲ್ಲರನ್ನೂ ಮೀರಿಸುವಂತೆ ರಾಜ್ಯದಲ್ಲಿ ನೆಲೆಗೊಂಡಿರುವಾಗ, ಕ್ಷತ್ರಿಯಕುಲದಲ್ಲಿ ನೀನು ಸಾಮ್ರಾಜ್ಯಾಭಿಷೇಕಕ್ಕೆ ಹೇಗೆತಾನೇ ಅರ್ಹನಾಗುವೆ? ನಿನ್ನನ್ನೂ ಮೀರಿಸಿದ ಬೇರೆ

ರಾಜನೊಬ್ಬನಿರುವಾಗ ನೀನು ಸಮ್ರಾಟ್ಟೆನಿಸಿಕೊಳ್ಳುವುದು ಹೇಗೆ? ದುರ್ಯೋಧನ, ಭೀಷ್ಮ, ದ್ರೋಣ, ಕೃಪಾಶ್ವತ್ಥಾಮರೆಂಬ ಮಹಾವೀರರನ್ನೂ, ಏಕಲವ್ಯ, ದ್ರುಮ, ಶ್ವೇತ, ಶೈಬ್ಯ, ಶಕುನಿ ಮುಂತಾದವರನ್ನೂ, ಯುದ್ಧದಲ್ಲಿ ಜಯಿಸದೆ ನೀನು ಆ ಯಾಗವನ್ನು ಹೇಗೆ ಮಾಡುವೆ? ಒಂದುವೇಳೆ ಈ ರಾಜರೆಲ್ಲರೂ ನಿನ್ನಲ್ಲಿ ಏನೋ ಒಂದು ಗೌರವಭಾವದಿಂದ ಯುದ್ಧಕ್ಕೆ ಬಾರದೆ ತಟಸ್ಥರಾಗಿದ್ದರೂ, ಬಲದರ್ಪಿತನಾದ ಆ ಕರ್ಣನೊಬ್ಬನು ಮಾತ್ರ ಎಂದಿಗೂ ಯುದ್ಧಕ್ಕೆ ಹಿಂತೆಗೆಯಲಾರನು. ಅವನು ಅನೇಕ ದಿವ್ಯಾಸ್ತ್ರಗಳನ್ನು ತಿಳಿದವನು. ಅವನು ನಿನ್ನನ್ನು ಯುದ್ಧಕ್ಕೆ ಎಳೆಯದೆ ಬಿಡನು. ಯುಧಿಷ್ಠಿರಾ! ಹೆಚ್ಚು ಮಾತೇಕೆ? ಮಹಾಬಲಿಷ್ಠನಾದ ಆ ಜರಾಸಂಧನು ಬದುಕಿರುವಾಗ ರಾಜಸೂಯವನ್ನು ನಡೆಸುವುದು ನಿನಗೆ ಸಾಧ್ಯವೇ ಅಲ್ಲವೆಂಬುದು ನನ್ನ ಅಭಿಪ್ರಾಯವು. ಸಿಂಹವು ಮಹಾಗಜಗಳನ್ನು ಹೇಗೋ ಹಾಗೆ ಆ ಜರಾಸಂಧನು ಬೇರೆ ಎಲ್ಲಾ ರಾಜರನ್ನೂ ಜಯಿಸಿ, ಗಿರಿವ್ರಜವೆಂಬ ಪುರದ ಪರ್ವತಗುಹೆಯಲ್ಲಿ ಅವರನ್ನೆಲ್ಲ ಸೆರೆಯಿಟ್ಟಿರುವನು. ಅಲ್ಲದೆ, ಆ ರಾಜನೂ ಇದೇ ಯಾಗವನ್ನು ಮಾಡಲುದ್ದೇಶಿಸಿ, ಈಗಾಗಲೇ ಎಂಟು ಸಾವಿರಮಂದಿ ರಾಜರಮೇಲೆ ತಾನು ಅಧಿರಾಜಪಟ್ಟದಲ್ಲಿ ಅಭಿಷೇಕಿಸಲ್ಪಟ್ಟಿರುವನು. ಅವನು ಉಗ್ರತಪಸ್ಸಿನಿಂದ ರುದ್ರನನ್ನಾರಾಧಿಸಿ ಆ ಶಿವನ ವರಬಲದಿಂದ ರಾಜರನ್ನೆಲ್ಲ ಜಯಿಸಿದವನು. ಅವನು ತಾನುಮಾಡಿದ ಪ್ರತಿಜ್ಞೆಯೊಂದನ್ನೂ ಕೊನೆಮುಟ್ಟಿಸದೆ ಬಿಟ್ಟವನಲ್ಲ. ಪ್ರಬಲ ಸೇನಾಬಲವುಳ್ಳ ರಾಜರನ್ನೆಲ್ಲ ಆಗಾಗ ಜಯಿಸಿ ಸೆರೆಹಿಡಿದು, ತನ್ನ ನಗರಕ್ಕೆ ತಂದು, ಗಿರಿವ್ರಜವನ್ನೆಲ್ಲ ಪುರುಷವ್ರಜವನ್ನಾಗಿ ಮಾಡಿರುವನು. ರಾಜಾ! ನಾನೂ ಆ ಜರಾಸಂಧನಿಗೆ ಹೆದರಿಯೇ ಮಧುರೆಯನ್ನು ಬಿಟ್ಟು ದ್ವಾರಕೆಯಲ್ಲಿ ಸೇರಿಕೊಂಡಿರುವೆನು. ನೀನು ಈ ಯಾಗವನ್ನು ಮಾಡಬೇಕೆಂದಿದ್ದರೆ, ಮೊದಲು ಆ [1]ಜರಾಸಂಧನನ್ನು ಕೊಲ್ಲುವುದಕ್ಕೂ, ಅವನ ಸೆರೆಯಲ್ಲಿರುವ ರಾಜರನ್ನು ಬಿಡಿಸುವುದಕ್ಕೂ ಪ್ರಯತ್ನಿಸು. ರಾಜೇಂದ್ರಾ! ಹಾಗಿಲ್ಲದೆ ನೀನು ಈಗ ಯಾಗವನ್ನಾರಂಭಿಸಿದರೂ ಅದು ಪೂರ್ಣವಾಗಿ ನೆರವೇರುವುದೇನೋ ಅಸಾಧ್ಯವೇ! ಇದು ನನ್ನ ಅಭಿಪ್ರಾಯವು. ಧೀಮಂತನಾದ

ನೀನೂ ನಿನ್ನಲ್ಲಿ ಆಲೋಚಿಸಿ ನೋಡು. ಇದರಮೇಲೆ ನಿನ್ನ ಬುದ್ಧಿಗೆ ತೋರುವುದನ್ನು ನಿಶ್ಚಯಿಸಿ ನನಗೆ ತಿಳಿಸು" ಎಂದನು.

ಇದು ಹದಿನಾಲ್ಕನೆಯ ಅಧ್ಯಾಯವು.

ರಾಜಸೂಯಯಾಗವಿಚಾರದಲ್ಲಿ ಶ್ರೀಕೃಷ್ಣ ಧರ್ಮರಾಜ ಭೀಮರಲ್ಲಿ ಅನ್ಯೋನ್ಯ ವಿವಾದಗಳು.

ಆಗ ಧರ್ಮರಾಜನು ಕೃಷ್ಣನನ್ನು ಕುರಿತು "ವಾಸುದೇವಾ! ನೀನು ಧೀಮಂತನಾದುದರಿಂದ ಯುಕ್ತವಾದುದನ್ನೇ ಹೇಳಿದೆ. ಬೇರೆ ಯಾವನೂ ಹೀಗೆ ಹೇಳಲಾರನು. ಸಂಶಯಗಳು ಬಂದವೇಳೆಯಲ್ಲಿ ಅದನ್ನು ಪರಿಹಾರವಮಾಡುವುದಕ್ಕೆ ನಿನಗಿಂತಲೂ ಬೇರೆ ಸಮರ್ಥನಾದವನು ಭೂಮಿಯಲ್ಲಿಯೇ ಇಲ್ಲವು. ತಮ್ಮತಮ್ಮಷ್ಟಕ್ಕೆ ಭೋಗಗಳನ್ನನುಭವಿಸುತ್ತಿರುವ ರಾಜರು ಮನೆಮನೆಗೂ ಇರುವರು. ಆದರೆ ಅವರೆಲ್ಲರಿಗೂ ಸಾಮ್ರಾಜ್ಯವು ಲಭಿಸಲಾರದು. "ಸಮ್ರಾಟ್" ಎಂಬೀ ಪಟ್ಟವು ಬಹಳ ಕಷ್ಟದಿಂದ ದೊರೆಯತಕ್ಕುದು. ಲೋಕದಲ್ಲಿ ಮತ್ತೊಬ್ಬರ ಪ್ರಭಾವವನ್ನು ಚೆನ್ನಾಗಿ ತಿಳಿದವನು ತನ್ನನ್ನು ತಾನೇ ಪ್ರಶಂಸೆಮಾಡಿಕೊಳ್ಳುವುದುಚಿತವೆ? ಇತರರೊಡನೆ ಕಲೆತಿರುವಾಗ, ಆ ಗುಂಪಿನಲ್ಲಿ ಎಲ್ಲರ ಪ್ರಶಂಸೆಗೆ ಯಾವನು ಪಾತ್ರನೋ ಅವನೇ ಪೂಜಿಸಲ್ಪಡುವನು. ಈ ಭೂಮಿಯಾದರೋ ಬಹುವಿಶಾಲವಾಗಿ ಅನೇಕ ದೇಶವಿಭಾಗಗಳುಳ್ಳುದು. ಬಹುರತ್ನಗಳಿಂದ ಸಮೃದ್ಧವಾದುದು. ಬಹುದೂರ ಸಂಚಾರವಮಾಡಿ ಅನೇಕ ವಿಷಯಗಳನ್ನು ಕಂಡು ತಿಳಿದವನೇ ತನ್ನ ಶ್ರೇಯಸ್ಸಿಗೆ ದಾರಿಯೇನೆಂದು ತಿಳಿಯಬಲ್ಲನು. ಆದುದರಿಂದ ನಿನ್ನ ಮಾತುಗಳನ್ನು ಕೇಳಿದಮೇಲೆ, ಯಾಗಪ್ರಯತ್ನವನ್ನು ಬಿಟ್ಟು ಸುಮ್ಮನಾಗುವುದೇ ಮೇಲೆಂದು ನನಗೆ ತೋರಿದೆ. ಅಂತಹ ಶಮದಿಂದಲೇ ನನಗೆ ಕ್ಷೇಮವುಂಟು. ಸುಮ್ಮನೆ ಯಾಗವನ್ನು ಆರಂಭಿಸಿಬಿಟ್ಟಮಾತ್ರದಲ್ಲಿಯೇ, ಉತ್ತಮಪದವಿಯು ಬರಲಾರದೆಂಬುದೇ ನನಗೂ ಅಭಿಪ್ರಾಯವು. ಆದರೆ, ಧೀರಮನಸ್ಸುಳ್ಳ ನಮ್ಮ ಕುಲದವರಾದ ಈ ಭೀಮಾದಿಗಳ

ಅಭಿಪ್ರಾಯವೇ ಬೇರೆ. ತಮ್ಮಲ್ಲಿ ಯಾವನಾದರೊಬ್ಬನು ಎಂದಾದರೂ ಎಲ್ಲಾ ರಾಜರಿಗಿಂತಲೂ ಮೇಲೆನಿಸಿಕೊಳ್ಳುವನೆಂದೇ ಇವರು ತಿಳಿದಿರುವರು. ಆದರೇನು? ನಮಗಾದರೂ ಆ ಜರಾಸಂಧನ ಭಯವು ತಪ್ಪಿದುದಲ್ಲ. ನಾವೂ ಹಿಂದೆ ಆ ಜರಾಸಂಧನ ದೌಷ್ಟ್ಯಕ್ಕಾಗಿ ಅವನಿಗೆ ಭಯಪಡುತ್ತಲೇ ಇದ್ದವರು. ಕೃಷ್ಣಾ! ಅಷ್ಟೇಕೆ? ನೀನಾದರೋ ಮೂರು ಲೋಕಗಳಲ್ಲಿಯೂ ಯಾರಿಗೂ ದುರ್ಜಯನು. ನಾವೆಲ್ಲರೂ ನಿನ್ನ ಬಾಹುವೀರ್ಯವನ್ನು ನಂಬಿ ಬದುಕತಕ್ಕವರು. ಅಂತಹ ನೀನೇ ಜರಾಸಂಧನಿಗೆ ಹೆದರುವಾಗ, ನಮ್ಮನ್ನು ನಾವು ಬಲಾಢ್ಯರೆಂದು ಹೇಗೆತಾನೇ ತಿಳಿಯಬಹುದು? ಓ ಮಾಧವಾ! ನಿನ್ನಿಂದಾಗಲಿ, ಬಲರಾಮನಿಂದಾಗಲಿ, ಭೀಮಾರ್ಜುನರಲ್ಲಿ ಯಾರೊಬ್ಬರಿಂದಾಗಲಿ, ಆ ಜರಾಸಂಧನನ್ನು ಕೊಲ್ಲುವುದಕ್ಕೆ ಸಾಧ್ಯವೇ ಎಂದು ನಾನೂ ಬಾರಿಬಾರಿಗೂ ನನ್ನಲ್ಲಿ ವಿಮರ್ಶಿಸುತ್ತಲೇ ಇರುವೆನು. ಕೇಶವಾ! ನನಗೆ ಸಮಸ್ತ ಕಾರ್ಯಗಳಿಗೂ ನೀನೇ ಪ್ರಮಾಣಭೂತನು. ನೀನು ಹೇಳಿದಂತೆ ನಡೆಯುವುದು ನನ್ನ ಕರ್ತವ್ಯವು" ಎಂದನು.

ಆಗ ಭೀಮನು ಕೃಷ್ಣನನ್ನೂ, ಧರ್ಮರಾಜನನ್ನೂ ನೋಡಿ, "ಕೃಷ್ಣಾ! ಉಪಾಯಗಳನ್ನು ತಿಳಿಯದೆ ಕಾರ್ಯಾರಂಭಕ್ಕೆ ಹಿಂಜರಿಯುತ್ತ ದುರ್ಬಲನೆನಿಸಿದ ರಾಜನು, ಬಲಾಢ್ಯರನ್ನಿದಿರಿಸಿದಾಗ ಹುತ್ತದಂತೆ ಸುಲಭವಾಗಿ ಕೆಡಹಲ್ಪಡುವುದು ನಿಜವೇ! ದುರ್ಬಲನಾದರೂ ಸೋಮಾರಿತನವಿಲ್ಲದೆ, ಪ್ರಯತ್ನಪರನಾಗಿ, ನೀತಿಯನ್ನು ಹಿಡಿದು, ತಕ್ಕ ಉಪಾಯಗಳನ್ನು ಸರಿಯಾಗಿ ಪ್ರಯೋಗಿಸಿದರೆ, ತನಗಿಂತ ಬಲಾಢ್ಯನಾದ ಶತ್ರುವನ್ನಾದರೂ ಜಯಿಸಿ, ತನ್ನ ಕಾರ್ಯವನ್ನು ಸಾಧಿಸುವನು. ಈ ಕೃಷ್ಣನಲ್ಲಿ ಉಪಾಯವೂ, ನನ್ನಲ್ಲಿ ಬಲವೂ, ಧನಂಜಯನೆಂದು ಹೆಸರುಗೊಂಡ ಅರ್ಜುನನಲ್ಲಿ ಜಯವೂ ಸಿದ್ಧವಾಗಿರುವಾಗ, ನಾವು ಮೂವರೂ ಸೇರಿದರೆ ಜರಾಸಂಧನನ್ನು ನಿಗ್ರಹಿಸುವುದೊಂದು ದೊಡ್ಡದೆ? ಮೂರಗ್ನಿಗಳು ಯಾಗವನ್ನು ಪೂರ್ತಿಗೊಳಿಸುವಂತೆ, ನಾವು ಮೂವರೂ ಆ ಜರಾಸಂಧನನ್ನು ಸಾಧಿಸಬಲ್ಲೆವು. ಓ ಕೃಷ್ಣಾ! ಅಣ್ಣನಾದ ಧರ್ಮರಾಜನು ನಿನ್ನ ಬುದ್ಧಿಯ

ನ್ನಾಶ್ರಯಿಸಿ ಸಮಸ್ತವನ್ನೂ ಸಾಧಿಸುವನು. ನೀನು ನಮಗೆ ನಾಥ ನಾಗಿರುವಾಗ ನಮಗೆ ಜಯವು ಯಾವಾಗಲೂ ಸಿದ್ಧವೇ!" ಎಂದನು.

ಅದಕ್ಕಾ ಕೃಷ್ಣನು ಭೀಮನ ಮಾತಿಗೆ ಪ್ರತ್ಯುತ್ತರವಾಗಿ "ಬಾಲ ನಾದವನು ಮುಂದಾಲೋಚನೆಯಿಲ್ಲದೆ ಕಾರ್ಯವನ್ನಾರಂಭಿಸುವನು. ಮುಂದೆ ಬರುವುದನ್ನು ಕಾಣನು. ಹೀಗೆ ಕಾರ್ಯಾತುರವೇ ಪ್ರಧಾನ ವಾಗಿ ಉಳ್ಳ, ಮತ್ತು ಬಾಲಿಶನಾದವನನ್ನು ಕ್ಷತ್ರಿಯರು ನೋಡಿ ದಾಗ ಸುಮ್ಮನಿರಲಾರರು. ಅಂತವನು ತಲೆಯೆತ್ತುವುದಕ್ಕೆ ಮೊದಲೇ ಅಡಗಿಸಿಬಿಡುವರು. ಜಯಿಸಬೇಕಾದ ಬಾಹ್ಯಾಭ್ಯಂತರ ಶತ್ರುಗಳನ್ನು ಜಯಿಸಿದುದರಿಂದ ಮಾಂಧಾತೃವೂ, ಪ್ರಜಾಪರಿಪಾಲನದಿಂದ ಭಗೀ ರಥನೂ, ತಪೋವೀರ್ಯದಿಂದ ಕಾರ್ತವೀರ್ಯನೂ, ನೀತಿಬಲದಿಂದ ಭರ ತನೂ, ಐಶ್ವರ್ಯದಿಂದ ಮರುತ್ತರಾಜನೂ, ಸಮ್ರಾಟ್ಟುಗಳೆನಿಸಿಕೊಂಡು ದಾಗಿ ಕೇಳಿರುವೆವು. ಈ ಐದುಮಂದಿ ಸಮ್ರಾಜರೂ, ತಮ್ಮ ಕೀರ್ತಿ ಯಿಂದ ತಮ್ಮ ಕುಲಪರಂಪರೆಯುವರನ್ನೆಲ್ಲ ಬೆಳಗುತ್ತಿರುವರು. ಎಲ್ಲಾ ಯುಗದಲ್ಲಿಯೂ ಇಂತಹ ಸಮ್ರಾಟ್ಟುಗಳಿರಲಾರರು. ಓ ಯುಧಿಷ್ಠಿ ರಾ! ಆದುದರಿಂದ ಜಯಿಸಬೇಕಾದವರನ್ನೆಲ್ಲ ಜಯಿಸುವುದು, ಪ್ರಜೆಗ ಳನ್ನು ಚೆನ್ನಾಗಿ ಪರಿಪಾಲಿಸುವುದು, ತಪಸ್ಸನ್ನು ಮಾಡುವುದು, ಧನ ವನ್ನು ವೃದ್ಧಿಗೊಳಿಸುವುದು, ನೀತಿಗಳನ್ನು (ಉಪಾಯಗಳನ್ನು) ಪ್ರ ಯೋಗಿಸುವುದು, ಈ ಐದು ವಿಧದಿಂದಲೂ ಸಮ್ರಾಟ್ಟಾಗಿರಬೇಕೆಂಬ ಕೋ ರಿಕೆಯುಳ್ಳ ನಿನಗೆ, ಬೃಹದ್ರಥಪುತ್ರನಾದ ಜರಾಸಂಧನನ್ನು ಜಯಿಸಬೇಕಾ ದುದು ಅವಶ್ಯವಲ್ಲವೆ? ಅದು ಈಗ ನಿನಗೆ ಸಾಧ್ಯವಿಲ್ಲದಂತಿದೆ. ಆ ವಿಚಾ ರವನ್ನು ನೀನು ಚೆನ್ನಾಗಿ ಯೋಚಿಸು. ನೂರೊಂದು ಕುಲದ ರಾಜರೂ ಅವನನ್ನು ನಿಗ್ರಹಿಸಲಾರದೆ ಹೆದರುತ್ತಿರುವರು. ಆದುದರಿಂದ ಈಗ ಆ ಜರಾಸಂಧನೇ ತನ್ನ ಬಲದಿಂದ ಸಾಮ್ರಾಜ್ಯವನ್ನು ಸಾಧಿಸುತ್ತಿರುವನು. ರತ್ನಭಾಗಿಗಳಾದ ದೊಡ್ಡದೊಡ್ಡ ರಾಜರೂ ಕೂಡ ತಾವುತಾವು ಸಂಗ್ರ ಹಿಸಿತಂದ ಅಮೂಲ್ಯವಸ್ತುಗಳನ್ನು ಕೈಕಾಣಿಕೆಯಾಗಿ ಹಿಡಿದು, ಆ ಜರಾ ಸಂಧನ ಮುಂದೆ ಕೈಕಟ್ಟಿ ನಿಂತಿರುವರು. ಬಾಲ್ಯದಿಂದಲೂ ದುರ್ನೀತಿ

ಯನ್ನೇ ಹಿಡಿದಿರುವ ಆ ಜರಾಸಂಧನು ಅದಕ್ಕೂ ಸಂತೋಷಿಸುವ ಹಾಗಿಲ್ಲ. ಅವನು ಮೂರ್ಧಾಭಿಷಿಕ್ತರಾದ ರಾಜರನ್ನೆಲ್ಲ ಬಲಾತ್ಕಾರದಿಂದ ಹಿಡಿದು ವಶಮಾಡಿಕೊಳ್ಳುವನು. ಅವನಿಗೆ ಕಪ್ಪವನ್ನು ಕೊಡದ ಮನುಷ್ಯನನ್ನು ಎಲ್ಲಿಯೂ ಕಂಡುದುದಿಲ್ಲ. ಆ ಜರಾಸಂಧನು ಸ್ವಲ್ಪಕಡಿಮೆಯಾಗಿ ನೂರುಮಂದಿ ಪ್ರಧಾನ ರಾಜರನ್ನು ಈಗ ಸೆರೆಹಿಡಿದು ತಂದಿಟ್ಟಿರುವನು. ಹೀಗಿರುವಾಗ ದುರ್ಬಲನಾದ ಯಾವ ಸಾಮಾನ್ಯ ರಾಜನುತಾನೇ ವಿರೋಧಿಸಬಲ್ಲನು? ಆ ಜರಾಸಂಧನು ತಂಡುಲಪ್ರಸ್ಥವೆಂಬಲ್ಲಿ ರುದ್ರೋಪಾಸನೆಯನ್ನು ಮಾಡುತ್ತಿರುವನು. ಆ ಶಿವಾಲಯದಲ್ಲಿ ಸಾಮಾನ್ಯ ಜಂತುಗಳಂತೆ ಆ ರಾಜರನ್ನು ಬಲಿಗಾಗಿ ಸೆರೆಹಿಡಿದಿಟ್ಟಿರುವನು. ಆ ರಾಜರಿಗೆ ಇನ್ನು ಪ್ರಾಣದಮೇಲೆ ಆಸೆಯೆಲ್ಲಿಯದು? ಯುದ್ಧದಲ್ಲಿ ಶತ್ರುಗಳಿಂದ ಹತನಾದ ಕ್ಷತ್ರಿಯನಿಗಾದರೂ ಶಾಶ್ವತವಾದ ಕೀರ್ತಿಗೌರವಗಳುಂಟು. ಆದುದರಿಂದ ಈಗ ನಾವೆಲ್ಲರೂ ಒಂದಾಗಿ ಸೇರಿ ಆ ಜರಾಸಂಧನನ್ನು ಯುದ್ಧದಲ್ಲಿ ಇದಿರಿಸಬಾರದೇಕೆ? ಈಗಾಗಲೇ ಅವನು ಎಂಭತ್ತಾರುಮಂದಿ ರಾಜರನ್ನು ಹಿಡಿದುತಂದು ಸೆರೆಯಲ್ಲಿಟ್ಟಿರುವನು. ಶತಸಂಖ್ಯೆಯನ್ನು ಪೂರ್ತಿಗೊಳಿಸುವುದಕ್ಕೆ ಇನ್ನು ಹದಿನಾಲ್ಕು ಮಂದಿಯೇ ಬೇಕಾಗಿದೆ. ಹದಿನಾಲ್ಕು ಮಂದಿಯು ಸಿಕ್ಕಿದೊಡನೆ, ಅವನು ಆ ಮಹಾಘೋರವಾದ ಬಲಿಕೃತ್ಯವನ್ನು ಆರಂಭಿಸಿಬಿಡುವನು. ಇಷ್ಟರಲ್ಲಿಯೇ ಯಾವನು ಆ ಕಾರ್ಯಕ್ಕೆ ವಿಘ್ನವನ್ನುಂಟುಮಾಡುವನೋ ಅವನಿಗೆ ಲೋಕದಲ್ಲಿ ಅತ್ಯುಜ್ವಲವಾದ ಕೀರ್ತಿಯುಂಟು. ಇದರಮೇಲೆ ಆ ಜರಾಸಂಧನನ್ನು ಯಾವನು ಜಯಿಸುವನೋ, ಅವನು ನಿಜವಾಗಿ ಸಮ್ರಾಟ್ಟೆನಿಸುವನು" ಎಂದನು.

ಇದು ಹದಿನೈದನೆಯ ಅಧ್ಯಾಯವು.



### ಅರ್ಜುನನಿಗೂ ಧರ್ಮರಾಜನಿಗೂ ನಡೆದ ಸಂಭಾಷಣೆಗಳು.

ಆಗ ಯುಧಿಷ್ಠಿರನು "ವಾಸುದೇವಾ! ಸಾಮ್ರಾಜ್ಯಪದವಿಯನ್ನು ಪಡೆಯಬೇಕೆಂದು ನಾನು ಕೇವಲ ಸ್ವಾರ್ಥಪರನಾಗಿ ನಿಮ್ಮನ್ನೆಲ್ಲ ಕ್ರೂರ

ನಾದ ಆ ಜರಾಸಂಧನೊಡನೆ ಹೇಗೆತಾನೇ ಯುದ್ಧಕ್ಕೆ ಕಳುಹಿಸಲಿ! ಅಂತಹ ಸಾಹಸಕ್ಕೆ ನಾನು ಹೇಗೆತಾನೇ ಮನಸ್ಸುಮಾಡಲಿ! ಭೀಮನೂ, ಅರ್ಜುನನೂ ಇವರಿಬ್ಬರೂ ನನಗೆ ಎರಡು ಕಣ್ಣುಗಳು. ಜನಾರ್ದನನಾದ ನೀನು ನನ್ನ ಹೃದಯವು. ಕಣ್ಣುಗಳೂ, ಬುದ್ಧಿಯೂ, ಕೆಟ್ಟುಹೋದ ಮೇಲೆ, ಅಂತಹ ಮನುಷ್ಯನ ಬದುಕು ಎಂತಹ ಬದುಕು? ಭಯಂಕರವಾದ ಪರಾಕ್ರಮವುಳ್ಳ ಆ ಜರಾಸಂಧನ ಸೈನ್ಯದಮುಂದೆ ಯಮನಾದರೂ ಬದುಕಿ ಬರಲಾರನು. ಇನ್ನು ಅವನಮುಂದೆ ನಿಮ್ಮ ಪಾಡೇನು? ಈ ಪ್ರಯತ್ನಕ್ಕೆ ನಾನು ಕೈಯಿಕ್ಕಿದರೆ ಅದರಿಂದ ಅನರ್ಥವೇ ನಿಜವು. ಆದುದರಿಂದ, ಇದಕ್ಕೆ ನಾನು ಅಂಗೀಕಾರಪಡುವುದೇ ಯುಕ್ತವೆಂದು ನನಗೆ ತೋರಲಿಲ್ಲ. ಈ ವಿಚಾರದಲ್ಲಿ ನನ್ನ ಮನಸ್ಸಿಗೆ ತೋರಿದುದನ್ನು ನಾನು ತಿಳಿಸುವೆನು. ಅದನ್ನು ಲಾಲಿಸಿ ಕೇಳಬೇಕು. ಈಗ ಯಾಗಪ್ರಯತ್ನವನ್ನು ಬಿಟ್ಟು ತಟಸ್ಥನಾಗಿರುವುದೇ ಮೇಲೆಂದು ನನಗೆ ತೋರಿದೆ. ರಾಜಸೂಯವು ಬಹಳ ಕಷ್ಟಸಾಧ್ಯವಾದುದರಿಂದ, ನನ್ನ ಮನಸ್ಸಿನಲ್ಲಿದ್ದ ಉತ್ಸಾಹವನ್ನೆಲ್ಲ ಈಗ ಅದು ಮುರಿದುಬಿಟ್ಟಿದೆ'' ಎಂದನು.

ಓ ಜನಮೇಜಯರಾಜಾ! ಈ ಮಾತನ್ನು ಕೇಳುತ್ತಿದ್ದ ಅರ್ಜುನನಿಗೆ ಆಗ, ತನ್ನಲ್ಲಿರುವಉತ್ತಮ ಯುದ್ಧಸಾಧನಗಳೆಲ್ಲ ನೆನಪಿಗೆ ಬಂದುವು. ಶ್ರೇಷ್ಠವಾದ ಗಾಂಡೀವಧನುಸ್ಸು, ಅಕ್ಷಯ ಬಾಣಗಳುಳ್ಳ ಎರಡು ಬತ್ತಳಿಕೆಗಳು, ವಾನರಚಿಹ್ನವುಳ್ಳ ಉತ್ತಮಧ್ವಜದೊಡನೆಯೂ, ರಥಾಶ್ವಗಳೊಡನೆಯೂ ಕೂಡಿದ ದಿವ್ಯರಥವೊಂದು, ಇವನ್ನೆಲ್ಲ ಪಡೆದಿದ್ದ ಅರ್ಜುನನು, ಧರ್ಮರಾಜನನ್ನು ಕುರಿತು "ಅಣ್ಣಾ! ಬೇರೆ ಯಾರಿಗೂ ಪಡೆಯಲಸಾಧ್ಯಗಳಾದ ಧನುಸ್ಸು, ಶಸ್ತ್ರಾಸ್ತ್ರಗಳು, ಬಾಣಗಳು, ಬಾಹುವೀರ್ಯ, ಸಹಾಯಸಂಪತ್ತು, ಭೂಮಿ, ಯಶಸ್ಸು, ಬಲ ಮುಂತಾದುವುಗಳನ್ನೆಲ್ಲ ನಾನು ಕೋರಿದಂತೆ ಪಡೆದಿರುವೆನು. ವಿದ್ವಾಂಸರೆಲ್ಲರೂ ಕುಲೋನ್ನತಿಯನ್ನು ಎಷ್ಟೋ ವಿಶೇಷವಾಗಿ ಕೊಂಡಾಡುತ್ತಿರುವರು. ಯುದ್ಧದಲ್ಲಿ ಬಲವನ್ನು ತೋರಿಸುವುದಕ್ಕೆ ಸಾಟಿಯಾದುದು ಬೇರೊಂದಿಲ್ಲವೆನ್ನುವರು.

ಆದುದರಿಂದ ಈಗ ವೀರ್ಯವನ್ನು ತೋರಿಸುವುದೇ ನಮಗೆ ಉಚಿತವೆಂದು ನನಗೆ ತೋರಿದೆ. ಒಳ್ಳೇ ಪರಾಕ್ರಮವನ್ನು ತೋರಿಸಿ ಪ್ರಖ್ಯಾತಿಗೊಂಡವರ ಕುಲದಲ್ಲಿ ಹುಟ್ಟಿದವನು, ಹೇಗೆತಾನೇ ನಿರ್ವೀರ್ಯನಾಗಿರಬಹುದು? ನಿರ್ವೀರ್ಯವಾದ ಕುಲದಲ್ಲಿ ಹುಟ್ಟಿದ್ದರೂ ವೀರ್ಯವನ್ನು ಯಾವನು ತೋರಿಸುವನೋ ಅವನೇ ವಿಶೇಷ ಗೌರವಾರ್ಹನು. ಬೇರೆ ಯಾವಗುಣಗಳಿಲ್ಲದಿದ್ದರೂ ಕ್ಷತ್ರಿಯನಲ್ಲಿ ವೀರ್ಯವೆಂಬ ಒಂದು ಗುಣವುಮಾತ್ರ ಇದ್ದರೆ, ಮತ್ತು ಅವನು ಜಯದಲ್ಲಿ ಉತ್ಸಾಹವುಳ್ಳವನಾಗಿದ್ದರೆ, ಶತ್ರುಗಳನ್ನೆಲ್ಲ ಮೆಟ್ಟಿ ನಿಲ್ಲುವನು. ಬೇರೆ ಎಲ್ಲಾ ಗುಣಗಳಿಂದ ಕೂಡಿದ್ದರೂ ವೀರ್ಯಹೀನನು ಏನನ್ನು ತಾನೇ ಮಾಡಬಲ್ಲನು? ಎಲ್ಲಾ ಗುಣಗಳೂ ಪರಾಕ್ರಮದಲ್ಲಿಯೇ ಅಡಗಿರುವುವು. ಕಾರ್ಯಸಾಧನೆಗೆ ಮುಖ್ಯಾಧಾರವು ಉತ್ಸಾಹವೇ! ದೈವಪೌರುಷಗಳೆರಡೂ ಒಂದಾಗಿ ಅದನ್ನೇ ಸಹಕರಿಸುವುವು. ಒಬ್ಬನು ಒಳ್ಳೇ ಸಾಧನಬಲವುಳ್ಳವನಾಗಿದ್ದರೂ, ಎಚ್ಚರತಪ್ಪಿ ಅದನ್ನು ಉಪಯೋಗಿಸದಿದ್ದಾಗ, ಆ ಅವಕಾಶವನ್ನೇ ಕಾದುಕೊಂಡಿರುವ ಶತ್ರುಗಳಿಂದ ಅವನು ಅಡಗಿಸಲ್ಪಡುವನು. ಬಲಹೀನನಿಗೆ ಉತ್ಸಾಹಶೂನ್ಯತೆಯು ಹೇಗೋ ಹಾಗೆಯೇ, ಬಲಾಢ್ಯನಿಗೆ ಎಚ್ಚರತಪ್ಪಿರುವುದು ಹಾನಿಕರವು. ಇವೆರಡೂ ನಾಶಕಾರಿಗಳಾದುದರಿಂದ, ಜಯಾಪೇಕ್ಷೆಯುಳ್ಳ ರಾಜನು ಆವೆರಡನ್ನೂ ಬಿಟ್ಟುಬಿಡಬೇಕು. ಈಗ ನಾವು ರಾಜಸೂಯಯಾಗವನ್ನು ನಡೆಸುವ ನೆಪದಿಂದ, ಆ ಜರಾಸಂಧನನ್ನು ಕೊಲ್ಲಬೇಕಾದುದೊಂದು, ಅವನ ಸೆರೆಯಲ್ಲಿರುವ ರಾಜರನ್ನು ಬಿಡಿಸುವುದೊಂದು, ಇವೆರಡು ಮಹಾಕಾರ್ಯಗಳನ್ನು ಮಾಡಿದರೆ, ಅದಕ್ಕಿಂತಲೂ ಉತ್ತಮವೇನಿರುವುದು? ನಾವು ಕಾರ್ಯವನ್ನೇ ಆರಂಭಿಸದಿದ್ದರೆ, ಜನಗಳಿಗೆ ನಮ್ಮಲ್ಲಿ ಎಂದಿಗೂ ಶಕ್ತಿಗ್ರಹವುಂಟಾಗುವುದೇ ಇಲ್ಲ. ನಾವೇನೋ ಅದಕ್ಕೆ ತಕ್ಕ ಸಾಮರ್ಥ್ಯವುಳ್ಳವರೆಂಬುದು ನಿಸ್ಸಂದೇಹವಾಗಿರುವಾಗ, ನಮ್ಮಲ್ಲಿ ನಿನಗೆ ಗುಣಗ್ರಹಣವಿಲ್ಲದಿರುವುದೇಕೆ? ಮುಂದೆ ನಾವು ವಿರಕ್ತರಾಗಿ ಶಾಂತಿಯನ್ನು ಹಿಡಿದು ಮುನಿವೃತ್ತಿಗೆ ಹೋಗುವಾಗ, ನಮಗೆ ಕಾಷಾಯವೇನೋ ಸುಲಭವಾಗಿ ಸಿಕ್ಕತಕ್ಕ ವಸ್ತುವೇ! ಈಗಿನ ಸ್ಥಿತಿಯಲ್ಲಿ ನಮಗೆ ಸಾಮ್ರಾಜ್ಯವೆಂಬುದು

ಅಷ್ಟೇ ಸುಲಭವೆಂದು ತಿಳಿ! ನಾವು ಸುಲಭವಾಗಿ ಅದನ್ನು ಸಾಧಿಸಬಹುದು. ಆದುದರಿಂದ ಶತ್ರುಗಳನ್ನಿದಿರಿಸುವೆವು'' ಎಂದನು.

ಇದು ಹದಿನಾರನೆಯ ಅಧ್ಯಾಯವು.

ಕೃಷ್ಣನು ಧರ್ಮರಾಜನಿಗೆ ಜರಾಸಂಧನ ಉತ್ಪತ್ತಿ ಮೊದಲಾದ ವೃತ್ತಾಂತಗಳನ್ನು ಹೇಳತೊಡಗಿದುದು. ಸಂತತಿಯಿಲ್ಲದ ಬೃಹದ್ರಥನು ತಪೋವನಕ್ಕೆ ಹೋಗಿ ಅಲ್ಲಿ ಚಂಡಕೌಶಿಕಮುನಿಯ ಪ್ರಭಾವದಿಂದ ಒಂದು ಮಾವಿನ ಹಣ್ಣನ್ನು ಪಡೆದು ಅದನ್ನು ತನ್ನ ಇಬ್ಬರು ಹೆಂಡಂದಿಯರಿಗೆ ಹಂಚಿಕೊಟ್ಟುದು. ಒಂದೇ ಗರ್ಭವು ಆ ಇಬ್ಬರು ಪತ್ನಿಯರಲ್ಲಿ ಎರಡು ಹೋಳಾಗಿ ಪುಟ್ಟಲು, ಜರೆಯೆಂಬ ರಾಕ್ಷಸಿಯು ಅವುಗಳನ್ನು ಜೋಡಿಸಿದುದು.

ಆಗ ಕೃಷ್ಣನು ಧರ್ಮರಾಜನನ್ನು ಕುರಿತು "ಧರ್ಮಪುತ್ರಾ! ಈ ಅರ್ಜುನನು ಭರತವಂಶದಲ್ಲಿ ಹುಟ್ಟಿದುದಕ್ಕೂ, ಕುಂತಿಯು ಮಗನಾದುದಕ್ಕೂ, ತಕ್ಕ ಧೀರಸ್ವಭಾವವನ್ನೇ ತನ್ನ ಮಾತಿನಿಂದ ತೋರಿಸಿದನು. ಮರಣವು ಯಾವಾಗ ಹೇಗೆ ಬರುವುದೆಂಬುದನ್ನು ಯಾರೂ ಕಾಣರು. ನಮ್ಮ ಮರಣವು ಹಗಲೋ, ಅಥವಾ ರಾತ್ರಿಯೋ ಅದೊಂದನ್ನೂ ನಾವು ಕಾಣೆವು. ಅಲ್ಲದೆ, ಯುದ್ಧಕ್ಕೆ ಹೋಗದೆ ಹಿಂಜರಿಯುವುದರಿಂದ, ಮರಣವನ್ನು ತಪ್ಪಿಸಿಕೊಳ್ಳಬಹುದೆಂದೂ ನಾವು ಇದುವರೆಗೆ ಕೇಳಿದುದಿಲ್ಲ. ಆದುದರಿಂದ ಶಾಸ್ತ್ರಸಮ್ಮತವಾದ ಕೀರ್ತಿಯನ್ನು ಹಿಡಿದು ಶತ್ರುಗಳನ್ನು ಸಾಧಿಸುವುದಕ್ಕೆ ಯತ್ನಿಸಬೇಕಾದುದೇ ಮನುಷ್ಯನ ಕರ್ತವ್ಯವು. ಇದರಿಂದ ಮನುಷ್ಯನ ಮನಸ್ಸಿಗೆ ತೃಪ್ತಿಯಾದರೂ ಉಂಟು. ಅಪಾಯರಹಿತಗಳಾದ ಒಳ್ಳೇ ಉಪಾಯಗಳನ್ನವಲಂಬಿಸಿ, ಕಾರ್ಯವನ್ನು ಪಕ್ರಮಿಸುವುದು ಜಯಕಾರಣವು. ಉಭಯಪಕ್ಷದವರೂ ಇಂತಹ ಉಪಾಯಗಳನ್ನೇ ಹಿಡಿದು ಹೋದರೂ, ಅದರಿಂದುಂಟಾಗುವ ಜಯವಾಗಲಿ, ಅಪಜಯವಾಗಲಿ ಇಬ್ಬ

ರಿಗೂ ಸಮಾನವಾಗಿರಲಾರದು. ಏಕೆಂದರೆ, ಸೋಲು ಅಥವಾ ಗೆಲವೆಂಬುದು ಇಬ್ಬರಿಗೂ ಸಮವಾಗಿ ಲಭಿಸದು. ಆದರೆ, ಉಪಾಯವೂ, ನೀತಿಯೂ ಇಲ್ಲದ ಕಾರ್ಯಾರಂಭವಾದರೋ ಎಂದಿದ್ದರೂ ಅಪಜಯಕ್ಕೆ ಕಾರಣವೆಂಬುದು ನಿಶ್ಚಯವು. ಉಭಯಪಕ್ಷದವರೂ ನೀತಿ, ಉಪಾಯ ಮೊದಲಾದುವುಗಳಲ್ಲಿ ಸಮಾನಬಲವುಳ್ಳವರಾಗಿದ್ದಾಗ, ಜಯಾಪಜಯಗಳೇನೋ ಸಂದೇಹಾಸ್ಪದವೇ! ಜಯವೆಂಬುದು ಇಬ್ಬರಿಗೂ ದೊರೆಯಲಾರದು. ಆದುದರಿಂದ ಈಗಲೇ ನಾವು ನೀತಿಬಲದಿಂದ ಶತ್ರುದೇಶವನ್ನು ಮುತ್ತಿ, ನದೀಪ್ರವಾಹದ ವೇಗವು ತೀರವೃಕ್ಷಗಳನ್ನು ಹೇಗೋಹಾಗೆ, ಆ ಶತ್ರುವನ್ನು ಮುರಿದು ಕಾರ್ಯಜಯವನ್ನೇಕೆ ಹೊಂದಬಾರದು? ನಮ್ಮಲ್ಲಿರುವ ನ್ಯೂನತೆಗಳೇನನ್ನೂ ಹೊರಪಡಿಸದೆ, ಒಳ್ಳೇ ಅವಕಾಶವನ್ನು ನೋಡಿ ಶತ್ರುಗಳಮೇಲೆ ಬಿದ್ದರೆ, ನಮಗೇಕೆ ಜಯವುಂಟಾಗಬಾರದು? ಒಳ್ಳೇ ಬಲಾಢ್ಯರೂ, ಪ್ರಬಲ ಸೈನ್ಯವುಳ್ಳವರೂ ಆದ ಶತ್ರುಗಳೊಡನೆ ನಿಲ್ಲಬಾರದೆಂಬುದೆಂಬುದೇನೋ ಬುದ್ಧಿವಂತರ ನೀತಿಯೇ! ಅದು ನನಗೂ ಸರಿಯೆಂದೇ ತೋರಿದೆ. ಆದುದರಿಂದ ಈಗ ನಾವು ಬೇರೆ ಯಾರಿಗೂ ತಿಳಿಯದಂತೆ, ಶತ್ರುಗಳ ನಿವಾಸವನ್ನು ಪ್ರವೇಶಿಸಿ, ಅವನ ಸ್ಥಳವನ್ನಾಕ್ರಮಿಸಿಕೊಂಡರೆ, ನಿರಪಾಯವಾಗಿ ಕಾರ್ಯಜಯವನ್ನು ಪಡೆಯಬಹುದು. ಅದರಿಂದ ನಾವೇನೂ ದೋಷಭಾಗಿಗಳಾಗಲಾರೆವು. ಪಂಚಭೂತಗಳ ಸಮುದಾಯರೂಪವಾದ ದೇಹವನ್ನು, ಅಂತರಾತ್ಮವಾದ ಜೀವವೊಂದೇ ಧರಿಸಿರುವಂತೆ, ಪುರುಷರಲ್ಲಿ ಮೇಲೆನಿಸಿದ ಆ ಜರಾಸಂಧನು ತಾನೊಬ್ಬನೇ ಸಕಲೈಶ್ವರ್ಯವನ್ನೂ ಅನುಭವಿಸುತ್ತಿರುವನು. ಅವನಿಗೆ ಕ್ಷೀಣತೆಯೆಂಬುದನ್ನೇ ನಾನು ಕಾಣಲಿಲ್ಲ. ನಮ್ಮ ಜ್ಞಾತಿಗಳನ್ನು ರಕ್ಷಿಸುವುದಕ್ಕಾಗಿ ಅವನನ್ನು ನಾವು ಯುದ್ಧದಲ್ಲಿ ಕೊಂದರೂ, ಅಥವಾ ಅವನ ಕಡೆಯವರಿಂದ ನಾವೇ ಹತರಾದರೂ, ನಮಗೆ ಸ್ವರ್ಗವುಂಟು'' ಎಂದನು. ಆಗ ಧರ್ಮರಾಜನು ''ಕೃಷ್ಣಾ! ಆ ಜರಾಸಂಧನೆಂಬವನಾವನು? ಅವನ ವೀರ್ಯವೂ, ಪರಾಕ್ರಮವೂ ಎಂತದು? ಅಗ್ನಿಸಮಾನನಾದ ನಿನ್ನಮೇಲೆ ಬಿದ್ದರೂ, ಅವನು ಬೆಂಕಿಯಲ್ಲಿ ಬಿದ್ದ ಮಿಡಿತೆಯಂತೆ ಇನ್ನೂ ಸಾಯದಿರುವನಲ್ಲ? ಅವನಿಗೆ ಅಂತಹ ಶಕ್ತಿಯು ಹೇಗೆ ಬಂದಿತು?'' ಎಂದನು.

ಅದಕ್ಕಾ ಕೃಷ್ಣನು " ಓ ರಾಜಾ ! ಆ ಜರಾಸಂಧನ ಬಲಪರಾಕ್ರಮ ಗಳೆಂತವೆಂಬುದನ್ನೂ, ಅವನು ನಮಗೆ ಅನೇಕವಿಧವಾಗಿ ಕೆಡುಕನ್ನು ಮಾಡಿದರೂ, ನಾನು ಅವನನ್ನು ಕೊಲ್ಲದೆ ಉಪೇಕ್ಷೆಮಾಡಿ ಬಿಟ್ಟಿರುವುದ ಕ್ಕೂ ಕಾರಣವನ್ನು ತಿಳಿಸುವೆನು. ಹಿಂದೆ ಮಗಧದೇಶಕ್ಕೆ ಅಧಿಪತಿಯಾದ ಬೃಹದ್ರಥನೆಂಬ ರಾಜನಿದ್ದನು. ಅವನು ಮಹಾಬಲಾಢ್ಯನಾಗಿ, ಮೂರು ಅಕ್ಷೌಹಿಣೀಸೈನ್ಯಗಳಿಗೆ ಅಧಿಪತಿಯೆನಿಸಿಕೊಂಡು, ಯುದ್ಧದಲ್ಲಿ ತನಗೆ ಸಮಾನರಿಲ್ಲವೆಂದು ಬಹಳ ಹೆಮ್ಮೆಗೊಂಡಿದ್ದನು. ಬಹಳ ರೂಪವಂತ ನಾಗಿಯೂ, ಎಣೆಯಿಲ್ಲದ ವೀರ್ಯವುಳ್ಳವನಾಗಿಯೂ ಇದ್ದನು. ಮತ್ತು ಅವನು ಒಳ್ಳೇ ಶ್ರೀಮಂತನು. ಅವನು ಶತಕ್ರತುವಾದ ದೇವೇಂದ್ರನಂತೆ ಸದಾ ಯಜ್ಞದೀಕ್ಷೆಯನ್ನು ವಹಿಸಿ, ಯಾಗಚಿಹ್ನೆಗಳಿಂದ ಬೆಳಗುತಿದ್ದವನು. ಅವನು ತೇಜಸ್ಸಿನಲ್ಲಿ ಸೂರ್ಯನಿಗೂ, ತಾಳ್ಮೆಯಲ್ಲಿ ಭೂಮಿಗೂ, ಕೋಪ ದಲ್ಲಿ ಯಮನಿಗೂ, ಧನಸಂಪತ್ತಿನಲ್ಲಿ ಕುಬೇರನಿಗೂ ಸಮಾನನೆನಿಸಿ, ಮಗ ಧರಾಜ್ಯದ ಗಿರಿವ್ರಜದಲ್ಲಿ ತನ್ನ ರಾಜ್ಯವನ್ನು ನಡೆಸುತಿದ್ದನು. ಸೂರ್ಯನ ಕಿರಣಗಳು ಹೇಗೋಹಾಗೆ, ಅವನ ಉತ್ತಮಗುಣಗಳು ಸಮಸ್ತ ಭೂಮಿ ಯನ್ನೂ ವ್ಯಾಪಿಸಿದ್ದುವು. ಅವನು ಕಾಶಿರಾಜನಿಗೆ ಅವಳಿಮಕ್ಕಳಾಗಿ ಹುಟ್ಟಿದ ಇಬ್ಬರು ಕನ್ಯೆಯರನ್ನು ಮದುವೆಮಾಡಿಕೊಂಡನು. ರೂಪ ದಲ್ಲಿಯೂ, ಸಂಪತ್ತಿನಲ್ಲಿಯೂ ಮೇಲೆನಿಸಿದ ಆ ರಾಜಕನ್ಯೆಯರಿಬ್ಬರನ್ನೂ ಮದುವೆಯಾಗುವಾಗ ಆ ಬೃಹದ್ರಥನು, ಅವರಿಬ್ಬರನ್ನೂ ತಾನು ಸರ್ವ ವಿಧದಲ್ಲಿಯೂ ಸಮಾನವಾಗಿ ನೋಡುತ್ತ, ನಿಷ್ಪಕ್ಷಪಾತವಾಗಿ ವರ್ತಿಸುವು ದಾಗಿ ಅವರಮುಂದೆ ಪ್ರತಿಜ್ಞೆಮಾಡಿಕೊಟ್ಟನು. ಎರಡು ಹೆಣ್ಣಾನೆಗಳೊಡ ಗೂಡಿದ ಆನೆಯ ಸಲಗದಂತೆಯೂ, ಗಂಗಾ ಯಮುನಾ ನದಿಗಳ ನಡುವೆ ಮೂರ್ತಿಮತ್ತಾದ ಸಮುದ್ರದಂತೆಯೂ, ಅವನು ಆ ಇಬ್ಬರು ಪತ್ನಿಯರ ನಡುವೆ ಶೋಭಿಸುತಿದ್ದನು.

ಆ ಇಬ್ಬರು ಪತ್ನಿಯರೊಡನೆ ವಿಷಯಸುಖದಲ್ಲಿ ಮುಳುಗಿದ್ದ ಅವ ನಿಗೆ ಯೌವನಕಾಲವು ಕಳೆಯುತ್ತಬಂದರೂ, ಅವನಿಗೆ ಯಾವಳೊಬ್ಬಳಲ್ಲಿ ಯೂ ವಂಶೋದ್ಧಾರಕನಾದ ಪುತ್ರನು ಹುಟ್ಟಲಿಲ್ಲ. ಸಂತಾನಾರ್ಥಿಯಾಗಿ

ಅವನು ಅನೇಕಹೋಮಗಳನ್ನೂ, ಪುತ್ರಕಾಮೇಷ್ಟಿ ಮೊದಲಾದ ಇಷ್ಟಿಗಳನ್ನೂ, ಇನ್ನೂ ಬೇರೆಬೇರೆ ಅನೇಕಮಂಗಳಕಾರ್ಯಗಳನ್ನೂ ನಡೆಸಿದನು ಆಗಲೂ ಅವನಿಗೆ ಸಂತಾನವಾಗಲಿಲ್ಲ. ಇದಕ್ಕಾಗಿ ಅವನು ವಿರಕ್ತಿಯಿಂದ ರಾಜ್ಯವನ್ನು ಬಿಟ್ಟು, ಆ ಪತ್ನಿಯರೊಡನೆ ತಪೋವನಕ್ಕೆ ಹೊರಟುಹೋದನು. ಅವನನ್ನು ಪ್ರಜೆಗಳು ನಿರ್ಬಂಧಿಸಿ ತಡೆದರೂ ಅವನು ಕೇಳದೆಹೋದನು. ಅವನು ಹೋದ ತಪೋವನದಲ್ಲಿ, ಗೌತಮಕುಲದಲ್ಲಿ ಹುಟ್ಟಿದ ಮಹಾತ್ಮನಾದ ಕಾಕ್ಷೀವಂತನ ಮಗನಾದ ಚಂಡಕೌಶಿಕನೆಂಬ ಮಹರ್ಷಿಯೊಬ್ಬನಿರುವನೆಂದೂ, ಅವನು ದೊಡ್ಡ ತಪಸ್ವಿಯೆಂದೂ, ಉದಾರಸ್ವಭಾವವುಳ್ಳವನೆಂದೂ ಇವನು ಕೇಳಿದ್ದನು. ಇವನು ತಪೋವನಕ್ಕೆ ಹೋಗಿ ಸೇರುವಷ್ಟರಲ್ಲಿ, ಆ ಮಹರ್ಷಿಯೇ ಸಂಚಾರವಶದಿಂದ ಆಕಸ್ಮಿಕವಾಗಿ ಬಂದು ಈ ಬೃಹದ್ರಥನು ಬರುತಿದ್ದ ದಾರಿಯಲ್ಲಿ ಒಂದು ಮರದಕೆಳಗೆ ಕುಳಿತಿದ್ದನು. ಆಗ ಈ ಮಗಧರಾಜನು ತನ್ನ ಪತ್ನಿಯರೊಡನೆ ಅವನ ಬಳಿಗೆ ಹೋಗಿ, ಅವನನ್ನು ತನ್ನ ಸರ್ವಪ್ರಯತ್ನದಿಂದ ಸತ್ಕರಿಸಿ ಸಂತೋಷಗೊಳಿಸಿದನು. ಆ ಮಹರ್ಷಿಯೂ ಈ ಬೃಹದ್ರಥನನ್ನು ಪ್ರಿಯವಾಕ್ಯಗಳಿಂದ ಯಥೋಚಿತವಾಗಿ ಆದರಿಸಿದನು. ಆಮೇಲೆ ರಾಜನು ಆ ಮಹರ್ಷಿಯ ಅನುಮತಿಯಿಂದ ಅವನ ಸಮೀಪದಲ್ಲಿ ಕುಳಿತನು. ಆಗ ಸತ್ಯಸಂಧನೂ, ಧೀರನೂ ಆದ ಆ ಚಂಡಕೌಶಿಕಮುನಿಯು ರಾಜನನ್ನು ಕುರಿತು, "ಸಪತ್ನೀಕನಾಗಿ ಅನೇಕ ಬ್ರಾಹ್ಮಣರೊಡನೆ ಆ ತಪೋವನಕ್ಕೆ ಬರಲು ಕಾರಣವೇನೆಂದು" ವಿಚಾರಿಸಿದನು. ಅದಕ್ಕಾ ರಾಜನು "ಹೇ ಭಗವನ್! ನನಗೆ ಸಂತಾನವಿಲ್ಲ. ಪುತ್ರನಿಲ್ಲದಮೇಲೆ ಈ ಮುಪ್ಪಿನಲ್ಲಿ ನನಗೆ ರಾಜ್ಯದಿಂದೇನು? ಆದುದರಿಂದ ನಾನು ಪತ್ನೀಸಮೇತನಾಗಿ ಈ ವನದಲ್ಲಿ ತಪಸ್ಸನ್ನು ಮಾಡುತ್ತಿರಬೇಕೆಂದು ಬಂದೆನು. ಸಂತತಿಯಿಲ್ಲದವನಿಗೆ ಕೀರ್ತಿಯಿಲ್ಲ. ಅವನು ಮಾಡತಕ್ಕ ಸ್ವಧಾದಿ (ಪಿತೃಶ್ರಾದ್ಧಾದಿ) ಕರ್ಮಗಳೂ ಅಕ್ಷಯಫಲವನ್ನು ಕೊಡಲಾರವು" ಎಂದನು. ಆಗ ಮಹಾಮುನಿಯು ಅವನಲ್ಲಿ ಕನಿಕರದಿಂದ "ರಾಜೇಂದ್ರಾ! ನಿನ್ನ ಗುಣಕ್ಕಾಗಿ ಸಂತೋಷಪಟ್ಟೆನು. ನಿನಗೆ ಬೇಕಾದ ವರವನ್ನು ಕೇಳು. ಕೊಡುವೆನು" ಎಂದನು. ಆಗ ಆ ರಾಜನು ಸಂತಾನದಲ್ಲಿ ನಿರಾಶೆಹೊಂದಿ ಕೊರಗಿ ಕಣ್ಣೀರುಬಿಡುತ್ತ, ವ್ಯಸನ

ದಿಂದ ಗದ್ಗದಸ್ವರದೊಡನೆ "ಮುನೀಂದ್ರಾ! ಭಾಗ್ಯಹೀನನಾದ ನನಗೆ ವರಗಳಿಂದೇನು? ಮಕ್ಕಳಿಲ್ಲದೆ ನಿರಾಶೆಯಿಂದ ಪತ್ನೀಸಮೇತನಾಗಿ ತಪೋವನಕ್ಕೆ ಬಂದಿರುವ ನನಗೆ ಇನ್ನು ರಾಜ್ಯದಿಂದಾದರೂ ಆಗಬೇಕಾದುದೇನಿದೆ?" ಎಂದನು.

ಈ ಮಾತನ್ನು ಕೇಳಿ ಆ ಚಂಡಕೌಶಿಕಮುನಿಗೆ ಇನ್ನೂ ಹೆಚ್ಚಾಗಿ ಮನಸ್ಸು ಕರಗಿತು. ಸುಮ್ಮನೆ ಧ್ಯಾನಪರನಾಗಿ ಅದೇ ಮಾವಿನಮರದ ಕೆಳಗೆ ಕುಳಿತು ಮೇಲೆ ನೋಡುತಿದ್ದನು. ಹೀಗೆ ಕುಳಿತಿರುವಾಗಲೇ ಆ ಮರದಿಂದ ಚೆನ್ನಾಗಿ ಮಾಗಿದ, ಮತ್ತು ಗಿಳಿಗಳಾಗಲಿ ಕಪಿಗಳಾಗಲಿ ಕಚ್ಚದೆ ಪೂರ್ಣವಾದ ಒಂದು ಮಾವಿನಹಣ್ಣು ಇವನ ಮಡುಲಲ್ಲಿ ಬಿದ್ದಿತು. ಆಗ ಆ ಮಹರ್ಷಿಯು ಆ ಹಣ್ಣನ್ನು ಕೈಗೆತ್ತಿಕೊಂಡು, ಧ್ಯಾನದಿಂದ ಅದನ್ನು ಅಭಿಮಂತ್ರಿಸಿ, ರಾಜನನ್ನು ಕುರಿತು "ರಾಜೇಂದ್ರಾ! ಇನ್ನು ನಿನ್ನ ಕೋರಿಕೆಯು ಕೈಗೂಡಿತೆಂದು ತಿಳಿ! ನೀನು ನಿನ್ನ ರಾಜ್ಯಕ್ಕೆ ಹಿಂತಿರುಗಿ ಹೋಗು! ಇದೋ! ಈ ಫಲವನ್ನು ಗ್ರಹಿಸು. ಇದೇ ನಿನಗೆ ಪುತ್ರನೆಂದು ತಿಳಿ! ಇನ್ನು ನಿನ್ನ ತಪಃಪ್ರಯತ್ನವನ್ನು ಬಿಟ್ಟು ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿರು. ಕ್ಷತ್ರಿಯನಿಗೆ ಪ್ರಜಾಪಾಲನಕ್ಕಿಂತಲೂ ದೊಡ್ಡ ಧರ್ಮವಿಲ್ಲ. ರಾಜ್ಯದಲ್ಲಿದ್ದುಕೊಂಡೇ ನಾನಾವಿಧ ಯಜ್ಞಗಳನ್ನು ನಡೆಸು. ಸೋಮರಸದಿಂದ ಇಂದ್ರನನ್ನು ತೃಪ್ತಿಗೊಳಿಸು. ಈ ಫಲದ ಪ್ರಭಾವದಿಂದ ನೀನು ಪುತ್ರನೊಬ್ಬನನ್ನು ಪಡೆಯುವೆ. ಆ ಪುತ್ರನನ್ನು ರಾಜ್ಯದಲ್ಲಿರಿಸಿದಮೇಲೆ, ನೀನು ತಪಸ್ಸಿಗಾಗಿ ಇದೇ ಆಶ್ರಮಕ್ಕೆ ಬರಬಹುದು. ನಾನು ನಿನ್ನ ಮಗನಿಗೆ ಬ್ರಾಹ್ಮಣಭಕ್ತಿ, ಯುದ್ಧದಲ್ಲಿ ಯಾರಿಗೂ ಸೋಲದಂತಹ ಪರಾಕ್ರಮ, ಅಪಾರಬುದ್ಧಿ, ಅತಿಥಿಗಳಲ್ಲಿ ಪ್ರೀತಿ, ದೀನರಕ್ಷಣೆ, ಎಣೆಯಿಲ್ಲದ ದೇಹಬಲ, ಶಾಶ್ವತವಾದ ಕೀರ್ತಿ, ಪ್ರಜಾನುರಾಗ, ಎಂಬೀ ಎಂಟುವರಗಳನ್ನು ಕೊಟ್ಟಿರುವೆನು. ನಿನ್ನ ಕೋರಿಕೆಯು ಕೈಗೂಡಿತಷ್ಟೆ? ಇನ್ನು ಹೊರಡು" ಎಂದನು.

ಒಡನೆಯೇ ರಾಜನು ಸಂತೋಷದಿಂದ ಆ ಮಹರ್ಷಿಯ ಅನುಮತಿಯನ್ನು ಪಡೆದು, ತನ್ನ ಪತ್ನಿಯರೊಡನೆಯೂ, ತನ್ನನ್ನು ಬಿಡಲಾರದೆ

ಹಿಂಬಾಲಿಸಿಬಂದ ಪುರಜನರೊಡನೆಯೂ ತನ್ನ ರಾಜಧಾನಿಗೆ ಹಿಂತಿರುಗಿ ಬಂದನು. ಆಮೇಲೆ ಆ ರಾಜನು ಒಂದು ಸುಸಮಯವನ್ನು ನೋಡಿ, ಆ ಮಾವಿನ ಹಣ್ಣನ್ನು ಪತ್ನಿಯರಿಬ್ಬರಿಗೂ ಸಮವಾಗಿ ಹಂಚಿಕೊಟ್ಟನು. ವಿವಾಹಕಾಲದಲ್ಲಿ ತಾನು ಆ ಇಬ್ಬರಲ್ಲಿಯೂ ನಿಷ್ಪಕ್ಷಪಾತವಾಗಿ ವರ್ತಿಸುವುದಾಗಿ ಪ್ರತಿಜ್ಞೆಮಾಡಿಕೊಟ್ಟದ್ದಂತೆ, ಆ ಹಣ್ಣನ್ನು ಅವರಿಬ್ಬರಿಗೂ ಕೊಡಲು, ಕಾಲವೈಪರೀತ್ಯದಿಂದಲೂ, ಆ ಮಹರ್ಷಿಯಲ್ಲಿರುವ ಗೌರವಬುದ್ಧಿಯಿಂದಲೂ ಆ ರಾಜಪತ್ನಿಯರಿಬ್ಬರೂ ಅದನ್ನು ಸಮಭಾಗವಾಗಿ ಮಾಡಿ ಭಕ್ಷಿಸಿದರು. ಮುಂದೆ ಇದು ಅನರ್ಥಕಾರಣವಾಗಿ ಪರಿಣಮಿಸಬೇಕಾದ ವಿಧಿಯಿದ್ದುದರಿಂದಲೂ, ಆ ಮಹರ್ಷಿಯ ಮಾತು ಸತ್ಯವಾದುದರಿಂದಲೂ, ಆ ಪತ್ನಿಯರಿಬ್ಬರಲ್ಲಿಯೂ ಏಕಕಾಲದಲ್ಲಿ ಗರ್ಭವು ತಲೆದೋರಿತು. ಇದನ್ನು ನೋಡಿ ಬೃಹದ್ರಥರಾಜನಿಗೆ, ತನಗೆ ಎರಡುಮಕ್ಕಳಾಗುವರೆಂಬ ದ್ವಿಗುಣವಾದ (ಇಮ್ಮಡಿಯಾದ) ಸಂತೋಷವುಂಟಾಯಿತು. ಆಮೇಲೆ ಸಕಾಲದಲ್ಲಿ ಇಬ್ಬರಿಗೂ ಪ್ರಸವವಾಯಿತು. ಆದರೇನು ? ಒಂದೇ ಪುರುಷಶರೀರವು ಎರಡು ಸಮಭಾಗವಾಗಿ, ಒಬ್ಬೊಬ್ಬರಲ್ಲಿ ಒಂದೊಂದು ಅರ್ಧಭಾಗವು ಹುಟ್ಟಿತು. ಒಂದೇ ಕೈ, ಒಂದು ಕಾಲು, ಅರ್ಧಹೊಟ್ಟೆ, ಅರ್ಧ ಮುಖ, ಹೀಗೆ ಒಂದೇ ಶರೀರದ ಎರಡು ತುಂಡುಗಳು ಬೇರೆಬೇರೆಯಾಗಿ ತಮ್ಮ ಗರ್ಭದಿಂದ ಹುಟ್ಟಿದುದನ್ನು ಕಂಡು ಆ ಸ್ತ್ರೀಯರಿಬ್ಬರೂ ಬೆಚ್ಚಿಬೆರಗಾದರು. ಸಹೋದರಿಯರಾದ ಆ ರಾಜಪತ್ನಿಯರಿಬ್ಬರೂ ಭಯದಿಂದ ಒಬ್ಬರಮುಖವನ್ನೊಬ್ಬರು ನೋಡುತ್ತ ಮುಂದೇನುಮಾಡಬೇಕೆಂದಾಲೋಚಿಸಿ, ಅದಕ್ಕೆ ಜೀವವಿದ್ದಾಗಲೇ ಆ ದೇಹಭಾಗಗಳೆರಡನ್ನೂ ವ್ಯಸನದಿಂದ ನಿರಾಕರಿಸಿಬಿಟ್ಟರು. ಆಮೇಲೆ ಅವರ ದಾದಿಯರಿಬ್ಬರು, ಆ ಶರೀರಭಾಗಗಳೆರಡನ್ನೂ ಒಂದು ಬಿಳೀ ಬಟ್ಟೆಯಲ್ಲಿ ಚೆನ್ನಾಗಿ ಮುಚ್ಚಿಕೊಂಡು, ಅಂತಃಪುರದ ಬಾಗಿಲಿನಿಂದ ಹೊರಗೆ ತಂದು, ಯಾರಿಗೂ ತಿಳಿಯದಂತೆ, ನಾಲ್ಕು ಬೀದಿಗಳು ಕೂಡುವ ಒಂದು ಚೌಕದಲ್ಲಿ ಬಿಸಾಡಿ, ಹಿಂತಿರುಗಿ ಅಂತಃಪುರಕ್ಕೆ ಹೋಗಿ, ತಾವು ಮಾಡಿಬಂದ ಕೆಲಸವನ್ನು ತಮ್ಮತಮ್ಮ ಅರಸಿಯರಿಗೆ ಬೇರೆಬೇರೆಯಾಗಿ ತಿಳಿಸಿದರು.

ಆಮೇಲೆ ಇತ್ತಲಾಗಿ ಆ ಬೀದಿಯ ಚೌಕದಲ್ಲಿ ಬಿದ್ದಿದ್ದ ಶರೀರದ ಹೋಳುಗಳು, ಆ ರಾತ್ರಿ ಸಂಚಾರವಶದಿಂದ ಅದೇ ದಾರಿಯಾಗಿ ಬರು ತಿದ್ದ ನರಮಾಂಸಭಕ್ಷಿಣಿಯಾದ ಜರೆಯೆಂಬ ರಾಕ್ಷಸಿಯೊಬ್ಬಳ ಕಣ್ಣಿಗೆ ಬಿದ್ದುವು. ಅವಳು ಆ ಎರಡು ಹೋಳುಗಳನ್ನೂ ಆಸೆಯಿಂದ ಕೈಗೆತ್ತಿ ಕೊಂಡು, ಅವುಗಳನ್ನು ಸುಲಭವಾಗಿ ಸಾಗಿಸಿಕೊಂಡುಹೋಗುವುದಕ್ಕೆ ಅನುಕೂಲಿಸುವಂತೆ, ಆ ಹೋಳುಗಳೆರಡನ್ನೂ ಒಂದಾಗಿ ಸೇರಿಸಿ ಸರಿ ಮಾಡಿಟ್ಟುಕೊಂಡಳು. ದೈವಬಲದಿಂದ ಪ್ರೇರಿತಳಾದ ಆ ರಾಕ್ಷಸಿಯು ಆ ಹೋಳುಗಳನ್ನು ಜೋಡಿಸಿದೊಡನೆ, ಅವೆರಡೂ ಒಂದಾಗಿ ಸೇರಿಕೊಂಡು, ವೀರನಾದ ಒಂದು ರಾಜಕುಮಾರನಂತೆ ಕಾಣಿಸಿತು. ಅದನ್ನು ನೋಡಿ ಆ ರಾಕ್ಷಸಿಯು ಆಶ್ಚರ್ಯದಿಂದ ಬೆರಗಾದಳು. ಅಲ್ಲದೆ, ವಜ್ರದಂತೆ ದೃಢದೇಹವುಳ್ಳ ಆ ಶಿಶುವನ್ನು ಎತ್ತಿಕೊಂಡು ಹೋಗುವುದಕ್ಕೂ ಅವಳಿಗೆ ಅಸಾಧ್ಯವಾಯಿತು. ಮತ್ತು ಆ ಶಿಶುವು ಕೆಂಪಾದ ಅಂಗೈಯುಳ್ಳ ತನ್ನ ಮುಷ್ಟಿಯನ್ನು ಬಾಯಲ್ಲಿಟ್ಟುಕೊಂಡು ರೋದಿಸತೊಡಗಿದಾಗ, ಮಳೆಗಾ ಲದ ಮೇಘವು ಗುಡುಗಿದಂತೆ ಶಬ್ದವಾಯಿತು. ಮಗುವು ರೋದಿಸಿದ ಈ ಮಹಾಧ್ವನಿಯು ರಾಜನಿಗೂ, ಅವನ ಅಂತಃಪುರದಲ್ಲಿದ್ದ ಸ್ತ್ರೀಯರೆಲ್ಲ ರಿಗೂ ಕೇಳಿಸಿತು. ಆಗ ಅಲ್ಲಿದ್ದ ಸ್ತ್ರೀಯರೂ, ಬೃಹದ್ರಥರಾಜನೂ ಆ ಧ್ವನಿಯನ್ನು ಕೇಳಿ ಬೆಜ್ಜರಗೊಂಡು ಓಡಿಬಂದರು. ಸಂತಾನದಲ್ಲಿ ನಿರಾ ಶೆಹೊಂದಿದ್ದ ಆ ರಾಜಪತ್ನಿಯರಿಬ್ಬರೂಕೂಡ, ತೊರೆಯಿಕ್ಕುವ ಸ್ತನ ಗಳೊಡನೆ ಆತುರದಿಂದ ಓಡಿಬಂದರು. ಆಗಲೇ ಪ್ರಸವಿಸಿ, ಇನ್ನೂ ಹಸೀ ಮೈಯುಳ್ಳ ಬಾಣಂತಿಯರಿಬ್ಬರೊಡನೆ, ರಾಜನು ಆತುರದಿಂದ ಓಡಿ ಬಂದುದನ್ನೂ, ಮಹಾಬಲಿಷ್ಠನಾದ ಆ ಬಾಲನನ್ನೂ ನೋಡಿದಮೇಲೆ, ಆ ರಾಕ್ಷಸಿಗೆ ಆ ಶಿಶುವು ಅವರದೇ ಎಂದು ನಿರ್ಧರವಾಯಿತು. ಅಲ್ಲದೆ ಆಗ ಅವಳಿಗೆ ಮನಸ್ಸಿನಲ್ಲಿ ಒಂದು ಯೋಚನೆಯು ಹುಟ್ಟಿತು. “ಈ ರಾಜನೋ ಬಹಳ ಧಾರ್ಮಿಕನು. ಮಹಾತ್ಮನು. ಬಹುಕಾಲದಿಂದ ಸಂ ತಾನಾಪೇಕ್ಷೆಯುಳ್ಳವನು. ನಾನು ಇವನ ರಾಜ್ಯದಲ್ಲಿ ವಾಸಿಸುತ್ತಿರುವೆನು. ಹೀಗಿರುವಾಗ ಈ ರಾಜನ ಮಗನಾದ ಈ ಬಾಲನನ್ನು ಕೊಲ್ಲುವುದು ನನಗೆ ಉಚಿತವಲ್ಲ” ಎಂದು ನಿಶ್ಚಯಿಸಿಕೊಂಡಳು. ಒಡನೆಯೇ ಆಕೆ

ಯು ತನ್ನ ರಾಕ್ಷಸಸ್ವರೂಪವನ್ನು ಮರೆಸಿಕೊಂಡು ಮನುಷ್ಯರೂಪವನ್ನು ತಾಳಿ, ಆ ಬಾಲನನ್ನು ಕೈಯಲ್ಲಿಟ್ಟುಕೊಂಡೇ ರಾಜನಮುಂದೆ ಬಂದು "ಓ ಬೃಹದ್ರಥ ರಾಜೇಂದ್ರಾ! ಇವನು ನಿನ್ನ ಮಗನು. ಇವನನ್ನು ನಾನು ಬದುಕಿಸಿರುವೆನು. ಸ್ವೀಕರಿಸು. ಬ್ರಾಹ್ಮಣನ ವರಬಲದಿಂದ ಈ ಮಗುವು ನಿನ್ನ ಇಬ್ಬರು ಪತ್ನಿಯರಲ್ಲಿ ಬೇರೆಬೇರೆ ಭಾಗಗಳಾಗಿ ಹುಟ್ಟಿದುದರಿಂದ, ನಿನ್ನ ದಾದಿಯರು ಅದನ್ನು ಬಿಸಾಡಿ ಬಂದರು. ಅದನ್ನು ನಾನು ಕಾಪಾಡಿದೆನು" ಎಂದಳು.

ಓ ಧರ್ಮಪುತ್ರಾ! ಒಡನೆಯೇ ಕಾಶೀರಾಜಪುತ್ರಿಯರಾದ ಆ ರಾಜಪತ್ನಿಯರಿಬ್ಬರೂ ಮುಂದೆಬಂದು ಆ ಬಾಲಕನನ್ನೆತ್ತಿ ಸ್ತನ್ಯಗಳಿಂದ ಅದರ ಮೈಯನ್ನು ತೊಳೆದರು. ಬೃಹದ್ರಥನೂ ಪರಮಸಂತುಷ್ಟನಾಗಿ, ಸುವರ್ಣದಂತಿರುವ ದೇಹವರ್ಣದಿಂದ ಶೋಭಿಸುತ್ತ, ಮನುಷ್ಯರೂಪದಲ್ಲಿರುವ ಆ ರಾಕ್ಷಸಿಯನ್ನು ಕುರಿತು "ಅಮ್ಮಾ! ಕಮಲದೆಸಳಿನಂತೆ ಮೈಬಣ್ಣವುಳ್ಳ ನೀನು ಯಾವಳು? ನನ್ನ ಪುತ್ರನನ್ನು ಕರುಣಿಸಿದ ನೀನು ಯಾವಳೋ ದೇವತೆಯಂತೆ ಕಾಣುವೆ. ನೀನು ಯಾರೆಂಬುದನ್ನು ವಿವರವಾಗಿ ನನಗೆ ತಿಳಿಸು" ಎಂದನು.

ಇದು ಹದಿನೇಳನೆಯ ಅಧ್ಯಾಯವು.

---

{ ಜರೆಯೆಂಬ ರಾಕ್ಷಸಿಯು ಬೃಹದ್ರಥನಿಗೆ ತನ್ನ ನಿಜಸ್ಥಿತಿಯನ್ನು ತಿಳಿಸಿ ಕಣ್ಮರೆಯಾದುದು. }

ಆಗ ರಾಕ್ಷಸಿಯು "ರಾಜೇಂದ್ರಾ! ನಾನೊಬ್ಬ ರಾಕ್ಷಸಿ! ನನಗೆ ಜರೆಯೆಂದು ಹೆಸರು. ನಾನು ಆಯಾಕಾಲಕ್ಕೆ ಇಷ್ಟಬಂದಂತೆ ರೂಪವನ್ನು ಧರಿಸಬಲ್ಲವಳು. ನಾನು ನಿನ್ನ ಮನೆಯಲ್ಲಿಯೇ ವಿಶೇಷಪೂಜೆಗಳನ್ನು ಪಡೆಯುತ್ತ ಸುಖವಾಗಿ ಇರುತಿದ್ದವಳು. ಮತ್ತು ನಾನು ಮನುಷ್ಯರ ಮನೆಮನೆಗಳಲ್ಲಿಯೂ ಯಾವಾಗಲೂ ಇರತಕ್ಕವಳು. ಮೊದಲು ಬ್ರಹ್ಮನು

ನನ್ನನ್ನು ಗೃಹದೇವಿಯೆಂಬ ಹೆಸರಿನಿಂದ ಸೃಷ್ಟಿಸಿರುವನು. ರಾಕ್ಷಸವಿನಾಶಕ್ಕಾಗಿ ದಿವ್ಯರೂಪದಿಂದ ನನ್ನನ್ನು ಮನೆಗಳಲ್ಲಿಡುವರು. ಯಾವನು ಪುತ್ರಸಹಿತಳಾದ ನನ್ನನ್ನು ಭಕ್ತಿಯಿಂದ ತನ್ನ ಮನೆಯಗೋಡೆಯಲ್ಲಿ ಬರೆದಿಡುವನೋ ಅವನ ಮನೆಗೆ ಏಳಿಗೆಯುಂಟು. ಹಾಗಿಲ್ಲದ ಮನೆಯು ಕ್ಷೀಣಿಸಿಹೋಗುವುದು. ಓ ಪ್ರಭೂ! ನಿನ್ನ ಮನೆಯಲ್ಲಿ ನಾನು ಯಾವಾಗಲೂ ಪೂಜಿತಳಾಗಿ ನೆಲೆಗೊಂಡಿದ್ದವಳು. ನನ್ನ ಅನೇಕ ಪುತ್ರರೊಡನೆ ನಿನ್ನ ಮನೆಯ ಗೋಡೆಗಳಲ್ಲಿ ನನ್ನ ಆಕಾರವು ಚಿತ್ರಿಸಲ್ಪಟ್ಟಿರುವುದು. ಗಂಧ, ಪುಷ್ಪ, ಧೂಪ, ದೀಪ, ಭಕ್ಷ್ಯ, ಭೋಜ್ಯಾದಿಗಳಿಂದ ನನಗೆ ಚೆನ್ನಾಗಿ ಪೂಜೆಯು ನಡೆಯುತ್ತಿದ್ದಿತು. ಅದಕ್ಕೆ ತಕ್ಕಂತೆ ನಾನೂ ನಿನಗೆ ಏನಾದರೂ ಪ್ರತ್ಯುಪಕಾರವನ್ನು ಮಾಡಬೇಕೆಂದು ಯೋಚಿಸುತ್ತಲೇ ಇದ್ದೆನು. ಈಗ ಅಕಸ್ಮಾತ್ತಾಗಿ ನಿನ್ನ ಮಗುವಿನ ಶರೀರದ ಈ ಎರಡು ಹೋಳುಗಳು ನನ್ನ ದೃಷ್ಟಿಗೆ ಬಿದ್ದುವು. ಅವೆರಡನ್ನೂ ನಾನು ಜೋಡಿಸಿ ಹಿಡಿದಾಗ, ದೈವವಶದಿಂದ ಒಬ್ಬ ಕುಮಾರನಾದನು. ಆದರೆ, ಇದರಲ್ಲಿ ನಾನು ನಿಮಿತ್ತಮಾತ್ರವೇ ಹೊರತು ಇದು ನಿನ್ನ ಭಾಗ್ಯವಶದಿಂದಲೇ ಆದುದು. ಬೃಹದ್ರಥಾ! ನಾನು ಮಹಾಮೇರುಪರ್ವತವನ್ನಾದರೂ ಕಡಿದು ತಿನ್ನಬಲ್ಲವಳು. ಇನ್ನು ಈ ಸಣ್ಣ ಬಾಲಕನ ಮಾತೇನು? ಆದರೆ, ನಿನ್ನ ಮನೆಯಲ್ಲಿ ನಾನು ನಿತ್ಯ ಪೂಜೆಯನ್ನು ಪಡೆಯುತ್ತಿದ್ದುದರಿಂದ, ಅದಕ್ಕೆ ಮೆಚ್ಚಿ ನಾನು ಈ ನಿನ್ನ ಮಗನನ್ನು ನಿನಗೇ ಹಿಂತಿರುಗಿ ಒಪ್ಪಿಸಿಬಿಟ್ಟೆನು. ಈ ನಿನ್ನ ಕುಮಾರನು ಲೋಕದಲ್ಲಿ ನನ್ನ ಹೆಸರಿನಿಂದಲೇ ಪ್ರಖ್ಯಾತನಾಗುವನು" ಎಂದು ಹೇಳಿ, ಆ ರಾಕ್ಷಸಿಯು ಅಲ್ಲಿಯೇ ಕಣ್ಮರೆಯಾಗಿಬಿಟ್ಟಳು. ಆಮೇಲೆ ಬೃಹದ್ರಥನು ಆ ಕುಮಾರನನ್ನೆತ್ತಿಕೊಂಡು ತನ್ನ ಮನೆಗೆ ಬಂದನು. ಆಗಲೇ ಆ ಬಾಲಕನಿಗೆ ಶಾಸ್ತ್ರೋಕ್ತವಾಗಿ ಮಾಡಬೇಕಾದ ಸಂಸ್ಕಾರಗಳನ್ನೆಲ್ಲ ನಡೆಸಿದನು. ಆಮೇಲೆ ತನ್ನ ದೇಶದೊಳಗೆಲ್ಲ ಆ ರಾಕ್ಷಸಿಯನ್ನುದ್ದೇಶಿಸಿ ದೊಡ್ಡ ಮಹೋತ್ಸವಗಳನ್ನು (ಜಾತ್ರೆಗಳನ್ನು) ನಡೆಸಬೇಕೆಂದು ಎಲ್ಲಾ ಕಡೆಯೂ ಸಾರಿಸಿದನು. ತನ್ನ ಬಾಲಕನು ಜರೆಯಿಂದ ಜೋಡಿಸಲ್ಪಟ್ಟವನಾದುದರಿಂದ ಅವನಿಗೆ

“ಜರಾಸಂಧ”ನೆಂದೇ ನಾಮಕರಣವನ್ನು ಮಾಡಿದನು. ಆ ಬಾಲಕನು ದಿನದಿನಕ್ಕೆ ಪ್ರವರ್ಧಮಾನನಾಗಿ ದೇಹಬಲದಲ್ಲಿಯೂ, ಆಕೃತಿಯಲ್ಲಿಯೂ ಅಸಮಾನನೆನಿಸಿಕೊಂಡು, ಹುತಮಾಡಿದ ಅಗ್ನಿಯಂತೆ ಮಹಾ ತೇಜಸ್ಸಿನಿಂದ ಬೆಳಗುತಿದ್ದನು. ಅವನು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಬೆಳೆದು, ತಂದೆತಾಯಿಗಳಿಗೆ ಆನಂದಕರನಾಗಿ ಕಾಲಕ್ರಮದಿಂದ ಯೌವನಕ್ಕೆ ಬಂದನು.

ಇದು ಹದಿನೆಂಟನೆಯ ಅಧ್ಯಾಯವು.



ಚಂಡಕೌಶಿಕಮುನಿಯು ತಿರುಗಿ ಬೃಹದ್ರಥನ ಬಳಿಗೆ ಬಂದುದು. ಬೃಹದ್ರಥನು ತನ್ನ ಮಗನಿಗೆ ರಾಜ್ಯವನ್ನೊಪ್ಪಿಸಿ ತಪೋವನಕ್ಕೆ ಹೊರಟುಹೋದುದು. ಕಂಸವಧವೇ ಜರಾಸಂಧನಿಗೆ ತನ್ನಲ್ಲಿ ವೈರಕಾರಣವೆಂಬುಧನ್ನು ಕೃಷ್ಣನು ಧರ್ಮರಾಜನಿಗೆ ತಿಳಿಸಿದುದು.

ಓ ಧರ್ಮರಾಜಾ! ಕೇಳು! ಆಮೇಲೆ ಸ್ವಲ್ಪ ಕಾಲವು ಕಳೆಯಲು ಪೂಜ್ಯನಾದ ಚಂಡಕೌಶಿಕಮುನಿಯು ಬೃಹದ್ರಥನ ದೇಶಕ್ಕೆ ಬಂದನು. ಅವನು ಬಂದುದನ್ನು ಕೇಳಿದೊಡನೆ ಮಗಧರಾಜನಾದ ಬೃಹದ್ರಥನು ತನ್ನ ಮಂತ್ರಿಗಳೊಡನೆಯೂ, ಪತ್ನೀಪುತ್ರರೊಡನೆಯೂ ಇದಿರುಗೊಂಡು ಬಂದು, ಅರ್ಘ್ಯಪಾದ್ಯಾಚಮನೀಯಾದಿ ಸತ್ಕಾರಗಳಿಂದ ಆ ಮಹರ್ಷಿಯನ್ನು ಪೂಜಿಸಿದನು. ಮತ್ತು ತನ್ನ ಮಗನನ್ನೂ, ತನ್ನ ರಾಜ್ಯವನ್ನೂ, ಆತನಿಗೇ ಒಪ್ಪಿಸಿದನು. ಆಗ ಆ ಮಹರ್ಷಿಯು ಆ ಪೂಜಾದಿಗಳನ್ನು ಸ್ವೀಕರಿಸಿ, ಸಂತುಷ್ಟನಾಗಿ ಆ ರಾಜನನ್ನು ಕುರಿತು “ರಾಜಾ! ನಾನು ದಿವ್ಯದೃಷ್ಟಿಯಿಂದಲೇ ಈ ನಿನ್ನ ಮಗನ ವಿಚಾರಗಳನ್ನೆಲ್ಲ ತಿಳಿದುಕೊಂಡೆನು. ಈ ನಿನ್ನ ಮಗನು ಮುಂದೆ ಎಂತಹ ಪ್ರಾಬಲ್ಯಕ್ಕೆ ಬರುವನೆಂಬುದನ್ನೂ ನನ್ನ ಜ್ಞಾನದೃಷ್ಟಿಯಿಂದ ತಿಳಿದಿರುವೆನು. ಅದನ್ನು ತಿಳಿಸುವೆನು ಕೇಳು. ಇವನ ರೂಪವೂ, ಬಲವೂ, ವೀರ್ಯವೂ ಅಚಂಚಲವಾದುದು. ಇವನು ಉತ್ತಮಭಾಗ್ಯವಂತನಾಗಿ ಹುಟ್ಟಿರುವನು. ಇವನು ತನ್ನ ಪರಾಕ್ರಮದಿಂದ

ಲೇ ಮೊದಲು ಹೇಳಿದ ಎಲ್ಲಾ ಮೇಲ್ಮೆಗಳನ್ನೂ ಪಡೆಯುವನು. ವಿನತಾ ಪುತ್ರನಾದ ಗರುಡನ ವೇಗವನ್ನು ಇತರ ಪಕ್ಷಿಗಳು ಹೇಗೋಹಾಗೆ, ಬೇರೆ ಯಾವ ರಾಜರೂ ಈ ನಿನ್ನ ಬಾಲಕನನ್ನು ವೀರ್ಯದಲ್ಲಿ ಹಿಂಬಾಲಿಸಲಾ ರರು. ಇವನಲ್ಲಿ ವಿರೋಧವನ್ನು ಬೆಳೆಸಿದವರು ಕೆಟ್ಟುಹೋಗುವರು. ನದೀ ವೇಗಗಳು ಬೆಟ್ಟವನ್ನು ಹೇಗೋಹಾಗೆ, ದೇವತೆಗಳಿಂದ ಪ್ರಯೋಗಿಸಲ್ಪಟ್ಟ ಮಹಾಸ್ತ್ರಗಳಾದರೂ ಇವನನ್ನು ಕದಲಿಸಲಾರವು. ಮೂರ್ಧಾಭಿಷಿಕ್ತರಾದ ಎಲ್ಲಾ ರಾಜರ ತಲೆಯನ್ನೂ ಇವನು ಮೆಟ್ಟಿ, ರಾಜಾಧಿರಾಜನೆನಿಸಿಕೊಂಡು ಬೆಳಗುವನು. ಸೂರ್ಯನು ಇತರ ತೇಜಸ್ಸುಗಳನ್ನೆಲ್ಲ ನಿಗ್ರಹಿಸುವಂತೆ ಇವನು ಎಲ್ಲಾ ಕ್ಷತ್ರಿಯರ ತೇಜಸ್ಸನ್ನೂ ಅಡಗಿಸುವನು. ಎಷ್ಟೇ ಸೇನಾ ಬಲವುಳ್ಳವರಾಗಿದ್ದರೂ ಇವನನ್ನಿದಿರಿಸಿ ಬಂದ ರಾಜರು, ಬೆಂಕಿಯಮೇಲೆ ಬಿದ್ದ ಮಿಡಿತೆಗಳಂತೆ ನಾಶಹೊಂದುವರು. ವರ್ಷಾಕಾಲದಲ್ಲಿ ಉಕ್ಕಿ ಬರುವ ನದೀಪ್ರವಾಹಗಳನ್ನೆಲ್ಲ ಸಮುದ್ರವು ತನ್ನಲ್ಲಿ ಅಡಗಿಸಿಡುವಂತೆ, ಇವನು ಎಲ್ಲಾ ರಾಜರ ಐಶ್ವರ್ಯವನ್ನೂ ತನ್ನ ಕಡೆಗೆ ಎಳೆದುಕೊಳ್ಳುವನು. ಇವ ನು ಮಹಾಬಲಾಢ್ಯನೆನಿಸಿಕೊಂಡು, ವರ್ಣಾಶ್ರಮಧರ್ಮಗಳನ್ನು ಚೆನ್ನಾ ಗಿ ಕಾಪಾಡುವನು. ಸಸ್ಯಸಮೃದ್ಧವಾದ ಸಮಸ್ತ ಭೂಮಿಯನ್ನೂ ತನ್ನ ವಶಮಾಡಿಕೊಳ್ಳುವನು. ಪ್ರಾಣಿಗಳೆಲ್ಲವೂ ಸರ್ವಭೂತಗಳಿಗೂ ಆತ್ಮ ನಾದ ವಾಯುವಿಗೆ ಅಧೀನವಾಗಿರುವಂತೆ, ಎಲ್ಲಾ ರಾಜರೂ ಇವನ ಆಜ್ಞಾ ನುವರ್ತಿಗಳಾಗಿ ನಡೆಯುವರು. ಇವನು ಮಹಾದೇವನಾದ ರುದ್ರನನ್ನು ಸಾಕ್ಷಾತ್ಕರಿಸಿಕೊಂಡು ಪ್ರತ್ಯಕ್ಷವಾಗಿ ನೋಡಬಲ್ಲನು" ಎಂದನು.

ಓ ಧರ್ಮರಾಜಾ! ಆ ಚಂಡಕೌಶಿಕನು ಹೀಗೆ ಮಾತಾಡುತ್ತಿರು ವಾಗಲೇ ತನ್ನ ತಪಃಕಾರ್ಯವನ್ನು ನೆನೆಸಿಕೊಂಡು, ಆ ರಾಜನನ್ನು ಬಿಟ್ಟು ತನ್ನ ದಾರಿಯನ್ನು ಹಿಡಿದು ಹೊರಟುಹೋದನು. ಆಮೇಲೆ ಇತ್ತಲಾಗಿ ಬೃಹದ್ರಥನು ಬಂಧುಮಿತ್ರರೊಡಗೂಡಿ ತನ್ನ ಮಗನಾದ ಜರಾಸಂಧ ನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿ, ನಿಶ್ಚಿಂತನಾಗಿ, ಒಡನೆಯೇ ತನ್ನ ಇಬ್ಬರು ಪತ್ನಿಯರೊಡನೆ ತಪೋವನಕ್ಕೆ ಹೊರಟುಬಿಟ್ಟನು.

ತಂದೆತಾಯಿಗಳು ತಪೋವನಕ್ಕೆ ಹೊರಟುಹೋದಮೇಲೆ ಇತ್ತಲಾಗಿ ಜರಾಸಂಧನು ತನ್ನ ವೀರ್ಯದಿಂದ ಅನೇಕರಾಜರನ್ನು ಜಯಿಸಿ, ವಶಮಾಡಿಕೊಂಡನು. ಅತ್ತಲಾಗಿ ಬೃಹದ್ರಥನು ತಪೋವನದಲ್ಲಿ ಬಹುಕಾಲವಿದ್ದು ಸ್ವರ್ಗಸ್ಥನಾದನು. ಕಾಲಕ್ರಮದಿಂದ ಜರಾಸಂಧನು ಚಂಡಕೌಶಿಕಮುನಿಯು ಹೇಳಿದ್ದ ರೀತಿಯಲ್ಲಿಯೇ ಎಲ್ಲಾ ವರಗಳನ್ನೂ ಪಡೆದು ರಾಜ್ಯವನ್ನಾಳುತ್ತಿದ್ದನು.

ಓ ಧರ್ಮರಾಜಾ! ಇದು ಹೀಗಿರಲು, ನಾನು ಕಂಸನನ್ನೂ ಮತ್ತು ಜರಾಸಂಧನಿಗೆ ಪರಮಾಪ್ತರಾಗಿದ್ದ ಹಂಸಡಿಂಭಕರಿಬ್ಬರನ್ನೂ ಕೊಂದೆನಷ್ಟೆ? ಆಗ ಕಂಸನ ಪತ್ನಿಯರಾದ ಜರಾಸಂಧನ ಕುಮಾರಿಯರಿಬ್ಬರೂ ತಮ್ಮ ವೈಧವ್ಯಕ್ಕಾಗಿ ತಮ್ಮ ತಂದೆಯ ಮುಂದೆ ಬಂದು ನಿಂತು ಗೋಳಾಡಿದರು. ಜರಾಸಂಧನಿಗೆ ನನ್ನಮೇಲೆ ವೈರವುಂಟಾಗಲು ಅದೇ ಮುಖ್ಯಕಾರಣವಾಯಿತು. ಓ ಧರ್ಮಪುತ್ರಾ! ಆ ಜರಾಸಂಧನು ನನ್ನಮೇಲಿನ ದ್ವೇಷದಿಂದ ತನ್ನ ಗದೆಯನ್ನು ತೊಂಭತ್ತೊಂಭತ್ತುಸಾರಿ ಗಿರಗಿರನೆ ಸುತ್ತಿಸಿ, ತಾನಿದ್ದ ಗಿರಿವ್ರಜದಿಂದಲೇ ನನ್ನ ಕಡೆಗೆ ಗುರಿಯಿಟ್ಟು ಬೀಸಿದನು. ಆಗ ನಾನು ಮಧುರೆಯಲ್ಲಿದ್ದೆನು. ಅವನು ವೇಗದಿಂದ ಪ್ರಯೋಗಿಸಿದ ಆ ಮಹಾಗದೆಯು, ಎಲ್ಲರಿಗೂ ಆಶ್ಚರ್ಯವುಂಟಾಗುವಂತೆ ಒಂಭೈನೂರ ತೊಂಭತ್ತು ಯೋಜನಗಳ ದೂರವನ್ನು ದಾಟಿ ಮಧುರಾಪುರಿಯ ಸಮೀಪದಲ್ಲಿ ಬಿದ್ದಿತು. ನಗರವಾಸಿಗಳೆಲ್ಲರೂ ತಮ್ಮ ಪಟ್ಟಣದ ಸಮೀಪದಲ್ಲಿ ಬಿದ್ದ ಆ ಗದೆಯನ್ನು ಕಂಡು ಬೆರಗಾಗಿ, ನನ್ನಲ್ಲಿ ಬಂದು ತಿಳಿಸಿದರು. ಈಗಲೂ ಆ ಮಧುರೆಯ ಪಕ್ಕದಲ್ಲಿರುವ ಪ್ರದೇಶವು '**ಗದಾವಸಾನ**'ವೆಂಬ ಹೆಸರಿನಿಂದ ಕರೆಯಲ್ಪಡುವುದು. ಆ ಜರಾಸಂಧನಿಗೆ ಹಂಸಡಿಂಭಕರೆಂಬ ಇಬ್ಬರು ಪ್ರಧಾನಮಂತ್ರಿಗಳಿದ್ದರು. ಅವರು ಯಾವ ಶಸ್ತ್ರಗಳಿಂದಲೂ ಸಾಯತಕ್ಕವರಲ್ಲ. ಇಬ್ಬರೂ ಬಹಳ ಬುದ್ಧಿವಂತರು. ರಾಜನೀತಿಗಳಲ್ಲಿ ಬಹಳ ನಿಪುಣರು. ಅವರ ಸಂಗತಿಯನ್ನು ಮೊದಲೇ ನಾನು ನಿನಗೆ ಹೇಳಿರುವೆನು. ಜರಾಸಂಧನು, ಹಂಸಡಿಂಭಕರು, ಈ ಮೂವರ ಕೈಗೆ ಮೂರು ಲೋಕವೂ ಸಾಲದೆಂದು ನನ್ನ ಅಭಿಪ್ರಾಯವು. ಈ ಕಾರಣದಿಂದಲೇ

ಕುಕುರರೂ, ಅಂಧಕರೂ, ವೃಷ್ಣಿಗಳೂ ಮಹಾಬಲಾಢ್ಯರಾಗಿದ್ದರೂ ಆ ಜರಾಸಂಧನು ತಮಗೆ ದುರ್ಜಯನೆಂದು ತಿಳಿದು, ಅವನನ್ನು ಕೆಣಕದೆ ರಾಜನೀತಿಯನ್ನು ಹಿಡಿದು ತಟಸ್ಥರಾಗಿಬಿಟ್ಟರು.

ಇದು ಹತ್ತೊಂಭತ್ತನೆಯ ಅಧ್ಯಾಯವು.

**ಇಲ್ಲಿಗೆ ಮಂತ್ರಪರ್ವವು ಮುಗಿದುದು.**



# ಜರಾಸಂಧವಧಪರ್ವವು.

---

{ ಭೀಮಾರ್ಜುನರೊಡನೆ ಕೃಷ್ಣನು ಮಗಧಪುರಕ್ಕೆ ಹೊರಟುದು. }

ಓ ಧರ್ಮರಾಜಾ! ಮಹಾಬಲಾಢ್ಯರಾದ ಹಂಸಡಿಂಭಕರಿಬ್ಬರೂ ಸತ್ತರು. ಆ ಕಂಸನನ್ನೂ ಪರಿವಾರದೊಡನೆ ಕೊಂದುದಾಯಿತು. ಇನ್ನು ಜರಾಸಂಧನನ್ನು ಕೊಲ್ಲುವುದಕ್ಕೂ ಕಾಲವು ಒದಗಿಬಂದಿದೆ. ದೇವಾಸುರರೆಲ್ಲರೂ ಒಂದಾಗಿ ಸೇರಿ ಬಂದರೂ ಅವನನ್ನು ಯುದ್ಧದಲ್ಲಿ ಜಯಿಸುವುದೇನೋ ಅಸಾಧ್ಯವೇ! ಶಸ್ತ್ರಾಸ್ತ್ರಬಲಗಳನ್ನು ಬಿಟ್ಟು, ಬರೀ ಶರೀರಬಲದ ಯುದ್ಧದಿಂದಲೇ ಅವನನ್ನು ಜಯಿಸಬೇಕೆಂದು ನನಗೆ ತೋರಿದೆ. ನನ್ನ ನೀತಿಬಲವೂ, ಭೀಮನ ಭುಜಬಲವೂ, ಇವೆರಡಕ್ಕೆ ಬೆಂಬಲವಾಗಿ ಅರ್ಜುನನೂ ಸೇರಿದರೆ, ತ್ರೇತಾಗ್ನಿಗಳು ಯಜ್ಞವನ್ನು ಪೂರ್ತಿಗೊಳಿಸುವಂತೆ ಆ ಜರಾಸಂಧನನ್ನು ಸಮಾಪ್ತಿಗೊಳಿಸಬಹುದು. ಆ ಜರಾಸಂಧನಿಗಾದರೋ ತಾನು ಅಸಹಾಯಶೂರನೆಂಬ ವೀರ್ಯದ ಕೆಚ್ಚು ಮಿತಿಮೀರಿಹೋಗಿದೆ. ಆದುದರಿಂದ ಅವನು ಜನಸಹಾಯವಿಲ್ಲದೆ ಒಂಟಿಯಾಗಿರುವ ಸ್ಥಳದಲ್ಲಿ, ನಾವು ಮೂವರೂ ಹೋಗಿ ಕೆಣಕಿದರೆ, ತಾನು ಅಸಹಾಯನಾಗಿಯೇ ನಮ್ಮಲ್ಲಿ ಯಾವನೊಬ್ಬನೊಡನೆಯಾದರೂ ಯುದ್ಧಕ್ಕೆ ನಿಲ್ಲುವುದರಲ್ಲಿ ಸಂದೇಹವಿಲ್ಲ. ಯುದ್ಧಕ್ಕೆ ಕರೆದಾಗ ಬಾರದಿದ್ದರೆ, ತನಗೆ ಅವಮಾನವೆಂಬುದೊಂದು, ತಾನು ಒಂಟಿಯಾಗಿಯೇ ನಮ್ಮನ್ನು ಜಯಿಸಬೇಕೆಂಬ ಆಸೆಯೊಂದು, ತನ್ನ ಬಾಹುವೀರ್ಯದ ಕೆಚ್ಚೊಂದು, ಇವುಗ

ಳಿಂದ ಅವನು ಭೀಮನೊಡನೆ ತಪ್ಪದೆ ಯುದ್ಧಕ್ಕೆದಿರಾಗುವನು. ಜನಸಮೃದ್ಧವಾದ ಲೋಕಕ್ಕೆಲ್ಲ ಯಮನೊಬ್ಬನು ಹೇಗೋ ಹಾಗೆ ಮಹಾಬಲವುಳ್ಳ ಭೀಮನೊಬ್ಬನೇ ಅವನನ್ನು ತೀರಿಸಲು ಶಕ್ತನಾಗಿರುವನು. ರಾಜೇಂದ್ರಾ! ನಿನಗೆ ಭೀಮನ ಬಲವು ಚೆನ್ನಾಗಿ ತಿಳಿದಿದ್ದರೆ, ನನ್ನಲ್ಲಿಯೂ ನಿನಗೆ ನಂಬಿಕೆಯಿದ್ದರೆ, ಭೀಮಾರ್ಜುನರಿಬ್ಬರನ್ನೂ ಸ್ವಲ್ಪಕಾಲದವರೆಗೆ ನನಗೆ ವಶಮಾಡಿ ನನ್ನೊಡನೆ ಕಳುಹಿಸಿಕೊಡು'' ಎಂದನು. ಆಗ ಯುಧಿಷ್ಠಿರನು ಬಹಳ ಲಜ್ಜೆಯಿಂದ "ಕೃಷ್ಣಾ! ಕೃಷ್ಣಾ! ಏನಿದು? ನನ್ನಲ್ಲಿ ನೀನು ಈ ಮಾತನ್ನಾಡಬಾರದು. ಪಾಂಡವರಾದ ನಮ್ಮೆಲ್ಲರಿಗೂ ನೀನೇ ದಿಕ್ಕು! ನಾವು ನಿನ್ನನ್ನಾಶ್ರಯಿಸಿದವರು. ಗೋವಿಂದಾ! ನೀನು ಹೇಳಿದಮೇಲೆ ಅವೆಲ್ಲವೂ ಹಾಗೆಯೇ ನಡೆಯುವುದರಲ್ಲಿ ಸಂದೇಹವೇನಿದೆ? ಲಕ್ಷ್ಮಿಯು ಯಾರಲ್ಲಿ ಪರಾಙ್ಮುಖಳೋ, ಅಂತವನಿಗೆ ನೀನು ಮುಂದಾಗುವವನಲ್ಲ. ಯಾರಿಗೆ ಲಕ್ಷ್ಮಿಯು ಒಲಿಯುವಳೋ ಅವರ ಮುಂದೆ ನೀನು ನಲಿದಾಡತಕ್ಕವನು. ನೀನು ಉದ್ದೇಶಿಸಿದಮೇಲೆ ಇನ್ನು ಜರಾಸಂಧನು ಹತನಾಗಿ, ರಾಜರೆಲ್ಲರೂ ಅವನ ಸೆರೆಯಿಂದ ಬಿಡಿಸಲ್ಪಟ್ಟ ಹಾಗೆಯೇ. ನಿನ್ನ ಆಜ್ಞಾನುವರ್ತಿಯಾದ ನನ್ನ ರಾಜಸೂಯಯಾಗವೂ ನಡೆದುಹೋದಹಾಗೆಯೇ! ಕೃಷ್ಣಾ! ಮುಂದೆ ಹೇಗೆ ಕಾರ್ಯವು ಸಾಧ್ಯವಾಗಬೇಕೋ, ಅದನ್ನು ಎಚ್ಚರಿಕೆಯಿಂದ ಶೀಘ್ರದಲ್ಲಿಯೇ ನಡೆಸು. ವಾಸುದೇವಾ! ಧರ್ಮಕಾಮಾರ್ಥಗಳೊಂದೂ ಇಲ್ಲದ ದುಃಖಿತನಾದ ರೋಗಿಯಂತೆ, ನೀವು ಮೂವರನ್ನೂ ಬಿಟ್ಟು ನಾನು ಜೀವಿಸಿರಲಾರೆನು. ಇದಲ್ಲದೆ "ಅರ್ಜುನನಿಲ್ಲದೆ ಕೃಷ್ಣನಿಲ್ಲ. ಕೃಷ್ಣನಿಲ್ಲದೆ ಅರ್ಜುನನಿಲ್ಲ. ಆ ಕೃಷ್ಣರಿಬ್ಬರಿಗೂ ಅಜೇಯನಾದವನು ಲೋಕದಲ್ಲಿಯೇ ಇಲ್ಲ'' ವೆಂಬುದು ನನ್ನ ಬುದ್ಧಿಯಲ್ಲಿರುವ ದೃಢನಿಶ್ಚಯವು. ನನ್ನ ತಮ್ಮನಾದ ಈ ಭೀಮಸೇನನಾದರೂ ಸಾಮಾನ್ಯನೇ? ಬಲಶಾಲಿಗಳಿಗೆಲ್ಲ ಮೇಲೆನಿಸಿದವನು. ಜಯಲಕ್ಷ್ಮೀವಿಶಿಷ್ಟನು! ಮಹಾ ಯಶಸ್ವಿ! ಅವನೂ ನಿಮ್ಮಿಬ್ಬರೊಡನೆ ಸೇರಿದಮೇಲೆ ಯಾವ ಕಾರ್ಯವನ್ನು ತಾನೇ ಸಾಧಿಸಲಾರನು? ಎಷ್ಟೇ ಪ್ರಬಲಸೈನ್ಯವಿದ್ದರೂ ಅದನ್ನು ಸರಿಯಾಗಿ ನಡೆಸತಕ್ಕವನಿದ್ದಾಗಲೇ ಅದು ಚೆನ್ನಾಗಿ ಕಾರ್ಯವನ್ನು ಮಾಡುವುದು. ಸೈನ್ಯಕ್ಕೆ ಕಣ್ಣಿಲ್ಲವೆಂದೂ, ಅದು ತಿಳಿ

ವಳಿಕೆಯಲ್ಲದ ಜಡವೆಂದೂ, ಅದನ್ನು ಬುದ್ಧಿಶಾಲಿಗಳಾದವರು ಸರಿಯಾಗಿ ನಡೆಸಬೇಕೆಂದೂ ಹೇಳುವುದುಂಟು. ಹಳ್ಳವಿದ್ದ ಕಡೆಗೇ ನೀರು ಹೋಗುವುದು. ಬುದ್ಧಿಶಾಲಿಗಳಾದವರು ಹಳ್ಳವಾದ ಮಾರ್ಗದಿಂದಲೇ ನೀರನ್ನು ಸಾಗಿಸುವರು. ಅಷ್ಟೇಕೆ? ಮೀನು ಹಿಡಿಯತಕ್ಕ ಬೆಸ್ತರು ಕೂಡ ರಂಧ್ರವಿದ್ದ ಕಡೆಯಿಂದಲೇ ನೀರನ್ನು ಪರಿಯಬಿಡುವರು. ಆದುದರಿಂದ ನೀತಿಪ್ರಯೋಗಗಳನ್ನು ಬಲ್ಲವನಾಗಿಯೂ, ಲೋಕವಿಖ್ಯಾತನಾಗಿಯೂ ಇರುವ ನಿನ್ನನ್ನಾಶ್ರಯಿಸಿಯೇ ನಾವು ಕಾರ್ಯಸಿದ್ಧಿಗಾಗಿ ಯತ್ನಿಸುವೆವು. ಕೃಷ್ಣಾ! ಕಾರ್ಯಗಳನ್ನು ನಡೆಸುವಾಗ, ಆ ಕಾರ್ಯಸಿದ್ಧಿಯನ್ನು ಕೋರುವವರು ನೀತಿ, ತಿಳಿವಳಿಕೆ, ಕಾರ್ಯಕ್ರಮ, ಉಪಾಯ, ಇವೆಲ್ಲವನ್ನೂ ಪಡೆದ ಬುದ್ಧಿಶಾಲಿಯನ್ನು ಮುಂದಿಟ್ಟುಕೊಂಡೇ ಹೋಗಬೇಕು. ಆದುದರಿಂದ ಈಗಿನ ಕಾರ್ಯಸಿದ್ಧಿಯಾಗುವುದಕ್ಕಾಗಿ ನಿನ್ನನ್ನು ಅರ್ಜುನನೂ, ಅರ್ಜುನನನ್ನು ಭೀಮನೂ ಅನುಸರಿಸಿ ಹೋಗಬೇಕೆಂಬುದರಲ್ಲಿ ಆಕ್ಷೇಪಣೆಯೇನಿದೆ? ನಯ, ಜಯ, ದೇಹಬಲ, ಇವು ಮೂರೂ ಒಂದಾಗಿದ್ದರಲ್ಲವೇ ಪರಾಕ್ರಮದಲ್ಲಿ ಜಯಸಿದ್ಧಿಯನ್ನು ಪಡೆಯಬಹುದು" ಎಂದನು.

ಈ ಮಾತನ್ನು ಕೇಳಿದೊಡನೆ ಭೀಮಾರ್ಜುನರೂ, ಕೃಷ್ಣನೂ ಜರಾಸಂಧನಗರಕ್ಕೆ ಹೊರಡಲು ಸಿದ್ಧರಾದರು. ಆ ಮೂವರೂ ಒಳ್ಳೇ ತೇಜಸ್ವಿಗಳಾದ *ಸ್ನಾತಕ ಬ್ರಾಹ್ಮಣರಂತೆ ವೇಷಗಳನ್ನು ಧರಿಸಿ ತಮ್ಮ ನಿಜಸ್ವರೂಪವನ್ನು ಮರೆಸಿಕೊಂಡರು. ಮಿತ್ರರೆಲ್ಲರೂ ತಮ್ಮನ್ನು ಇಂಪಾದ ಶುಭವಾಕ್ಯಗಳಿಂದ ಆದರಿಸುತ್ತಿರಲು, ಕೃಷ್ಣನೂ, ಭೀಮಾರ್ಜುನರೂ, ವ್ರತಧಾರಿಗಳಂತೆ ಅಲ್ಲಿಂದ ಹೊರಟರು. ತಮ್ಮ ಜ್ಞಾತಿಗಳಾದ ಅನೇಕ ಕ್ಷತ್ರಿಯರು ಜರಾಸಂಧನಿಂದ ಪೀಡಿತರಾಗಿರುವುದನ್ನು ನೆನೆಸಿಕೊಂಡು, ಕೋಪದಿಂದ ಕುದಿಯುತ್ತಿದ್ದ ಆ ಮೂವರ ದೇಹಗಳೂ, ಸೂರ್ಯ

* ಸ್ನಾತಕರೆಂದರೆ ಗುರುಕುಲವಾಸದಲ್ಲಿ ಬ್ರಹ್ಮಚರ್ಯೆಯಲ್ಲಿದ್ದು, ಆ ವ್ರತವನ್ನು ಮುಗಿಸಿದಮೇಲೆ ಗುರುವಿನ ಅನುಜ್ಞೆಯಿಂದ ಗುರುಕುಲವನ್ನು ಬಿಟ್ಟು ಹೋದವರು ಗೃಹಸ್ಥಾಶ್ರಮವನ್ನು ಸ್ವೀಕರಿಸುವುದಕ್ಕೆ ಮೊದಲು ಸ್ನಾತಕರೆನಿಸುವರು. ಇವರು ರಾಜರಿಗಿಂತಲೂ ಹೆಚ್ಚು ಪೂಜ್ಯರು.

ಚಂದ್ರಾಗ್ನಿಗಳಂತೆ ಜ್ವಲಿಸುತಿದ್ದುವು. ಎಲ್ಲಿಯೂ ಪರಾಜಯವಿಲ್ಲದ ಈ ಮೂವರೂ ಒಂದೇ ಕಾರ್ಯಸಾಧನೆಗಾಗಿ ಒಟ್ಟುಗೂಡಿ ಹೊರಡುವುದನ್ನು ನೋಡಿ ಧರ್ಮರಾಜನು, ಜರಾಸಂಧನು ಹತನಾದಂತೆಯೇ ತಿಳಿದುಕೊಂಡನು. ಕೃಷ್ಣಾರ್ಜುನರಿಬ್ಬರೂ ಸರ್ವಸಮರ್ಥರು. ಲೋಕಕ್ಕೆಲ್ಲ ಹಿತಕಾರಿಗಳು. ಮಹಾತ್ಮರು. ಸಮಸ್ತಕಾರ್ಯಗಳಿಗೂ ಪ್ರವರ್ತಕನಾದ ಸರ್ವೇಶ್ವರನ ಅಂಶಭೂತರು. ಧರ್ಮಕಾಮಾರ್ಥಗಳೆಂಬ ತ್ರಿವರ್ಗಗಳಿಗೂ, ಎಲ್ಲಾ ಲೋಕಗಳಿಗೂ ನಿಯಾಮಕರು. ಇಂತವರು ಮೂವರೂ ಕುರುಕ್ಷೇತ್ರದಿಂದ ಹೊರಟು, ಕುರುಜಾಂಗಲವೆಂಬ ದೇಶದ ಮಾರ್ಗವಾಗಿ ರಮಣೀಯವಾದ ಪದ್ಮಕವೆಂಬ ಸರಸ್ಸಿಗೆ ಬಂದರು. ಅಲ್ಲಿಂದ ಮುಂದೆ ಕಾಲಕೂಟಪರ್ವತವನ್ನು ದಾಟಿ, ಏಕಪರ್ವತದಲ್ಲಿರುವ ಗಂಡಕೀನದಿ, ಮಹಾಶೋಣವೆಂಬ ನದಿ, ಮತ್ತು ಸದಾನೀತಿಯೆಂಬ ಈ ಮೂರು ನದಿಗಳನ್ನೂ ಕ್ರಮವಾಗಿ ದಾಟಿದರು. ಅಲ್ಲಿಂದಾಚೆಗೆ ಸರಯೂ ನದಿಯನ್ನು ಸಮೀಪಿಸಿ, ಅದನ್ನೂ ದಾಟಿ, ಮುಂದೆ ಪೂರ್ವಕೋಸಲದೇಶಗಳ ಮಾರ್ಗವಾಗಿ ಬಂದು ಮಿಥಿಲೆಗೆ ಬಂದರು. ಅಲ್ಲಿಂದಾಚೆಗೆ ಮಾಲೆ, ಚರ್ಮಣ್ವತಿ, ಗಂಗೆ, ಶೋಣನದವೆಂಬಿವುಗಳನ್ನು ದಾಟಿ ಪೂರ್ವಾಭಿಮುಖವಾಗಿ ಹೊರಟರು. ದರ್ಭೆಗಳನ್ನೂ, ನಾರುಮಡಿಗಳನ್ನೂ ಧರಿಸಿದ ಆ ಮೂವರೂ, ಮುಂದೆ ಹೋಗಿ ಅಲ್ಲಿ ಅನೇಕ ಗೋಧನಗಳಿಂದಲೂ, ಜಲಸಮೃದ್ಧಿಯಿಂದಲೂ ಕೂಡಿದ ಗೋರಥವೆಂಬ ಪರ್ವತವನ್ನೇರಿ ಅಲ್ಲಿಂದಲೇ ಮಗಧರಾಜಧಾನಿಯನ್ನು ನೋಡಿದರು.

ಇದು ಇಪ್ಪತ್ತನೆಯ ಅಧ್ಯಾಯವು.

---

{ ಕೃಷ್ಣಾರ್ಜುನರಿಬ್ಬರೂ ಜರಾಸಂಧನಬಳಿಗೆ ಬಂದುದು. ಅವರಲ್ಲಿ ಅನ್ಯೋನ್ಯ ಸಂಭಾಷಣೆಗಳು. }

ಆಗ ಕೃಷ್ಣನು ಪರ್ವತದಮೇಲೆ ನಿಂತು ಅರ್ಜುನನನ್ನು ನೋಡಿ, "ಅರ್ಜುನಾ! ಅದೋ ನೋಡು! ಆ ದೊಡ್ಡ ಪಟ್ಟಣವೇ ಮಗಧರಾಜನಾದ ಜರಾಸಂಧನ ರಾಜಧಾನಿ. ಅದು ಎಷ್ಟು ರಮ್ಯವಾಗಿರುವುದೋ

ನೋಡು. ಯಾವಾಗಲೂ ಇದು ಪಶುಸಮೃದ್ಧವಾಗಿಯೂ, ಜಲಸಮೃದ್ಧವಾಗಿಯೂ ಇರುವುದು. ಇದರಲ್ಲಿ ಯಾವ ರೋಗಾದಿಗಳೂ ಇರುವುದಿಲ್ಲ. ಅತ್ಯುತ್ತಮವಾದ ಮಂದಿರಗಳಿಂದ ಶೋಭಿಸುತ್ತಿರುವುದು. ಎಲ್ಲಾ ವಿಷಯದಲ್ಲಿಯೂ ಇದು ಶುಭಕರವಾದುದು. ಉನ್ನತ ಶಿಖರಗಳುಳ್ಳ ವಿಪುಲ, ವರಾಹ, ವೃಷಭ, ಋಷಿಗಿರಿ, ಚೈತ್ಯಕಗಳೆಂಬ ಐದು ಪರ್ವತಗಳು ಇದನ್ನು ಸುತ್ತಲೂ ಆವರಿಸಿಕೊಂಡು ರಕ್ಷಿಸುವಂತೆ ಕಾಣುವುದು ನೋಡು. ಆ ಪರ್ವತಗಳು ತಂಪಾದ ನೆರಳುಳ್ಳ ವೃಕ್ಷಗಳಿಂದ ಶೋಭಿಸುತ್ತ, ಒಂದಕ್ಕೊಂದು ಪೋಣಿಸಿದಂತೆ ಸೇರಿರುವುದನ್ನು ನೋಡು. ಇವೈದೂ ಆ ಜರಾಸಂಧನ ಗಿರಿವ್ರಜನಗರಿಗೆ ಕೋಟೆಗಳಂತೆ ರಕ್ಷಕಗಳಾಗಿರುವುವು. ಈ ಪರ್ವತದ ತಪ್ಪಲುಗಳು ಕಾಮಿಗಳಿಗೆ ಪ್ರಿಯವಾದ ಲೋಧ್ರವೃಕ್ಷಗಳ ಕಾಡುಗಳಿಂದ ಹೊದಿಸಲ್ಪಟ್ಟಂತೆ ಕಾಣುತ್ತಿರುವುದು ನೋಡು. ಆ ವೃಕ್ಷಶಾಖೆಗಳು ಪುಷ್ಪಸಮೃದ್ಧಗಳಾಗಿ, ಒಳ್ಳೇ ಸುಗಂಧವನ್ನು ಹೊರಡಿಸುತ್ತ ಎಷ್ಟು ಮನೋಹರವಾಗಿರುವುವೋ ನೋಡು. ಮಹಾತ್ಮನೂ, ದೃಢವ್ರತನೂ ಆದ ಗೌತಮಮುನಿಯು, ಉಶೀನರಪುತ್ರಿಯಾದ ಶೂದ್ರಸ್ತ್ರೀಯನ್ನು ವಿವಾಹವಾಗಿ, ಅವಳಲ್ಲಿ ಕಾಕ್ಷೀವಂತನೇ ಮೊದಲಾದ ಅನೇಕ ಪುತ್ರರನ್ನು ಪಡೆದನು. ಆ ಸ್ನೇಹದಿಂದಲೇ ಗೌತಮನು ಈ ಸ್ಥಳದಲ್ಲಿದ್ದುಕೊಂಡು ಮಗಧರಾಜ ವಂಶವನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸಿದನು. ಮಗಧವಂಶಕ್ಕೆ ಅದೊಂದು ದೊಡ್ಡ ಅನುಗ್ರಹವೆಂದೇ ತಿಳಿ. ಅದುಮಾತ್ರವಲ್ಲದೆ, ಪೂರ್ವದಲ್ಲಿ ಮಹಾಬಲಾಢ್ಯರೆನಿಸಿಕೊಂಡ ಅಂಗ ವಂಗಾದಿ ರಾಜರೆಲ್ಲರೂ, ಗೌತಮನ ನಿವಾಸಕ್ಕೆ ಬಂದು ಅಲ್ಲಿ ವಿಹರಿಸುತಿದ್ದರು. ಅರ್ಜುನಾ! ಆ ಗೌತಮನ ನಿವಾಸಕ್ಕೆ ಸಮೀಪದಲ್ಲಿ, ಸುತ್ತಲೂ ರಮ್ಯವಾಗಿ ಬೆಳೆದಿರುವ ತೋಪುಗಳ ಸಾಲುಗಳನ್ನೂ, ಅವುಗಳಲ್ಲಿರುವ ಲೋಧ್ರ ಪಿಪ್ಪಲವೃಕ್ಷಗಳ ಅಂದವನ್ನೂ ನೋಡು. ಶತ್ರುಗಳನ್ನು ನಿಗ್ರಹಿಸತಕ್ಕ ಅರ್ಬುದ ಶಕ್ರವಾಪಿಗಳೆಂಬ ಇಬ್ಬರು ನಾಗರು ಇಲ್ಲಿರುವರು. ಸ್ವಸ್ತಿಕ ಮಣಿನಾಗರೆಂಬ ನಾಗರಿಬ್ಬರ ಉತ್ತಮ ಗೃಹಗಳೂ ಇಲ್ಲಿರುವುವು. ಮೇಘಗಳು ಈ ಮಗಧದೇಶವನ್ನು ಯಾವಾಗಲೂ ಬಿಟ್ಟಗಲಕೂಡದೆಂದು ಸಾಕ್ಷಾತ್ತಾಗಿ ಮನುವೇ ನಿರ್ಣಯಿಸಿರುವನು. ಕೌಶಿಕ, ಮಣಿಮಂತರೆಂಬ ನಾಗರಿಬ್ಬರೂ,

ಈ ಮಗಧದೇಶದಲ್ಲಿ ತಮ್ಮ ಪೂರ್ಣಾನುಗ್ರಹವನ್ನು ತೋರಿಸಿರುವರು. ಚೈತ್ಯಕ, ಮಾತಂಗ, ವಾರಾಹ ಮೊದಲಾದ ಆ ಐದು ಪರ್ವತಗಳೂ, ಅನೇಕ ಸಿದ್ಧಾಶ್ರಮಗಳಿಗೂ, ಮಹಾತ್ಮರಾದ ಋಷಿಗಳ ಮತ್ತು ಯತಿಗಳ ಆಶ್ರಮಗಳಿಗೂ ಎಡೆಯಾಗಿರುವುದು. ಮತ್ತು ಇಲ್ಲಿ ಮಹಾವೀರ್ಯವುಳ್ಳ ವೃಷಭ ಕಮಲರೆಂಬ ಇಬ್ಬರು ನಾಗರ ನಿವಾಸಗಳಿರುವುವು. ಮತ್ತು ಇಲ್ಲಿ ಕಾಕ್ಷೀವಂತನೆಂಬ ಮಹರ್ಷಿಯು ತಪೋಬಲದಿಂದುಂಟಾದ ತಪೋದಗಳೆಂಬ ಪುಣ್ಯತೀರ್ಥಗಳುಂಟು. ಅವೆಲ್ಲವೂ ಸಿದ್ಧತೀರ್ಥಗಳೆಂದೂ ಪ್ರಖ್ಯಾತಿಗೊಂಡಿರುವುವು. ಇಲ್ಲಿ ಮಣಿಮಂತನೆಂಬ ನಾಗನನ್ನು ದರ್ಶನಮಾಡಿದ ಮಾತ್ರದಿಂದಲೇ ಮನುಷ್ಯನು ಸುಖವನ್ನು ಪಡೆಯುವನು. ಹೀಗೆ ಅನೇಕ ಮಹಾತ್ಮರಿಗೆ ಆಶ್ರಯವಾಗಿ, ಸುತ್ತಲೂ ದಾಟಲಸಾಧ್ಯವಾಗಿರುವ ಈ ಗಿರಿವ್ರಜವೆಂಬ ಪಟ್ಟಣವನ್ನು ಆಶ್ರಯಿಸಿಯೇ ಜರಾಸಂಧನು ತನ್ನ ಕಾರ್ಯಸಿದ್ಧಿಯನ್ನೆಲ್ಲ ಪಡೆಯಬಹುದೆಂದು ಹೆಮ್ಮೆಗೊಂಡಿರುವನು. ಈಗ ನಾವು ಅಲ್ಲಿಗೆ ಹೋಗಿ ಅವನ ಗರ್ವವನ್ನು ಮುರಿಯಬೇಕು ” ಎಂದನು.

ಓ ಜನಮೇಜಯರಾಜಾ ! ಕೃಷ್ಣನು ಈ ಮಾತನ್ನು ಮುಗಿಸಿದೊಡನೆ ಮಹಾತೇಜಸ್ವಿಗಳಾದ ಭೀಮಾರ್ಜುನರೂ, ಕೃಷ್ಣನೂ ಅಲ್ಲಿಂದ ಜರಾಸಂಧನ ನಗರಕ್ಕೆ ಹೊರಟರು. ಆ ಪಟ್ಟಣದ ಸಮೃದ್ಧಿಯನ್ನು ಕೇಳಬೇಕೆ? ಅಲ್ಲಿ ಸಮಸ್ತಜನರೂ ಪುಷ್ಟರಾಗಿಯೂ, ತುಷ್ಟರಾಗಿಯೂ ಇರುವರು. ನಾಲ್ಕು ವರ್ಣದವರೂ, ತಮ್ಮತಮ್ಮ ಧರ್ಮಗಳನ್ನು ನಡೆಸಿಕೊಂಡು ಅನ್ಯೋನ್ಯದಿಂದಿರುವರು. ಯಾವಾಗಲೂ ಮಹೋತ್ಸವಗಳು ನಡೆಯುತ್ತಿರುವುವು. ಯಾವ ಶತ್ರುಗಳೂ ಅದನ್ನು ಅತಿಕ್ರಮಿಸಿ ಮುಂದೆ ಬರಲಾರರು. ಇಂತಹ ಗಿರಿವ್ರಜನಗರವನ್ನು ಅವರು ಸಮೀಪಿಸಿದರು. ಆದರೆ, ಆ ನಗರದ ಹೆಬ್ಬಾಗಿಲಿನಿಂದ ಒಳಗೆ ಪ್ರವೇಶಿಸದೆ, ಮಗಧರಾಜವಂಶದಿಂದಲೂ, ಪುರಜನರಿಂದಲೂ, ಸದಾ ಪೂಜಿತವಾಗಿ, ಆ ದೇಶಕ್ಕೆಲ್ಲ ಅಲಂಕಾರಭೂತವಾದ ಚೈತ್ಯಕವೆಂಬ ಉನ್ನತವಾದ ಪರ್ವತದ ಕಣಿವೆಯ ಮಾರ್ಗವನ್ನು ಹಿಡಿದು ಹೋದರು. ರಾಜೇಂದ್ರಾ ! ಆ ಚೈತ್ಯಕವು ಗಿರಿವ್ರಜಕ್ಕೆ ಪ್ರಾಕಾರದಂತಿರುವುದು. ಹಿಂದೊಮ್ಮೆ ಬೃಹದ್ರಥನು ಎತ್ತಿನ

ರೂಪದಿಂದ ಇಲ್ಲಿಗೆ ಬಂದ ನರಮಾಂಸಭಕ್ಷಕನಾದ ಒಬ್ಬ ರಾಕ್ಷಸನನ್ನು ಕೊಂದು, ಅವನ ಚರ್ಮದಿಂದ ಮೂರು ಭೇರಿಗಳನ್ನು ಮಾಡಿಸಿದನು. ಆ ಭೇರಿಗಳನ್ನು ಒಂದಾವರ್ತಿ ಹೊಡೆದರೆ, ಅದರ ನಾದವು ಒಂದು ತಿಂಗಳವರೆಗೆ ಮೊಳಗುತ್ತಿರುವುದು. ಆ ಮೂರು ಭೇರಿಗಳನ್ನೂ ಬೃಹದ್ರಥನು ತನ್ನ ಪಟ್ಟಣಕ್ಕೆ ಪ್ರಾಕಾರವೆನಿಸಿದ ಚೈತ್ಯಕ ಶಿಖರದಲ್ಲಿ ಸ್ಥಾಪಿಸಿದ್ದನು. ಆ ಭೇರಿಗಳು ಯಾವಾಗಲೂ ದಿವ್ಯಪುಷ್ಪಗಳಿಂದ ಅರ್ಚಿಸಲ್ಪಡುತ್ತಿರುವುವು. ಕೃಷ್ಣಾರ್ಜುನ ಭೀಮರು ಮೂವರೂ ಆ ಮೂರು ಭೇರಿಗಳನ್ನೂ, ಅವುಗಳಿಗಾಶ್ರಯವಾದ ಚೈತ್ಯಕಪ್ರಾಕಾರದ ಗೋಡೆಯನ್ನೂ ಮುರಿದುಹಾಕಿದರು. ಆ ಚೈತ್ಯಶಿಖರದ ಪ್ರಾಕಾರವಾದರೋ ಬಹಳ ಪುರಾತನವಾದುದು. ಅಭೇದ್ಯವಾದುದು. ಅತ್ಯಂತ ವಿಶಾಲವಾಗಿ, ಎತ್ತರವಾಗಿರುವುದು. ಗಂಧಪುಷ್ಪಾದಿಗಳಿಂದ ನಿತ್ಯವೂ ಪೂಜಿಸಲ್ಪಡುವುದು. ಅಂತಹ ಶಿಖರವನ್ನು ಆ ಮೂವರು ವೀರರೂ ಜರಾಸಂಧನ ತಲೆಯನ್ನು ಕೆಡಹುವಂತೆ ತಮ್ಮ ಬಾಹುಗಳಿಂದಲೇ ಮುರಿದು ಕೆಡಹಿಬಿಟ್ಟರು. ಆಮೇಲೆ ಆ ಮೂವರೂ ಉತ್ಸಾಹದಿಂದ ನಗರದೊಳಗೆ ಪ್ರವೇಶಿಸಿದರು. ಇದೇ ಸಮಯಕ್ಕೆ ಸರಿಯಾಗಿ ಆ ಜರಾಸಂಧನಗರದಲ್ಲಿ ಭಯಂಕರಗಳಾದ ಕೆಲವು ದುರ್ನಿಮಿತ್ತಗಳು ಕಾಣಿಸಿದುವು. ವೇದಪಾರಂಗತರಾದ ಬ್ರಾಹ್ಮಣರು ಅವನ್ನೆಲ್ಲ ಜರಾಸಂಧನಿಗೆ ತೋರಿಸಿದರು. ಪುರೋಹಿತರು ಗಜಾರೂಢನಾದ ಜರಾಸಂಧನ ಮುಂದೆ ಶಾಂತಿಗಾಗಿ ಅಗ್ನಿಯನ್ನು ನಿವಾಳಿಸಿದರು. ಮತ್ತು ಜರಾಸಂಧನು ದೋಷಶಾಂತಿಗಾಗಿ ದೀಕ್ಷೆಯನ್ನು ಕೈಕೊಂಡು, ಬಹಳ ನಿಯಮದಿಂದ ವ್ರತೋಪವಾಸಗಳನ್ನು ನಡೆಸಿದನು.

ಇಷ್ಟರಲ್ಲಿಯೇ ಕೃಷ್ಣನೂ, ಭೀಮಾರ್ಜುನರೂ, ಸ್ನಾತಕ ವ್ರತದಲ್ಲಿರುವ ಬ್ರಾಹ್ಮಣರಂತೆ, ಆಯುಧಗಳೇನೂ ಇಲ್ಲದೆ, ಬಾಹುಮಾತ್ರ ಸಹಾಯರಾಗಿ ಜರಾಸಂಧನೊಡನೆ ಯುದ್ಧಮಾಡುವ ಉದ್ದೇಶದಿಂದ ಒಳಗೆ ಪ್ರವೇಶಿಸಿ, ಆ ಪುರದ ಸೊಬಗನ್ನು ನೋಡುತ್ತ ಹೋದರು. ಸರ್ವವಸ್ತುಸಮೃದ್ಧವಾಗಿ, ಸಮಸ್ತಗುಣಗಳಿಂದ ಒಪ್ಪುತ್ತಿರುವ ಆ ನಗರದಲ್ಲಿ ಉತ್ತಮ ಭಕ್ಷ್ಯ ಪದಾರ್ಥಗಳಿಂದಲೂ, ವಿವಿಧ ಪುಷ್ಪಮಾಲಿಕೆಗಳಿಂದಲೂ ತುಂಬಿದ

ಅಂಗಡಿಯ ಸಾಲುಗಳನ್ನೂ, ಅಲ್ಲಿನ ಮೇಲಾದ ಸಂಪತ್ತನ್ನೂ, ಅವರವರಿಗೆ ಬೇಕಾದ ಎಲ್ಲಾ ಪದಾರ್ಥಗಳ ಸಮೃದ್ಧಿಯನ್ನೂ ನೋಡುತ್ತ, ಆಶ್ಚರ್ಯದಿಂದ ರಾಜಬೀದಿಯ ಮಾರ್ಗವಾಗಿ ಮುಂದೆ ನಡೆದರು. ಮಹಾಬಲಾಢ್ಯರಾದ ಕೃಷ್ಣಭೀಮಾರ್ಜುನರು ಮೂವರೂ ಅಲ್ಲಿಂದ ಒಂದು ಹೂವಿನಂಗಡಿಗೆ ಹೋಗಿ, ಅಲ್ಲಿ ಮಾಲೆಯನ್ನು ಕಟ್ಟುತಿದ್ದ ಹೂವಾಡಿಗರಿಂದ ಬಲಾತ್ಕಾರಪೂರ್ವಕವಾಗಿ ತಮಗೆ ಬೇಕಾದ ಹೂಮಾಲೆಗಳನ್ನು ತೆಗೆದುಕೊಂಡರು. ಹಾಗೆಯೇ ಆ ಅಂಗಡಿಯೊಳಗಿದ್ದ ಕೋಷ್ಟ, ಕರ್ಪೂರಶೃಂಗ, ಫಲಜಾತಿ, ಮೊದಲಾಗಿ ತಮಗೆ ಬೇಕಾದ ವಸ್ತುಗಳನ್ನೆಲ್ಲ ಆಯಾ ವರ್ತಕರಿಂದ ಬಲಾತ್ಕರಿಸಿ ತೆಗೆದುಕೊಂಡು, ವಿನೋದದಿಂದ ಮುಂದೆ ಸಾಗಿದರು. ಮಹಾರಥರೆನಿಸಿದ ಆ ಮೂವರೂ ಬಿಳೀದುಕೂಲಗಳಿಂದಲೂ, ಥಳಥಳಿಸುವ ಕಡುಕುಗಳಿಂದಲೂ ಅಲಂಕೃತರಾಗಿ, ಹಿಮಗಿರಿಯ ಸಿಂಹಗಳು ದನಗಳ ಕೊಟ್ಟಿಗೆಯನ್ನು ಹೊಂಚುಹಾಕಿ ನೋಡುತ್ತ ಅದರೊಳಗೆ ಪ್ರವೇಶಿಸುವಂತೆ ಜರಾಸಂಧನ ಅರಮನೆಯೊಳಗೆ ಪ್ರವೇಶಿಸಿದರು.

ಮಹಾವೃಕ್ಷಗಳ ಅಡಿದಿಂಡುಗಳಂತೆ ದುಂಡಗೆ ದಪ್ಪನಾಗಿರುವ ಅವರ ತೋಳುಗಳು, ಅಗರುಚಂದನ ಲೇಪನದಿಂದ ಅಪೂರ್ವಶೋಭೆಯನ್ನು ತಾಳಿದ್ದುವು. ಆನೆಗಳಂತೆ ಆಕೃತಿ! ಮರದ ದಿಂಡುಗಳಂತೆ ದುಂಡಗೆ ಉಬ್ಬಿದ ಹೆಗಲು! ಅಗಲವಾದ ಎದೆ! ಇಂತಹ ರೂಪವಿಶೇಷದಿಂದ ಶೋಭಿಸುತ್ತಿರುವ ಆ ಮೂವರನ್ನೂ ನೋಡಿ ಮಗಧದೇಶದ ಜನರೆಲ್ಲರೂ ಆಶ್ಚರ್ಯವಶರಾದರು. ಆ ಮೂವರೂ ಬಾಗಿಲಿಲ್ಲದ ಕಡೆಯಿಂದಲೇ ಪ್ರಾಕಾರವನ್ನೇರಿ ಧುಮಿಕಿ, ಜರಾಸಂಧನ ಮನೆಯೊಳಗೆ ಪ್ರವೇಶಿಸಿದರು. ಆಮೇಲೆ ಅವರು, ಆ ಗೃಹದಲ್ಲಿ ಜನಸಮೃದ್ಧಗಳಾದ ಮೂರು ತೊಟ್ಟಿಗಳನ್ನೂ ದಾಟಿ, ಮನಸ್ಸಿನಲ್ಲಿ ಸ್ವಲ್ಪವಾದರೂ ಭಯವಿಲ್ಲದೆ ರಾಜನ ಬಳಿಗೆ ಹೋಗಿ, ತಮ್ಮ ಹೆಮ್ಮೆಯನ್ನು ಬಿಡದೆ ಅಹಂಕಾರದಿಂದಲೇ ಅವನನ್ನು "ಭೋಃ" (ಓ) ಎಂಬೀ ಶಬ್ದದಿಂದಲೇ ಕೂಗಿ ಕರೆದರು. ಒಡನೆಯೇ ಜರಾಸಂಧನು ಅವರು ಒಳ್ಳೇ ವ್ರತನಿಷ್ಠರಾದ ಬ್ರಾಹ್ಮಣರೆಂ

ದೂ, ಅರ್ಘ್ಯ, ಪಾದ್ಯ, *ಮಧುಪರ್ಕಾದಿ ಪೂಜೆಗಳನ್ನೂ, ಗೋವನ್ನೂ ಅರ್ಪಿಸುವುದಕ್ಕೆ ಅರ್ಹರೆಂದೂ ಭಾವಿಸಿ, ತಟ್ಟನೆ ಇದಿರೆದ್ದು ಬಂದು ವಿಧ್ಯುಕ್ತವಾಗಿ ಅವರನ್ನು ಪೂಜಿಸಿದನು. ಆಮೇಲೆ ಜರಾಸಂಧನು ಅವರನ್ನು ಕುರಿತು "ನಿಮಗೆ ಸ್ವಾಗತವು" ಎಂದು ಆದರಿಸಿದನು. ಆಗ ಭೀಮಾರ್ಜುನರಿಬ್ಬರೂ ಬಾಯೆತ್ತದೆ ಮೌನದಿಂದಿದ್ದರು. ಇಷ್ಟರಲ್ಲಿಯೇ ಬಹಳ ಧೀಮಂತನೂ, ತಂತ್ರಿಯೂ ಆದ ಕೃಷ್ಣನು, ಜರಾಸಂಧನನ್ನು ನೋಡಿ "ರಾಜೇಂದ್ರಾ! ಇವರಿಬ್ಬರೂ ಈಗ ಒಂದು ವ್ರತವನ್ನು ಹಿಡಿದಿರುವರು. ಅರ್ಧರಾತ್ರಿಯುವರೆಗೆ ಅವರು ಯಾರೊಡನೆಯೂ ಮಾತಾಡಲಾರರು. ಆದಕ್ಕೆಮೇಲೆ ನಿನ್ನೊಡನೆ ಮಾತಾಡುವರು" ಎಂದನು. ಆಮೇಲೆ ಜರಾಸಂಧನು ಆ ಮೂವರನ್ನೂ ಯಾಗಶಾಲೆಗೆ ಕರೆತಂದು ಅಲ್ಲಿರಿಸಿ, ತನ್ನ ಅರಮನೆಗೆ ಹೊರಟುಹೋದನು. ಅರ್ಧರಾತ್ರಿಯಾದಮೇಲೆ ಜರಾಸಂಧನು ತಿರುಗಿ ಆ ಮೂವರು ಬ್ರಾಹ್ಮಣರೂ (ಕೃಷ್ಣಭೀಮಾರ್ಜುನರು) ಇದ್ದ ಸ್ಥಳಕ್ಕೆ ಬಂದುಸೇರಿದನು. ಓ ಜನಮೇಜಯರಾಜಾ! ಜರಾಸಂಧನಿಗೆ ಇದೊಂದು ನಿಯಮವಿದ್ದಿತು. ಸ್ನಾತಕರಾದ ಬ್ರಾಹ್ಮಣರು ತನ್ನಲ್ಲಿಗೆ ಬಂದುದನ್ನು ಕೇಳಿದರೆ, ನಡುರಾತ್ರಿಯ ಸಮಯವಾಗಿದ್ದರೂ ಎದ್ದು ಬಂದು ಅವರನ್ನು ಪೂಜಿಸುವುದು ಅವನಿಗೊಂದು ವ್ರತವಾಗಿದ್ದಿತು. ಆದರಂತೆ ಅಪೂರ್ವವೇಷದಿಂದೊಪ್ಪುತಿದ್ದ ಮಹಾತೇಜಸ್ವಿಗಳಾದ ಆ ಬ್ರಾಹ್ಮಣರನ್ನು ನೋಡಿ ಅವನು ಬಹಳ ಆಶ್ಚರ್ಯಗೊಂಡು, ಅವರನ್ನು ಯಥೋಚಿತವಾಗಿ ಪೂಜಿಸಿದನು. ಆಗ ಆ ಮೂವರೂ ಜರಾಸಂಧನನ್ನು ನೋಡಿ "ರಾಜಾ! ನಿನಗೆ ಮಂಗಳವಾಗಲಿ! ನಿನಗೆ ಕುಶಲವೆ?" ಎಂದು ವಿಚಾರಿಸಿ ಒಮ್ಮೊಮ್ಮೆ ಅವನನ್ನೂ, ಆಮೇಲೆ ತಮ್ಮಲ್ಲಿಯೇ ಒಬ್ಬರೊಬ್ಬರ ಮುಖವನ್ನೂ ನೋಡುತ್ತ ನಿಂತಿದ್ದರು. ಆಗ ಜರಾಸಂಧನು ಬ್ರಾಹ್ಮಣವೇಷದಿಂದಿರುವ ಆ ಮೂವರನ್ನೂ ಆಸನಗಳಲ್ಲಿ ಕುಳ್ಳಿರುವಂತೆ ಹೇಳಿದನು. ಆ ಮೂ

---

* ಮಧುಪರ್ಕವೆಂದರೆ ನೀರು, ಸಕ್ಕರೆ, ತುಪ್ಪ, ಮೊಸರು, ಇವನ್ನು ಸಮವಾಗಿಯೂ ಜೇನನ್ನು ಹೆಚ್ಚಾಗಿಯೂ ಸೇರಿಸಿಕೊಡುವುದು. ಮತ್ತು ಯೋಗ್ಯರಾದ ವೇದವಿತ್ತುಗಳು ಮನೆಗೆ ಬಂದಾಗ ಅವರಿಗೆ ಮಧುಪರ್ಕದೊಡನೆ ದೊಡ್ಡ ವೃಷಭವನ್ನಾಗಲಿ, ಕರುವನ್ನಾಗಲಿ, ಆಡನ್ನಾಗಲ,ಕೊಡಬೇಕೆಂದು ಆಪಸ್ತಂಬ ವಾಕ್ಯವು.

ವರೂ ಯಜ್ಞದಲ್ಲಿ ಹುತಮಾಡಲ್ಪಟ್ಟ ಅಗ್ನಿತ್ರಯದಂತೆ, ದಿವ್ಯತೇಜಸ್ಸಿನಿಂದ ಬೆಳಗುತ್ತ ಕುಳಿತಿದ್ದರು. ಜರಾಸಂಧನು ಆ ಮೂವರನ್ನೂ ದೃಷ್ಟಿಸಿನೋಡುತ್ತ ರೂಪಕ್ಕೆ ಅನುಗುಣವಲ್ಲದ ವೇಷದಿಂದಿರುವ ಅವರನ್ನು ನಿಂದಿಸುವ ಭಾವದಿಂದ ಹೀಗೆಂದು ಕೇಳುವನು. "ಎಲೈ! ನೀವು ಯಾರು? ನಿಜವನ್ನು ಹೇಳಿರಿ! ಲೋಕದಲ್ಲಿ ಸ್ನಾತಕವ್ರತವನ್ನು ಹಿಡಿದ ಬ್ರಾಹ್ಮಣನು ಹೀಗೆ ಬಹಿರಂಗವಾಗಿ, ಪುಷ್ಪಚಂದನಾದಿಗಳನ್ನು ಧರಿಸಬಾರದೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ನೀವಾದರೋ ಹೂಗಳನ್ನು ಮುಡಿದಿರುವಿರಿ! ನಿಮ್ಮ ಕೈಗಳಲ್ಲಿಯೋ ನಾಣನ್ನು ತಟ್ಟುವುದರಿಂದ ಪಟ್ಟುಗಟ್ಟಿದ ಗಾಯದ ಗುರುತುಗಳು ಕಾಣುತ್ತಿರುವುವು. ಅದಕ್ಕೆ ತಕ್ಕಂತೆ ನಿಮ್ಮ ಮುಖದಲ್ಲಿ ಕ್ಷತ್ರಿಯತೇಜಸ್ಸೂ ತೋರುವುದು. ಬಾಯಲ್ಲಿಮಾತ್ರ ನೀವು ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಿರುವಿರಿ. ಹೀಗೆ ಬಿಳಿಯ ವಸ್ತ್ರಗಳನ್ನುಟ್ಟು, ಬಹಿರಂಗವಾಗಿ, ಪುಷ್ಪಚಂದನಾದಿಗಳನ್ನು ಧರಿಸಿರುವ ನೀವು ಸರ್ವಥಾಕ್ಷತ್ರಿಯರೆಂದೇ ನನಗೆ ತೋರುವುದು. ನಿಜವನ್ನು ತಿಳಿಸಿರಿ. ಕ್ಷತ್ರಿಯರಿಗೆ ಸತ್ಯವೇ ಮುಖ್ಯವಾದ ಅಲಂಕಾರವು. ಅದಲ್ಲದೆ ನೀವು ರಾಜಾಪರಾಧಕ್ಕೂ ಹೆದರದೆ, ನಮ್ಮ ಚೈತ್ಯಕಪರ್ವತದ ಶಿಖರವನ್ನು ಮುರಿದು, ಸರಿಯಾದ ಬಾಗಿಲಿನಿಂದ ಪ್ರವೇಶಿಸದೆ, ಬೇರೆ ಕಳ್ಳದಾರಿಯಿಂದ ಈ ಮನೆಗೆ ಬಂದುದೇಕೆ? ಬ್ರಾಹ್ಮಣರಿಗೆ ಬರೀ ಮಾತಿನಬಲವಲ್ಲದೆ ಬಾಹುಬಲವಿಲ್ಲ. ನೀವು ಮಾಡಿದ ಈ ಕೃತ್ಯಗಳಾದರೋ ಬ್ರಾಹ್ಮಣವೇಷಕ್ಕೆ ವಿರುದ್ಧವಾಗಿದೆ. ನಿಮ್ಮ ನಿಜವಾದ ಉದ್ದೇಶವೇನೆಂಬುದನ್ನು ತಿಳಿಸಿರಿ. ಇದಲ್ಲದೆ, ನೀವಾಗಿ ನನ್ನಲ್ಲಿಗೆ ಬಂದಿರುವಾಗಲೂ, ವಿಧ್ಯುಕ್ತವಾದ ನಮ್ಮ ಪೂಜೆಗಳನ್ನು ನೀವು ಪ್ರತಿಗ್ರಹಿಸದೆ ಹೋದಿರಿ. ನೀವು ಬಂದ ಕಾರ್ಯವನ್ನು ತಿಳಿಸಿರಿ" ಎಂದನು. ಆಗ ಕೃಷ್ಣನು ಇಂಪಾದ ಗಂಭೀರಧ್ವನಿಯಿಂದ, ಜರಾಸಂಧನನ್ನು ಕುರಿತು, "ರಾಜಾ! ನೀನು ನಮ್ಮನ್ನು ಸ್ನಾತಕಬ್ರಾಹ್ಮಣರೆಂದೇ ತಿಳಿ. ಸ್ನಾತಕವ್ರತವನ್ನು ಹಿಡಿದವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದಲ್ಲಿಯೂ ಇರಬಹುದು. ಈ ಮೂರು ವರ್ಣದವರಲ್ಲಿ ಎಲ್ಲರಿಗೂ ಸಮಾನವಾದ ಕೆಲವು ಸಾಮಾನ್ಯ ನಿಯಮಗಳೂ ಆಯಾ ವರ್ಣದವರಿಗೆ ಬೇರೆಬೇರೆ ಕೆಲವು ವಿಶೇಷ ನಿಯಮಗಳೂ ಏರ್ಪಟ್ಟಿವೆ.

ಆ ವಿಶೇಷನಿಯಮಗಳಿಂದ ನಡೆದ ಕ್ಷತ್ರಿಯನು ಸ್ಥಿರವಾದ ಸಂಪತ್ತನ್ನು ಪಡೆಯುವನು. ಜನರು ಪುಷ್ಪವನ್ನು ಧರಿಸಿದಾಗಲೇ ಅವರ ಸಂಪತ್ತು ಸ್ಥಿರವಾಗಿರುವುದು. ಆದುದರಿಂದ ನಾವೂ ಪುಷ್ಪಗಳನ್ನು ಧರಿಸಿರುವೆವು. ಕ್ಷತ್ರಿಯನು ಬಾಹುಬಲವುಳ್ಳವನೇಹೊರತು ಬ್ರಾಹ್ಮಣನಂತೆ ಮಾತಿನ ಬಲವನ್ನು ಉಪಯೋಗಿಸತಕ್ಕವನಲ್ಲ. ಆದುದರಿಂದಲೇ ಕ್ಷತ್ರಿಯನ ಮಾತುಗಳು ಅಷ್ಟು ಗಂಭೀರವಾಗಿಲ್ಲದೆ ಒರಟಾಗಿರುವುವು. ಸೃಷ್ಟಿಕರ್ತನಾದ ಬ್ರಹ್ಮನು ತನ್ನ ಶಕ್ತಿಯನ್ನು ಕ್ಷತ್ರಿಯರ ಬಾಹುಗಳಲ್ಲಿಟ್ಟಿರುವನು. ಆ ಮರ್ಮವನ್ನು ನೀನು ತಿಳಿಯಬೇಕಾದರೆ, ಈಗಲೇ ನಮ್ಮಲ್ಲಿ ಅದನ್ನು ನೋಡಬಹುದು. ನಾವು ಬಾಗಿಲಿಲ್ಲದ ಕಡೆಯಿಂದ ನಿನ್ನ ಮನೆಯನ್ನು ಪ್ರವೇಶಿಸಿದೆಯೆಂದು ಹೇಳಿದೆಯಲ್ಲವೆ? ಅದರಲ್ಲಿಯೂ ದೋಷವೇನೂ ಕಾಣಲಿಲ್ಲ. ಶತ್ರುಗೃಹವನ್ನು ಬಾಗಿಲಿಲ್ಲದ ಕಡೆಯಿಂದಲೇ ಪ್ರವೇಶಿಸಬೇಕು. ಮಿತ್ರಗೃಹವನ್ನು ಬಾಗಿಲಿನಿಂದಲೇ ಪ್ರವೇಶಿಸಬೇಕು. ಆದುದರಿಂದ ಇವೆಲ್ಲವೂ ಧರ್ಮಸಮ್ಮತಗಳಾದ ಪದ್ಧತಿಗಳೇ! ನಾವು ಈ ಕಾರ್ಯೋದ್ದೇಶದಿಂದ ಈ ಮನೆಗೆ ಬಂದವರು. ನಮ್ಮ ಶತ್ರುವಿನ ಸತ್ಕಾರವನ್ನು ಗ್ರಹಿಸಲಾರೆವು. ಇದು ನಮ್ಮ ಸ್ಥಿರವಾದ ವ್ರತವು" ಎಂದನು.

ಇದು ಇಪ್ಪತ್ತೊಂದನೆಯ ಅಧ್ಯಾಯವು.

 ಜರಾಸಂಧನ ಯುದ್ಧೋದ್ಯಮವು. 

ಆಮೇಲೆ ಜರಾಸಂಧನು ಆ ವೇಷಧಾರಿಗಳನ್ನು ಕುರಿತು "ಎಲೈ! ನೀವು ನನ್ನನ್ನು ನಿಮಗೆ ಶತ್ರುವೆಂದು ಹೇಳುವಿರಿ. ನಿಮ್ಮಲ್ಲಿ ನನಗೆ ಯಾವಾಗ ವೈರವುಂಟಾಯಿತೋ ಅದನ್ನು ನಾನು ಎಷ್ಟೆಷ್ಟು ಯೋಚಿಸಿದರೂ, ನನ್ನ ಸ್ಮರಣೆಗೆ ಬರಲಿಲ್ಲ. ನಿಮಗೆ ನಾನು ಹಿಂದೆ ಯಾವ ಕೇಡನ್ನೂ ಮಾಡಿದುದಾಗಿ ನನಗೆ ತೋರಲಿಲ್ಲ. ನನ್ನಿಂದ ನಿಮಗೆ ಅಪಕಾರವೇನಾದರೂ ನಡೆದಿದ್ದರೆ, ಆಗ ನೀವು ನನ್ನನ್ನು ಶತ್ರುವೆಂದು ಹೇಳಬೇಕಾದುದೇ ನ್ಯಾಯವು. ಸತ್ಪುರುಷರ ಪದ್ಧತಿಯೂ ಇದೇ! ಅರ್ಥ

ಕ್ಕಾಗಲಿ, ಧರ್ಮಕ್ಕಾಗಲಿ ಉಪಹತಿಯನ್ನು ತಂದಾಗ, ಮನಸ್ಸು ತಪಿಸುವು ದೇನೋ ಸಹಜವು. ಧರ್ಮಜ್ಞನೂ, ಮಹಾರಥನೂ ಎನಿಸಿಕೊಂಡ ಕ್ಷತ್ರಿಯನು, ಈ ನಿಯಮಕ್ಕೆ ವಿರುದ್ಧವಾಗಿ, ನಿರಪರಾಧಿಯಲ್ಲಿ ತಪ್ಪನ್ನು ಹೊರಿಸಿದರೆ, ಅವನು ತನ್ನ ಪುಣ್ಯಲೋಕಗಳನ್ನೆಲ್ಲಾ ಕೆಡಿಸಿಕೊಂಡು ಪಾಪಿಗಳ ಗತಿಯನ್ನು ಹೊಂದುವನು. ಅವನ ಶ್ರೇಯಸ್ಸೆಲ್ಲವೂ ಕೆಡು ವುದು. ಸರಿಯಾಗಿ ನಡೆದುಕೊಳ್ಳತಕ್ಕವನಿಗೆ ಮೂರು ಲೋಕದಲ್ಲಿಯೂ, ಕ್ಷತ್ರಿಯಧರ್ಮವೇ ಎಲ್ಲಕ್ಕಿಂತಲೂ ಶ್ರೇಷ್ಠವಾದುದು. ಧರ್ಮವನ್ನು ಬಲ್ಲ ವರು, ಬೇರೆ ಯಾವ ಧರ್ಮವನ್ನೂ ಅಷ್ಟು ಪ್ರಶಂಸೆಮಾಡುವುದಿಲ್ಲ. ಅಂ ತಹ ಕ್ಷತ್ರಿಯಧರ್ಮದಲ್ಲಿ ನಾನು ಸ್ಥಿರವಾಗಿ ನೆಲೆಗೊಂಡವನು. ಪ್ರಜೆ ಗಳ ವಿಷಯದಲ್ಲಿಯೂ ನಾನು ತಪ್ಪಿನಡೆದವನಲ್ಲ. ಇಂತಹ ನಿರ್ದೋಷಿ ಯಾದ ನನ್ನ ನಡತೆಯನ್ನು ತಿಳಿಯದೆ ನೀವು ವೈರಿಯೆಂದು ಹೇಳುವಿ ರೇಕೆ?'' ಎಂದನು.

ಆಗ ಕೃಷ್ಣನು ''ಓ ಮಹಾಬಾಹೂ! ನಿನ್ನ ಮಾತು ವಾಸ್ತವವು. ಆದರೆ ತನ್ನ ಕ್ಷತ್ರಿಯಕುಲವನ್ನು ಉದ್ಧರಿಸಬೇಕೆಂಬ ದೊಡ್ಡ ಕಾರ್ಯ ಭಾರವನ್ನು ವಹಿಸಿದವನೊಬ್ಬನು ನಮಗೆ ಆಜ್ಞೆಮಾಡಿ ಕಳುಹಿಸಿರುವನು. ಅದರಂತೆ ನಾವು ನಿನ್ನನ್ನು ನಿಗ್ರಹಿಸುವುದಕ್ಕಾಗಿಯೇ ಬಂದಿರುವೆವೆಂದು ತಿಳಿ. ಓ ಮಗಧರಾಜಾ! ನೀನು ನಿರ್ದೋಷಿಯೆಂದು ಹೇಳುವೆಯಲ್ಲವೆ? ಈ ಲೋಕದಲ್ಲಿರುವ ಅನೇಕ ಕ್ಷತ್ರಿಯರನ್ನು ನೀನು ನರಬಲಿಗಾಗಿ ಹಿಡಿದು ತಂದು ಸೆರೆಯಲ್ಲಿಟ್ಟಿರುವೆ. ಇಂತಹ ಕ್ರೂರಪಾತಕಿಯಾದ ನೀನು ನಿ ರ್ದೋಷಿಯೆಂದು ಹೇಗೆ ಹೇಳಿಕೊಳ್ಳುವೆ? ರಾಜನಾದವನು ಸಾಧುಗಳಾದ ಕ್ಷತ್ರಿಯರನ್ನು ಹಿಂಸಿಸಬಹುದೆ? ನೀನು ಅಂತಹ ರಾಜರನ್ನು ರುದ್ರಬಲಿ ಗಾಗಿ ಒಪ್ಪಿಸಬೇಕೆಂದು ನಿಶ್ಚಯಿಸಿರುವೆ. ಈಗ ನಾವು ನಿನ್ನನ್ನು ಸುಮ್ಮ ನೆ ಬಿಟ್ಟರೆ, ಆ ನಿನ್ನ ಪಾಪಕ್ಕೆ ನಾವೂ ಭಾಗಿಗಳಾಗುವೆವು. ಏಕೆಂದರೆ, ನಾವು ಧರ್ಮವನ್ನು ರಕ್ಷಿಸತಕ್ಕವರು. ನಮಗೆ ಆ ಶಕ್ತಿಯುಂಟು. ಆ ಉದ್ದೇಶದಿಂದಲೇ ನಿನ್ನಲ್ಲಿಗೆ ನಾವು ಬಂದೆವು. ಮನುಷ್ಯರನ್ನು ಪಶು ಗಳಂತೆ ಬಲಿಕೊಟ್ಟು ದೇವತೆಗಳನ್ನು ತೃಪ್ತಿಗೊಳಿಸುವುದನ್ನು ನಾವು

ಎಂದಿಗೂ ನೋಡಿದುದಿಲ್ಲ ಹೀಗಿರುವಾಗ ನೀನು, ನರಬಲಿಯಿಂದ ಶಿವನನ್ನು ಪೂಜಿಸಬೇಕೆಂದು ಯೋಚಿಸುವೆ. ನೀನು ನಿಮ್ಮ ಕುಲದವರನ್ನೇ ಬಲಿಗೆ ಯೋಗ್ಯವಾದ ಪಶುಗಳನ್ನಾಗಿ ಮಾಡುತ್ತಿರುವೆ. ಓ ಜರಾಸಂಧಾ! ಬುದ್ಧಿಹೀನನಾದ ನಿನ್ನಂತೆ ಯಾವನು ತಾನೇ ಇಂತಹ ಪಾಪಕಾರ್ಯಕ್ಕೆ ಪ್ರಯತ್ನಿಸುವನು? ಲೋಕದಲ್ಲಿ ಯಾರುಯಾರು ಎಂತೆಂತಹ ಕಾಲದಲ್ಲಿ ಎಂತೆಂತಹ ಕರ್ಮವನ್ನು ಮಾಡುವರೋ, ಅವರು ಆಯಾ ಕರ್ಮಫಲಗಳನ್ನು ಆಯಾ ಸ್ಥಿತಿಯಲ್ಲಿಯೇ ಹೊಂದುವರು. ಆದುದರಿಂದ ಸ್ವಬಂಧುಗಳನ್ನೇ ಕೊಲ್ಲಬೇಕೆಂದಿರುವ ನಿನ್ನನ್ನು ಕೊಲ್ಲುವುದಕ್ಕಾಗಿಯೇ ನಾವು ಬಂದವರು. ನಿನ್ನ ಜ್ಞಾತಿಗಳಲ್ಲಿ ಕನಿಕರಗೊಂಡು ಅವರ ಕ್ಷೇಮಕ್ಕಾಗಿ ನಾವು ಬಂದೆವು. ರಾಜಾ! ಕ್ಷತ್ರಿಯರಲ್ಲಿ ನಿನ್ನಂತೆ ಪೌರುಷವುಳ್ಳವನು ಲೋಕದಲ್ಲಿಯೇ ಇಲ್ಲವೆಂದು ನೀನು ತಿಳಿದಿರುವೆ. ಇದೂ ನಿನ್ನ ಅಜ್ಞತೆಯೇಹೊರತು ಬೇರೆಯಲ್ಲ. ಓ ಮಗಧರಾಜಾ! ಧೀರಮನಸ್ಸುಳ್ಳ ಯಾವ ಕ್ಷತ್ರಿಯನು ತಾನೇ ಯುದ್ಧಕ್ಕೆ ಹಿಂಜರಿಯುವನು? ಅದರಲ್ಲಿಯೂ ತನ್ನ ಕುಲದ ಮೇಲ್ಮೆಯನ್ನು ತಿಳಿದ ಯಾವ ಕ್ಷತ್ರಿಯನು ಯುದ್ಧದಿಂದ ಉಂಟಾಗುವ ಶಾಶ್ವತವಾದ ಕೀರ್ತಿಯನ್ನೂ, ಸದ್ಗತಿಯನ್ನೂ ಕೋರದಿರುವನು? ಕ್ಷತ್ರಿಯರು ಸ್ವರ್ಗವನ್ನುದ್ದೇಶಿಸಿಯೇ, ಯುದ್ಧವೆಂಬ ಯಾಗದಲ್ಲಿ ದೀಕ್ಷಿತರಾಗಿ, ಉತ್ತಮಲೋಕಗಳನ್ನು ಸಾಧಿಸುವರು. ವೇದಾಧ್ಯಯನವೂ, ಯಶಸ್ಸೂ, ತಪಸ್ಸೂ, ಯುದ್ಧದಲ್ಲಿ ಸಾಯುವುದೂ, ಇವೆಲ್ಲ ಸದ್ಗತಿಗೆ ಕಾರಣಗಳೇ! ಆದರೆ, ಮೊದಲು ಹೇಳಿದ ಮೂರು ಕಾರ್ಯಗಳಿಂದ ಉತ್ತಮಗತಿಯು ಲಭಿಸುವುದೇನೋ ಕೆಲವುವೇಳೆ ವಿಫಲವಾಗಬಹುದು. ಯುದ್ಧದಲ್ಲಿ ಮರಣವೆಂಬುದು ಸ್ವರ್ಗಕ್ಕೆ ನಿಶ್ಚಿತವಾದ ಕಾರಣವು. ಯುದ್ಧದಲ್ಲಿ ಮರಣವೇ ವೈಜಯಂತವೆಂಬ ಇಂದ್ರನ ಪದವಿಗೆ ಕಾರಣಭೂತವು. ದೇವೇಂದ್ರನು ಆ ಗುಣಗಳಿಂದಲೇ ತನ್ನ ಪದವಿಯಲ್ಲಿದ್ದು ಲೋಕಗಳನ್ನು ರಕ್ಷಿಸುತ್ತಿರುವನು. ಓ ಜರಾಸಂಧಾ! ಈಗ ನೀನಾದರೋ ವೀರ್ಯಬಲದಿಂದ ಕೊಬ್ಬಿದವನು. ದೊಡ್ಡ ಸೇನಾಬಲದಿಂದ ದರ್ಪಗೊಂಡವನು. ಹೀಗಿರುವಾಗ ನಿನ್ನೊಡನೆ ಯುದ್ಧಮಾಡುವುದಕ್ಕಿಂತ, ಕ್ಷತ್ರಿಯರಿಗೆ ಉತ್ತಮಗತಿಗೆ ಕಾರಣವಾದ ಬೇರೆ ಮಾರ್ಗವೇ

ನಿರುವುದು? ಇಂತಹ ಮದೋದ್ಧತನಾದ ವೈರಿಯು ನಿನ್ನಂತೆ ನಮಗೆ ಬೇರೆ ಯಾವನಿರುವನು? ರಾಜಾ! ನೀನು ಇತರರೆಲ್ಲರನ್ನೂ ಹೀಗೆ ಬಹಳ ಹೀನವಾಗಿ ತಿಳಿದು ಅವಮಾನಗೊಳಿಸಬಾರದು. ಒಬ್ಬೊಬ್ಬ ಮನುಷ್ಯನಲ್ಲಿಯೂ ಪರಾಕ್ರಮವಿಲ್ಲದೇ ಇಲ್ಲ. ಲೋಕದಲ್ಲಿ ನಿನಗೆ ಸಮಾನವೀರ್ಯವುಳ್ಳವರೂ, ನಿನಗಿಂತಲೂ ಪರಾಕ್ರಮದಲ್ಲಿ ಮೇಲಾದವರೂ ಎಷ್ಟೋ ಮಂದಿಯಿರುವರು. ಅವರ ನಿಜಸ್ಥಿತಿಯು ನಿನಗೆ ತಿಳಿಯದಿರುವವರೆಗೆ ಮಾತ್ರ ನನಗೆ ಸಮಾನರಿಲ್ಲವೆಂದು ನೀನು ಹೆಮ್ಮೆಗೊಂಡಿರಬಹುದು. ಓ ರಾಜಾ! ಇದೋ ನಿನಗೆ ಅದನ್ನು ತೋರಿಸುವುದಕ್ಕಾಗಿಯೇ ನಾವು ಬಂದವರು. ನಿನ್ನನ್ನು ಇದಿರಿಸಬಲ್ಲವರುಂಟೆಂಬುದನ್ನು ನಾನು ಈಗಲೇ ನಿನಗೆ ತಿಳಿಸುವೆನು. ಈಗಲೂ ನಿನಗೊಂದು ಮಾತನ್ನು ಹೇಳುವೆನು ಕೇಳು. ನಿನಗೆ ಸಮಮಾನರಾದವರಲ್ಲಿ ಇನ್ನು ಮೇಲಾದರೂ ನೀನು ಕೋಪವನ್ನೂ, ಅಹಂಕಾರವನ್ನೂ ಬಿಟ್ಟುಬಿಡು. ಅನ್ಯಾಯವಾಗಿ ನಿನ್ನ ಪುತ್ರರೊಡನೆಯೂ, ಮಂತ್ರಿಗಳೊಡನೆಯೂ, ಸೇನೆಗಳೊಡನೆಯೂ ಯಮಲೋಕಕ್ಕೆ ಹೋಗಬೇಡ. ಈ ಲೋಕದಲ್ಲಿ ದಂಭೋದ್ಭವ, ಕಾರ್ತವೀರ್ಯ, ಉತ್ತರ, ಬೃಹದ್ರಥರೆಂಬ ಪ್ರಬಲರಾಜರುಕೂಡ ತಮಗಿಂತಲೂ ಮೇಲಾದವರನ್ನು ಅವಮಾನಿಸಿಯೇ ತಮ್ಮ ಸಮಸ್ತಪರಿವಾರಗಳೊಡನೆ ನಾಶಹೊಂದಿದರು. ರಾಜಾ! ಈಗ ವಾಸ್ತವವನ್ನು ತಿಳಿಸುವೆವು ಕೇಳು. ನಾವು ಬ್ರಾಹ್ಮಣರಲ್ಲ. ನಿನ್ನೊಡನೆ ಯುದ್ಧಮಾಡಬೇಕೆಂದೇ ಬಂದವರು. ನಾನು ಹೃಷೀಕೇಶನೆಂದು ಕರೆಯಲ್ಪಡುವ ವಸುದೇವಕುಮಾರನಾದ ಕೃಷ್ಣನು. ಇವರಿಬ್ಬರೂ ವೀರರಾದ ಪಾಂಡುಕುಮಾರರು. ಇವರ ಸೋದರಮಾವನ ಮಗನೂ, ನಿನ್ನ ವೈರಿಯೂ ಆದ ಕೃಷ್ಣನೇ ನಾನೆಂದು ತಿಳಿ! ಈಗ ನಾವು ನಿನ್ನನ್ನು ಯುದ್ಧಕ್ಕಾಗಿ ಕರೆಯುವೆವು. ಇದಿರಾಗಿ ನಿಂತು ಯುದ್ಧಮಾಡು. ಹಾಗಿಲ್ಲವೇ ನೀನು ನರಬಲಿಗಾಗಿ ಸೆರೆಹಿಡಿದು ತಂದಿಟ್ಟಿರುವ ಎಲ್ಲಾ ರಾಜರನ್ನೂ ಬಿಟ್ಟು ನಮಗೆ ಶರಣಾಗತನಾಗು. ನಮ್ಮ ಕೈಯಿಂದ ಸತ್ತು ಯಮಪುರಿಗೆ ಹೋಗುವುದಾದರೂ ಹೋಗು" ಎಂದನು. ಈ ಮಾತನ್ನು ಕೇಳಿ ಜರಾಸಂಧನಿಗೆ ಅತ್ಯಾಕ್ರೋಶವುಂಟಾಯಿತು. ಆಗ ಅವನು ಕೃಷ್ಣನನ್ನು ಕುರಿತು

“ಎಲ ಕೃಷ್ಣಾ! ನೀನು ಹಿಂದೆ ಯುದ್ಧದಲ್ಲಿ ಕೊಂದ ಇತರಜನರಂತೆ ನನ್ನನ್ನು ತಿಳಿಯಬೇಡ. ನಾನು ಕಂಸನಲ್ಲ! ಪ್ರಲಂಬನಲ್ಲ! ನಾನು ಬಾಣಾಸುರನೂ ಅಲ್ಲ! ಮುಷ್ಟಿಕನಲ್ಲ! ಇಂದ್ರನನ್ನು ಸಂಕಟಗೊಳಿಸಿದ ನರಕನೂ ನಾನಲ್ಲ! ನನ್ನನ್ನು ಕೇಶಿಯೆಂದಾಗಲಿ, ಹೆಂಗಸಾದ ಪೂತನೆಯೆಂದಾಗಲಿ, ಕಾಲಯವನನೆಂದಾಗಲಿ ತಿಳಿಯಬೇಡ. ನೀನು ನಿನ್ನ ವಂಶವೇನೆಂಬುದನ್ನು ಮರೆತುಬಿಟ್ಟೆಯಾ! ನೀನು ಗೊಲ್ಲನೆಂಬ ನಿನ್ನ ಪೂರ್ವಜಾತಿಯನ್ನು ಸ್ಮರಿಸು. ಎಲ ಕೃಷ್ಣಾ! ನೀನು ನನಗೆ ಭಯಪಟ್ಟಲ್ಲವೇ ನಿನ್ನ ಜನ್ಮಭೂಮಿಯಾದ ಮಧುರೆಯನ್ನು ಬಿಟ್ಟು, ಅಲ್ಪಜನದಂತೆ ಸಮುದ್ರದ ನಡುವೆ ಇರುವ ಒಂದು ದ್ವೀಪದಲ್ಲಿ ಅವಿತುಕೊಂಡಿರುವೆ. ಕೃಷ್ಣಾ! ನಿನ್ನ ಪೌರುಷವು ಹೀಗಿರುವಾಗ, ಈಗ ನನ್ನಮುಂದೆ ಬಂದು ಶರತ್ಕಾಲದಲ್ಲಿ ಸಾರವಿಲ್ಲದ ಮೇಘವು ಆರ್ಭಟಿಸಿ ಗುಡುಗುವಂತೆ ಬರೀ ಬಾಯಿಯ ಜಂಭಗಳನ್ನು ಹೇಳಿಕೊಳ್ಳುತ್ತಿರುವೆ. ಮಾಧವಾ! ಬಾ! ಈಗಲೇ ನಿನ್ನನ್ನು ಕೊಂದು, ಉಗ್ರಸೇನಪುತ್ರನೂ, ನನ್ನ ಭಾವನೂ ಆದ ಕಂಸನವಿಷಯದಲ್ಲಿ ನನ್ನ ಸಾಲವನ್ನು ತೀರಿಸಿಕೊಳ್ಳುವೆನು. ನಾನೂ ನಿನ್ನೊಡನೆ ಯುದ್ಧಕ್ಕಾಗಿಯೇ ಬಹುಕಾಲದಿಂದ ನಿರೀಕ್ಷಿಸುತಿದ್ದೆನು. ನಿನ್ನ ಮಿತ್ರರೊಡನೆ ನಿನ್ನನ್ನು ಕೊಲ್ಲುವುದಕ್ಕಾಗಿಯೇ ಸಮಯವನ್ನು ನಿರೀಕ್ಷಿಸುತಿದ್ದೆನು. ಈಗ ದೈವಾಧೀನದಿಂದ ಇಂದ್ರಾದಿದೇವತೆಗಳೇ ನನ್ನ ಕೋರಿಕೆಯನ್ನು ಸಫಲಗೊಳಿಸಿದರು. ನಿನ್ನೊಡನೆ ಬಂದಿರುವ ಈ ಭೀಮಾರ್ಜುನರಿಬ್ಬರೂ ಮಹಾವೀರರೆಂದು ನೀನು ಹೇಳುವೆ. ನನ್ನಮುಂದೆ ಕೇವಲ ನಪುಂಸಕಪ್ರಾಯರಾದ ಇವರನ್ನು, ಸಿಂಹವು ಕ್ಷುದ್ರಮೃಗಗಳನ್ನು ಹೇಗೋಹಾಗೆ ಈಗಿನ ಯುದ್ಧದಲ್ಲಿ ತೀರಿಸಿಬಿಡುವೆನು ನೋಡು” ಎಂದು ಒಂದಾವರ್ತಿ ಬಲವಾಗಿ ಗರ್ಜಿಸಿದನು. ಓ ಜನಮೇಜಯರಾಜಾ! ಜರಾಸಂಧನು ಕೋಪದಿಂದ ಮಾಡಿದ ಈ ಗರ್ಜನಧ್ವನಿಯನ್ನು ಕೇಳಿ, ಅಲ್ಲಿ ನೆರೆದಿದ್ದವರೆಲ್ಲರೂ ಭಯದಿಂದ ನಡುಗಿದರು. ಸಮಸ್ತ ಭೂತಗಳೂ ಹೆದರಿದುವು. ಆಗ ಕೃಷ್ಣನು ಜರಾಸಂಧನನ್ನು ಕುರಿತು “ಎಲ ರಾಜಾಧಮಾ! ಈ ಬರೀಗರ್ಜನೆಗಳಿಂದೇನು? ಈ ನಿನ್ನ ಆರ್ಭಟಗಳನ್ನೆಲ್ಲಾ ಕಾರ್ಯದಲ್ಲಿ ತೋರಿಸು. ಇದೋ! ಈ ಪಾಂಡವರಿಬ್ಬರಿಂದ ನಿನ್ನ

ಮಂತ್ರಿ, ಪುತ್ರಪರಿವಾರಗಳನ್ನೆಲ್ಲಾ ಕೊಲ್ಲಿಸುವೆನು ನೋಡು. ಅದಕ್ಕಾಗಿಯೇ ಇವರನ್ನು ಕರೆತಂದಿರುವೆನು. ಹೇಗಿದ್ದರೂ, ಇನ್ನುಮೇಲೆ ನೀನು ಜೀವದಿಂದ ನಿನ್ನ ಪಟ್ಟಣಕ್ಕೆ ಹಿಂದಿರುಗಲಾರೆ" ಎಂದನು. ಅದಕ್ಕಾ ಜರಾಸಂಧನು "ಎಲ ಮಾಧವಾ! ಇದುವರೆಗೆ ನಾನು ಯಾವ ರಾಜರನ್ನೂ ಯುದ್ಧದಲ್ಲಿ ಗೆಲ್ಲದೆ ಮೋಸದಿಂದ ತಂದವನಲ್ಲ. ನನಗೆ ಪರಾಜಿತನಾಗದ ಶತ್ರುವಾವನುಂಟು? ಕ್ಷತ್ರಿಯನು ತನ್ನ ಪರಾಕ್ರಮದಿಂದ ವೈರಿಗಳನ್ನು ಜಯಿಸಿ, ಅವರನ್ನು ತನ್ನ ಇಷ್ಟಬಂದಂತೆ ನಡೆಸುವುದರಲ್ಲಿ ಅನ್ಯಾಯವೇನಿದೆ? ತಿಳಿದವರು ಇದನ್ನು ನ್ಯಾಯವೆಂದೇ ಹೇಳುವರು. ನಾನು ಸೆರೆಹಿಡಿದಿರುವ ರಾಜರನ್ನು ನನ್ನ ಇಷ್ಟದೇವತೆಗೆ ಬಲಿಕೊಡಬೇಕೆಂಬುದೇ ನನ್ನ ಸಂಕಲ್ಪವು. ನಿನಗೆ ಹೆದರಿ ಈಗ ನಾನು ಅವರನ್ನು ಬಿಟ್ಟು ಬಿಡುವೆನೇ! ಕ್ಷತ್ರಿಯವ್ರತವನ್ನು ತಿಳಿದ ನಾನು ಎಂದಿಗೂ ಇದಕ್ಕೆಲ್ಲ ಹೆದರುವವನಲ್ಲ. ಕೃಷ್ಣಾ! ನೀವು ಸೈನ್ಯಗಳನ್ನು ತಂದರೆ, ನಾನೂ ಸೈನ್ಯಗಳನ್ನಿಟ್ಟು ಯುದ್ಧಮಾಡುವೆನು. ಹಾಗಿಲ್ಲದೆ, ನೀವು ಇಬ್ಬರು ಮೂವರು ಒಟ್ಟಾಗಿ ಬಂದರೂ, ಬೇರೆಬೇರೆಯಾಗಿ ಯುದ್ಧಕ್ಕೆ ನಿಂತರೂ, ನಾನು ಯುದ್ಧಕ್ಕೆ ಸಿದ್ಧನಾಗಿರುವೆನು" ಎಂದನು. ಜರಾಸಂಧನು ಈ ಮಾತನ್ನು ಹೇಳಿ, ಆ ಕೃಷ್ಣ ಭೀಮಾರ್ಜುನರು ಮೂವರೊಡನೆ ಯುದ್ಧಕ್ಕೆ ನಿಶ್ಚಯಿಸಿಕೊಂಡು, ಆಗಲೇ ತನ್ನ ರಾಜ್ಯದಲ್ಲಿ ತನ್ನ ಮಗನಾದ ಸಹದೇವನಿಗೆ ಪಟ್ಟಾಭಿಷೇಕವನ್ನು ನಡೆಸುವಂತೆ ಆಜ್ಞೆಮಾಡಿದನು. ಆ ಯುದ್ಧನಿಶ್ಚಯವಾದೊಡನೆ, ಕೌಶಿಕ ಚಿತ್ರಸೇನರೆಂಬ ತನ್ನ ಸೇನಾಪತಿಗಳನ್ನು ಕರೆಸಿಕೊಂಡನು. ಜನಮೇಜಯರಾಜಾ! ಇವರನ್ನೇ ನಾನು ಹಿಂದೆ, ಹಂಸ ಡಿಂಭಕರೆಂಬ ಪರ್ಯಾಯನಾಮಗಳಿಂದ ನಿನಗೆ ತಿಳಿಸಿದ್ದೆನು. ಲೋಕಪ್ರಭುವೂ, ಪುರುಷೋತ್ತಮನೂ, ಸತ್ಯಸಂಧನೂ, ಜ್ಞಾನಿಗಳಿಗೆಲ್ಲ ಮೇಲೆನಿಸಿದವನೂ ಆದ ಕೃಷ್ಣನು, ಹೆಬ್ಬುಲಿಯಂತೆ ಭಯಂಕರಪರಾಕ್ರಮವುಳ್ಳ ಆ ಜರಾಸಂಧನನ್ನು ಯಾದವರಾಗಲಿ, ಬೇರೆ ಯಾರಾಗಲೀ ಕೊಲ್ಲುವುದಕ್ಕೆ ಸಾಧ್ಯವಿಲ್ಲವೆಂಬುದನ್ನು ಚೆನ್ನಾಗಿ ಬಲ್ಲನು. ಸೃಷ್ಟಿಕರ್ತನಾದ ಬ್ರಹ್ಮನ ಈ ಸಂಕಲ್ಪವನ್ನು ಬಲ್ಲ ಕೃಷ್ಣನು, ಆ ಬ್ರಹ್ಮಾಜ್ಞೆಯನ್ನು

ಗೌರವಿಸುವುದಕ್ಕಾಗಿಯೇ ಜರಾಸಂಧನನ್ನು ತನ್ನ ಕೈಯಿಂದ ಕೊಲ್ಲಬಾರ ದೆಂದು ಸಂಕಲ್ಪಿಸಿದನು.

ಇದು ಇಪ್ಪತ್ತೆರಡನೆಯ ಅಧ್ಯಾಯವು.



ಕೃಷ್ಣಜರಾಸಂಧರಲ್ಲಿ ದ್ವೇಷಕಾರಣವನ್ನು ವೈಶಂಪಾಯನನು ಜನಮೇಜಯನಿಗೆ ತಿಳಿಸಿದುದು.

ಆಗ ಜನಮೇಜಯನು ವೈಶಂಪಾಯನನನ್ನು ಕುರಿತು "ಓ ಮುನೀಂದ್ರಾ! ಕೃಷ್ಣ ಜರಾಸಂಧರಿಬ್ಬರಿಗೂ ಹೇಗೆ ವೈರವುಂಟಾಯಿತು? ಕೃಷ್ಣನು ಜರಾಸಂಧನನ್ನು ಹೇಗೆ ಯುದ್ಧದಲ್ಲಿ ಜಯಿಸಿದನು? ಜರಾಸಂಧನಿಗೆ ಕಂಸನೇನಾಗಬೇಕು? ಆ ಕಂಸನಿಗಾಗಿ ಜರಾಸಂಧನಿಗೂ, ಕೃಷ್ಣನಿಗೂ ವೈರವೇಕೆ ಹುಟ್ಟಿತು? ಈ ವಿವರಗಳನ್ನೆಲ್ಲ ನನಗೆ ಚೆನ್ನಾಗಿ ತಿಳಿಸಬೇಕು" ಎಂದನು. ಆಗ ವೈಶಂಪಾಯನನು ಆ ವೃತ್ತಾಂತಗಳನ್ನು ಹೇಳತೊಡಗಿ "ಜನಮೇಜಯರಾಜಾ! ಕೇಳು! ಯಾದವಕುಲದಲ್ಲಿ ಮಹಾ ಧೀಮಂತನಾದ ವಸುದೇವನೆಂಬವನು ಹುಟ್ಟಿದನು. ಇವನು ಉಗ್ರಸೇನನಿಗೆ ಮಂತ್ರಿಯೆನಿಸಿದ್ದನು. ಉಗ್ರಸೇನನಿಗೆ ಹುಟ್ಟಿದ ಅನೇಕಪುತ್ರರಲ್ಲಿ ಕಂಸನೆಂಬವನು ಹಿರಿಯನು. ಈ ಕಂಸನು ಬಹು ಬಲಾಢ್ಯನೂ, ಎಲ್ಲಾ ಶಸ್ತ್ರಗಳನ್ನೂ ಬಲ್ಲವನೂ ಆಗಿದ್ದನು. ಜರಾಸಂಧನು ರಾಜ್ಯವನ್ನೇ ಕನ್ಯಾಶುಲ್ಕವನ್ನಾಗಿ ನಿರ್ಣಯಿಸಿ ಕಂಸನಿಗೆ ತನ್ನ ಇಬ್ಬರು ಕನ್ಯೆಯರನ್ನು ಮದುವೆಮಾಡಿಕೊಟ್ಟನು. ಈ ಕಾರಣದಿಂದ ಉಗ್ರಸೇನನ ಮಂತ್ರಿಗಳು ಮಧುರಾಪುರಿಯಲ್ಲಿ ಕಂಸನಿಗೆ ಪಟ್ಟಾಭಿಷೇಕವನ್ನು ನಡೆಸಿ ಅವನನ್ನು ರಾಜ್ಯದಲ್ಲಿರಿಸಿದರು ಕಂಸನಾದರೋ ಕ್ರೂರನು. ಐಶ್ವರ್ಯಮದದಿಂದ ಕೊಬ್ಬಿದವನು. ಬಲದರ್ಪಿತನು. ಇವನಿಗೆ ರಾಜ್ಯಾಧಿಕಾರವು ಬಂದೊಡನೆ ತನ್ನ ತಂದೆಯನ್ನೇ ಸೆರೆಯಲ್ಲಿರಿಸಿ, ತನ್ನ ಮಂತ್ರಿಗಳೊಡನೆ ರಾಜ್ಯವನ್ನನುಭವಿಸುತಿದ್ದನು. ತನ್ನ ತಂದೆಯ ಮಂತ್ರಿಯಾದ ವಸುದೇವನ ಮಾತನ್ನು ಅವನು ಸ್ವಲ್ಪವೂ ಲಕ್ಷ್ಯಮಾಡುತ್ತಿರಲಿಲ್ಲ. ಅವನ

ಬುದ್ಧಿವಾದಗಳಂತೆ ಕ್ರಮವಾಗಿಯೂ ರಾಜ್ಯವನ್ನು ಪಾಲಿಸದೆ ಸ್ವೇಚ್ಛೆ ಯಿಂದ ಪ್ರವರ್ತಿಸುತಿದ್ದನು. ಆದರೆ ದೈತ್ಯಸ್ವಭಾವವುಳ್ಳ ಆ ಕಂಸನು ದೇವಕನ ಮಗಳಾದ (ತನ್ನ ತಂಗಿಯಾದ) ದೇವಕಿಯನ್ನು ವಸುದೇವನಿಗೆ ಕೊಟ್ಟು ವಿವಾಹಮಾಡಿದಾಗ, ಬಹಳ ಪ್ರೀತಿಯಿಂದ ಆ ವಿವಾಹಸಂಭ್ರ ಮಗಳನ್ನೆಲ್ಲ ನಡೆಸಿದುದಲ್ಲದೆ, ಆ ದೇವಕಿಯನ್ನು ರಥದಲ್ಲಿ ಕುಳ್ಳಿರಿಸಿ ಪತಿಗೃಹಕ್ಕೆ ಕಳುಹಿಸುವಾಗ, ಆ ದಂಪತಿಗಳೊಡನೆ ತಾನೂ ರಥವನ್ನೇರಿ ಹೊರಟನು. ಇವರು ಪ್ರಯಾಣಹೊರಡುವಾಗ ಅಂತರಿಕ್ಷದಲ್ಲಿ ಯಾವ ನೋ ದೇವದೂತನೊಬ್ಬನು ಮಾತಾಡುವಂತೆ ಒಂದು ಅಶರೀರವಾಕ್ಕು ಹೊರಟಿತು. ಕಂಸನೂ, ದೇವಕೀ ವಸುದೇವರೂ ಕೇಳುತ್ತಿರುವಹಾಗೆಯೇ ಆ ಆಕಾಶವಾಣಿಯು "ಎಲ ಕಂಸಾ! ನೀನು ಯಾವ ದೇವಕಿಯನ್ನು ಇಷ್ಟೊಂದು ಉತ್ಸಾಹದಿಂದ ಕರೆದುಕೊಂಡು ಹೋಗುವೆಯೋ, ಅವಳ ಎಂಟನೆಯ ಗರ್ಭವೇ ನಿನಗೆ ಮೃತ್ಯುವಾಗುವುದು" ಎಂದು ನುಡಿಯಿತು. ಕಂಸನ ಕಿವಿಗೆ ಆ ಮಾತುಗಳು ಬಿದ್ದೊಡನೆ ಅವನು ಖಡ್ಗವನ್ನೆತ್ತಿಕೊಂಡು ರಥದಿಂದ ಧುಮುಕಿ, ತಂಗಿಯಾದ ದೇವಕಿಯ ತಲೆಯನ್ನು ಕಡಿಯುವು ದಕ್ಕೆ ಯತ್ನಿಸಿದನು.

ಆಗ ಬುದ್ಧಿಶಾಲಿಯಾದ ವಸುದೇವನು, ಕೋಪದಿಂದ ವೈತಿಳಿಯು ದಂತಿರುವ ಕಂಸನನ್ನು ನಗೆಮುಖದಿಂದಲೇ ಸಮಾಧಾನಗೊಳಿಸುತ್ತ "ಭಾವಾ! ಇದೇನಿದು? ಹೆಂಗಸರನ್ನು ಕೊಲ್ಲಬಾರದೆಂದು ಸಮಸ್ತಧರ್ಮ ಗಳೂ ಹೇಳುವುವು. ನಿರಪರಾಧಿನಿಯಾದ ಈ ಅಬಲೆಯನ್ನು ನೀನು ಇದ್ದ ಕ್ಕಿದ್ದಹಾಗ ಕೊಲ್ಲಬೇಕೆಂದು ಹೋಗುವೆಯಲ್ಲ? ಇವಳಿಂದ ನಿನಗೇನಾ ದರೂ ಭಯವಿದ್ದರೆ, ಇವಳ ಪ್ರಾಣಕ್ಕೂ ಹಾನಿಯಿಲ್ಲದೆ, ನಿನ್ನ ಕೋರಿಕೆ ಯೂ ನಡೆಯುವಂತೆ ಒಂದುಪಾಯವನ್ನು ಹೇಳುವೆನು ಕೇಳು. ಇವಳ ಎಂಟನೆಯ ಗರ್ಭದಿಂದಲ್ಲವೇ ನಿನಗೆ ಮರಣವೆಂದು ಆಕಾಶವಾಣಿಯು ನುಡಿಯಿತು. ಆ ಎಂಟನೆಯ ಗರ್ಭವು ಜನಿಸಿದೊಡನೆ ನೀನು ಅದನ್ನು ಕೊಂದುಬಿಡು. ಆಗ ನಿನ್ನಮೇಲಿನ ಮೃತ್ಯುವು ತಪ್ಪಿಹೋಗುವುದು" ಎಂದನು. ಈ ಮಾತು ಕಂಸನಿಗೂ ಯುಕ್ತವೆಂದು ತೋರಿತು. ವಸು

ದೇವನ ಮಾತಿಗೆ ಸಮ್ಮತಿಸಿದನು ಅಮೇಲೆ ದೇವಕಿಗೆ ಕಾಲಕಾಲಕ್ಕೆ ಗರ್ಭವು ತಲೆದೋರಿ, ಒಳ್ಳೇ ಸೂರ್ಯವರ್ಚಸ್ಸುಳ್ಳ ಮಕ್ಕಳು ಹುಟ್ಟುತ್ತಿದ್ದುವು. ಹುಟ್ಟಿದೊಡನೆಯೇ ಕಂಸನು ಒಂದೊಂದು ಮಗುವನ್ನೂ ಕೊಲ್ಲುತ್ತ ಬಂದನು. ದೇವಕಿಯು ಏಳನೆಯ ಗರ್ಭದಲ್ಲಿ ಬಲರಾಮನು ಬೆಳೆಯುತಿದ್ದನು. ಈ ಶಿಶುವು ಗರ್ಭದಲ್ಲಿ ಬೆಳೆಯುತ್ತಿರುವಾಗಲೇ, *ವಸುದೇವನು ತನ್ನ ಮಾಯೆಯಿಂದ ದೇವಕಿಯ ಗರ್ಭದಲ್ಲಿದ್ದ ಆ ಗರ್ಭಪಿಂಡವನ್ನು ಸೆಳೆತಂದು, ರೋಹಿಣಿಯ ಗರ್ಭದಲ್ಲಿರಿಸಿದನು. ಹೀಗೆ ಒಂದು ಗರ್ಭದಿಂದ ಮತ್ತೊಂದಕ್ಕೆ ಆಕರ್ಷಿಸಲ್ಪಟ್ಟುದರಿಂದಲೇ ಆ ಶಿಶುವಿಗೆ ಸಂಕರ್ಷಣನೆಂದೂ, ಬಲದಲ್ಲಿ ಮೇಲಾದುದರಿಂದ ಬಲದೇವನೆಂದೂ ಹೆಸರಾಯಿತು. ಆಮೇಲೆ ಸ್ವಲ್ಪಕಾಲಕ್ಕೆ ದೇವಕಿಯಲ್ಲಿ ಎಂಟನೆಯ ಗರ್ಭವುಂಟಾಯಿತು. ಕಂಸನು ಈ ಗರ್ಭವನ್ನು ರಕ್ಷಿಸುವುದಕ್ಕಾಗಿ ಬಹಳ ಪ್ರಬಲವಾದ ಕಾವಲು ಕಟ್ಟುಗಳನ್ನು ಏರ್ಪಡಿಸಿದ್ದನು. ಆ ಪ್ರಸವಕಾಲದಲ್ಲಿ ವಸುದೇವನಮೇಲೆ ಕಾವಲಿಗಾಗಿ ಉಗ್ರನೆಂಬ ಮಹಾಕ್ರೂರನಾದ ತನ್ನ ಮಂತ್ರಿಯೊಬ್ಬನನ್ನು ನಿಯಮಿಸಿದ್ದನು. ಏನಾದರೇನು? ಆ ಎಂಟನೆಯ ಗರ್ಭದಲ್ಲಿ ಕೂಸು ಹುಟ್ಟಿದೊಡನೆ ವಸುದೇವನು ಯಾರಿಗೂ ತಿಳಿಯದಂತೆ ಅದನ್ನೆತ್ತಿ ತಂದು ಒಬ್ಬ ಗೊಲ್ಲನ ಮನೆಯಲ್ಲಿಟ್ಟು, ಆ ಗೊಲ್ಲನಿಗೆ ಆಗಲೇ ಹುಟ್ಟಿದ್ದ ಹೆಣ್ಣುಮಗುವನ್ನು ಬೆಲೆಗೆ ಕೊಂಡುಕೊಂಡು ಬಂದು ದೇವಕಿಯ ಪಕ್ಕದಲ್ಲಿ ಮಲಗಿಸಿಬಿಟ್ಟನು. ಅತ್ತಲಾಗಿ ಗೋಕುಲದಲ್ಲಿ ಈ ಎಂಟನೆಯ ಶಿಶುವು ನೀರೊಳಗಣ ತಾವರೆಯಂತೆ ದಿನದಿನಕ್ಕೆ ಬೆಳೆಯುತ್ತ ಬಂದಿತು. ಅರಣಿಯೊಳಗಿನ ಬೆಂಕಿಯಂತೆ ಕಂಸನಿಗೆ ತಿಳಿಯದಹಾಗೆಯೇ ಕೃಷ್ಣನು ಗೊಲ್ಲರ ನಡುವೆ ತಾನೂ ಒಬ್ಬ ಗೊಲ್ಲನಾಗಿ ಬೆಳೆಯುತ್ತ ಬಂದನು. ನಿಜಸ್ಥಿತಿಯು ತಿಳಿಯದಿದ್ದರೂ, ಕಂಸನಿಗೆ ಸಂದೇಹವು ಹುಟ್ಟಿ, ಗೊಲ್ಲರನ್ನೆಲ್ಲ ನಾನಾವಿಧವಾಗಿ ಹಿಂಸಿಸುತಿದ್ದನು.

* ಭಗವಂತನೇ ತನ್ನ ಯೋಗಮಾಯೆಯಿಂದ ದೇವಕೀಗರ್ಭದಲ್ಲಿದ್ದ ಶಿಶುಪಿಂಡವನ್ನೆಳೆದು ರೋಹಿಣಿಯ ಗರ್ಭದಲ್ಲಿಟ್ಟುದಾಗಿ ಭಾಗವತದಲ್ಲಿಯೂ, ಮತ್ತು ಹರಿವಂಶದಲ್ಲಿಯೂ ಇದೆ.

ಹೀಗೆ ಕಂಸನಿಂದ ಪೀಡಿತರಾದ ಗೊಲ್ಲರಲ್ಲಿ ಕೆಲವರು ಕಂಸನ ಭಯ್ಯ ಕ್ಕಾಗಿಯೂ, ಬೇರೆ ಕೆಲವರು ಕೃಷ್ಣನಲ್ಲಿ ತಮಗಿರುವ ಪ್ರೀತಿಗಾಗಿಯೂ ಆ ಕೃಷ್ಣನನ್ನು ಎಡೆಬಿಡದೆ ಹಿಂಬಾಲಿಸುತಿದ್ದರು. ಜನಮೇಜಯರಾಜಾ! ಹೀಗಿರುತ್ತ ಕೃಷ್ಣನು ಕಾಲಕ್ರಮದಿಂದ ಪ್ರವರ್ಧಮಾನನಾಗಿ, ತನ್ನ ಅಣ್ಣನಾದ ಬಲರಾಮನೊಡಗೂಡಿ ಮಧುರೆಯಲ್ಲಿ ಕಂಸನನ್ನೂ, ಅವನ ಸಹೋದರರನ್ನೂ ಕೊಂದು, ಆ ರಾಜ್ಯದಲ್ಲಿ ತಿರುಗಿ ಉಗ್ರಸೇನನಿಗೆ ಪಟ್ಟ ವನ್ನು ಕಟ್ಟಿದನು. ಕೃಷ್ಣನಿಂದ ಕಂಸನು ಹತನಾದುದನ್ನು ಕೇಳಿದೊಡನೆ, ಜರಾಸಂಧನು ಕಂಸಪುತ್ರನಾದ ತನ್ನ *ದೌಹಿತ್ರನೊಬ್ಬನನ್ನು ತಂದು ಶೂರ ಸೇನರಾಜ್ಯದಲ್ಲಿರಿಸಿ ಅವನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಆಗಲೇ ಅವನು ಒಂದು ದೊಡ್ಡ ಸೈನ್ಯವನ್ನು ಸೇರಿಸಿಕೊಂಡು ಬಂದು, ಕೃಷ್ಣನನ್ನು ತಡೆದು ಕಂಸನ ಮಗನಿಗೆ ರಾಜ್ಯಾಭಿಷೇಕವನ್ನು ನಡೆಸಿಬಿಟ್ಟನು. ಅದು ಮೊದಲು ಉಗ್ರಸೇನನನ್ನೂ, ವೃಷ್ಣಿಗಳನ್ನೂ ಬಹಳವಾಗಿ ಪೀಡಿಸುತಿದ್ದನು. ಜರಾಸಂಧನಿಗೆ ಕೃಷ್ಣನಲ್ಲಿ ವೈರವು ಹುಟ್ಟುವುದಕ್ಕೆ ಕಾರಣವೇ ಇದು! ಐಶ್ವರ್ಯಮದದಿಂದ ಕೊಬ್ಬಿದ ಆ ಜರಾಸಂಧನು, ಶಿವನಿಗೆ ತನ್ನ ಹರಕೆ ಯನ್ನು ತೀರಿಸುವುದಕ್ಕಾಗಿ, ತಾನು ಯುದ್ಧದಲ್ಲಿ ಜಯಿಸಿದ ಅನೇಕರಾಜ ರನ್ನು ಮಹಾದೇವನಾದ ಪಶುಪತಿಗೆ ಬಲಿಕೊಡಬೇಕೆಂದು ಸೆರೆಯಲ್ಲಿಟ್ಟಿರು ವನು. ರಾಜಾ! ಕೃಷ್ಣಜರಾಸಂಧರ ವೈರಕಾರಣವನ್ನೆಲ್ಲ ನಿನಗೆ ತಿಳಿಸಿದು ದಾಯಿತು. ಇನ್ನು ಆ ಜರಾಸಂಧನು ಭೀಮನಿಂದ ಹತನಾದ ವೃತ್ತಾಂತ ವನ್ನೂ ತಿಳಿಸುವೆನು ಕೇಳು'' ಎಂದನು.

ಇದು ಇಪ್ಪತ್ತುಮೂರನೆಯ ಅಧ್ಯಾಯವು.

## ಭೀಮ ಜರಾಸಂಧರ ಯುದ್ಧವು.

ಆಮೇಲೆ ಕೃಷ್ಣನು, ತಮ್ಮೊಡನೆ ಯುದ್ಧಕ್ಕಾಗಿ ನಿಶ್ಚಯಿಸಿಕೊಂಡಿ ರುವ ಜರಾಸಂಧನನ್ನು ಕುರಿತು ''ಮಗಧರಾಜಾ! ನಾವು ಮೂವರಲ್ಲಿ

---

* ಈ ಕಥೆಯು ಭಾಗವತದಲ್ಲಿಲ್ಲ.

ನೀನು ಯಾರೊಡನೆ ಯುದ್ಧಮಾಡಬೇಕೆಂದು ಬಯಸುವೆ? ನಿನ್ನೊಡನೆ ಯಾರು ಯುದ್ಧಕ್ಕೆ ನಿಲ್ಲಬೇಕೋ ಹೇಳು" ಎಂದನು. ಆಗ ಜರಾಸಂಧನು ಆ ಮೂವರನ್ನೂ ನೋಡಿದನು. ಆ ಮೂವರಲ್ಲಿ ಭೀಮನ ಆಕಾರವನ್ನೂ, ಭೀಮನ ಕೈಯಲ್ಲಿದ್ದ ಮಹಾಗದೆಯನ್ನೂ ನೋಡಿದನು. ಅಲ್ಲದೆ ಭೀಮನ ಪರಾಕ್ರಮವನ್ನೂ ಅವನು ಕೇಳಿದ್ದನು. ಇದರಮೇಲೆ ಕೃಷ್ಣನು ಶುದ್ಧ ಕ್ಷತ್ರಿಯನಲ್ಲವೆಂದೂ, ಜಾತಿಯಲ್ಲಿ ಗೊಲ್ಲನೆಂದೂ, ಅರ್ಜುನನು ಬಾಲನೆಂದೂ, ನಿರಾಕರಿಸಿ, ಅವರಿಬ್ಬರನ್ನೂ ಬಿಟ್ಟು ಭೀಮನೊಡನೆಯೇ ಯುದ್ಧವನ್ನು ಕೋರಿದನು. ಇಷ್ಟರಲ್ಲಿಯೇ ಜರಾಸಂಧನ ಪುರೋಹಿತನು, ಪುಷ್ಪಮಾಲಿಕೆ, ಗೋರೋಚನ ಮೊದಲಾದ ಮಂಗಳದ್ರವ್ಯಗಳನ್ನೂ, ಯುದ್ಧಶ್ರಮವನ್ನು ಪರಿಹರಿಸತಕ್ಕವುಗಳಾಗಿಯೂ, ಪ್ರಜ್ಞೆತಪ್ಪಿದಾಗ ಮೂರ್ಛೆಯನ್ನು ತಿಳಿಸತಕ್ಕುದಾಗಿಯೂ ಇರುವ ಕೆಲವು ಉತ್ತಮೌಷಧಿಗಳನ್ನು ಎತ್ತಿಕೊಂಡು ಜರಾಸಂಧನಿದ್ದಲ್ಲಿಗೆ ಬಂದನು. ಯುದ್ಧಕ್ಕೆ ಮೊದಲು ನಡೆಸಬೇಕಾದ ಮಂಗಳಕಾರ್ಯಗಳೆಲ್ಲವನ್ನೂ ಆ ಪುರೋಹಿತನು ನಡೆಸಿದ ಮೇಲೆ ಜರಾಸಂಧನು ತಲೆಯಲ್ಲಿದ್ದ ಕಿರೀಟವನ್ನು ಕಳಚಿಟ್ಟು, ತಲೆಕೂದಲನ್ನು ಸರಿಮಾಡಿಕೊಂಡನು. ಹೀಗೆ ಸರ್ವಸನ್ನಾಹಗಳೊಡನೆ ಜರಾಸಂಧನು ಮೇರೆಯನ್ನು ಮೀರಿ ಉಕ್ಕಿಬರುವ ಸಮುದ್ರದಂತೆ ಎಗರಿ ಮುಂದೆ ಬಂದು ಭೀಮನನ್ನು ಕುರಿತು "ಭೀಮಾ! ಮುಂದೆ ಬಾ! ನಿನ್ನೊಡನೆಯೇ ನಾನು ಯುದ್ಧಮಾಡುವೆನು. ಬಲಶಾಲಿಗಳೊಡನೆ ಹೋರಾಡಿ ಸೋತರೂ ಗೌರವವುಂಟು" ಎಂದನು.

ಈ ಮಾತನ್ನು ಹೇಳುತ್ತಲೇ ಜರಾಸಂಧನು, ಬಲಾಸುರನು ಇಂದ್ರನನ್ನಿದಿರಿಸಿದಂತೆ ಭೀಮನಿಗಿದಿರಾದನು. ಇತ್ತಲಾಗಿ ಭೀಮನೂ ಕೂಡ ಕೃಷ್ಣನೊಡನೆ ಆಲೋಚಿಸಿ, ಯುದ್ಧಕ್ಕೆ ಮೊದಲು ನಡೆಯಬೇಕಾದ ಸ್ವಸ್ತ್ಯಯನ (ಮಂಗಳ) ಕಾರ್ಯಗಳೆಲ್ಲವೂ ನಡೆದಮೇಲೆ ಜರಾಸಂಧನಿಗಿದಿರಾದನು. ತೋಳುಗಳೇ ಆಯುಧವಾಗಿ ಉಳ್ಳ ಆ ವೀರರಿಬ್ಬರೂ, ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟದಿಂದಲೂ, ವೀರ್ಯೋತ್ಸಾಹದಿಂದಲೂ ಕೈಕಲೆತರು. ಮೊದಲು ಒಬ್ಬರನ್ನೊಬ್ಬರು ಕೈಯನ್ನು ಹಿಡಿದುಕೊಂಡರು.

ಆಮೇಲೆ ಒಬ್ಬರಿಗೊಬ್ಬರು ಪಾದವಂದನ ಮಾಡಿದರು. ತೋಳುಗಳಿಗೆ ಕಟ್ಟಿದ ಕಚ್ಚೆಯು ಆಡುವಂತೆ ಕೌಂಕುಳನ್ನು ತಟ್ಟಿದರು. ಆಮೇಲೆ ಅವರಿಬ್ಬರೂ ಎರಡು ಅಂಗೈಗಳಿಂದಲೂ ಆಗಾಗ ಭುಜಗಳನ್ನಪ್ಪಳಿಸುತ್ತ, ಒಬ್ಬರನ್ನೊಬ್ಬರು ಹಿಡಿದು, ಒಬ್ಬರಿಗೊಬ್ಬರು ಮೈಯನ್ನು ಹೆಣೆದುಕೊಂಡು, ತಿರುತಿರುಗಿ ತೋಳುಗಳನ್ನು ತಟ್ಟುತಿದ್ದರು. ಚಿತ್ರಹಸ್ತಕ್ರಮದಿಂದ ತೋಳುಗಳನ್ನಾಡಿಸುತ್ತ, ಒಬ್ಬರಿಗೊಬ್ಬರು ಕಚ್ಚೆಗಳ ಕೆಳಗೆ ಕೈಗಳನ್ನು ಕೊಟ್ಟು ಬಿಗಿಹಿಡಿಯುತಿದ್ದರು. ಕತ್ತಿನಲ್ಲಿಯೂ, ಕೆನ್ನೆಯಲ್ಲಿಯೂ ಕಿಡಿಗಳು ಹೊರಡುವಂತೆ ಅಪ್ಪಳಿಸುತ್ತಿದ್ದ ಅವರ ಗುದ್ದಾಟವು ಸಿಡಿಲುಹೊಡೆದಂತೆ ಕಾಣಿಸಿತು. ಹಗ್ಗಗಳಿಂದ ಬಿಗಿದುಕಟ್ಟಿದಂತೆ ಬಾಹುಪಾಶವೇ ಮೊದಲಾದ ಕಟ್ಟುಗಳನ್ನು ಕಟ್ಟುತ್ತ, ಒಬ್ಬರಿಗೊಬ್ಬರು ಕಾಲಿನಿಂದ ತಲೆಯನ್ನು ಮುಟ್ಟುತಿದ್ದರು. ಎದೆಗೆ ಕೈಕೊಟ್ಟು ನೂಕುವುದು, ಎರಡು ಕೈಗಳನ್ನೂ ಜೋಡಿಸಿ ತಲೆಗೆ ಅಪ್ಪಳಿಸುವ ಪೂರ್ಣಕುಂಭವೆಂಬ ವರಿಸೆ, ಕೈಗಳನ್ನು ಹಿಸುಕುವುದು, ಈ ಮೊದಲಾದ ಕ್ರಮಗಳನ್ನೆಲ್ಲ ಮಾಡುತ್ತ, ಆಗಾಗ ಮದದಾನೆಗಳಂತೆಯೂ, ಮೇಘಗಳಂತೆಯೂ ಗರ್ಜಿಸುವರು. ಒಬ್ಬರನ್ನೊಬ್ಬರು ತೋಳುಗಳಿಂದ ಅಪ್ಪಳಿಸುವರು. ಕೋಪದಿಂದ ಒಬ್ಬರನ್ನೊಬ್ಬರು ಸಿಂಹದಂತೆ ಧೀರದೃಷ್ಟಿಯಿಂದ ನೋಡುವರು. ಒಬ್ಬರನ್ನೊಬ್ಬರು ಎಳೆದೆಳೆದು ಹಾಕುವರು. ಅವರಿಬ್ಬರೂ, ಮೈಯಿಂದ ಮೈಯನ್ನು ಗುದ್ದುವುದು, ತೋಳುಗಳಿಂದ ತೋಳುಗಳನ್ನು ಹೆಣೆಯುವುದು, ಒಬ್ಬರಿಗೊಬ್ಬರು ಹೊಟ್ಟೆ, ಸೊಂಟ, ಪಕ್ಕೆ ಈ ಭಾಗಗಳಲ್ಲಿ ಬಲವಾಗಿ ಹಿಡಿಯುವುದು, ಇಂತಹ ಮುಷ್ಟಿಯುದ್ಧದ ಚಾತುರ್ಯಗಳನ್ನೆಲ್ಲ ತೋರಿಸುತಿದ್ದರು. ಯುದ್ಧದಲ್ಲಿ ಸುಶಿಕ್ಷಿತರಾದ ಅವರಿಬ್ಬರೂ, ತಮ್ಮತಮ್ಮ ದೇಹವನ್ನುಡುಗಿಸಿಕೊಳ್ಳುತ್ತ ಹೊಟ್ಟೆಯ ಕೆಳಗೂ, ಕತ್ತಿನಲ್ಲಿಯೂ, ಎದೆಯಲ್ಲಿಯೂ ಕೈಯಿಟ್ಟು ಒಬ್ಬರನ್ನೊಬ್ಬರು ನೂಕುವರು. ಲೋಕದಲ್ಲಿ ಬಾಹುಯುದ್ಧಗಳೊಳಗೆಲ್ಲ ಮೇಲೆನಿಸಿದ ಪೃಷ್ಟಭಂಗವನ್ನೂ (ಬೆನ್ನುಕೆಳಗಾಗಿ ಬೀಳಿಸುವುದು) ಮಾಡುತಿದ್ದರು. ತಮ್ಮ ಎರಡು ತೋಳುಗಳಿಂದ ಪೂರ್ಣಮೂರ್ಛೆ, ಪೂರ್ಣ ಕುಂಭ, ತೃಣಪೀಠ, ಪೂರ್ಣಯೋಗ, ಮುಷ್ಟಿಕ ಮೊದಲಾಗಿ ತಮತಮಗೆ ತಿಳಿದ ಯುದ್ಧಚಾತುರ್ಯಗಳನ್ನೆಲ್ಲ ತೋರಿಸುತಿದ್ದಗು. ಓ ರಾಜೇಂದ್ರಾ! ಈ ಭೀಮಜರಾಸಂಧರ

ಯುದ್ಧವನ್ನು ನೋಡುವುದಕ್ಕಾಗಿ, ಆ ನಗರದಲ್ಲಿದ್ದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರೂ, ಬಾಲರು ವೃದ್ಧರು, ಸ್ತ್ರೀಯರು ಮೊದಲಾಗಿ, ಸಮಸ್ತಜನರೂ ಬಂದುಸೇರಿದರು. ಆ ಯುದ್ಧರಂಗದ ಸುತ್ತಲೂ ಜನಸಮೂಹವು ಕಿಕ್ಕಿರಿಸಿ ತುಂಬಿತು. ಅವರಿಬ್ಬರೂ ಯುದ್ಧದಲ್ಲಿ ತೋಳನ್ನು ತಟ್ಟುವುದು, ಒಬ್ಬರನ್ನೊಬ್ಬರು ಹಿಡಿಯುವುದು, ತಳ್ಳುವುದು, ಇವುಗಳ ಆರ್ಭಟದಿಂದ, ಇಂದ್ರನ ವಜ್ರಾಯುಧವೂ, ಪರ್ವತವೂ ಒಂದಕ್ಕೊಂದು ತಾಡಿಸುವಂತೆ ಕಾಣಿಸುತಿತ್ತು. ಇಬ್ಬರೂ ಎಣೆಯಿಲ್ಲದ ಬಲವುಳ್ಳವರು. ಯುದ್ಧೋತ್ಸಾಹವುಳ್ಳವರು. ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟವುಳ್ಳವರು. ಹೀಗಿರುವುದರಿಂದ ತನ್ನ ಇದಿರಾಳಿಯು ಆಯಾಸದಿಂದ ಬಳಲಿದ ಸಮಯವನ್ನೇ ಹೊಂಚುಹಾಕುತ್ತ, ಹಣೆಗಳಿಂದ ಟಗರುಗಳೂ, ವೃಕ್ಷಗಳಿಂದ ರಾಕ್ಷಸರೂ, ಕಾಲೊದೆತಗಳಿಂದ ಕುದುರೆಗಳೂ, ಕೊಕ್ಕುಗಳಿಂದ ತಿತ್ತಿರಿಪಕ್ಷಿಗಳೂ ಹೋರಾಡುವಂತೆ ತಮ್ಮ ತೋಳುಗಳಿಂದ ಹೆಣಗಾಡಿದರು. ಅವರಿಬ್ಬರ ಯುದ್ಧವು ಇಂದ್ರವೃತ್ರರ ಯುದ್ಧದಂತೆ ಜನರನ್ನು ಭಯಗೊಳಿಸಿ ಓಡುವಂತೆ ಮಾಡಿತು. ಎಳೆಯುವುದು, ಹಿಂದೆ ತಳ್ಳುವುದು, ಮುಂದೆ ನೂಕುವುದು, ಪಕ್ಕಕ್ಕೆಳೆಯುವುದು, ಸುತ್ತಿಸುತ್ತಿ ತಿರುಗಿಸುವುದು, ಹೀಗೆ ನಾನಾಬಗೆಯ ಎಳೆದಾಟಗಳಿಂದ ಒಬ್ಬರನ್ನೊಬ್ಬರು ಕೆಡಹುವುದಕ್ಕೆ ಯತ್ನಿಸಿದರು. ಮೊಳಕಾಲುಗಳಿಂದ ಒಬ್ಬರನ್ನೊಬ್ಬರು ಗುದ್ದುವರು. ಕಲ್ಲುಗಳು ಒಂದಕ್ಕೊಂದು ತಾಡಿಸುವಂತೆ ಅವರು ಅಂಗೈಗಳಿಂದ ಒಬ್ಬರನ್ನೊಬ್ಬರು ಅಪ್ಪಳಿಸುತ್ತ, ದೊಡ್ಡ ಗರ್ಜನೆಗಳಿಂದ ಹೆದರಿಸುತಿದ್ದರು. ಇಷ್ಟರಲ್ಲಿಯೇ ಜರಾಸಂಧನು ಮುಷ್ಟಿಯಿಂದ ಭೀಮನ ಎದೆಯಮೇಲೆ ಹೊಡೆದನು. ಭೀಮನು ಜರಾಸಂಧನ ಎದೆಯಮೇಲೆ ಅಪ್ಪಳಿಸಿದನು. ಇಬ್ಬರಿಗೂ ವಿಶಾಲವಾದ ಎದೆ! ಉದ್ದವಾದ ತೋಳುಗಳು! ಇಬ್ಬರೂ ಬಾಹುಯುದ್ಧದಲ್ಲಿ ಮಹಾನಿಪುಣರು. ಆದುದರಿಂದ ಉಕ್ಕಿನ ದಂಡಗಳಿಂದ ಹೊಡೆದಾಡುವಂತೆ ತೋಳುಗಳಿಂದಲೇ ಹೊಡೆದಾಡಿದರು. ಕಾರ್ತಿಕಮಾಸದ ಮೊದಲನೆಯ ದಿನದಲ್ಲಿ ಆರಂಭಿಸಿದ ಆ ಯುದ್ಧವು, ಹದಿನೈದು ದಿನಗಳವರೆಗೆ ಹಗಲುರಾತ್ರಿಯೂ ವಿರಾಮವಿಲ್ಲದೆ ನಡೆಯಿತು. ಇಬ್ಬರೂ ಆಹಾರವಿಲ್ಲದೆ ಹೋರಾಡುತಿದ್ದರು. ತ್ರಯೋ

ದಶೀದಿನದವರೆಗೆ ನಡೆದು, ಚತುರ್ದಶೀದಿನದ ರಾತ್ರಿಯಲ್ಲಿ ಜರಾಸಂಧನಿಗೆ ಬಹಳ ಆಯಾಸವು ತೋರಿದುದರಿಂದ, ಅವನು ಮುಂದೆ ಯುದ್ಧವನ್ನು ಮಾಡಲಾರದೆ ಸ್ವಲ್ಪ ಹಿಂಜರಿದು ನಿಂತನು. ಇದೇ ಸಮಯವನ್ನು ನೋಡುತ್ತಿದ್ದ ಕೃಷ್ಣನು ಭೀಮನನ್ನು ಪ್ರೋತ್ಸಾಹಗೊಳಿಸುತ್ತ "ಭೀಮಸೇನಾ! ಯುದ್ಧದಲ್ಲಿ ಬಳಲಿದ ಶತ್ರುವನ್ನು ನಿಗ್ರಹಿಸುವುದು ಸುಲಭವು. ಅವನನ್ನು ಈಗಲೇ ಸಂಪೂರ್ಣವಾಗಿ ನಿಗ್ರಹಿಸಿಬಿಡು! ಅವನು ಸಾಯುವನು. ಬಾಹುಯುದ್ಧವನ್ನು ತೊಡಗು" ಎಂದನು. ಕೃಷ್ಣನು ಹೇಳಿದ ಮಾತನ್ನು ಕೇಳಿ ಭೀಮನು, ಅದೇ ತಕ್ಕ ಸಮಯವೆಂದು ತಿಳಿದು, ಅವನನ್ನು ಕೊಲ್ಲುವುದಕ್ಕೆ ನಿಶ್ಚಯಿಸಿದನು. ಯಾರಿಗೂ ದುರ್ಜಯನಾದ ಜರಾಸಂಧನನ್ನು ಆಗಲೇ ತೀರಿಸಿಬಿಡಬೇಕೆಂದು ಭೀಮನು ಅಕ್ರೋಶದಿಂದ ಮುಂದೆಬಿದ್ದು ಅವನನ್ನು ಹಿಡಿದನು.

ಇದು ಇಪ್ಪತ್ತುನಾಲ್ಕನೆಯ ಅಧ್ಯಾಯವು.



— { ಕೃಷ್ಣನು ಜರಾಸಂಧನ ಸೆರೆಯಲ್ಲಿದ್ದ ರಾಜರನ್ನು ಬಿಡಿಸಿ, ಜರಾಸಂಧನ ಮಗನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿ ತಿರುಗಿ ದ್ವಾರಕೆಗೆ ಹಿಂತಿರುಗಿಹೋದುದು. } —

ಜನಮೇಜಯರಾಜಾ! ಕೇಳು. ಹೀಗೆ ಜರಾಸಂಧನನ್ನು ಕೊಲ್ಲಬೇಕೆಂದು ನಿಶ್ಚಯಿಸಿಕೊಂಡ ಭೀಮನು ಕೃಷ್ಣನನ್ನು ಕುರಿತು, "ಓ ಯಾದವತಿಲಕಾ! ನಿನ್ನ ಬಂಧುಗಳನ್ನೆಲ್ಲ ಹಿಂಸೆಪಡಿಸಿ ನಾಶಮಾಡಿದ ಈ ಪಾಪಿಯನ್ನು ಇನ್ನೂ ಕೊಲ್ಲದೆ ಕಾಲವಿಳಂಬಮಾಡುವುದು ಸರಿಯಲ್ಲ" ಎಂದನು. ಆಗ ಕೃಷ್ಣನು "ಓ ಭೀಮಸೇನಾ! ಹೌದು! ವಾಸ್ತವವು. ನೀನು ಒಡನೆಯೇ ಅವನನ್ನು ಕೊಲ್ಲುವುದಕ್ಕೆ ಯತ್ನಿಸು. ನಿನ್ನ ಮೇಲಾದ ದಿವ್ಯಶಕ್ತಿ ಯಾವುದುಂಟೋ, ಮತ್ತು ನಿನ್ನ ತಂದೆಯಾದ ವಾಯುದೇವನ ಬಲವು ಯಾವುದುಂಟೋ, ಅದನ್ನೆಲ್ಲ ಈಗಲೇ ಜರಾಸಂಧನಲ್ಲಿ ತೋರಿಸು. ಈ ಜರಾಸಂಧನು ನಿನಗಲ್ಲದೆ ಬೇರೆಯವರಿಗೆ ವಧ್ಯನಲ್ಲವೆಂಬ ಆಕಾಶವಾಣಿಯೊಂದು ಗೋಮಂತಪರ್ವತದಲ್ಲಿ ಗಾಳಿಯು ಬೀಸುತ್ತಿ

ರುವಾಗ ಆ ಮೂಲಕವಾಗಿ ನನ್ನ ಕಿವಿಗೆ ಬಿದ್ದಿತು. ಅದರಿಂದಲೇ ಆಗ ನಾನು ಅವನನ್ನು ನನ್ನ ಕೈಯಿಂದ ಕೊಲ್ಲದೆ ಬಿಟ್ಟುಬಿಟ್ಟೆನು. ಅಲ್ಲದೆ, ಇವನಿಗೆ ನಿನ್ನಿಂದ ಹೊರತು ಬೇರೊಬ್ಬರಿಂದ ಮರಣವೂ ಇಲ್ಲ. ನನ್ನಣ್ಣ ನಾದ ಬಲರಾಮನ ಪರಾಕ್ರಮಕ್ಕಿದಿರಾಗಿ ಈ ಜರಾಸಂಧನೊಬ್ಬನು ಹೊರ ತು ಬೇರೆ ಯಾವನುತಾನೇ ಬದುಕಿಹೋಗುವನು? ಆದುದರಿಂದ ನಿನ್ನಿಂದ ಹೊರತು ಇವನಿಗೆ ಮರಣವಿಲ್ಲ. ನೀನು ನಿನ್ನ ತಂದೆಯಾದ ವಾಯು ದೇವನನ್ನು ಧ್ಯಾನಿಸಿ ಇವನನ್ನು ಈಗಲೇ ಕೊಂದುಬಿಡು" ಎಂದನು. ಅದರಂತೆ ಭೀಮನು ಮೊದಲು ವಾಯುವನ್ನು ಮನಸ್ಸಿನಲ್ಲಿ ಧ್ಯಾನಿಸಿದನು. ಆಮೇಲೆ ಕೃಷ್ಣನಿಗೆ ನಮಸ್ಕರಿಸಿ, ಆಮೇಲೆ ಅರ್ಜುನನನ್ನು ಕೈನೀಡಿ ಆಲಿಂ ಗಿಸಿಕೊಂಡನು. ಇಷ್ಟರಲ್ಲಿಯೇ ಅವನಿಗೆ ವಾಯುದೇವನ ಪೂರ್ಣಬಲವುಂ ಟಾಯಿತು. ಬಲಾಢ್ಯನಾದ ಆ ಜರಾಸಂಧನನ್ನು ಹಿಡಿದೆತ್ತಿ, ನೂರುಸಾರಿ ಗಿರಗಿರನೆ ತಿರುಗಿಸಿ ನೆಲಕ್ಕಪ್ಪಳಿಸಿ ತನ್ನ ಮೊಳಕಾಲುಗಳಿಂದ ಅವನ ಬೆನ್ನ ನ್ನು ಮೆಟ್ಟಿದನು. ಕೈಯಿಂದ ಮರ್ದಿಸಿದನು! ದೊಡ್ಡ ಸಿಂಹನಾದ ವನ್ನು ಮಾಡಿ ಗರ್ಜಿಸಿದನು. ಭೀಮನು ಜರಾಸಂಧನನ್ನು ಮುಷ್ಟಿಯಿಂದ ಗುದ್ದುವುದೊಂದು ಭೀಮನ ಸಿಂಹನಾದವೊಂದು, ಇವೆರಡರಿಂದುಂಟಾದ ಮಹಾಧ್ವನಿಯು, ಸಮಸ್ತಪ್ರಾಣಿಗಳಿಗೂ ಭಯಂಕರವಾಯಿತು. ಮಗ ಧದೇಶದ ಜನರೆಲ್ಲರೂ ನಡುಗಿದರು. ಸ್ತ್ರೀಯರಿಗೆ ಗರ್ಭಸ್ರಾವವಾ ಯಿತು. ಭೀಮನ ಸಿಂಹನಾದವೂ, ಜರಾಸಂಧನ ಆಕ್ರೋಶವೂ ಒಂ ದಾಗಿ ಸೇರಲು, ಅದನ್ನು ಕೇಳಿದ ಮಗಧದೇಶದ ಜನರೆಲ್ಲರೂ, ಆಶ್ಚರ್ಯ ದಿಂದ ಬೆರಗಾಗಿ, "ಆಹಾ ಏನಿದು! ಹಿಮಾಲಯಪರ್ವತವು ಭಿನ್ನವಾ ಯಿತೋ! ಭೂಮಿಯು ಒಡೆದುಹೋಯಿತೋ!" ಎಂದು ನಡುಗುತ್ತಿ ದ್ದರು. ಇಷ್ಟರಲ್ಲಿಯೇ ಕೃಷ್ಣನು (ಜರಾಸಂಧನನ್ನು ಕೊಲ್ಲುವ ಉಪಾ ಯವೇನೆಂಬುದನ್ನು ಭೀಮನಿಗೆ ತಿಳಿಸುವುದಕ್ಕಾಗಿ, ಕೈಯಲ್ಲಿ ಒಂದು ಹಂಚಿಯ ಕಡ್ಡಿಯನ್ನು ತೆಗೆದುಕೊಂಡು ಭೀಮನ ಮುಖವನ್ನು ನೋಡು ತ್ತಾ, ಆ ಕಡ್ಡಿಯನ್ನು ಎರಡಾಗಿ ಸೀಳಿ, ಜರಾಸಂಧನನ್ನು ಕೊಲ್ಲುವರೀತಿ ಯನ್ನು ಅದರಿಂದ ಸೂಕ್ಷ್ಮವಾಗಿ ತೋರಿಸಿದನು.) ಭೀಮನು ಕೃಷ್ಣನ ಈ ಸೂಚನೆಯನ್ನು ತಿಳಿದುಕೊಂಡು, ಒಡನೆಯೇ ತನ್ನ ಕಾಲಿನಿಂದ ಆ




ಪುಟ ೧೧೫. ಕೃಷ್ಣಭೀಮಾರ್ಜುನರು ಮೂವರೂ ಸ್ನಾತಕಬ್ರಾಹ್ಮಣರಂತೆ ಜರಾಸಂಧನ ಯಾಗಶಾಲೆಗೆ ಬಂದುದು.
ಭೀಮನು ಜರಾಸಂಧನನ್ನು ಸೀಳಿದುದು.

ಜರಾಸಂಧನ ಒಂದು ಕಾಲನ್ನು ಮೆಟ್ಟಿಕೊಂಡು, ಮತ್ತೊಂದು ಕಾಲನ್ನು ಕೈಯಿಂದ ಹಿಡಿದು ಅವನ ದೇಹವನ್ನು ಎರಡಾಗಿ ಸೀಳಿ ಗರ್ಜನಮಾಡಿದನು. ಆದರೇನು? ಆ ಸೀಳಿದ ಭಾಗಗಳೆರಡೂ ತಿರುಗಿ ಒಂದಾಗಿ ಸೇರಿಕೊಂಡುವು. ಜರಾಸಂಧನು ತಿರುಗಿ ಮೇಲೆದ್ದು ಯುದ್ಧಕ್ಕೆ ಸಿದ್ಧನಾದನು. ಅವರಿಬ್ಬರಿಗೂ ನಡೆದ ಬಾಹುಯುದ್ಧವು, ನೋಡುವವರಿಗೆ ರೋಮಾಂಚವನ್ನು ಹುಟ್ಟಿಸುವಂತೆ ಅತಿಭಯಂಕರವಾಯಿತು. ಇದನ್ನು ನೋಡುತಿದ್ದ ಕೃಷ್ಣನು, ಭೀಮನಿಗೆ ವಧೋಪಾಯವನ್ನು ಸೂಚಿಸುವುದಕ್ಕಾಗಿ, ಮತ್ತೊಂದು ಹುಲ್ಲುಕಡ್ಡಿಯನ್ನು ಕೈಗೆ ತೆಗೆದುಕೊಂಡು ಅದನ್ನು ಎರಡಾಗಿ ಸೀಳಿ, ಆ ಸೀಳುಗಳೆರಡನ್ನೂ ಒಂದಕ್ಕೊಂದು ಸೇರದಂತೆ ಕೆಳಮೇಲಾಗಿ ಮಾಡಿ ಭೀಮನಮುಂದೆ ಬಿಸಾಡಿದನು. ಆ ಅಭಿಪ್ರಾಯವನ್ನು ತಿಳಿದುಕೊಂಡು ಭೀಮನು, ಜರಾಸಂಧನ ದೇಹವನ್ನು ಮೊದಲಿನಂತೆಯೇ ಸೀಳಿ, ಆ ಸೀಳುಗಳೆರಡನ್ನೂ ತಿರುಗಿ ಸೇರಿಕೊಳ್ಳದಂತೆ ಕೆಳಮೇಲಾಗಿ ತಿರುಗಿಸಿ ಕೆಳಗೆ ಬಿಸುಟು ದೊಡ್ಡ ಸಿಂಹನಾದವನ್ನು ಮಾಡಿದನು. ಜರಾಸಂಧನ ಮೃತದೇಹದಲ್ಲಿ ನಾನಾಕಡೆಯಿಂದಲೂ ಎಲುಬು, ಕೊಬ್ಬು, ಚರ್ಮ, ಮಾಂಸ, ಮಿದುಳು ಮುಂತಾದ ದೇಹಭಾಗಗಳೆಲ್ಲ ಬೇರೆಬೇರೆಯಾಗಿ ಅಲ್ಲಲ್ಲಿ ಹುದುಗಿಕೊಂಡು ಅದೊಂದು ಕೇವಲ ಪಿಂಡಾಕೃತಿಯಾಯಿತು. ಹೀಗೆ ಆ ರಾತ್ರಿಯಲ್ಲಿಯೇ ಜರಾಸಂಧನನ್ನು ಕೊಂದು, ಅರಮನೆಯ ಮುಂಭಾಗದಲ್ಲಿ ಆ ಮೃತಶರೀರವನ್ನು ಮಲಗಿಸಿದಹಾಗೆ ಬಿಟ್ಟು ಕೃಷ್ಣಾದಿಗಳು ಮೂವರೂ ಅಲ್ಲಿಂದ ಹಿಂತಿರುಗಿದರು. ಒಡನೆಯೇ ಕೃಷ್ಣನು ಧ್ವಜಾಲಂಕೃತವಾದ ಜರಾಸಂಧನ ರಥದಲ್ಲಿಯೇ ಭೀಮಾರ್ಜುನರಿಬ್ಬರನ್ನೂ ಏರಿಸಿಕೊಂಡು, ತನ್ನ ಕಡೆಯ ಯಾದವರು ಸೆರೆಯಲ್ಲಿದ್ದ ಸ್ಥಳಕ್ಕೆ ಬಂದು, ಅವರನ್ನೆಲ್ಲ ಸೆರೆಯಿಂದ ಬಿಡಿಸಿದನು. ಆಗ ರಾಜರೆಲ್ಲರೂ ಕೃಷ್ಣನಲ್ಲಿ ತಮ್ಮತಮ್ಮ ಕೃತಜ್ಞತೆಯನ್ನು ತೋರಿಸುತ್ತ, ಸಮಸ್ತರತ್ನಗಳಿಗೂ ಭಾಗಿಯಾದ ಆ ವಾಸುದೇವನಿಗೆ, ಹಲವು ರತ್ನಗಳನ್ನು ಕಾಣಿಕೆಯಾಗಿ ಒಪ್ಪಿಸಿ, ಕೃಷ್ಣನನ್ನೇ ತಮಗೆ ರಾಜನನ್ನಾಗಿ ಭಾವಿಸಿ ಗೌರವಿಸಿದರು. ಆಮೇಲೆ ಅಲ್ಲಿ ಯಾವ ಯುದ್ಧದಲ್ಲಿಯೂ ಗಾಯಪಡದವನೂ, ಸರ್ವಾಸ್ತ್ರಸಂಪನ್ನನೂ, ಎರಡು ಕೈಗಳಿಂದಲೂ ಯುದ್ಧಮಾಡತಕ್ಕವನೂ,

ಸುಂದರಸ್ವರೂಪನೂ ಆದ ಅರ್ಜುನನು, ತನ್ನ ಸಹೋದರನಾದ ಭೀಮನೊಡನೆ ಅದೇ ದಿವ್ಯರಥದಲ್ಲಿ ಕುಳಿತು, ಸೆರೆಯಿಂದ ಬಿಡಿಸಲ್ಪಟ್ಟ ಎಲ್ಲಾ ರಾಜರೊಡನೆ ಗಿರಿವ್ರಜದಿಂದ ಹೊರಟನು. ಭೀಮಾರ್ಜುನರಿಬ್ಬರೂ ರಥಿಕರಂತೆ ಕುಳಿತರು. ಕೃಷ್ಣನೇ ಸಾರಥಿಯಾದನು. ಆ ದಿವ್ಯರಥವು ಎಂತಹ ಧನುರ್ಧಾರಿಗಳಿಗೂ ದುರ್ಜಯವಾಗಿದ್ದಿತು. ಹಿಂದೆ ತಾರಕಾಮಯವೆಂಬ ದೇವಾಸುರಯುದ್ಧದಲ್ಲಿ ಇಂದ್ರನೂ, ವಿಷ್ಣುವೂ ಯಾವ ರಥವನ್ನೇರಿ ಸಂಚರಿಸಿದರೋ, ಆ ಜರಾಸಂಧನ ರಥವನ್ನೇ ಏರಿ ಕುಳಿತು ಕೃಷ್ಣನು ಪ್ರಯಾಣಮಾಡಿದನು. ಆ ರಥವು ಬರುವಾಗ, ಮಗಧರಾಜಧಾನಿಯ ನಿವಾಸಿಗಳೆಲ್ಲರೂ, ಅದರಮೇಲಿದ್ದ ಕೃಷ್ಣನನ್ನು ನೋಡಿ ವಿಸ್ಮಿತರಾಗಿ, ತಮ್ಮಲ್ಲಿ ಒಬ್ಬರಿಗೊಬ್ಬರು "ಆಹಾ! ಅಂತಹ ಮಹಾದುಷ್ಕರಕಾರ್ಯಗಳನ್ನು ನಡೆಸಿದವರೂ, ಕೃಷ್ಣನಿಂದ ಆಯಾ ಕಾರ್ಯಗಳಲ್ಲಿ ನಿಯಮಿಸಲ್ಪಡುವವರೂ ಆದ ಭೀಮಾರ್ಜುನರಿಬ್ಬರೂ ವಾಯುವೇಗವುಳ್ಳ ಕುದುರೆಗಳನ್ನು ಕಟ್ಟಿದ ಈ ರಥವನ್ನೇರಿಬರುವಾಗ, ಲೋಕದಲ್ಲಿ ಯಾವನು ತಾನೇ ಅವರ ತೇಜಸ್ಸನ್ನು ಕಣ್ಣೆತ್ತಿಯಾದರೂ ನೋಡಬಲ್ಲನು ?" ಎಂದು ಮಾತಾಡಿಕೊಳ್ಳುತಿದ್ದರು. ಪುಟಹಾಕಿದ ಚಿನ್ನದಂತಿರುವ ಕಾಂತಿ! ಸುತ್ತಲೂ ಕಿರುಗೆಜ್ಜೆಗಳ ಸಾಲು! ಮೇಘದ ಗುಡುಗಿನಂತೆ ಗಂಭೀರಧ್ವನಿ! ಇವುಗಳಿಂದ ಕೂಡಿದ ಆ ರಥದಲ್ಲಿ, ಸಹೋದರರಾದ ಭೀಮಾರ್ಜುನರಿಬ್ಬರೂ, ಕೃಷ್ಣನೊಡನೆ ಕುಳಿತು ಬರುವುದನ್ನು ನೋಡಿ ಜನರೆಲ್ಲರೂ ಅತ್ಯಾನಂದಭರಿತರಾದರು. ನಗರವಾಸಿಗಳೆಲ್ಲರೂ ಆಶ್ಚರ್ಯದಿಂದ ಬೆರಗಾದರು. ದಿವ್ಯಾಶ್ವಗಳಮೇಲೆ ಹೂಡಿ, ವಾಯುವೇಗವುಳ್ಳ ಆ ರಥದಲ್ಲಿ ಮಹಾತ್ಮನಾದ ಕೃಷ್ಣನು ಕುಳಿತುದರಿಂದ, ಅದಕ್ಕೆ ಮತ್ತಷ್ಟು ಅತಿಶಯವಾದ ಶೋಭೆಯುಂಟಾಯಿತು. ಆ ರಥದಮೇಲಿದ್ದ ದೇವನಿರ್ಮಿತವಾದ ಧ್ವಜವು, ಆ ರಥಕ್ಕೆ ತಗುಲದಹಾಗೆ ಅಂತರಿಕ್ಷದಲ್ಲಿದ್ದಂತೆಯೇ ಕಾಣಿಸುತಿತ್ತು. ಮತ್ತು ಅದು ಕಾಮನಬಿಲ್ಲಿನಂತೆ ಕಾಂತಿಯನ್ನು ಬೀರುತ್ತ ಒಂದುಯೋಜನದೂರಕ್ಕೆ ಕಾಣಿಸುವುದು. ಇಷ್ಟರಲ್ಲಿಯೇ ಕೃಷ್ಣನು ಗರುಡನನ್ನು ಮನಸ್ಸಿನಲ್ಲಿ ನನೆಸಲು, ಒಡನೆಯೇ ಗರುಡನು ಬಂದು ಆ ಧ್ವಜದಲ್ಲಿ ನೆಲೆಸಿದನು. ಗರುಡನು ಬಂದು ನೆಲೆಸಿದೊಡನೆ ಆ ಧ್ವಜವು

ಒಂದು ಮಹಾವೃಕ್ಷದಂತೆ ಕಾಣಿಸಿತು. ದೊಡ್ಡದಾಗಿ ಬಾಯನ್ನು ತೆರೆದು ಮಹಾಧ್ವನಿಯಿಂದ ಗರ್ಜನೆಮಾಡುವ ಧ್ವಜವಾಸಿಗಳಾದ ಅನೇಕ ಭೂತಗಳು, ಆ ಧ್ವಜದಲ್ಲಿ ನೆಲೆಗೊಂಡುವು. ಅಲ್ಲಿ ಗರುತ್ಮಂತನು ಯಾವ ಭೂತಗಳಿಗೂ ನೋಡಲಸಾಧ್ಯವಾದ ತೇಜಸ್ಸಿನಿಂದ ಜ್ವಲಿಸುತ್ತ, ಮಧ್ಯಾಹ್ನಕಾಲದಲ್ಲಿ ಸಹಸ್ರಕಿರಣಗಳಿಂದ ಕೂಡಿದ ಸೂರ್ಯನಂತೆ ಬೆಳಗುತ್ತಿದ್ದನು. ಆ ಧ್ವಜಕ್ಕೆ ಯಾವ ವೃಕ್ಷಗಳಲ್ಲಿಯೂ ತಡೆಯಿಲ್ಲ! ಯಾವ ಶಸ್ತ್ರಗಳಿಂದಲೂ ಅದಕ್ಕೆ ಅಪಾಯವಿಲ್ಲ! ಇಂತಹ ಗರುಡಧ್ವಜದಿಂದ ಶೋಭಿತವಾದ ದಿವ್ಯರಥವನ್ನೇರಿ ಕೃಷ್ಣನು, ಭೀಮಾರ್ಜುನರೊಡನೆ ಪ್ರಯಾಣಹೊರಟನು. ಓ ಜನಮೇಜಯರಾಜಾ! ಆ ರಥವು ಬ್ರಹ್ಮನಿಂದ ವಸುವಿಗೂ, ವಸುವಿನಿಂದ ಬೃಹದ್ರಥನಿಗೂ ಬಂದುದು. ಬೃಹದ್ರಥನಿಂದ ಕ್ರಮವಾಗಿ ಅವನ ಮಗನಾದ ಜರಾಸಂಧನಿಗೆ ಲಭಿಸಿತು. ಹೀಗೆ ಶ್ರೀಕೃಷ್ಣನು ಗಿರಿವ್ರಜದಿಂದ ಹೊರಟು, ಆ ಪಟ್ಟಣದ ಹೊರಗಿನ ಮೈದಾನಕ್ಕೆ ಬರುವಷ್ಟರಲ್ಲಿ, ಆ ನಗರವಾಸಿಗಳೆಲ್ಲರೂ, ಪೂಜಾದ್ರವ್ಯಗಳನ್ನೂ ಕಾಣಿಕೆಗಳನ್ನೂ ತೆಗೆದುಕೊಂಡುಬಂದು, ಆವನನ್ನು ಇದಿರುಗೊಂಡರು. ಸೆರೆಯಿಂದ ಬಿಡಿಸಲ್ಪಟ್ಟ ರಾಜರೆಲ್ಲರೂ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು, ಶಾಸ್ತ್ರೋಕ್ತವಾದ ವಿಧಿಗಳಿಂದ ಕೃಷ್ಣನನ್ನು ಪೂಜಿಸಿದರು. ಆ ರಾಜರು ತಮ್ಮನ್ನು ಸೆರೆಯಿಂದ ಬಿಡಿಸಿದ ಕೃಷ್ಣನನ್ನು ಅನೇಕವಿಧದಿಂದ ಸ್ತೋತ್ರಮಾಡುತ್ತ “ ಓ ಮಹಾಬಾಹೂ! ದೇವಕೀನಂದನಾ! ಮಹಾಬಲಶಾಲಿಗಳಾದ ಭೀಮಾರ್ಜುನರೊಡಗೂಡಿದ ನಿನಗೆ ಈ ಧರ್ಮಪರಿಪಾಲನವೇನೂ ಆಶ್ಚರ್ಯವಲ್ಲ. ದುಃಖವೆಂಬ ಕೆಸರಿನಿಂದ ತುಂಬಿದ ಜರಾಸಂಧನೆಂಬ ಭಯಂಕರವಾದ ಮಡುವಿನಲ್ಲಿ ಮುಳುಗಿಹೋಗಿದ್ದ ನಮ್ಮನ್ನು ನೀನು ಉದ್ಧರಿಸಿ ಕಾಪಾಡಿದೆ. ವಿಷ್ಣುಸ್ವರೂಪವುಳ್ಳ ಓ ಶ್ರೀಕೃಷ್ಣಾ! ಗಿರಿದುರ್ಗದಲ್ಲಿ ಸಾಯುತಿದ್ದ ನಮ್ಮನ್ನು ಬಿಡಿಸಿ ನೀನು ಉಜ್ವಲವಾದ ಕೀರ್ತಿಯನ್ನು ಪಡೆದೆ! ಓ ಪುರುಷಶ್ರೇಷ್ಠಾ! ನಿನಗಾಗಿ ನಾವು ಮಾಡಬೇಕಾದ ಕೆಲಸವೇನಿದ್ದರೂ ಹೇಳು. ಎಂತಹ ಕಾರ್ಯವಾಗಿದ್ದರೂ ನಾವು ಅದನ್ನು ಸಾಧಿಸಿದಂತೆಯೇ ತಿಳಿ!” ಎಂದರು.

ಓ ಜನಮೇಜಯರಾಜಾ! ಆಗ ಉದಾರಸ್ವಭಾವವುಳ್ಳ ಕೃಷ್ಣನು ಆ ರಾಜರನ್ನು ಸಮಾಧಾನಗೊಳಿಸುತ್ತ "ಎಲೈ ಕ್ಷತ್ರಿಯಶ್ರೇಷ್ಠರೇ! ಯುಧಿಷ್ಠಿರನು ಈಗ ರಾಜಸೂಯುವೆಂಬ ಮಹಾಯಾಗವನ್ನು ನಡೆಸಬೇಕೆಂದು ಉದ್ದೇಶಿಸಿರುವನು. ಧರ್ಮದಲ್ಲಿಯೇ ನೆಲೆಗೊಂಡಿರತಕ್ಕ ಅವನಿಗೆ ನೀವೆಲ್ಲರೂ ಸಹಾಯವನ್ನು ಮಾಡಿ, ಸಾಮ್ರಾಜ್ಯಪದವಿಯನ್ನು ಅಪೇಕ್ಷಿಸತಕ್ಕ ಅವನಿಗೆ ಆ ಕೋರಿಕೆಯನ್ನು ಕೈಗೂಡಿಸಬೇಕು" ಎಂದನು. ಈ ಮಾತನ್ನು ಕೇಳಿ ಆ ರಾಜರೆಲ್ಲರೂ ಅತ್ಯಂತಸಂತೋಷದಿಂದ "ನಿನ್ನ ಆಜ್ಞೆಯಂತೆಯೇ ನಡೆದುಕೊಳ್ಳುವೆವು" ಎಂದರು. ಆಮೇಲೆ ಆ ರಾಜರೆಲ್ಲರೂ ಕೃಷ್ಣನಿಗೆ ತಾವು ತಂದ ರತ್ನಗಳನ್ನು ಕಾಣಿಕೆಯಾಗಿ ಒಪ್ಪಿಸಿದರು. ಅವುಗಳಲ್ಲಿ ಕೃಷ್ಣನಿಗೆ ಆಸೆಯಿಲ್ಲದಿದ್ದರೂ, ಅವರಲ್ಲಿ ಅನುಗ್ರಹಬುದ್ಧಿಯಿಂದ ಅದನ್ನು ಕೈಕೊಂಡನು. ಇಷ್ಟರಲ್ಲಿಯೇ ಜರಾಸಂಧನ ಮಗನಾದ ಸಹದೇವನು, ತನ್ನ ಮಂತ್ರಿಗಳೊಡನೆಯೂ, ಪುರಜನರೊಡನೆಯೂ ಕೂಡಿ, ತನ್ನ ಪುರೋಹಿತನನ್ನು ಮುಂದೆ ಬಿಟ್ಟುಕೊಂಡು, ಕೃಷ್ಣದರ್ಶನಕ್ಕಾಗಿ ಬಂದನು. ಅವನು ಕೃಷ್ಣನಿಗಾಗಿ ಅನೇಕ ರತ್ನಗಳನ್ನು ಕಾಣಿಕೆಯಾಗಿ ತೆಗೆದುಕೊಂಡು, ಭಯದಿಂದ ನಡುಗುತ್ತ, ಬಹಳ ನಮ್ರತೆಯಿಂದ ಕೃಷ್ಣನ ಮುಂದೆ ಬಂದು ನಮಸ್ಕರಿಸಿದನು. ಆಗ ಕೃಷ್ಣನು 'ಭಯಪಡಬೇಡ'ವೆಂದು ಅವನಿಗೆ ಅಭಯವನ್ನು ಕೊಟ್ಟು, ಅವನು ತಂದ ರತ್ನಗಳನ್ನೆಲ್ಲ ಪ್ರೀತಿಯಿಂದ ಸ್ವೀಕರಿಸಿದನು. ಆಮೇಲೆ ಸಹದೇವನು ಶ್ರೀಕೃಷ್ಣನ ಮುಂದೆ ಕೈಮುಗಿದು ನಿಂತು "ಓ ಪುರುಷೋತ್ತಮಾ! ನಿನ್ನಲ್ಲಿ ನನ್ನ ತಂದೆಯು ಮಾಡಿದ ಅಪರಾಧವನ್ನು ನೀನು ಮನಸ್ಸಿನಲ್ಲಿಡದೆ ಮರೆತುಬಿಡಬೇಕು. ಓ ಗೋವಿಂದಾ! ನಾನು ನಿನ್ನ ಮರೆಹೊಕ್ಕಿರುವೆನು. ನನ್ನನ್ನು ಅನುಗ್ರಹಿಸಬೇಕು. ಓ ಪ್ರಭೂ! ನಿನ್ನ ಮತ್ತು ಈ ಭೀಮಾರ್ಜುನರ ಅನುಮತಿಯನ್ನು ಪಡೆದು, ನನ್ನ ತಂದೆಗೆ ಅಪರಸಂಸ್ಕಾರಗಳನ್ನು ಮಾಡಬೇಕೆಂದಿರುವೆನು. ಅದಕ್ಕೆ ಅನುಜ್ಞೆಯನ್ನು ಕೊಡಬೇಕು. ಆಮೇಲೆ ನಿಮ್ಮ ಅನುಜ್ಞೆಯಿಂದ ನಾನು ನಿರ್ಭಯವಾಗಿ, ಇಷ್ಟಬಂದ ಕಡೆಯಲ್ಲಿ ಸುಖವಾಗಿ ಸಂಚರಿಸುತ್ತಿರುವೆನು" ಎಂದನು

ಜನಮೇಜಯರಾಜಾ! ಸಹದೇವನ ವಿನಯವಾಕ್ಯಕ್ಕೆ ಶ್ರೀಕೃಷ್ಣನೂ, ಭೀಮಾರ್ಜುನರೂ ಸಂತೋಷಪಟ್ಟು, "ನಿನ್ನ ತಂದೆಗೆ ನೀನು ಸಂಸ್ಕಾರವನ್ನು ನಡೆಸು ಹೋಗು" ಎಂದರು. ಒಡನೆಯೇ ಸಹದೇವನು ಮಂತ್ರಿಗಳೊಡನೆ ಪಟ್ಟಣವನ್ನು ಪ್ರವೇಶಿಸಿ, ಚಂದನ, ಕಾಲೇಯ, ಸರಲ, ಕಾಲಾಗರು, ಮೊದಲಾದ ಗಂಧದ ಕಟ್ಟಿಗೆಗಳಿಂದ ಚಿತೆಯನ್ನು ಮಾಡಿಸಿದನು. ನಾನಾಬಗೆಯ ಸುಗಂಧತೈಲಗಳನ್ನೂ, ನೂರಾರು ಕೊಡಗಳ ತುಪ್ಪವನ್ನೂ, ವಿಧವಿಧಪುಷ್ಪಗಳನ್ನೂ ತರಿಸಿ, ಆ ಚಿತೆಗೆ ಸಂಸ್ಕಾರಗಳನ್ನು ಮಾಡಿ, ಅದರಲ್ಲಿ ತನ್ನ ತಂದೆಯಾದ ಜರಾಸಂಧನ ದೇಹವನ್ನು ದಹನಮಾಡಿಸಿದನು. ಆಮೇಲೆ, ತನ್ನ ಸಹೋದರರೊಡಗೂಡಿ ತಂದೆಗೆ ಜಲತರ್ಪಣವನ್ನೂ ನಡೆಸಿದನು. ಹೀಗೆ ಸಹದೇವನು ಸ್ವರ್ಗಗತಿಗೆ ಯೋಗ್ಯವಾದ ಸಂಸ್ಕಾರಗಳನ್ನು ನಡೆಸಿದಮೇಲೆ, ತಿರುಗಿ, ಕೃಷ್ಣನೂ, ಭೀಮಾರ್ಜುನರೂ ಇದ್ದ ಸ್ಥಳಕ್ಕೆ ಬಂದು, ವಿನಯದಿಂದ ಕೈಮುಗಿದು ಹೀಗೆಂದು ವಿಜ್ಞಾಪಿಸುವನು. "ವಾಸುದೇವಾ! ಇದೋ! ಅಮೂಲ್ಯವಾದ ರತ್ನಗಳನ್ನು ತಂದಿರುವೆನು. ಹಸು, ಆಡು, ಕುರಿ, ಎಮ್ಮೆ, ಆನೆ, ಕುದುರೆ, ಮುಂತಾದುವುಗಳನ್ನೂ ತಂದಿರುವೆನು. ವಿವಿಧ ವಸ್ತ್ರಗಳನ್ನು ತಂದಿರುವೆನು. ಇವೆಲ್ಲವನ್ನೂ ನೀನು ಧರ್ಮರಾಜನಿಗೆ ಒಪ್ಪಿಸಬಹುದು. ಇಲ್ಲವೇ ನಿನ್ನ ಇಷ್ಟಬಂದಂತೆ ಇವುಗಳನ್ನುಪಯೋಗಿಸಬಹುದು" ಎಂದನು. ಆಗಲೂ ಭಯದಿಂದ ನಡುಗುತ್ತಿದ್ದ ಸಹದೇವನಿಗೆ ಕೃಷ್ಣನು ಅಭಯವನ್ನು ಕೊಟ್ಟು, ಆಗಲೇ ಅವನಿಗೆ ಮಗಧರಾಜ್ಯದಲ್ಲಿ ಪಟ್ಟಾಭಿಷೇಕವನ್ನು ನಡೆಸಿದನು. ಅವನು ತಂದುಕೊಟ್ಟ ಬೆಲೆಯುಳ್ಳ ರತ್ನಗಳನ್ನೆಲ್ಲ ಆದರಿಸಿ ತೆಗೆದುಕೊಂಡನು. ಹೀಗೆ ಸಹದೇವನು ಕೃಷ್ಣನೊಡನೆಯೂ, ಭೀಮಾರ್ಜುನರೊಡನೆಯೂ ಅನ್ಯೋನ್ಯಭಾವದಿಂದ ಕಲೆತು ಸ್ನೇಹವನ್ನು ಬೆಳೆಸಿ, ಅವರಿಂದ ಸತ್ಕೃತನಾಗಿ, ತನ್ನ ರಾಜಧಾನಿಗೆ ಹಿಂತಿರುಗಿದನು. ಆಮೇಲೆ ಇತ್ತಲಾಗಿ ಕೃಷ್ಣನು ಭೀಮಾರ್ಜುನರೊಡಗೂಡಿ, ತಾನು ಸೆರೆಯಿಂದ ಬಿಡಿಸಿದ ರಾಜರೆಲ್ಲರನ್ನೂ ಪ್ರತ್ಯೇಕವಾಗಿ ಕಂಡು, ಅವರವರ ವಯಸ್ಸಿಗೆ ತಕ್ಕಂತೆ ಗೌರವಿಸಿ, "ನೀವೆಲ್ಲರೂ ಧರ್ಮರಾಜನು ನಡೆಸುವ ಯಾಗಕಾಲಕ್ಕೆ ಅಲ್ಲಿಗೆ ಬಂದು ಅವನಿಗೆ ಸಂತೋಷವನ್ನುಂಟುಮಾಡ

ಬೇಕು" ಎಂದನು. ರಾಜರೆಲ್ಲರೂ ಹಾಗೆಯೇ ಆಗಲೆಂದು ಹೇಳಿ, ಅವನ ಅನುಮತಿಯನ್ನು ಪಡೆದು ಸಂತೋಷದಿಂದ ಹೊರಟುಹೋದರು. ಆಮೇಲೆ ಕೃಷ್ಣನು ಅವರವರು ತನಗೆ ಕಾಣಿಕೆಯಾಗಿಯೂ, ಧರ್ಮರಾಜನ ಯಾಗ ಕ್ಕಾಗಿಯೂ ತಂದೊಪ್ಪಿಸಿದ ಅಮೂಲ್ಯರತ್ನಗಳನ್ನೆಲ್ಲ ಸಂಗ್ರಹಿಸಿಕೊಂಡು, ಭೀಮಾರ್ಜುನರೊಡಗೂಡಿ ಇಂದ್ರಪ್ರಸ್ಥಕ್ಕೆ ಬಂದು, ಅಲ್ಲಿ ಧರ್ಮರಾಜ ನನ್ನು ಕಂಡು ಹೀಗೆಂದು ಹೇಳುವನು. "ಓ ರಾಜೇಂದ್ರಾ ! ಯುಧಿ ಷ್ಠಿರಾ! ಮಹಾಬಲಾಢ್ಯನಾದ ಜರಾಸಂಧನು ಅದೃಷ್ಟವಶದಿಂದ ಈ ಭೀಮನಿಂದ ಕೊಲ್ಲಲ್ಪಟ್ಟನು. ರಾಜರೆಲ್ಲರೂ ಸೆರೆಯಿಂದ ಬಿಡಿಸಲ್ಪಟ್ಟರು. ಅದೃಷ್ಟವಶದಿಂದ ನಿನ್ನ ತಮ್ಮಂದಿರಾದ ಈ ಭೀಮಾರ್ಜುನರು ಅಪಾಯ ವಿಲ್ಲದೆ ಕ್ಷೇಮದಿಂದ ಹಿಂತಿರುಗಿದರು" ಎಂದನು. ಆಗ ಧರ್ಮರಾಜನು ಮಿತಿಮೀರಿದ ಸಂತೋಷದಿಂದ ಕೃಷ್ಣನನ್ನು ಪೂಜಿಸಿ, ಭೀಮಾರ್ಜುನ ರನ್ನು ಅಪ್ಪಿಕೊಂಡು, ಅಂತಹ ಲೋಕೈಕವೀರನಾದ ಜರಾಸಂಧನನ್ನು ಕೊಂದು ಜಯಶಾಲಿಗಳಾಗಿಬಂದ ತಮ್ಮಂದಿರೊಡನೆ ಸಂತೋಷಸಾಗರದಲ್ಲಿ ಮುಳುಗಿ ತೇಲುತಿದ್ದನು. ಆಗ ಧರ್ಮರಾಜನು ಕೃಷ್ಣನನ್ನು ನೋಡಿ "ಪುರುಷೋತ್ತಮಾ! ಆ ಜರಾಸಂಧನೋ ಮಹಾವೀರನು! ಬಲದಿಂದ ಕೊಬ್ಬಿದವನು! ನಿನ್ನ ಸಹಾಯದಿಂದಲೇ ಭೀಮನು ಅವನನ್ನು ಕೊಂ ದನು. ಇನ್ನು ನಾನು ನಿರ್ಭಯವಾಗಿ ರಾಜಸೂಯವನ್ನು ನಡೆಸಬಹುದು. ನಿನ್ನ ಬುದ್ಧಿಬಲದಿಂದಲೇ ನನಗೆ ಈ ಯಾಗಮಾಡುವುದಕ್ಕೆ ಅರ್ಹತೆಯುಂ ಟಾಯಿತು. ಕೃಷ್ಣಾ! ಆ ಜರಾಸಂಧನು ಸಾಮಾನ್ಯನಲ್ಲ! ಅವನು ಭೂಮಿ ಯಲ್ಲಿ ನಿನ್ನ ಯಶಸ್ಸೇ ನಿಲ್ಲದಂತೆ ಕುಡಿದುಬಿಟ್ಟಿದ್ದನು. ಅವನನ್ನು ಕೊಂದುದರಿಂದ, ಈಗ ಸಮಸ್ತ ಸಂಪತ್ತುಗಳೂ ನಿನ್ನನ್ನು ಬಂದು ಸೇರಿ ದುವು" ಎಂದನು.

ಓ ಜನಮೇಜಯರಾಜಾ! ಈ ಸಂಭಾಷಣಗಳು ನಡೆದಮೇಲೆ ಧರ್ಮ ರಾಜನು, ಅವರು ಏರಿಬಂದ ಜರಾಸಂಧನ ಉತ್ತಮರಥವನ್ನು ಆ ಕೃಷ್ಣ ನಿಗೇ ಸಮರ್ಪಿಸಿಬಿಟ್ಟನು. ಧರ್ಮರಾಜನು ಹೀಗೆ ತನ್ನನ್ನು ಗೌರವಿಸಿದು ದಕ್ಕಾಗಿ ಕೃಷ್ಣನು ಬಹಳ ಸಂತೋಷಗೊಂಡನು. ಆಮೇಲೆ ಧರ್ಮರಾ

ಜನು ಗಿರಿವ್ರಜದಿಂದ ಕೃಷ್ಣನನ್ನು ಹಿಂಬಾಲಿಸಿ ಬಂದ ರಾಜರನ್ನೆಲ್ಲ ತನ್ನ ತಮ್ಮಂದಿರೊಡನೆ ಅವರವರ ವಯಸ್ಸಿಗೆ ತಕ್ಕಂತೆ ಸತ್ಕರಿಸಿ ಪೂಜಿಸಿದನು. ಅವರೆಲ್ಲರೂ ಸಂತೋಷಗೊಂಡು ಧರ್ಮರಾಜನ ಅನುಮತಿಯನ್ನು ಪಡೆದು ತಮ್ಮತಮ್ಮ ವಾಹನಗಳನ್ನೇರಿ ಸ್ವದೇಶಕ್ಕೆ ಹಿಂತಿರುಗಿ ಹೋದರು. ಓ ಜನಮೇಜಯರಾಜಾ! ಪುರುಷೋತ್ತಮನೂ, ಮಹಾಧೀಮಂತನೂ ಆದ ಜನಾರ್ದನನು ಹೀಗೆ ತನಗೆ ಪ್ರಬಲವೈರಿಯಾದ ಜರಾಸಂಧನನ್ನು ಪಾಂಡವರಿಂದಲೇ ಕೊಲ್ಲಿಸಿ ಆಮೇಲೆ ಧರ್ಮರಾಜನನ್ನೂ, ಕುಂತಿ, ಸುಭದ್ರೆ, ದ್ರೌಪದಿ, ಭೀಮಾರ್ಜುನರು, ನಕುಲಸಹದೇವರು, ಪುರೋಹಿತನಾದ ಧೌಮ್ಯನು, ಇವರನ್ನೆಲ್ಲ ಪ್ರತ್ಯೇಕವಾಗಿ ಕಂಡು, ಅವರ ಅನುಮತಿಯನ್ನು ಪಡೆದು ತನ್ನ ನಗರಕ್ಕೆ ಹಿಂತಿರುಗಿದನು. ಪಾಂಡವರು ಧರ್ಮರಾಜನನ್ನು ಮುಂದಿಟ್ಟುಕೊಂಡು ಕೃಷ್ಣನನ್ನು ಸ್ವಲ್ಪದೂರದವರೆಗೆ ಹಿಂಬಾಲಿಸಿದರು. ಮನೋವೇಗವುಳ್ಳ ಆ ರಥದಮೇಲೆ ಕುಳಿತು ಕೃಷ್ಣನು ಸಂತೋಷದಿಂದ ದ್ವಾರಕೆಯ ಕಡೆಗೆ ಪ್ರಯಾಣಮಾಡಿದನು. ಧರ್ಮರಾಜನ ಅನುಮತಿಯನ್ನು ಪಡೆದು ಹೊರಡುವ ಕಾಲದಲ್ಲಿ ಪಾಂಡವರೆಲ್ಲರೂ ಅವನಿಗೆ ಪ್ರದಕ್ಷಿಣಮಾಡಿ ನಮಸ್ಕರಿಸಿದರು. ಅತ್ತಲಾಗಿ ಕೃಷ್ಣನು ಹೊರಟುಹೋದ ಮೇಲೆ ಈಗಿನ ಜಯದಿಂದ ಅಪಾರಕೀರ್ತಿಗೆ ಭಾಗಿಗಳಾದ ಪಾಂಡವರು, ರಾಜರಿಗೆಲ್ಲ ಅಭಯವನ್ನು ಕೊಟ್ಟು ಕಳುಹಿಸಿದರು. ಈ ಜರಾಸಂಧವಧದಿಂದ ದ್ರೌಪದಿಗೂ ಮಿತಿಮೀರಿದ ಸಂತೋಷವುಂಟಾಯಿತು. ಆ ಕಾಲದಲ್ಲಿ ಧರ್ಮರಾಜನು ಧರ್ಮಕ್ಕೂ, ಕಾಮಕ್ಕೂ, ಅರ್ಥಕ್ಕೂ ವಿರೋಧವಿಲ್ಲದ ರೀತಿಯಲ್ಲಿ ಪ್ರಜಾಪಾಲನಮಾಡುವುದಕ್ಕೆ ಬೇಕಾದ ರಾಜಧರ್ಮಗಳನ್ನೆಲ್ಲ ತನ್ನ ತಮ್ಮಂದಿರ ಮುಂದೆ ಹೇಳುತ್ತಿದ್ದನು.

ಇದು ಇಪ್ಪತ್ತೈದನೆಯ ಅಧ್ಯಾಯವು.

**ಇಲ್ಲಿಗೆ ಜರಾಸಂಧವಧಪರ್ವವು ಮುಗಿದುದು.**



# ದಿಗ್ವಿಜಯಪರ್ವವು.

{ ಭೀಮಾರ್ಜುನಾದಿಗಳು ಧರ್ಮರಾಜನ ಆಜ್ಞೆಯಿಂದ ಬೇರೆ ಬೇರೆಯಾಗಿ ದಿಗ್ವಿಜಯಕ್ಕೆ ಹೊರಟುದು. }

ಓ ಜನಮೇಜಯರಾಜಾ! ಕೇಳು! ಧರ್ಮಜ್ಞರಲ್ಲಿ ಮೇಲೆನಿಸಿ, ಧರ್ಮದಲ್ಲಿಯೇ ನಿರತನಾದ ಯುಧಿಷ್ಠಿರನು ತನಗೆ ನಾರದನು ಹೇಳಿ ಹೋದ ಯಾಗವಿಚಾರವನ್ನು ಮನಸ್ಸಿನಲ್ಲಿ ನೆನೆಸಿಕೊಂಡಹಾಗೆಲ್ಲ ಆ ಪ್ರಯತ್ನವನ್ನು ನಡೆಸುವುದಕ್ಕೂ, ಬಿಡುವುದಕ್ಕೂ ಧೈರ್ಯವಿಲ್ಲದೆ ಚಿಂತೆಯಿಂದ ನಿಟ್ಟುಸಿರುಬಿಡುತ್ತಿದ್ದನು. ಈ ಧರ್ಮರಾಜನ ಮನೋಭಿಪ್ರಾಯವನ್ನು ತಿಳಿದ ಅರ್ಜುನನಿಗೆ ಅವನನ್ನು ಹೇಗಾದರೂ ಸಮಾಧಾನಗೊಳಿಸಬೇಕೆಂಬ ಆತುರವು ಹುಟ್ಟಿತು. ಅರ್ಜುನನಾದರೋ ಎಲ್ಲಾ ಶಸ್ತ್ರಧಾರಿಗಳಲ್ಲಿಯೂ ಮೇಲೆನಿಸಿದವನು. ಅಗ್ನಿಯಿಂದ ಉತ್ತಮಧನುಸ್ಸನ್ನೂ, ಅಕ್ಷಯತೂಣೀರಗಳನ್ನೂ, ದಿವ್ಯರಥವನ್ನೂ, ಧ್ವಜವನ್ನೂ, ಮಹಾಸಭೆಯನ್ನೂ ಪಡೆದವನು. ಇವುಗಳ ಬಲದಿಂದ ತಾನು ಧರ್ಮರಾಜನ ಕೋರಿಕೆಯನ್ನು ನೆರವೇರಿಸಬಹುದೆಂದು ಧೈರ್ಯಗೊಂಡು ಹೀಗೆಂದು ಹೇಳುವನು. "ಅಣ್ಣಾ! ನಮಗೆ ಯಾವ ಭಾಗದಲ್ಲಿಯೂ ಕೊರತೆಯಿಲ್ಲ! ಉತ್ತಮಧನುಸ್ಸು, ದಿವ್ಯಾಸ್ತ್ರಗಳು, ಬಾಣಗಳು, ಪೌರುಷ, ಸಹಾಯಸಂಪತ್ತು, ವಿಶಾಲವಾದ ಭೂಮಿ, ಕೀರ್ತಿ, ಸೇನಾಬಲ, ಇವೆಲ್ಲವೂ ನನಗೆ ಲಭಿಸಿವೆ. ಈಗ ನಮ್ಮ ಭಂಡಾರವನ್ನು ತುಂಬಿಡಬೇಕಾದುದೊಂದೇ ನಮ್ಮ ಉದ್ದೇಶಸಾಧನೆಗೆ ಬೇಕಾದ ಉಪಾಯವೆಂದು ನನಗೆ ತೋರುವುದು. ಆ ಧನಸಂಗ್ರಹವನ್ನು ಮಾಡಿದರೆ, ಎಂತಹ ಅಸಾಧ್ಯವಾದ ಯಾಗವನ್ನಾದರೂ ನಾವು ಮಾಡಬಹುದು. ಆ ಧನಸಂಗ್ರಹವನ್ನು ಮಾಡುವುದೇನೋ ನನಗೆ ಬಹು ಸುಲಭವಾದ ಕಾರ್ಯವೆಂದೇ ತೋರಿದೆ. ಭೂಮಿಯಲ್ಲಿರುವ ಎಲ್ಲಾ ರಾಜರೂ ನಿನಗೆ ಕಪ್ಪವನ್ನು ತಂದೊಪ್ಪಿಸುವಂತೆ ಮಾಡುವೆನು. ಶುಭವಾದ ತಿಥಿನಕ್ಷತ್ರಗಳಲ್ಲಿ, ಶುಭವಾದ ಲಗ್ನವನ್ನು ನೋಡಿ, ಕುಬೇರಪಾಲಿತವಾದ

ದಿಕ್ಕನ್ನು ನಾನು ಜಯಿಸಿಬರಬೇಕೆಂದು ಉದ್ದೇಶಿಸುವೆನು. ಈಗಲೇ ಶುಭ ಮುಹೂರ್ತವಾದುದರಿಂದ ನನಗೆ ಅನುಮತಿಯನ್ನು ಕೊಡು. ಜಯ ಪ್ರಯಾಣಕ್ಕಾಗಿ ಹೊರಡುವೆನು" ಎಂದನು. ಈ ಮಾತನ್ನು ಕೇಳಿ, ಸಂತೋಷದಿಂದ ಧರ್ಮರಾಜನು ಪ್ರೀತಿಗಂಭೀರಸ್ವರದಿಂದ "ವತ್ಸ! ಅರ್ಜುನಾ! ಹಾಗೆಯೇ ಮಾಡು. ನಿನಗೆ ಜಯವಾಗಲಿ. ಯೋಗ್ಯರಾದ ಬ್ರಾಹ್ಮಣರಿಂದ ಮೊದಲು ಸ್ವಸ್ತಿವಾಚನಗಳನ್ನು ನಡೆಸಿ, ನಿನ್ನ ಜೈತ್ರಯಾತ್ರೆಯಿಂದ ಶತ್ರುಗಳಿಗೆ ಹಾನಿಯನ್ನೂ, ಮಿತ್ರರಿಗೆ ಸಂತೋಷವನ್ನೂ ಉಂಟುಮಾಡು. ಪಾರ್ಥಾ! ಇನ್ನು ಹೊರಡು. ನಿನಗೆ ಜಯವು ನಿಶ್ಚಯವು. ನಿನ್ನ ಇಷ್ಟಫಲಗಳೆಲ್ಲವೂ ಸಿದ್ಧಿಸುವುದು" ಎಂದನು. ಒಡನೆಯೇ ಅರ್ಜುನನು ದೊಡ್ಡ ಸೈನ್ಯವನ್ನು ಸೇರಿಸಿಕೊಂಡು ತನಗೆ ಅಗ್ನಿದತ್ತವಾದ ದಿವ್ಯರಥವನ್ನೇರಿ ಹೊರಟನು. ಹಾಗೆಯೇ ಭೀಮನೂ, ನಕುಲ ಸಹದೇವರೂ ಧರ್ಮರಾಜನಿಂದ ಸತ್ಕೃತರಾಗಿ, ಸೈನ್ಯಗಳನ್ನು ಸೇರಿಸಿಕೊಂಡು ಬೇರೆಬೇರೆ ಕಡೆಗೆ ಹೊರಟರು. ಅರ್ಜುನನು ಕುಬೇರದಿಕ್ಕಿಗೂ (ಉತ್ತರಕ್ಕೂ) ಭೀಮನು ಪೂರ್ವಕ್ಕೂ, ಸಹದೇವನು ದಕ್ಷಿಣಕ್ಕೂ, ನಕುಲನು ಪಶ್ಚಿಮದಿಕ್ಕಿಗೂ ಹೊರಟರು. ಧರ್ಮರಾಜನು ತನ್ನ ಮಿತ್ರರೊಡನೆ ಖಾಂಡವಪ್ರಸ್ಥದಲ್ಲಿಯೇ ಇರುತಿದ್ದನು.

ಇದು ಇಪ್ಪತ್ತೇಳನೆಯ ಅಧ್ಯಾಯವು.



## ಅರ್ಜುನನು ದಿಗ್ವಿಜಯದಲ್ಲಿ ಭಗದತ್ತಾದಿಗಳನ್ನು ಜಯಿಸಿದುದು.

ಆಗ ಜನಮೇಜಯರಾಜನು ವೈಶಂಪಾಯನನ್ನು ಕುರಿತು "ಓ ಮುನೀಂದ್ರಾ! ಪಾಂಡವರ ದಿಗ್ವಿಜಯದನ್ನು ವಿವರವಾಗಿ ಕೇಳಬೇಕೆಂದಿರುವೆನು. ನನ್ನ ಪೂರ್ವಿಕರ ಪುಣ್ಯಚರಿತ್ರವನ್ನು ಎಷ್ಟೆಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲದಂತಿದೆ" ಎಂದನು. ಆಗ ವೈಶಂಪಾಯನನು "ಓ ಜನಮೇಜಯರಾಜಾ! ಮೊದಲು ಅರ್ಜುನನ ದಿಗ್ವಿಜಯ ಕ್ರಮವನ್ನು ತಿಳಿಸುವೆನು ಕೇಳು. ನಾಲ್ವರುಪಾಂಡವರೂ ಏಕಕಾಲದಲ್ಲಿಯೇ

ಹೊರಟು, ದಿಗ್ವಿಜಯದಲ್ಲಿ ಭೂಮಿಯನ್ನೆಲ್ಲ ಜಯಿಸಿದರು. ರಾಜನಾದ ಧರ್ಮರಾಜನು ಅರ್ಧರಾಜ್ಯವನ್ನು ಪಡೆದಮೇಲೆ, ತಾನು ಮಹಾರಾಜನಾಗ ಬೇಕೆಂದು ಯತ್ನಿಸಿದನಷ್ಟೆ? ಆಗ ಭೂಮಿಯಲ್ಲಿದ್ದ ಕ್ಷತ್ರಿಯರೆಲ್ಲರೂ ಅವನ ಉದ್ದೇಶವನ್ನು ತಿಳಿದು ಅಸೂಯೆಯಿಂದ ಅವನನ್ನು ಇದಿರಿಸುವು ದಕ್ಕಾಗಿ ಒಂದುಗೂಡಿ, ತಮ್ಮ ಚತುರಂಗಸೈನ್ಯವೆಲ್ಲವನ್ನೂ ಸೇರಿಸಿಕೊಂಡು ಅರ್ಜುನನ ಜಯಪ್ರಯತ್ನವನ್ನು ಮುರಿಯಬೇಕೆಂದು ಯತ್ನಿಸಿದರು. ಆದರೇನು? ಅಷ್ಟು ಜನರೂ ಒಂದಾದರೂ, ಅರ್ಜುನನು ತಾನೊಬ್ಬನೇ ತನ್ನ ಪರಾಕ್ರಮದಿಂದ ಅವರನ್ನಿದಿರಿಸಿದನು. ಈ ಅರ್ಜುನನ ಪರಾಕ್ರಮ ದಿಂದ ಆ ಕ್ಷತ್ರಿಯ ಸಮೂಹವೆಲ್ಲವೂ ಬಿರುಗಾಳಿಗೆ ಇದಿರಾದ ಮೇಘದಂತೆ ಪರಾಜಿತವಾಗಿ ಚದರಿಹೋಯಿತು. ಹೀಗೆ ಆ ಕ್ಷತ್ರಿಯರನ್ನೆಲ್ಲ ಓಡಿಸಿದ ಮೇಲೆ, ಅವನು ಉತ್ತರದಿಕ್ಕನ್ನು ವಶಮಾಡಿಕೊಳ್ಳಬೇಕೆಂದು ಆ ಕಡೆಗೆ ಹೊರಟನು. ಮೊದಲು ಕಳಿಂಗದೇಶದಲ್ಲಿದ್ದ ರಾಜರನ್ನೆಲ್ಲ ಸ್ವಾಧೀನ ಪಡಿಸಿಕೊಂಡನು. ಆದರೆ ಆ ರಾಜರನ್ನು ವಶಪಡಿಸಿಕೊಳ್ಳುವುದರಲ್ಲಿ ವಿಶೇಷವಾದ ಕ್ರೌರ್ಯವನ್ನೇನೂ ತೋರಿಸಲಿಲ್ಲ. ಆಮೇಲೆ ಅವನು ಆ ಕುಳಿಂಗರಾಜನನ್ನು ತನ್ನೊಡನೆ ಕರೆದುಕೊಂಡು ಸಾಲ್ವನಗರಕ್ಕೆ ಹೋಗಿ, ಉಗ್ರಧನುಸ್ಸುಳ್ಳ ಆ ಸಾಲ್ವರಾಜನನ್ನು ತನ್ನ ಪರಾಕ್ರಮದಿಂದ ಸ್ವಾಧೀ ನಪಡಿಸಿಕೊಂಡನು. ಅದರಿಂದಾಚೆಗೆ ದ್ಯುಮತ್ಸೇನನೆಂಬ ರಾಜನನ್ನು ಜಯಿಸಿ, ಅವನನ್ನು ತನ್ನ ಸೇನಾಪತಿಯನ್ನಾಗಿ ಮಾಡಿಕೊಂಡು ಕಟದೇ ಶಕ್ಕೆ ಹೋದನು. ಅಲ್ಲಿನ ರಾಜನಾದ ಸುನಾಭನನ್ನು ಜಯಿಸಿ ಅವನನ್ನೂ ತನ್ನ ಸೈನ್ಯಕ್ಕೆ ಎರಡನೆಯ ಸೈನ್ಯಾಧಿಪತಿಯನ್ನಾಗಿ ಮಾಡಿದನು. ಅಲ್ಲಿಂದ ಮುಂದೆ ಅರ್ಜುನನು ಆ ಹೊಸಸೇನಾಪತಿಗಳೊಡನೆಯೇ ಹೊರಟು, ಶಾಕ ಲದ್ವೀಪಕ್ಕೆ ಹೋಗಿ ಅಲ್ಲಿನ ರಾಜನಾದ ಪ್ರತಿವಿಂಧ್ಯನನ್ನು ಜಯಿಸಿದನು. ಶಾಕಲದ್ವೀಪ, ಸಪ್ತದ್ವೀಪಗಳೆಂಬ ಎರಡು ದ್ವೀಪಗಳ ರಾಜರಿಗೂ, ಅರ್ಜು ನನ ಸೈನ್ಯಗಳಿಗೂ ಪ್ರಬಲಯುದ್ಧವು ನಡೆಯಿತು. ಅವರನ್ನೆಲ್ಲ ಜಯಿಸಿ ಅರ್ಜುನನು ತನಗೆ ಅಧೀನರಾದ ಆ ಎಲ್ಲಾ ರಾಜರೊಡನೆ ಪ್ರಾಗ್ಜ್ಯೋತಿಷ ಪುರಕ್ಕೆ ಹೋದನು. ಆ ದೇಶದ ರಾಜನಿಗೆ ಭಗದತ್ತನೆಂದು ಹೆಸರು. ಅವನು ಪ್ರಬಲಪರಾಕ್ರಮವುಳ್ಳವನು. ಅವನೊಡನೆ ಅರ್ಜುನನಿಗೆ ದೊಡ್ಡ

ಯುದ್ಧವು ನಡೆಯಿತು. ಕಿರಾತರು, ಚೀನರು, ಸಮುದ್ರದ್ವೀಪವಾಸಿಗಳಾದ ಇನ್ನೂ ಅನೇಕಯೋಧರು ಇವರೆಲ್ಲರೂ ಅವನಿಗೆ ಬೆಂಬಲವಾಗಿದ್ದರು. ಆ ಭಗದತ್ತನು ಎಂಟು ದಿನಗಳವರೆಗೆ ಅರ್ಜುನನೊಡನೆ ಯುದ್ಧ ಮಾಡಿದನು. ಇಷ್ಟಾದರೂ ಬಳಲದೆ, ಯುದ್ಧದಲ್ಲಿ ಉತ್ಸಾಹಗೊಂಡಿರುವ ಅರ್ಜುನನನ್ನು ನೋಡಿ ನಗುತ್ತ, ಭಗದತ್ತನು "ಕೌರವಕುಮಾರಾ! ಓ. ಮಹಾಬಾಹೂ! ದೇವೇಂದ್ರಪುತ್ರನಾದ ನಿನಗೆ ಈ ಶೂರತ್ವವು ಯೋಗ್ಯವಾದುದೇ! ಅರ್ಜುನಾ! ನಾನು ಮಹೇಂದ್ರನಿಗೆ ಸ್ನೇಹಿತನು. ಯುದ್ಧದಲ್ಲಿ ನಾನು ಇಂದ್ರನಿಗೇನೂ ಕಡಿಮೆಯಾದವನಲ್ಲ. ಆದರೇನು? ಯುದ್ಧದಲ್ಲಿ ನಿನ್ನನ್ನಿದಿರಿಸಿ ನಿಲ್ಲುವುದು ನನಗೆ ಅಸಾಧ್ಯವಾಗಿ ತೋರಿದೆ. ಈಗ ನೀನು ಇಲ್ಲಿಗೆ ಬಂದ ಉದ್ದೇಶವೇನು? ತಿಳಿಸು. ನಿನ್ನ ಅಭಿಷ್ಟವೇನೋ ಅದನ್ನು ನಡೆಸಿಕೊಡುವೆನು" ಎಂದನು. ಅದಕ್ಕಾ ಅರ್ಜುನನು "ರಾಜಾ! ಧರ್ಮದೇವತೆಗೆ ಕುಮಾರನೂ, ಧರ್ಮಜ್ಞನೂ, ಸತ್ಯಸಂಧನೂ, ಕೌರವಶ್ರೇಷ್ಠನೂ ಆದ ಯುಧಿಷ್ಠಿರನು ಭೂರಿದಕ್ಷಿಣೆಯುಳ್ಳ ಯಾಗವೊಂದನ್ನು ಶಾಸ್ತ್ರೋಕ್ತವಾಗಿ ಮಾಡಬೇಕೆಂದಿರುವನು. ಅವನು ಎಲ್ಲಾ ರಾಜರಿಗೆ ಮೇಲೆ ಅಧಿರಾಜನೆನಿಸಿಕೊಳ್ಳಬೇಕೆಂದು ಬಯಸುವನು. ಅವನಿಗೆ ನೀನು ಕಪ್ಪವನ್ನು ಕೊಡಬೇಕು. ಆದರೆ, ಈ ವಿಷಯದಲ್ಲಿ ನಾನು ನಿನಗೆ ಆಜ್ಞೆ ಮಾಡುವೆನೆಂದು ತಿಳಿಯಬಾರದು. ನೀನು ನನ್ನ ತಂದೆಯಾದ ದೇವೇಂದ್ರನಿಗೆ ಸ್ನೇಹಿತನಾದುದರಿಂದ, ನಿನಗೆ ನನ್ನಲ್ಲಿ ಪುತ್ರವಾತ್ಸಲ್ಯವುಂಟು. ಆ ಪುತ್ರವಾತ್ಸಲ್ಯದಿಂದ ನೀನು ನನ್ನಣ್ಣನಿಗೆ ಕಪ್ಪವನ್ನು ಸಲ್ಲಿಸಬೇಕು. ಎಂದನು. ಆಗ ಭಗದತ್ತನು, "ಓ ಕುಂತೀಕುಮಾರಾ! ಹಾಗೆಯೇ ನಡೆಸುವೆನು. ನನಗೆ ನೀನು ಹೇಗೋ ಧರ್ಮರಾಜನೂ ಹಾಗೆಯೇ! ಇನ್ನೂ ನನ್ನಿಂದ ಆಗಬೇಕಾದ ಬೇರೆ ಕಾರ್ಯವೇನಾದರೂ ಇದ್ದರೆ ಹೇಳು. ಅದನ್ನೂ ನಡೆಸುವೆನು" ಎಂದನು.

ಇದು ಇಪ್ಪತ್ತೇಳನೆಯ ಅಧ್ಯಾಯವು.



## ಅರ್ಜುನನು ಉತ್ತರದಿಕ್ಕಿನಲ್ಲಿ ಶ್ವೇತಪರ್ವತದವರೆಗೆ ಜಯಿಸಿದುದು.

ಆಮೇಲೆ ಅರ್ಜುನನು ಭಗದತ್ತನನ್ನು ನೋಡಿ, "ಮಹಾರಾಜಾ! ನೀನು ಈ ನನ್ನ ಪ್ರಾರ್ಥನೆಯೊಂದನ್ನು ನಡೆಸಿಕೊಟ್ಟರೆ, ಅದರಿಂದಲೇ ಎಲ್ಲವನ್ನೂ ಮಾಡಿದಂತಾಗುವುದು" ಎಂದನು. ಆಮೇಲೆ ಅರ್ಜುನನು ಆ ಉತ್ತರದಿಕ್ಕಿನಮಾರ್ಗವಾಗಿ ಹೊರಟು, ದಾರಿಯಲ್ಲಿ ಅಂತರ್ಗಿರಿ, ಉಪಗಿರಿಯೆಂಬ ಪರ್ವತದೇಶಗಳನ್ನು ಜಯಿಸಿದನು. ಹೀಗೆಯೇ ಅಲ್ಲಿಂದ ಮುಂದೆ ಎಲ್ಲಾ ದೇಶಗಳನ್ನೂ ಜಯಿಸಿ, ಅಲ್ಲಲ್ಲಿನ ರಾಜರನ್ನು ತನಗೆ ವಶಮಾಡಿಕೊಂಡು, ಅವರಿಂದ ವಿಶೇಷವಾದ ಧನವನ್ನು ಕಪ್ಪವಾಗಿ ತೆಗೆದುಕೊಂಡನು. ಆಮೇಲೆ ಆ ರಾಜರನ್ನೆಲ್ಲ ಅವರವರ ರಾಜ್ಯದಲ್ಲಿಯೇ ನೆಲೆಗೊಳಿಸಿ, ಅವರನ್ನೂ ಸಂಗಡ ಕರೆದುಕೊಂಡು ಮುಂದೆ ಹೊರಟನು. ದೊಡ್ಡಭೇರೀಧ್ವನಿಗಳಿಂದಲೂ, ರಥಘೋಷದಿಂದಲೂ, ಆನೆಗಳ ಘೀಂಕಾರದಿಂದಲೂ ನೆಲವನ್ನು ನಡುಗಿಸುವಂತೆ ಪ್ರಯಾಣವನ್ನು ಮಾಡಿ, ಉಲೂಕದೇಶದಲ್ಲಿದ್ದ ಬೃಹಂತನನ್ನು ಇದಿರಿಸಿದನು. ಆ ಬೃಹಂತನು ದೊಡ್ಡ ಸೈನ್ಯದೊಡನೆ ಪಟ್ಟಣದಿಂದ ಹೊರಗೆ ಬಂದು ಯುದ್ಧಕ್ಕೆ ನಿಂತನು. ಇಬ್ಬರಿಗೂ ಮಹಾಯುದ್ಧವು ನಡೆಯಿತು. ಎಂತವರಿಗೂ ದುರ್ಜಯನಾದ ಬೃಹಂತನೆಂಬ ಆ ಪರ್ವತರಾಜನು, ಅರ್ಜುನನ ಪರಾಕ್ರಮದಮುಂದೆ ನಿಲ್ಲಲಾರದೆ, ಕೊನೆಗೆ ಅವನಲ್ಲಿ ಶರಣಾಗತನಾಗುವುದೇ ಮೇಲೆಂದು ತಿಳಿದು, ತನ್ನ ಬೊಕ್ಕಸದಿಂದ ವಿಶೇಷ ಧನಕನಕಾದಿಗಳನ್ನು ತಂದು ಅರ್ಜುನನಿಗೆ ಒಪ್ಪಿಸಿದನು. ಅರ್ಜುನನು ಅವನನ್ನು ಅವನ ರಾಜ್ಯದಲ್ಲಿಯೇ ನಿಲ್ಲಿಸಿ, ಅವನನ್ನೂ ಕರೆದುಕೊಂಡು ಮುಂದೆ ಹೊರಟು, ಸೇನಾಬಿಂದುವೆಂಬ ರಾಜನನ್ನು ಇದಿರಿಸಿದನು. ಆ ರಾಜನು ತನಗೆ ಶರಣಾಗತನಾಗದಿರಲು ಅರ್ಜುನನು ಒಡನೆಯೇ ಅವನನ್ನು ರಾಜ್ಯದಿಂದ ನೀಗಿಸಿದನು. ಮತ್ತು ತಾನು ಆ ಸೇನಾಬಿಂದುವಿನ ರಾಜ್ಯದಲ್ಲಿದ್ದುಕೊಂಡೇ ದೂತರಮೂಲಕವಾಗಿ, ಧರ್ಮರಾಜನ ಆಜ್ಞೆಯನ್ನು ಹೇಳಿಕಳುಹಿಸಿ, ಮೋದಾಪುರ, ವಾಮದೇವ, ಸುದಾಮ, ಸುಮಂಗಲ, ಉತ್ತರದೇಶದ ಉಲೂಕರಾಜ್ಯಗಳು, ಇಲ್ಲಿನ ರಾಜರನ್ನೆಲ್ಲ

ತನ್ನಲ್ಲಿಗೆ ಕರೆಸಿಕೊಂಡು ಅವರಿಂದ ಕಪ್ಪವನ್ನು ತೆಗೆದನು. ಅಲ್ಲಿಂದಾಚೆಗೆ ಆ ಕಿರೀಟಿಯು ಸಮೀಪದಲ್ಲಿದ್ದ ಪಂಚಗಣವೆಂಬ ದೇಶವನ್ನು ಜಯಿಸಿದನು. ಅಲ್ಲಿಂದ ಎಲ್ಲಾ ಸೈನ್ಯದೊಡನೆ ದೇವಪ್ರಸ್ಥವೆಂಬ ನಗರವನ್ನು ಸೇರಿ ಅಲ್ಲಿಳಿದನು. ಅಲ್ಲಿ ಪುರುವಂಶಕ್ಕೆ ಸೇರಿದ ವಿಷ್ವಗಶ್ವನೆಂಬ ರಾಜನನ್ನಿದಿರಿಸಿದನು. ಅವನ ಕಡೆಯಲ್ಲಿದ್ದ ಪರ್ವತದೇಶೀಯರಾದ ಅನೇಕ ಮಹಾರಥರನ್ನು ಯುದ್ಧದಲ್ಲಿ ಗೆದ್ದು, ವಿಷ್ವಗಶ್ವನು ಪಾಲಿಸುತಿದ್ದ ನಗರವನ್ನು ತನ್ನ ಸೈನ್ಯದಿಂದಲೇ ಸ್ವಾಧೀನಪಡಿಸಿಕೊಂಡನು. ಹೀಗೆ ವಿಷ್ವಗಶ್ವನನ್ನು ಜಯಿಸಿದಮೇಲೆ, ಪರ್ವತವಾಸಿಗಳಾದ ಉತ್ಸವಸಂಕೇತರೆಂಬ ಏಳು ಪಂಗಡದವರನ್ನು ಜಯಿಸಿದನು. ಆಮೇಲೆ ಕಾಶ್ಮೀರದ ರಾಜರನ್ನೂ, ಹತ್ತುಮಂದಿ ಪಾಳೆಯಗಾರರಿಂದ ಕೂಡಿದ ಮೋಹಿತನೆಂಬವನನ್ನೂ ಜಯಿಸಿದನು. ಆಮೇಲೆ ತ್ರಿಗರ್ತರು, ದಾರ್ವರು, ಕೋಕನದರು ಮೊದಲಾದ ಅನೇಕ ದೇಶದ ಕ್ಷತ್ರಿಯರು ತಾವಾಗಿಬಂದು ಅರ್ಜುನನಲ್ಲಿ ಶರಣಾಗತರಾದರು. ಅಲ್ಲಿಂದಾಚೆಗೆ ಅರ್ಜುನನು, ಅಭಿಸಾರಿಯೆಂಬ ರಮ್ಯವಾದ ಪಟ್ಟಣವನ್ನು ಸ್ವಾಧೀನಪಡಿಸಿಕೊಂಡನು. ಅಲ್ಲಿಂದ ಮುಂದೆ ಉರಗಾಪುರಿಯಲ್ಲಿದ್ದ ರೋಚಮಾನನನ್ನು ಜಯಿಸಿದನು. ಅದರಿಂದಾಚೆಗೆ, ವಿಚಿತ್ರಾಯುಧಗಳಿಂದ ರಕ್ಷಿತವಾದ ಸಿಂಹಪುರವೆಂಬ ಪಟ್ಟಣವನ್ನು ಸ್ವಾಧೀನಪಡಿಸಿಕೊಂಡನು. ಅಲ್ಲಿಂದಮುಂದೆ ಅರ್ಜುನನು ತನ್ನ ಸೈನ್ಯದೊಡನೆ ಹೊರಟು ಸುಂಹದೇಶವನ್ನೂ, ಚೋಳದೇಶವನ್ನೂ ಕೊಳ್ಳೆಹೊಡೆದನು. ಅಲ್ಲಿಂದ ಬಾಹ್ಲೀಕದೇಶವನ್ನು ಮುತ್ತಿ ಅದನ್ನೂ ವಶಪಡಿಸಿಕೊಂಡನು. ಆಮೇಲೆ ಕ್ರಮವಾಗಿ, ದರದ, ಕಾಂಭೋಜದೇಶಗಳನ್ನೂ, ಆಮೇಲೆ ಈಶಾನ್ಯಪ್ರಾಂತ್ಯಗಳ ಕಾಡುಗಳಲ್ಲಿ ವಾಸಮಾಡುವ ದಸ್ಯುಗಳೆಂಬವರನ್ನೂ ಜಯಿಸಿದನು. ಅದರಿಂದಾಚೆಗೆ ಲೋಹರು, ಪರಮಕಾಂಭೋಜರು, ಉತ್ತರದೇಶದ ಋಷಿಕರು ಇವರೆಲ್ಲರೂ ಒಂದುಗೂಡಿ ತನ್ನಮೇಲೆ ಬಿದ್ದುಬರಲು, ಅವರನ್ನೆಲ್ಲ ತನ್ನ ಪರಾಕ್ರಮದಿಂದ ಜಯಿಸಿದನು. ಓ ಜನಮೇಜಯರಾಜಾ! ಋಷಿಕರಿಗೂ, ಅರ್ಜುನನಿಗೂ ಆಗ ನಡೆದ ಯುದ್ಧವು ಹಿಂದೆ ತಾರಕಾಮಯವೆಂಬ ದೇವಾಸುರಯುದ್ಧದಂತೆ ಅತಿಭಯಂಕರವಾಗಿದ್ದಿತು. ಅರ್ಜುನನು ಆ ಋಷಿಕರನ್ನೆಲ್ಲ ಜಯಿಸಿ, ಅವರಲ್ಲಿದ್ದ

ಎಂಟು ಉತ್ತಮಾಶ್ವಗಳನ್ನು ತೆಗೆದುಕೊಂಡುಬಂದನು. ಆ ಕುದುರೆಗಳೆಲ್ಲ ವೂ ಗಿಳಿಯಹೊಟ್ಟೆಯಂತೆ ಕಾಂತಿಯುಳ್ಳವುಗಳಾಗಿದ್ದುವು. ಇದಲ್ಲದೆ, ನವಿಲಿನಂತೆ ವಿಚಿತ್ರವಾಗಿಯೂ, ಅದಕ್ಕಿಂತಲೂ ಮೇಲಾಗಿಯೂ, ವಾಯು ವಿನಂತೆ ವೇಗವುಳ್ಳವುಗಳಾಗಿಯೂ ಇರುವ ಇನ್ನೂ ಅನೇಕಾಶ್ವಗಳನ್ನು ಅವನಿಂದ ಕಪ್ಪವಾಗಿ ತೆಗೆದುಕೊಂಡನು. ಅಲ್ಲಿಂದಾಚೆಗೆ ಅರ್ಜುನನು ಹಿಮವಂತ, ನಿಷ್ಕುಟಗಳೆಂಬ ಪರ್ವತಪ್ರಾಂತ್ಯಗಳನ್ನು ಜಯಿಸಿ, ಶ್ವೇತ ಪರ್ವತಕ್ಕೆ ಹೋಗಿ, ಅಲ್ಲಿ ತನ್ನ ಸೈನ್ಯವನ್ನಿಳಿಸಿದನು.

ಇದು ಇಪ್ಪತ್ತೆಂಟನೆಯ ಅಧ್ಯಾಯವು.

(ಅರ್ಜುನನು ಉತ್ತರದಿಗ್ವಿಜಯದಲ್ಲಿ ಕಿಂಪುರುಷಾದಿ ಖಂಡಗಳನ್ನು ವಶಪಡಿಸಿಕೊಂಡು, ಅಲ್ಲಿಂದ ಖಾಂಡವಪ್ರಸ್ಥಕ್ಕೆ ಹಿಂತಿರುಗಿದುದು.)

ಓ ಜನಮೇಜಯರಾಜಾ! ಕೇಳು! ವೀರನಾದ ಅರ್ಜುನನು, ಶ್ವೇತಪರ್ವತವನ್ನು ದಾಟಿ, ಮುಂದೆ ಕಿಂಪುರುಷರಿಗೆ ನಿವಾಸಸ್ಥಾನವಾದ ಪ್ರದೇಶಕ್ಕೆ ಹೋದನು. ಅದು ದ್ರುಮನೆಂಬ ಕಿಂಪುರುಷನ ಮಗನಿಂದ ರಕ್ಷಿತವಾಗಿದ್ದಿತು. ಅರ್ಜುನನು ಪ್ರಬಲಯುದ್ಧದಲ್ಲಿ ಅವನನ್ನು ಜಯಿಸಿ, ಅವನಿಂದ ಕಪ್ಪವನ್ನು ತೆಗೆದುಕೊಂಡನು. ಅಲ್ಲಿಂದ ಮುಂದೆ ಗುಹ್ಯಕರಕ್ಷಿತವಾದ ಹಾಟಕವೆಂಬ ಪ್ರದೇಶಕ್ಕೆ ತನ್ನ ಸೈನ್ಯಗಳೊಡನೆ ನಿರ್ಭಯವಾಗಿ ಪ್ರವೇಶಿಸಿ, ಅಲ್ಲಿನ ಗುಹ್ಯಕರನ್ನು ಯುದ್ಧವಿಲ್ಲದಹಾಗೆಯೇ ಮೃದುತ್ವದಿಂದ ವಶಪಡಿಸಿಕೊಂಡನು. ಅಲ್ಲಿಂದ ಮುಂದೆ ಮಾನಸಸರೋವರವನ್ನೂ, ಋಷಿಕುಲ್ಯಗಳೆಂಬ ಕಾಲುವೆಗಳನ್ನೂ ಸೇರಿದನು. ಹಾಟಕದೇಶದ ಪಕ್ಕದಲ್ಲಿ ಗಂಧರ್ವರಿಂದ ರಕ್ಷಿಸಲ್ಪಟ್ಟ ಒಂದು ದೇಶವನ್ನು ಗೆದ್ದನು. ಆ ದೇಶದಲ್ಲಿ ತಿತ್ತಿರಿಪಕ್ಷಿಗಳಂತೆ ಚಿತ್ರವರ್ಣವುಳ್ಳ ಮಂಡೂಕಗಳೆಂದು ಕರೆಯಲ್ಪಡುವ ಉತ್ತಮಾಶ್ವಗಳನ್ನು ಅವರಿಂದ ಕಪ್ಪವಾಗಿ ತೆಗೆದುಕೊಂನು. ಅಲ್ಲಿಂದ ಮುಂದೆ ಹೇಮಕೂಟಪರ್ವತಕ್ಕೆ ಹೋಗಿ ಅಲ್ಲಿ ಸೈನ್ಯವನ್ನಿಳಿಸಿದನು. ಅಲ್ಲಿಂದಾಚೆಗೆ ಆ ದೊಡ್ಡ ಸೈನ್ಯದೊಡನೆ ಆ ಪರ್ವತವನ್ನು

ದಾಟಿ, ಹರಿವರ್ಷವೆಂಬ ಒಂದು ಖಂಡವನ್ನು ಪ್ರವೇಶಿಸಿದನು. ಅಲ್ಲಿ ಲೋಕಾತಿಶಯಗಳಾದ ಸುಂದರನಗರಗಳೂ, ರಮ್ಯವಾದ ತೋಟಗಳೂ, ಸ್ವಚ್ಛಜಲವುಳ್ಳ ನದಿಗಳೂ, ದೇವತೆಗಳಂತೆ ರೂಪವುಳ್ಳ ಪುರುಷರೂ, ನೇತ್ರಾನಂದಕರಾದ ಸ್ತ್ರೀಯರೂ ಗೋಚರಿಸಿದರು. ಅರ್ಜುನನು ಆ ಸನ್ನಿವೇಶಗಳನ್ನು ನೋಡಿ ಆನಂದಿತನಾಗಿ, ಅವರನ್ನೆಲ್ಲ ವಶಪಡಿಸಿಕೊಂಡು, ಅವರಿಂದ ವಿಶೇಷರತ್ನಗಳನ್ನು ಕಪ್ಪವಾಗಿ ತೆಗೆದುಕೊಂಡನು. ಅಲ್ಲಿಂದಾಚೆಗೆ ನಿಷಧಪರ್ವತಕ್ಕೆ ಹೋಗಿ ಅಲ್ಲಿನವರನ್ನು ಜಯಿಸಿ, ಆ ಪರ್ವತವನ್ನು ದಾಟಿ ದೇವಭೂಮಿಯೆನಿಸಿಕೊಂಡ ಇಳಾವೃತವೆಂಬ ಮಧ್ಯಖಂಡಕ್ಕೆ ಬಂದನು. ಅಲ್ಲಿನ ಸ್ತ್ರೀಪುರುಷರೆಲ್ಲರೂ ಎಣೆಯಿಲ್ಲದ ಸೌಂದರ್ಯದಿಂದ ದೇವತೆಗಳಂತೆ ಬೆಳಗುತ್ತಿರುವರು. ಅರ್ಜುನನು ಹಿಂದೆ ಯಾವಾಗಲೂ ನೋಡಿಲ್ಲದ ಅಂತಹ ಸುಂದರಪುರುಷರನ್ನೂ, ಅಪ್ಸರಸ್ತ್ರೀಯರಂತೆ ರೂಪಾತಿಶಯವುಳ್ಳ ಹೆಂಗಸರನ್ನೂ, ಶುಭ್ರವಾದ ಮಂದಿರಗಳನ್ನೂ ನೋಡಿ ಆಶ್ಚರ್ಯಗೊಂಡನು. ಅರ್ಜುನನು ಅವರನ್ನು ನೋಡಿ ಬೆರಗಾದಂತೆಯೇ, ಅವರೂ ಇವನ ರೂಪವನ್ನು ನೋಡಿ ಬೆರಗಾದರು. ಮಹಾತ್ಮನಾದ ಅರ್ಜುನನು ಅವರೆಲ್ಲರನ್ನೂ ವಶಪಡಿಸಿಕೊಂಡು, ಅವರಿಂದ ರತ್ನಗಳನ್ನೂ, ಆಭರಣಗಳನ್ನೂ, ಉತ್ತಮಾಸನಗಳನ್ನೂ ಕಪ್ಪವಾಗಿ ತೆಗೆದುಕೊಂಡನು. ಅಲ್ಲಿಂದ ಇನ್ನೂ ಮುಂದೆ ಉತ್ತರಕ್ಕೆ ಹೋಗಿ, ಪರ್ವತರಾಜನೆನಿಸಿದ ಮೇರುವನ್ನು ಕಂಡನು. ಅದರ ಅತಿಶಯವನ್ನು ಕೇಳಬೇಕೆ! ಆ ಪರ್ವತವು ಕೇವಲ ಸುವರ್ಣಮಯವಾಗಿರುವುದು. ನಾಲ್ಕು ಬಗೆಯ ವರ್ಣಗಳಿಂದ ಥಳಥಳಿಸುತ್ತಿರುವುದು. ಮನುಷ್ಯರಿಂದ ದಾಟಲಸಾಧ್ಯವಾಗಿ, ಲಕ್ಷಯೋಜನಗಳ ಉನ್ನತವಾಗಿ, ಸುಸ್ಥಿರವಾಗಿರುವುದು. ತನ್ನ ಸುವರ್ಣಶಿಖರಗಳಿಂದ ಸೂರ್ಯಪ್ರಭೆಯನ್ನೇ ಮರೆಸುವ ತೇಜೋರಾಶಿಯಂತೆ ಕಾಣುವುದು. ಸುವರ್ಣಾಭರಣಗಳಿಂದ ಅಲಂಕೃತರಾದ ದೇವತೆಗಳಿಂದಲೂ, ಗಂಧರ್ವರಿಂದಲೂ ತುಂಬಿರುವುದು. ಅದರ ಅಳತೆಯನ್ನು ಇಷ್ಟೆಂದು ನಿರ್ಣಯಿಸಲು ಸಾಧ್ಯವಿಲ್ಲ! ಅಧರ್ಮಪ್ರವರ್ತಕರಾದ ಜನರಿಗೆ ಅದು ಪ್ರವೇಶಿಸಲಸಾಧ್ಯವಾಗಿರುವುದು. ಅದರಲ್ಲಿ ಕ್ರೂರಸರ್ಪಗಳು ಸಂಚರಿಸುತ್ತಿರುವುವು. ಅನೇಕ ಮಹೌಷಧಿಗಳಿಂದ ನಿಬಿಡವಾಗಿರುವುದು. ತನ್ನ

ಔನ್ನತ್ಯದಿಂದ ಸ್ವರ್ಗವನ್ನಾಕ್ರಮಿಸುವಂತೆ ನಿಂತಿರುವುದು. ಬೇರೊಬ್ಬರಿಂದ ಮನಸ್ಸಿನಿಂದಲೂ ಏರಲಸಾಧ್ಯವಾಗಿರುವುದು. ಗಿರಿನದಿಗಳೂ, ವೃಕ್ಷಗಳೂ ಅಲ್ಲಿ ಸಮೃದ್ಧವಾಗಿರುವುವು. ನಾನಾಜಾತಿಯ ಪಕ್ಷಿಗಳು ಗಾನಮಾಡುತ್ತಿರುವುವು. ಆ ಪರ್ವತವನ್ನು ನೋಡಿ ಅರ್ಜುನನು ಆಶ್ಚರ್ಯಭರಿತನಾದನು. ದೇವಭೂಮಿಯೆನಿಸಿದ ಇಲಾವೃತವು ಸುತ್ತಲೂ ಆ ಪರ್ವತದ ಸೊಬಗಿನಿಂದ ಅಲಂಕೃತವಾಗಿರುವುದು. ಆ ಮೇರುವಿನ ದಕ್ಷಿಣಪಾರ್ಶ್ವದಲ್ಲಿ ಯಾವಾಗಲೂ ಪುಷ್ಪಗಳಿಂದ ತುಂಬಿ, ಸಿದ್ಧಚಾರಣರಿಗೆ ಆಶ್ರಯವಾದ ಜಂಬೂವೃಕ್ಷವೊಂದುಂಟು. ಆ ವೃಕ್ಷದ ಕೊಂಬೆಗಳು ಗಗನವ್ಯಾಪಿಗಳಾಗಿರುವುವು. ಆ ವೃಕ್ಷದಿಂದಲೇ ಆ ಭೂಖಂಡಕ್ಕೆ ಜಂಭೂದ್ವೀಪವೆಂದು ಹೆಸರಾಯಿತು. ಅರ್ಜುನನು ಆ ಜಂಬೂವೃಕ್ಷವನ್ನೂ, ಅದರ ಸುತ್ತಲಿನ ಪರ್ವತಪ್ರದೇಶವನ್ನೂ ನೋಡಿ ಆನಂದಿತನಾದನು. ಅಲ್ಲಿನ ಸಿದ್ಧಚಾಗಣರು ತಂದೊಪ್ಪಿಸಿದ ರತ್ನಗಳನ್ನೂ, ಆಭರಣಗಳನ್ನೂ, ವಸ್ತ್ರಗಳನ್ನೂ ಯಾಗಕಾರ್ಯಕ್ಕಾಗಿ ಸಂಗ್ರಹಿಸಿಕೊಂಡು, ಅಲ್ಲಿನವರ ಅನುಮತಿಯನ್ನು ಪಡೆದು, ಮುಂದೆ ಹೊರಡಲುದ್ಯುಕ್ತನಾದರು. ಆ ಪರ್ವತೋತ್ತಮವನ್ನು ಮನಸ್ಸಿನಿಂದಲೇ ಪ್ರದಕ್ಷಿಣೆಮಾಡಿ, ಮುಂದೆ ಕಾಣಿಸಿದ ಜಂಬೂನದಿಯನ್ನು ನೋಡಿ, ಆ ನದಿತೀರದ ಮಾರ್ಗವನ್ನೇ ಹಿಡಿದು ಹೊರಟನು. ಆ ನದಿಯಲ್ಲಿ ನೇರಳೆಯ ಹಣ್ಣಿನ ರಸವೇ ನೀರಾಗಿ ಹರಿಯುವುದು. ಅಲ್ಲಿನ ಜಲಪಕ್ಷಿಗಳೂ, ತಾವರೆಗಳೂ ಸುವರ್ಣಮಯವಾಗಿರುವುವು. ಆ ನದಿಯಲ್ಲಿರುವ ಕೆಸರು, ಅಲ್ಲಿನ ಮರಳು, ಇವೆಲ್ಲವೂ ಸುವರ್ಣಮಯವಾಗಿಯೇ ಇರುವುವು. ಕೆಲವುಕಡೆ ಚೆನ್ನಾಗಿ ಅರಳಿದ ಸುವರ್ಣದ ನೈದಿಲೆಗಳು! ಕೆಲವುಕಡೆ ಭಂಗಾರದ ಹೂಗಳಿಂದ ತುಂಬಿದ ತೀರವೃಕ್ಷಗಳು! ಅಲ್ಲಲ್ಲಿ ಸುವರ್ಣಮಯವಾದ ಸೋಪಾನಗಳಿಂದ ಕೂಡಿದ ಘಟ್ಟಗಳು! ಅಲ್ಲಲ್ಲಿ ವಿವಿಧ ರತ್ನಗಳಿಂದಲೂ, ನೃತ್ತಗೀತ ವಾದ್ಯಗಳಿಂದಲೂ, ಚಿನ್ನದ ಮೇಲ್ಕಟ್ಟುಗಳಿಂದಲೂ ಶೋಭಿತಗಳಾದ ತೀರಮಂಟಪಗಳು! ಇವುಗಳಿಂದ ರಮ್ಯವಾಗಿರುವುದು. ಅರ್ಜುನನು ತಾನು ಹಿಂದೆ ಯಾವಾಗಲೂ ಕಂಡು ಕೇಳಿಲ್ಲದ ಆ ರಮ್ಯನದಿಯನ್ನು ನೋಡಿ ವಿಸ್ಮಿತನಾಗಿ, ಅದರ ಸೌಂದರ್ಯವನ್ನು ಪ್ರಶಂಸೆಮಾಡಿದನು. ಮತ್ತು ಆ ನದಿಯ ತೀ

ರದಲ್ಲಿ ಅದರ ಜಲವನ್ನೇ ಆಹಾರವಾಗಿ ಉಳ್ಳವರೂ, ಅತ್ಯಂತ ಸುಂದರ ರೂಪವುಳ್ಳವರೂ ಆದ ಅನೇಕಪುರುಷರು ಅಲ್ಲಿ ನಿತ್ಯಸುಖಿಗಳಾಗಿ, ಸರ್ವಾಲಂಕಾರಶೋಭಿತರಾಗಿ, ತಮ್ಮತಮ್ಮ ಪತ್ನಿಯರೊಡನೆ ವಿಹರಿಸುತ್ತಿದ್ದದನ್ನು ಕಂಡನು. ಅರ್ಜುನನು ಅವರಿಂದಲೂ ಅನೇಕ ರತ್ನಗಳನ್ನೂ, ಆಭರಣಗಳನ್ನೂ, ಸುವರ್ಣಮಯಗಳಾದ ಜಂಬೂಫಲವನ್ನೂ ಇನ್ನೂ ಇತರ ದುರ್ಲಭಗಳಾದ ಅನೇಕ ವಸ್ತುಗಳನ್ನೂ ತೆಗೆದುಕೊಂಡು, ಅಲ್ಲಿಂದ ಪಶ್ಚಿಮದಿಕ್ಕಿಗೆ ತಿರುಗಿ, ಅಲ್ಲಿ ನಾಗರಿಂದ ರಕ್ಷಿತವಾದ ಒಂದು ದೇಶವನ್ನು ಜಯಿಸಿದನು. ಅಲ್ಲಿಂದ ಮುಂದೆ ಗಂಧಮಾಧನಪರ್ವತವನ್ನು ಸೇರಿ, ಅಲ್ಲಿನವರನ್ನು ಜಯಿಸಿ, ಆ ಪರ್ವತದಿಂದಾಚೆಗೆ, ರತ್ನಸಮೃದ್ಧವಾದ ಕೇತುಮಾಲವೆಂಬ ಭೂಖಂಡವನ್ನು ಕಂಡನು. ಅಲ್ಲಿನ ಸ್ತ್ರೀಪುರುಷರೆಲ್ಲರೂ, ದೇವತೆಗಳಂತೆ ಶೋಭಿಸುವರು. ಅವರನ್ನೂ ಅರ್ಜುನನು ಜಯಿಸಿ ಕಪ್ಪವನ್ನು ಕೊಡುವಂತೆ ಮಾಡಿ, ಅನೇಕ ರತ್ನಗಳನ್ನು ಸಂಗ್ರಹಿಸಿಕೊಂಡು ತಿರುಗಿ ಮಧ್ಯದೇಶವಾದ ಇಲಾವೃತಕ್ಕೆ ಬಂದು, ಅಲ್ಲಿಂದ ಪೂರ್ವದಿಕ್ಕಿಗೆ ಹೋಗಿ ಅಲ್ಲಿ ಮೇರು ಮಂದರಪರ್ವತಗಳಿಗೆ ನಡುವೆ ಹರಿಯುವ ಶೈಲೋದೆಯೆಂಬ ನದಿಯತೀರಕ್ಕೆ ಬಂದನು. ಆ ನದಿಯ ಪಾರ್ಶ್ವಗಳೆರಡೂ ದಟ್ಟವಾಗಿ ಬೆಳೆದ ಬಿದಿರುಮೆಳೆಗಳಿಂದ ರಮ್ಯವಾಗಿರುವುದು. ಆ ಬಿದಿರು ಮೆಳೆಗಳ ನೆರಳನ್ನು ಆಶ್ರಯಿಸಿ ಜೀವಿಸುತ್ತಿರುವ ಕಷರು, ಝಷರು, ನದ್ಯೋತರು, ಪ್ರಘಸರು, ದೀಪ್ತವೇಣಿಕರು, ಪಶುಪರು, ಕುಳಿಂದರು, ಕಂಕಣರು, ಪರಕಂಕಣರೆಂಬ ನಾನಾ ಜಾತಿಯವರನ್ನು ಜಯಿಸಿ ಅವರನ್ನು ತಮಗೆ ಕಪ್ಪವನ್ನು ಕೊಡುವಂತೆ ಮಾಡಿದನು. ಅವರಲ್ಲಿದ್ದ ಅನೇಕ ರತ್ನಗಳನ್ನು ಸಂಗ್ರಹಿಸಿಕೊಂಡು ಮಾಲ್ಯವಂತವೆಂಬ ಪರ್ವತಕ್ಕೆ ಹೋದನು. ಆ ಪರ್ವತವನ್ನು ದಾಟಿ ಅಲ್ಲಿಂದ ಭದ್ರಾಶ್ವವೆಂಬ ಖಂಡವನ್ನು ಸೇರಿದನು. ಅದು ಅತಿರಮ್ಯವಾಗಿ ಸ್ವರ್ಗಕ್ಕೆ ಸಮಾನವಾಗಿರುವುದು. ಅಲ್ಲಿನ ಜನರೆಲ್ಲ ದೇವತೆಗಳಂತಿರುವರು. ಅವರನ್ನು ಜಯಿಸಿ, ಅವರಿಂದ ಕಪ್ಪವನ್ನು ತೆಗೆದುಕೊಂಡು, ಅಲ್ಲಿಂದಲೂ ಅನೇಕರತ್ನಗಳನ್ನು ಸಂಗ್ರಹಿಸಿಕೊಂಡು, ಅಲ್ಲಿಂದ ನೀಲಪರ್ವತಕ್ಕೆ ಹೋದನು. ಅಲ್ಲಿದ್ದವರನ್ನು ಜಯಿಸಿ ಅಲ್ಲಿಂದ ರಮ್ಯಕವರ್ಷಕ್ಕೆ ಹೋಗಿ ಅದನ್ನೂ ಜಯಿಸಿ, ಅವರಿಂದ ಕಪ್ಪ

ವನ್ನು ತೆಗೆದುಕೊಂಡನು. ಅಲ್ಲಿಂದ ಮುಂದೆ ಗುಹ್ಯಕರಿಂದ ರಕ್ಷಿತವಾದ ದೇಶಕ್ಕೆ ಬಂದನು. ಅಲ್ಲಿನ ಮೃಗಪಕ್ಷಿಗಳೆಲ್ಲವೂ ಸುವರ್ಣಮಯವಾಗಿರುವುವು. ಅರ್ಜುನನು ಆ ದೇಶವನ್ನು ಜಯಿಸಿ, ಧರ್ಮರಾಜನ ರಾಜಸೂಯಯಾಗದ ವೈಭವಕ್ಕಾಗಿ ಅಲ್ಲಿದ್ದ ಚಿನ್ನದ ಜಿಂಕೆಗಳನ್ನೂ, ಪಕ್ಷಿಗಳನ್ನೂ, ಇನ್ನೂ ಅನೇಕರತ್ನಗಳನ್ನು ತೆಗೆದುಕೊಂಡು ಹೊರಟನು. ಅಲ್ಲಿಂದಮುಂದೆ ಗಂಧರ್ವರಕ್ಷಿತವಾದ ಮತ್ತೊಂದು ದೇಶವನ್ನು ಜಯಿಸಿ, ಅಲ್ಲಿಂದಲೂ ಅನೇಕದಿವ್ಯರತ್ನಗಳನ್ನೂ ಪಡೆದುಕೊಂಡು, ಹಿರಣ್ಯಕವೆಂಬ ಖಂಡಕ್ಕೆ ಬಂದನು. ಅಲ್ಲಿ ಅವನು ನಕ್ಷತ್ರಗಳ ನಡುವೆ ಚಂದ್ರನಂತೆ ಬಿಳುಪಾದ ಉಪ್ಪರಿಗೆಮನೆಗಳ ಸಾಲಿನಿಂದ ರಮ್ಯವಾದ ರಾಜಬೀದಿಗಳ ಮಾರ್ಗವಾಗಿ ಸಂಚರಿಸತೊಡಗಿದನು. ಆ ಉಪ್ಪರಿಗೆಮನೆಗಳ ಮೇಲೆ ಆ ನಗರದ ಸ್ತ್ರೀಯರೆಲ್ಲರೂ ಮಹಾಪರಾಕ್ರಮದಿಂದಲೂ, ಕೀರ್ತಿಯಿಂದಲೂ ಮೇಲೆನಿಸಿದ ಆ ಅರ್ಜುನನನ್ನು ಆಶ್ಚರ್ಯದಿಂದ ನೋಡುತಿದ್ದರು. ಆ ಅರ್ಜುನನಾದರೋ ರಥವನ್ನೇರಿ ಬಿಲ್ಲುಬಾಣಗಳನ್ನು ಹಿಡಿದು, ಕಿರೀಟ, ಕವಚ, ಕುಂಡಲಾದಿಗಳನ್ನು ಧರಿಸಿ ಯುದ್ಧಸನ್ನದ್ಧನಾದ ವೀರನಂತಿರುವನು. ಸುಕುಮಾರ ಶರೀರವುಳ್ಳವನಾಗಿ, ಮಹಾಬಲಶಾಲಿಯಾಗಿ ತೇಜೋರಾಶಿಯಿಂದ ಬೆಳಗುವನು. ಇಂದ್ರನಿಗೆ ಸಾಟಿಯಾಗಿರುವನು. ಎಂತಹ ಶತ್ರುಗಳನ್ನಾದರೂ ಕೊಲ್ಲುವನು. ಶತ್ರುಸೈನ್ಯದ ಆನೆಗಳನ್ನಾದರೂ ತಡೆಯಬಲ್ಲವನು. ಅಂತವನನ್ನು ನೋಡಿ ಸ್ತ್ರೀಯರು ಅವನನ್ನು ಶಕ್ತಿಧರನಾದ ಕುಮಾರಸ್ವಾಮಿಯೋ ಎಂದು ಭ್ರಮಿಸುತ್ತ ತಮ್ಮೊಳಗೆ ಒಬ್ಬರಿಗೊಬ್ಬರು "ಆಹಾ! ಯುದ್ಧದಲ್ಲಿ ಅದ್ಭುತಪರಾಕ್ರಮವುಳ್ಳ ಆ ಪುರುಷಶಾರ್ದೂಲನು ಇವನೇ! ಇವನ ಬಾಹುಬಲಕ್ಕೆ ಇದಿರಾದ ಶತ್ರುಗಳಾರೂ ಬದುಕಲಾರರು" ಎಂದು ಅವನ ತಲೆಯಮೇಲೆ ಪುಷ್ಪವರ್ಷವನ್ನು ಕರೆದರು. ಮೇಲೆಮೇಲೆ ಅಧಿಕಸಂತೋಷದಿಂದ, ಅವನಮೇಲೆ ರತ್ನಗಳನ್ನೂ ಆಭರಣಗಳನ್ನೂ ವರ್ಷಿಸಿದರು. ಆಮೇಲೆ ಅರ್ಜುನನು ಮುತ್ತು, ಹವಳ, ಸುವರ್ಣ, ಆಯುಧ, ಆಭರಣ, ಮೊದಲಾದುವನ್ನು ಅವರಿಂದ ಕಪ್ಪವಾಗಿ ಸಂಗ್ರಹಿಸಿಕೊಂಡು, ಅಲ್ಲಿಂದ ಶೃಂಗವಂತವೆಂಬ ಪರ್ವತವನ್ನು ದಾಟಿ, ಅದಕ್ಕೆ ಉತ್ತರದಲ್ಲಿದ್ದ ಹರಿವಂಶವೆಂಬ ಖಂಡವನ್ನು ಸೇರಿದನು. ಅಲ್ಲಿದ್ದ

ಯಕ್ಷ, ರಾಕ್ಷಸ, ವಿದ್ಯಾಧರರನ್ನೆಲ್ಲ ಜಯಿಸಿ ಉತ್ತಮವಸ್ತ್ರಗಳನ್ನೂ, ಕಲ್ಪವೃಕ್ಷದ ಎಲೆಗಳನ್ನೂ, ಯಾಗಯೋಗ್ಯವಾದ ಒಳ್ಳೇ ಕೃಷ್ಣಾಜಿನಗಳನ್ನೂ ಸಂಗ್ರಹಿಸಿದನು. ಅಲ್ಲಿಂದ ಇನ್ನೂ ಉತ್ತರಕ್ಕೆ ಹೋಗಿ ಅಲ್ಲಿದ್ದ ಒಂದು ನಗರವನ್ನು ಜಯಿಸಬೇಕೆಂದು ಯತ್ನಿಸಿದನು. ಇಷ್ಟರಲ್ಲಿ ಮಹಾಕಾಯವುಳ್ಳವರೂ, ಅತಿ ಬಲಾಢ್ಯರೂ ಆದ ಆ ನಗರದ ದ್ವಾರಪಾಲಕರು ಅರ್ಜುನನನ್ನು ನೋಡಿ, "ಅಯ್ಯಾ! ನಿನ್ನನ್ನು ನೋಡಿದರೆ ಒಳ್ಳೇ ಶುಭಲಕ್ಷಣವುಳ್ಳವನಾಗಿರುವೆ. ನೀನು ಈ ಪುರವನ್ನು ಹೇಗೂ ಜಯಿಸಲಾರೆ! ಹಿಂತಿರುಗಿ ಹೋಗು. ನೀನು ಇಲ್ಲಿಗೆ ಬಂದುದೇ ಸಾಕು. ಇತರ ದುರ್ಜಯನಾದ ನೀನು ಇದುವರೆಗಿನ ಜಯುಗಳಲ್ಲಿ ತೃಪ್ತನಾಗಿರು. ಈ ಪುರದಲ್ಲಿ ಪ್ರವೇಶಿಸುವನಾವನೂ ತಿರುಗಿ ಬದುಕಿಹೋಗಲಾರನು. ಓ ವೀರಾ! ನಿನ್ನಲ್ಲಿ ಪ್ರೇಮದಿಂದ ಇದನ್ನು ನಾವು ಹೇಳುವೆವು. ಇಲ್ಲಿ ಜಯಿಸಬೇಕಾದುದೊಂದೂ ನಿನ್ನ ಕಣ್ಣಿಗೆ ಬೀಳಲಾರದು. ಇವು ಉತ್ತರ ಕುರುದೇಶಗಳು. ಇಲ್ಲಿ ಯುದ್ಧವೂ ನಡೆಯಲಾರದು. ಮನುಷ್ಯದೇಹದಿಂದ ಇದರೊಳಗೆ ಪ್ರವೇಶಿಸುವುದೇ ಸಾಧ್ಯವಲ್ಲ. ಪ್ರವೇಶಿಸಿದರೂ, ಯಾವುದೂ ಇಲ್ಲಿ ಮನುಷ್ಯದೃಷ್ಟಿಗೆ ಗೋಚರಿಸುವುದಿಲ್ಲ. ಓ ಪುರುಷಶ್ರೇಷ್ಠಾ! ಇಲ್ಲಿ ನಿನಗೆ ಆಗಬೇಕಾದ ಕಾರ್ಯವೇನಾದರೂ ಇದ್ದರೆ ತಿಳಿಸು. ಅದನ್ನು ನಾವೇ ನಡೆಸಿಕೊಡುವೆವು" ಎಂದರು. ಅದಕ್ಕಾ ಅರ್ಜುನನು ನಗುತ್ತ ಅವರನ್ನು ಕುರಿತು "ನನ್ನಣ್ಣನಾದ ಧರ್ಮರಾಜನಿಗೆ ಚಕ್ರವರ್ತಿತ್ವವನ್ನು ಬಯಸಿ ನಾನು ಬಂದವನು. ಮನುಷ್ಯರು ಇಲ್ಲಿ ಪ್ರವೇಶಿಸುವುದು ವಿರುದ್ಧವಾಗಿದ್ದರೆ, ನಾನು ನಿಮ್ಮ ದೇಶದೊಳಗೆ ಬರಲಾರೆನು. ನೀವೇ ಧರ್ಮರಾಜನಿಗೆ ಏನಾದರೂ ಕಪ್ಪವನ್ನಾಗಿ ತಂದುಕೊಡಿರಿ. ಹಾಗಿಲ್ಲದಿದ್ದರೆ ನಾನು ಶ್ರೀಕೃಷ್ಣನೊಡಗೂಡಿ ಬಾಣಗಳಿಂದ ನಿಮ್ಮೊಡನೆ ಯುದ್ಧಕ್ಕೆ ನಿಲ್ಲಬೇಕಾಗುವುದು" ಎಂದನು.

ಈ ಮಾತನ್ನು ಕೇಳಿದೊಡನೆ ಆ ದ್ವಾರಪಾಲಕರು ದಿವ್ಯವಸ್ತ್ರಗಳು, ದಿವ್ಯಾಭರಣಗಳು, ದುಕೂಲಗಳು, ಪಟ್ಟೆಮಡಿಗಳು, ಕೃಷ್ಣಾಜಿನಗಳು, ಮುಂತಾದ ಹಲವು ಅಮೂಲ್ಯವಸ್ತುಗಳನ್ನು ಕಪ್ಪವಾಗಿ ತಂದು

ಕೊಟ್ಟರು. ಹೀಗೆ ಅರ್ಜುನನು ಉತ್ತರದಿಕ್ಕನ್ನೆಲ್ಲಾ ಜಯಿಸಿ, ಅಲ್ಲಲ್ಲಿ ಕ್ಷತ್ರಿಯರೊಡನೆಯೂ, ದಸ್ಯುಗಳೊಡನೆಯೂ ಅನೇಕಯುದ್ಧಗಳನ್ನು ಮಾಡಿ, ಎಲ್ಲರೂ ತಮಗೆ ಕಪ್ಪವನ್ನು ಒಪ್ಪಿಸುವಹಾಗೆ ಮಾಡಿದನು. ಈ ಮೂಲಕವಾಗಿ ಬಹುಧನವನ್ನೂ, ವಿವಿಧ ರತ್ನಗಳನ್ನೂ, ತಿತ್ತಿರಿಪಕ್ಷಿಗಳಂತೆ ವಿಚಿತ್ರವರ್ಣವುಳ್ಳವುಗಳಾಗಿಯೂ, ಗಿಳಿಯ ರೆಕ್ಕೆಯಂತೆ ಹಸುರಾಗಿಯೂ, ನವಿಲುಗಳಂತೆ ಅಂದವಾಗಿಯೂ ಇರುವ ಮಹಾವೇಗವುಳ್ಳ ಉತ್ತಮಾಶ್ವಗಳನ್ನೂ ಸಂಗ್ರಹಿಸಿಕೊಂಡು, ತನ್ನ ದೊಡ್ಡ ಸೈನ್ಯದೊಡನೆ ಹಿಂತಿರುಗಿದನು. ಇಂದ್ರಪ್ರಸ್ಥ ನಗರಕ್ಕೆ ಬಂದು ತಾನು ಸಂಪಾದಿಸಿತಂದ ಧನವಾಹನಾದಿಗಳಷ್ಟನ್ನೂ ಧರ್ಮರಾಜನಿಗೆ ಒಪ್ಪಿಸಿ, ಅವನಿಂದ ಅನುಜ್ಞೆಯನ್ನು ಪಡೆದು ತನ್ನ ಅರಮನೆಯನ್ನು ಸೇರಿದನು.

ಇದು ಇಪ್ಪತ್ತೊಂಭತ್ತನೆಯ ಅಧ್ಯಾಯವು.



## ಭೀಮಸೇನನ ಪೂರ್ವದಿಗ್ವಿಜಯವು.

ಓ ಜನಮೇಜಯರಾಜಾ! ಕೇಳು! ಅರ್ಜುನನು ಅತ್ತಲಾಗಿ ಉತ್ತರದಿಕ್ಕಿನಲ್ಲಿ ದಿಗ್ವಿಜಯಕ್ಕೆ ಹೊರಟಕಾಲದಲ್ಲಿಯೇ, ಭೀಮನೂ ಧರ್ಮರಾಜಾಜ್ಞೆಯಿಂದ ಪ್ರಬಲಸೈನ್ಯವನ್ನು ತೆಗೆದುಕೊಂಡು ಪೂರ್ವದಿಕ್ಕಿಗೆ ಹೊರಟನು. ಅವನು ಮೊದಲು ಪಾಂಚಾಲನಗರಿಗೆ ಹೋದನು. ಅವರನ್ನು ವಿವಿಧೋಪಾಯಗಳಿಂದ ಸಮಾಧಾನಗೊಳಿಸುತ್ತ, ಯುದ್ಧವಿಲ್ಲದೆಯೇ ಉಚಿತವಾದ ಕಪ್ಪವನ್ನು ತೆಗೆದುಕೊಂಡು, ಅಲ್ಲಿಂದ ವಿದೇಹದೇಶಕ್ಕೆ ಬಂದನು. ಅಲ್ಲಿ ವಿದೇಹವಾಸಿಗಳಾದ ಗಂಡಕರೆಂಬವರನ್ನು ಅಲ್ಪಕಾಲದಲ್ಲಿಯೇ ಯುದ್ಧದಲ್ಲಿ ಜಯಿಸಿ, ಅಲ್ಲಿಂದ ದಶಾರ್ಣದೇಶಕ್ಕೆ ಹೋದನು. ಅಲ್ಲಿನ ರಾಜನಾದ ಸುಧರ್ಮನೆಂಬವನು ಭೀಮಸೇನನೊಡನೆ ನಿರಾಯುಧನಾಗಿಯೇ ದೊಡ್ಡ ಯುದ್ಧವನ್ನು ಮಾಡಿ ಕೊನೆಗೆ ಪರಾಜಿತನಾದನು. ಆದರೆ ಭೀಮನು ಮಹಾಬಲಶಾಲಿಯಾದ ಅವನ ಕಾರ್ಯಕ್ಕೆ ಮೆಚ್ಚಿ, ಅವನನ್ನೇ ತನ್ನ ಸೇನೆಗಳಿಗೆಲ್ಲಾ ಮುಖ್ಯಾಧಿಪತಿಯನ್ನಾಗಿ ಮಾಡಿಕೊಂಡು, ಭೂಮಿ

ಯನ್ನು ನಡುಗಿಸುವಂತೆ ದೊಡ್ಡ ಸೈನ್ಯದೊಡಗೂಡಿ ಪೂರ್ವಾಭಿಮುಖ ವಾಗಿ ಇನ್ನೂ ಮುಂದೆ ಹೊರಟನು. ಅಲ್ಲಿ ಅಶ್ವಮೇಧೇಶ್ವರನೆಂಬ ರಾಜ ನನ್ನು ಅವನ ಸಮಸ್ತ ಸೈನ್ಯಗಳೊಡನೆ ಜಯಿಸಿ, ಅವನ ದೇಶವನ್ನೆಲ್ಲ ಸ್ವಾಧೀನಪಡಿಸಿಕೊಂಡನು. ಅಲ್ಲಿಂದ ಮುಂದೆ ಸ್ವಲ್ಪ ದಕ್ಷಿಣಕ್ಕೆ ತಿರುಗಿ, ಪುಳಿಂದನಗರವೆಂಬ ದೊಡ್ಡ ಪಟ್ಟಣವನ್ನು ಮುತ್ತಿ, ಸುಕುಮಾರ, ಸುಮಿ ತ್ರರೆಂಬ ರಾಜರಿಬ್ಬರನ್ನೂ ಜಯಿಸಿ ವಶಮಾಡಿಕೊಂಡನು. ಅಲ್ಲಿಂದ ಮುಂದೆ ಭೀಮನು ಧರ್ಮರಾಜಾಜ್ಞೆಯಿಂದ ಮಹಾವೀರ್ಯವುಳ್ಳ ಶಿಶು ಪಾಲನನ್ನು ಇದಿರಿಸಿದನು. ಈ ಭೀಮನ ಪ್ರಯತ್ನವನ್ನು ಕೇಳಿ ಚೇದಿ ರಾಜನಾದ ಶಿಶುಪಾಲನು, ತಾನಾಗಿಯೇ ಪಟ್ಟಣದಿಂದ ಹೊರಟುಬಂದು, ಭೀಮನನ್ನು ಸಂಧಿಸಿದನು. ಅವರಿಬ್ಬರೂ ಆಗ ಅನ್ಯೋನ್ಯವಾಗಿ ತಮ್ಮ ತಮ್ಮ ಕುಲವನ್ನು ತಿಳಿಸುತ್ತ ಕುಶಲಪ್ರಶ್ನೆಗಳನ್ನು ಮಾಡಿದರು. ಆಗ ಶಿಶುಪಾಲನು ನಗುಮುಖದಿಂದ ತನ್ನ ರಾಷ್ಟ್ರವನ್ನೇ ಭೀಮನಿಗೆ ಒಪ್ಪಿಸುವು ದಾಗಿ ಹೇಳಿ "ಭೀಮಸೇನಾ! ಇದೇನಿದು! ಇದೇನು ನಿನ್ನ ಪ್ರಯ ತ್ನವು? ನಾನು ಯಾರೆಂದು ಕಾಣೆಯಾ?" ಎಂದನು. ಆಗ ಭೀಮನು ಧರ್ಮರಾಜನ ಯಾಗಪ್ರಯತ್ನವನ್ನು ಅವನಿಗೆ ತಿಳಿಸಲು, ಆ ಶಿಶುಪಾಲ ನು ಅದಕ್ಕೆ ಸಮ್ಮತಿಸಿ, ಭೀಮನ ಕೋರಿಕೆಯೇನೋ ಅದನ್ನು ನಡೆಸುವು ದಾಗಿ ಒಪ್ಪಿದನು. ಆಮೇಲೆ ಭೀಮನು ಶಿಶುಪಾಲನಿಂದ ಸತ್ಕೃತನಾಗಿ, ಹದಿಮೂರು ರಾತ್ರಿಗಳವರೆಗೆ ಅಲ್ಲಿಯೇ ಸುಖವಾಗಿದ್ದು, ಆಮೇಲೆ ತನ್ನ ಸೈನ್ಯವನ್ನು ತೆಗೆದುಕೊಂಡು ಮುಂದೆ ಪ್ರಯಾಣಮಾಡಿದನು.

ಇದು ಮೂವತ್ತನೆಯ ಅಧ್ಯಾಯವು.

---

{ ಭೀಮನು ಪೂರ್ವದಿಕ್ಕನ್ನೆಲ್ಲ ಜಯಿಸಿ, ಹಿಂತಿರುಗಿ ಇಂದ್ರಪ್ರಸ್ಥಕ್ಕೆ ಬಂದುದು. }

ಆಮೇಲೆ ಭೀಮನು ಕುಮಾರವಿಷಯವೆಂಬ ದೇಶಕ್ಕೆ ರಾಜನಾದ ಶ್ರೇಣಿಮಂತನನ್ನೂ, ಕೋಸಲರಾಜನಾದ ಬೃಹದ್ಬಲನನ್ನೂ ಜಯಿಸಿದನು.

ಆ ಬೃಹದ್ಬಲನೆಂಬವನು ಮಹಾಬಲಾಢ್ಯನು! ಸದಾ ಯಜ್ಞಶೀಲನು. ಮತ್ತು ಧರ್ಮಜ್ಞನು! ಆದುದರಿಂದ ಭೀಮನು ಅಯೋಧ್ಯೆಯಲ್ಲಿದ್ದ ಅವನಲ್ಲಿ ಅತಿಕಠಿನವಾಗಿ ಪ್ರವರ್ತಿಸದೆ, ಉಪಾಯದಿಂದಲೇ ಅವನನ್ನು ಜಯಿಸಿ, ಅಲ್ಲಿಂದ ಗೋಪಾಲಕಕ್ಷವೆಂಬ ಪ್ರದೇಶವನ್ನೂ, ಉತ್ತರ ಕೋಸಲಗಳನ್ನೂ ಸ್ವಾಧೀನಪಡಿಸಿಕೊಂಡನು. ಮಲ್ಲರಾಜನಾದ ಪಾರ್ಥಿವನೆಂಬವನನ್ನು ಜಯಿಸಿ, ಅಲ್ಲಿಂದಮುಂದೆ ಹಿಮವತ್ಪರ್ವತಕ್ಕೆ ಪಕ್ಕದಲ್ಲಿರುವ ಜಲಪ್ರಾಯವಾದ ಅನೇಕದೇಶಗಳನ್ನು ಸ್ವಲ್ಪಕಾಲದಲ್ಲಿಯೇ ವಶಮಾಡಿಕೊಂಡನು. ಹೀಗೆ ಹಲವುದೇಶಗಳನ್ನು ಜಯಿಸುತ್ತ ಭಲ್ಲಾಟದೇಶಕ್ಕೆ ಹೋಗಿ, ಅದರ ಸಮೀಪದಲ್ಲಿರುವ ಶುಕ್ತಿಮಂತವೆಂಬ ಪರ್ವತವನ್ನು ವಶಮಾಡಿಕೊಂಡನು. ಅಲ್ಲಿಂದಮುಂದೆ ಕಾಶಿರಾಜನಾದ ಸುಬಾಹುವೆಂಬವನೊಡನೆ ಯುದ್ಧವನ್ನು ಹೂಡಿ, ಹಿಂದೆ ಎಂತಹ ಯುದ್ಧದಲ್ಲಿಯೂ ಪರಾಜಿತನಾಗದಿದ್ದ ಅವನನ್ನೂ ಜಯಿಸಿದನು. ಆಮೇಲೆ ಸುಪಾರ್ಶ್ವವೆಂಬ ಪರ್ವತದ ಪಕ್ಕದಲ್ಲಿ ಕ್ರಥನೆಂಬ ಪ್ರಬಲರಾಜನು ತನ್ನ ಬಲದ ಕೊಬ್ಬಿನಿಂದ ಯುದ್ಧಕ್ಕೆ ಬರಲು, ಅವನನ್ನೂ ಜಯಿಸಿದನು. ಅಲ್ಲಿಂದ ಮುಂದೆ ಕ್ರಮವಾಗಿ ಮತ್ಸ್ಯ, ಮಲದ, ಅನಘ, ಅಭಯ, ಪಶುಭೂಮಿಗಳೆಂಬ ದೇಶಗಳನ್ನೆಲ್ಲ ಕ್ರಮವಾಗಿ ಜಯಿಸಿ, ಅಲ್ಲಿಂದ ಹಿಂತಿರುಗಿ ಮದಧಾರವೆಂಬ ಪರ್ವತಕ್ಕೂ, ಸೋಮಧೇಯವೆಂಬ ದೇಶಕ್ಕೂ ಹೋಗಿ, ಅವುಗಳನ್ನೆಲ್ಲ ವಶಮಾಡಿಕೊಂಡು, ಉತ್ತರಾಭಿಮುಖವಾಗಿ ಹೊರಟು, ಆ ದಾರಿಯಲ್ಲಿ ಮೊದಲು ವತ್ಸಭೂಮಿಯನ್ನೂ, ಆಮೇಲೆ ಭರ್ಗದೇಶದ ರಾಜನನ್ನೂ, ನಿಷಾದಪತಿಯನ್ನೂ, ಮಣಿಮಂತನೇ ಮೊದಲಾದ ಇನ್ನೂ ಅನೇಕ ರಾಜರನ್ನೂ ಜಯಿಸಿದನು. ಅಲ್ಲಿಂದಮುಂದೆ ದಕ್ಷಿಣಮಲ್ಲದೇಶಗಳನ್ನು ಸ್ವಾಧೀನಪಡಿಸಿಕೊಂಡನು. ಅದರಿಂದಾಚೆಗೆ ಭೋಗವಂತವೆಂಬ ಪರ್ವತವನ್ನು ಬಹುಸುಲಭವಾಗಿ ಜಯಿಸಿ, ಶರ್ಮಕರನ್ನೂ, ವರ್ಮಕರನ್ನೂ, ಸಮಾಧಾನಪೂರ್ವಕವಾಗಿ ವಶಪಡಿಸಿಕೊಂಡನು. ಅಲ್ಲಿಂದ ವಿದೇಹದೇಶದ ಜನಕನೆಂಬ (ಜನಕಕುಲದ) ರಾಜನೊಬ್ಬನನ್ನು ಉಪಾಯದಿಂದ ಜಯಿಸಿದನು. ಭೀಮನು ಆ ವಿದೇಹದೇಶದಲ್ಲಿದ್ದುಕೊಂಡೇ, ಇಂದ್ರಪರ್ವತಕ್ಕೆ ಸುತ್ತುಮುತ್ತಲೂ ಇದ್ದ, ಶಕರು, ಬರ್ಬರರು ಮೊದಲಾದ

ಏಳುಮಂದಿ ಕಿರಾತಾಧಿಪತಿಗಳನ್ನೂ ತಂತ್ರದಿಂದ ಜಯಿಸಿದನು. ಅಲ್ಲಿಂದಮುಂದೆ ಹೊರಟು, ಪ್ರಬಲಸೈನ್ಯವುಳ್ಳ ಸುಹ್ಮ ಪ್ರಸುಹ್ಮರೆಂಬ ರಾಜರನ್ನು ಜಯಿಸಿ, ಮಗಧದೇಶಕ್ಕೆ ದಂಡೆತ್ತಿ ಹೋದನು. ಅಲ್ಲಿ ದಂಡಧಾರರೆಂಬ ರಾಜರನ್ನೂ, ಇನ್ನೂ ಇತರರಾಜರನ್ನೂ ಜಯಿಸಿ, ಅವರೆಲ್ಲರೊಡನೆ ಆ ದೇಶಕ್ಕೆ ಮುಖ್ಯರಾಜಧಾನಿಯಾದ ಗಿರಿವ್ರಜಕ್ಕೆ ಹೋದನು. ಅಲ್ಲಿಗೆ ರಾಜನಾದ ಜರಾಸಂಧಪುತ್ರನನ್ನು ಸಮಾಧಾನಪೂರ್ವಕವಾಗಿಯೇ ತಮಗೆ ಕಪ್ಪವನ್ನು ಕಟ್ಟುವಂತೆ ಮಾಡಿದನು. ಅಲ್ಲಿಂದ ಮುಂದೆ, ತನಗೆ ವಶರಾದ ಎಲ್ಲಾ ರಾಜರನ್ನೂ ಸಂಗಡ ಕರೆದುಕೊಂಡು ಭೂಮಿಯುನ್ನು ನಡುಗಿಸುವಂತೆ, ದೊಡ್ಡ ಸೈನ್ಯದೊಡನೆ, ಕರ್ಣನನ್ನು ಇದಿರಿಸಿದನು. ಅವನೊಡನೆ ಯುದ್ಧಮಾಡಿ ಜಯಿಸಿ, ಅವನನ್ನೂ ತನಗೆ ವಶಮಾಡಿಕೊಂಡು ಅದರಿಂದಾಚೆಗೆ ಪರ್ವತವಾಸಿಗಳಾದ ಅನೇಕರಾಜರನ್ನು ಸ್ವಾಧೀನಪಡಿಸಿಕೊಂಡನು. ಆಮೇಲೆ ಮೋದಾಗಿರಿಯೆಂಬ ಪರ್ವತದಲ್ಲಿ ಮಹಾಬಲವುಳ್ಳ ರಾಜನೊಬ್ಬನನ್ನು ಪ್ರಬಲಯುದ್ಧದಲ್ಲಿ ಕೊಂದುಹಾಕಿದನು. ಆಮೇಲೆ ಪುಂಡ್ರದೇಶದ ರಾಜನಾದ ಪೌಂಡ್ರಕವಾಸುದೇವನನ್ನು ಇದಿರಿಸಿದನು. ಭೀಮನನ್ನು ಕಂಡೊಡನೆ ಆ ಪೌಂಡ್ರಕನು, ಕೃಷ್ಣನಭಯದಿಂದ "ತಾನು ಯುದ್ಧಕ್ಕೆ ನಿಲ್ಲುವುದಿಲ್ಲ"ವೆಂದು, ತಾನಾಗಿಯೇ ಭೀಮನಿಗೆ ಕಪ್ಪವನ್ನು ತಂದೊಪ್ಪಿಸಿಬಿಟ್ಟನು. ಅಲ್ಲಿಂದಮುಂದೆ ಭೀಮನು, ಕೌಶಿಕೀನದಿಯ ತೀರದಲ್ಲಿ ಮಹೌಜಸ್ಸೆಂಬ ರಾಜನನ್ನಿದಿರಿಸಿದನು. ಅಲ್ಲಿ ಮಹಾಪರಾಕ್ರಮವುಳ್ಳವರೂ, ಪ್ರಬಲ ಸೇನಾಸಮೃದ್ಧಿಯುಳ್ಳವರೂ ಆದ ಇಬ್ಬರು ವೀರರನ್ನು ಯುದ್ಧದಲ್ಲಿ ಜಯಿಸಿ, ಅಲ್ಲಿಂದಮುಂದೆ ವಂಗರಾಜನನ್ನೂ, ಸಮುದ್ರಸೇನ, ಚಂದ್ರಸೇನ, ತಾಮ್ರಲಿಪ್ತರೆಂಬ ರಾಜರನ್ನೂ, ಅದರಿಂದಾಚೆಗೆ ಖರ್ವಟ, ಸುಹ್ಮದೇಶಾಧಿಪತಿಗಳನ್ನೂ, ಸಮುದ್ರತೀರವಾಸಿಗಳಾದ ಅನೇಕ ಮ್ಲೇಚ್ಛಸೈನ್ಯಗಳನ್ನೂ ಕ್ರಮವಾಗಿ ಜಯಿಸುತ್ತ ಬಂದನು. ಹೀಗೆ ಭೀಮನು, ನಾನಾದೇಶಗಳನ್ನು ಜಯಿಸಿ, ಅವರಿಂದ ಅಮಿತಧನವನ್ನು ತೆಗೆದುಕೊಂಡು, ಲೌಹಿತ್ಯವೆಂಬ ದೇಶಕ್ಕೆ ಹೋಗಿ, ಅಲ್ಲಿನ ಸಮುದ್ರತೀರದ ಮ್ಲೇಚ್ಛರಾಜರನ್ನೆಲ್ಲ ಜಯಿಸಿ, ಅವರಿಂದ ಕಪ್ಪಗಳನ್ನೂ, ವಿವಿಧ ರತ್ನಗಳನ್ನೂ, ಅಗರು, ಚಂದನ, ವಸ್ತ್ರ, ಕಂಬಳಿ, ಚಿನ್ನ, ಬೆಳ್ಳಿ ಮತ್ತು ಹವಳ

ಮುಂತಾದ ಅಮೂಲ್ಯವಸ್ತುಗಳನ್ನೆಲ್ಲ ಕಾಣಿಕೆಯಾಗಿ ಪಡೆದನು. ಅವರು ನೂರುಕೋಟಿ ಸಂಖ್ಯೆಯುಳ್ಳ ಹೊನ್ನುಗಳನ್ನು ತಂದು ಭೀಮನಿಗೆ ದೊಡ್ಡ ಕನಕವರ್ಷವನ್ನು ಮಾಡಿದರು. ಆಮೇಲೆ ಭೀಮನು ಅಲ್ಲಿಂದ ಹಿಂತಿರುಗಿ ಇಂದ್ರಪ್ರಸ್ಥಕ್ಕೆ ಬಂದು, ತಾನು ತಂದ ಧನರಾಶಿಯನ್ನೆಲ್ಲ ಧರ್ಮರಾಜನಿಗೆ ಒಪ್ಪಿಸಿದನು.

ಇದು ಮೂವತ್ತೊಂದನೆಯ ಅಧ್ಯಾಯವು.



ದಕ್ಷಿಣದಿಗ್ವಿಜಯದಲ್ಲಿ ಸಹದೇವನಿಗೆ ನೀಲನೊಡನೆ ಯುದ್ಧವು. ನೀಲನಿಗೆ ಅಗ್ನಿದೇವನ ಸಹಾಯವಿದ್ದುದರಿಂದ ಸಹದೇವನು ಅವನನ್ನು ಜಯಿಸಲಾರದೆ ಅಗ್ನಿಯನ್ನು ಸ್ತುತಿಸಿದುದು. ಅಗ್ನಿಯ ಆಜ್ಞೆಯಿಂದ ನೀಲನು ಸಹದೇವನನ್ನು ಸತ್ಕರಿಸಿದುದು. ವಿಭೀಷಣನಿಂದ ಕಪ್ಪವನ್ನು ತೆಗೆಯಲು ಘಟೋತ್ಕಚನನ್ನು ಕಳುಹಿಸಿಕೊಟ್ಟುದು.

ಓ ಜನಮೇಜಯರಾಜಾ! ಸಹದೇವನು ಧರ್ಮರಾಜನಿಂದ ಸತ್ಕೃತನಾಗಿ, ದೊಡ್ಡಸೇನೆಯೊಡನೆ ದಕ್ಷಿಣದಿಕ್ಕಿಗೆ ಹೊರಟನು. ಇವನು ಆ ಮಾರ್ಗದಲ್ಲಿದ್ದ ಶೂರಸೇನದೇಶಗಳನ್ನು ಮೊದಲೇ ಸಂಪೂರ್ಣವಾಗಿ ಜಯಿಸಿದ್ದವನು. ಅಲ್ಲಿಂದಮುಂದೆ ಮತ್ಸ್ಯದೇಶಕ್ಕೆ ಹೋಗಿ, ಅಲ್ಲಿನ ರಾಜನನ್ನು ಬಲ್ಕಾರದಿಂದ ವಶಪಡಿಸಿಕೊಂಡನು. ದೊಡ್ಡ ರಾಜರಿಗೂ ರಾಜನೆನಿಸಿಕೊಂಡಿದ್ದ ದಂತವಕ್ತ್ರನನ್ನು ಜಯಿಸಿ, ಅವನು ಕಪ್ಪವನ್ನು ಕೊಡುವಹಾಗೆ ಮಾಡಿ, ಆಮೇಲೆ ಅವನನ್ನು ಅದೇ ರಾಜ್ಯದಲ್ಲಿರಿಸಿದನು. ಅಲ್ಲಿಂದಾಚೆಗೆ ಕ್ರಮವಾಗಿ ಸುಕುಮಾರ, ಸುಮಿತ್ರರೆಂಬ ರಾಜರನ್ನೂ, ಮತ್ಸ್ಯದೇಶಕ್ಕೆ ಪಶ್ಚಿಮದಲ್ಲಿದ್ದ ಪಟಚ್ಚರರೆಂಬ ಚೋರರಾಜರನ್ನೂ ಜಯಿಸಿ ಅಲ್ಲಿಂದಾಚೆಗೆ ನಿಷಾದದೇಶವನ್ನೂ, ಗೋಶೃಂಗವೆಂಬ ಪರ್ವತವನ್ನೂ ವಶಪಡಿಸಿಕೊಂಡನು. ಆಮೇಲೆ, ಶ್ರೇಣಿಮಂತನೆಂಬ ರಾಜನನ್ನೂ, ನರರಾಷ್ಟ್ರವೆಂಬ ದೇಶವನ್ನೂ ಜಯಿಸಿ, ಕುಂತಿಭೋಜನ ನಗರಕ್ಕೆ ಹೋದ

ನು. ಆ ಸಹದೇವನನ್ನು ಕಂಡೊಡನೆ ಅವನು, ಪ್ರೀತಿಯಿಂದ ಇವನ ಆಜ್ಞೆಗೆ ಬದ್ಧನಾಗಿ ಕಪ್ಪವನ್ನೊಪ್ಪಿಸಿದನು. ಆಮೇಲೆ ಚರ್ಮಣ್ವತೀ ನದಿಯ ತೀರದಲ್ಲಿ ತನ್ನ ತಂದೆಗೆ ಶತ್ರುವೂ, ಜಂಭಕನ ಮಗನೂ ಆದ ಒಬ್ಬ ರಾಜನನ್ನು ಇದಿರಿಸಿದನು. ಈ ಜಂಭಕಪುತ್ರನು ಹಿಂದೊಮ್ಮೆ ಕೃಷ್ಣನನ್ನಿದಿರಿಸಿದಾಗ ಕೃಷ್ಣನ ಕೈಯಿಂದ ಹೇಗೋ ತಪ್ಪಿಸಿಕೊಂಡು ಬದುಕಿಬಂದನು. ಸಹದೇವನು ಈಗ ಅವನನ್ನು ಜಯಿಸಿ, ಇನ್ನೂ ಮುಂದೆ ದಕ್ಷಿಣಮುಖವಾಗಿ ಹೊರಟನು. ಅಲ್ಲಿಂದಮುಂದೆ ಸೇಕರನ್ನೂ, ಅಪರಸೇಕರರನ್ನೂ ಜಯಿಸಿ, ಅವರಿಂದ ನಾನಾವಿಧ ರತ್ನಗಳನ್ನೂ, ಧನವನ್ನೂ ಕಪ್ಪವಾಗಿ ತೆಗೆದುಕೊಂಡು, ಮುಂದೆ ನರ್ಮದಾ ನದಿಯತೀರಕ್ಕೆ ಬಂದನು. ಅಲ್ಲಿದ್ದ ನರಕಾಸುರಪುತ್ರನಾದ ಭಗದತ್ತನು ಮೊದಲೇ ಅರ್ಜುನನಿಗೆ ಕಪ್ಪವನ್ನು ಕೊಟ್ಟಿರುವುದಾಗಿ ಕೇಳಿ, ಅಲ್ಲಿಂದ ಹಿಂತಿರುಗಿಬಟ್ಟನು. ಆಮೇಲೆ ದೊಡ್ಡ ಸೇನಾಬಲವುಳ್ಳ ಅವಂತಿದೇಶದ ವಿಂದಾನುವಿಂದರನ್ನು ಯುದ್ಧದಲ್ಲಿ ಜಯಿಸಿ, ಅವರಿಂದ ಸಮೃದ್ಧವಾದ ರತ್ನಗಳನ್ನು ಪಡೆದು, ಅಲ್ಲಿಂದ ಭೋಜಕಟವೆಂಬ ಪಟ್ಟಣಕ್ಕೆ ಹೋದನು. ಅಲ್ಲಿ ಎಂಥವರಿಗೂ ದುರ್ಜಯನಾದ ಭೀಷ್ಮಕನನ್ನೂ, ಕೋಸಲರಾಜನನ್ನೂ ಜಯಿಸಿದನು. ಆಮೇಲೆ ವೇಣಾನದೀ ತೀರಕ್ಕೆಲ್ಲ ಅಧಿಪತಿಯಾಗಿದ್ದ ಒಬ್ಬ ರಾಜನನ್ನೂ, ಅದರ ಪಕ್ಕದಲ್ಲಿದ್ದ ಅರಣ್ಯವಾಸಿಗಳನ್ನೂ, ಹಾಗೆಯೇ ಕ್ರಮವಾಗಿ, ಪ್ರಾಕೋಟಕರು, ನಾಟಕೇಯರು, ಹೇರಂಬಕರೆಂಬ ರಾಜರನ್ನೂ ಜಯಿಸಿದನು. ಅಲ್ಲಿಂದಮುಂದೆ ಮಾರುಧವೆಂಬ ರಮ್ಯವಾದ ಗ್ರಾಮವೊಂದನ್ನು ವಶಪಡಿಸಿಕೊಂಡನು. ಆಮೇಲೆ ನಾಚೀನರು, ಅರ್ಬುಕರೆಂಬ ಅಡವಿಯ ರಾಜರನ್ನೂ, ವಾತಾಧಿಪನೆಂಬ ರಾಜನನ್ನೂ, ಪುಳಿಂದರೆಂಬ ಕೆಲವು ಜಾತಿಯವರನ್ನೂ ಯುದ್ಧದಲ್ಲಿ ಜಯಿಸಿ, ಇನ್ನೂ ಮುಂದೆ ಹೋದನು. ಅಲ್ಲಿ ಪಾಂಡ್ಯರಾಜನೊಡನೆ ಒಂದುದಿನದ ಯುದ್ಧವನ್ನು ಮಾಡಿ, ಅವನನ್ನು ಜಯಿಸಿ ಅಲ್ಲಿಂದ ಕಿಷ್ಕಿಂಧೆಯೆಂಬ ಗುಹೆಯನ್ನು ಸಮಿಾಪಿಸಿದನು. ಮೊದಲು ವಾಲಿಯಿಂದ ರಕ್ಷಿತವಾಗಿ, ಆಮೇಲೆ ರಾಮನ ಆಶ್ರಿತನಾದ ಸುಗ್ರೀವನ ರಕ್ಷಣೆಯಲ್ಲಿದ್ದ ಆ ಗುಹೆಯೊಳಗೆ ಪ್ರವೇಶಿಸಿ, ಅಲ್ಲಿದ್ದ ಮೈಂದ ದ್ವಿವಿದರೆಂಬ ವಾನರರಾಜರೊಡನೆ ಏಳುದಿನಗಳವರೆಗೆ ಹೋ

ರಾಡಿದನು. ಆ ಯುದ್ಧದಲ್ಲಿ ಯಾರಿಗೂ ಜಯವಾಗಲಿಲ್ಲ. ಆಗ ಆ ವಾನರರಾಜರು ಸಹದೇವನ ಪರಾಕ್ರಮಕ್ಕೆ ಮೆಚ್ಚಿ ತಾವಾಗಿಯೇ ಪ್ರೀತಿಯಿಂದ ಅವನನ್ನು ಕುರಿತು “ ಪಾಂಡುಕುಮಾರಾ ! ಇದೋ ! ಇಲ್ಲಿ ನಿನಗೆ ಬೇಕಾದ ರತ್ನಗಳೆಲ್ಲವನ್ನೂ ತೆಗೆದುಕೊಂಡುಹೋಗು. ಮಹಾತ್ಮನಾದ ಧರ್ಮರಾಜನ ಯಾಗವು ನಿರ್ವಿಘ್ನವಾಗಿ ನೆರವೇರಲಿ” ಎಂದು ಅಮೂಲ್ಯರತ್ನಗಳನ್ನು ಕೊಟ್ಟು ಕಳುಹಿಸಿದರು. ಸಹದೇವನು ಅಲ್ಲಿಂದ ಮುಂದೆ ಮಾಹಿಷ್ಮತಿಯೆಂಬ ಪಟ್ಟಣವನ್ನು ಸೇರಿದನು. ಅಲ್ಲಿನ ರಾಜನಾದ ನೀಲನೊಡನೆ ಸಹದೇವನಿಗೆ ಭಯಂಕರಯುದ್ಧವು ನಡೆಯಿತು. ಸಹದೇವನಿಗೆ ಅನೇಕ ಸೈನ್ಯಗಳು ನಷ್ಟವಾದುವು. ಸಹದೇವನ ಪ್ರಾಣಕ್ಕೇ ಸಂದೇಹವುಂಟಾಯಿತು. ಆ ನೀಲನಿಗೆ ಅಗ್ನಿಯ ಸಹಾಯವಿದ್ದುದರಿಂದ, ಸಹದೇವನ ಸೈನ್ಯದಲ್ಲಿದ್ದ ರಥ, ಗಜ, ತುರಗ, ಪದಾತಿಗಳೂ, ಯುದ್ಧಕವಚಗಳೂ ಮೊತ್ತಕ್ಕೆ ಅಗ್ನಿಜ್ವಾಲೆಯಲ್ಲಿ ಉರಿಯುವಂತೆ ಕಾಣಿಸಿತು. ಇದನ್ನು ನೋಡಿ ಸಹದೇವನು ದಿಗ್ಭ್ರಮೆಹಿಡಿದಂತಾದನು. ಮುಂದೇನುಮಾಡುವುದಕ್ಕೂ ಅವನಿಗೆ ಶಕ್ತಿಯಿಲ್ಲದಂತಾಯಿತು. ವೈಶಂಪಾಯನನು ಜನಮೇಜಯರಾಜನಿಗೆ ಈ ಮಾತನ್ನು ಹೇಳುತ್ತಿರುವಾಗಲೇ ನಡುವೆ ಜನಮೇಜಯನು “ ಓ ಮುನೀಂದ್ರಾ ! ಸಹದೇವನಾದರೋ ಯಾಗಕಾರ್ಯಕ್ಕಾಗಿ ಬಂದವನು. ಅಗ್ನಿತೃಪ್ತಿಗಾಗಿ ನಡೆಯತಕ್ಕ ಈ ಪ್ರಯತ್ನಕ್ಕೆ ಅಗ್ನಿಯೇ ವಿರೋಧಿಯಾಗಿ ನಿಲ್ಲಲು ಕಾರಣವೇನು ? ” ಈ ವಿವರವನ್ನು ತಿಳಿಸಬೇಕು ಎಂದನು.

ಆಗ ವೈಶಂಪಾಯನನು “ ರಾಜೇಂದ್ರಾ ! ಕೇಳು ! ಹಿಂದೆ ಅಗ್ನಿದೇವನು ಮಾಹಿಷ್ಮತೀನಗರದಲ್ಲಿರುತ್ತ, ಪರಸ್ತ್ರೀಯೊಬ್ಬಳನ್ನು ಕಾಮಿಸಿದುದಾಗಿ ನೀನು ಕೇಳಿರಬಹುದು. ಆ ಮಾಹಿಷ್ಮತೀರಾಜನ ಮಗಳೊಬ್ಬಳು ಬಹಳ ಸುಂದರಿಯಾಗಿದ್ದಳು. ಆ ಕನ್ನಿಕೆಯು ತನ್ನ ತಂದೆಗೆ ಆಗಾಗ ಹೋಮಕಾಲವನ್ನು ತಿಳಿಸುವುದಕ್ಕಾಗಿ ಅಗ್ನಿಹೋತ್ರದ ಸಮೀಪದಲ್ಲಿದ್ದುಕೊಂಡು, ಯಾವಾಗಲೂ ಅದನ್ನು ಆರಿಹೋಗದಂತೆ ಕಾಪಾಡಿಕೊಳ್ಳುತ್ತಿದ್ದಳು. ಆಗಾಗ ಅದನ್ನು ಬೀಸಣಿಗೆಯಿಂದ ಬೀಸಿ ಉರಿಸುತ್ತಿದ್ದಳು.

ಹೀಗಿರುವಾಗ ಒಮ್ಮೆ ಅವಳು ಬೀಸಣಿಗೆಯಿಂದ ಎಷ್ಟೆಷ್ಟು ಬೀಸಿದರೂ, ಅಗ್ನಿಯು ಜ್ವಲಿಸಲಿಲ್ಲ. ಆ ಸುಕುಮಾರಿಯು ತೊಂಡೆಹಣ್ಣಿನಂತಿರುವ ತನ್ನ ತುಟಿಯನ್ನು ಅಗ್ನಿಯ ಸಮೀಪಕ್ಕೆ ತಂದು, ಬಾಯಿಂದ ಊದುವ ವರೆಗೆ ಆ ಅಗ್ನಿಯು ಉರಿಯಲೇ ಇಲ್ಲ. ಅವಳು ಬಾಯಿಂದೂದಿದಮೇಲೆ, ಅಗ್ನಿಯು ಜ್ವಲಿಸುವುದಕ್ಕಾರಂಭಿಸಿತು. ಇದರ ಮರ್ಮವೇನೆಂದು ನೀಲ ರಾಜನೂ, ಮತ್ತು ಅವನ ಕಡೆಯವರೂ ಯೋಚಿಸುತ್ತಿರುವಷ್ಟರಲ್ಲಿಯೇ ಅಗ್ನಿದೇವನು ಒಬ್ಬ ಬ್ರಾಹ್ಮಣರೂಪದಿಂದ ತಾನಾಗಿ ಬಂದು, ಆ ರಾಜ ಕನ್ಯೆಯನ್ನು ಸಮೀಪಿಸಿ, ಆ ರಾಜಕುಮಾರಿಯಲ್ಲಿ ತನಗಿರುವ ಮೋಹ ವನ್ನು ಸೂಚಿಸಿದನು. ಧರ್ಮನಿರತನಾದ ನೀಲನಾದರೋ ಶಾಸ್ತ್ರೀಯ ವಾದ ಬೋಧನೆಗಳಿಂದ ಅನೇಕವಿಧವಾಗಿ ಅಗ್ನಿಯನ್ನು ನಿವಾರಿಸಲು, ಆಗ ಅಗ್ನಿಗೆ ನೀಲನಮೇಲೆ ಪ್ರಬಲವಾದ ಕ್ರೋಧವುಂಟಾಗಿ, ತನ್ನ ಜ್ವಾಲೆ ಗಳನ್ನು ವಿಶೇಷವಾಗಿ ಕೆದರಿ, ಎಲ್ಲರನ್ನೂ ದಹಿಸಿಬಿಡುವಂತೆ ಉರಿಯುವು ದಕ್ಕಾರಂಭಿಸಿದನು. ಇದನ್ನು ನೋಡಿ ನೀಲನು ಬೆಚ್ಚರಗೊಂಡು, ಅಗ್ನಿ ಯಲ್ಲಿ ಶರಣಾಗತನಾಗಿ ಬ್ರಾಹ್ಮಣರೂಪದಿಂದಿದ್ದ ಅವನಿಗೆ ತನ್ನ ಮಗ ಳನ್ನು ವಿವಾಹಮಾಡಿಕೊಟ್ಟನು. ಅಲ್ಲಿಂದೀಚೆಗೆ ಅಗ್ನಿದೇವನಿಗೆ ನೀಲ ನಲ್ಲಿ ಪೂರ್ಣಾನುಗ್ರಹವುಂಟಾಯಿತು. ಬೇಕಾದ ವರವನ್ನು ಬೇಡಿಕೊಳ್ಳು ವಂತೆ ಅಗ್ನಿಯು ನೀಲನನ್ನು ಪ್ರೇರಿಸಿದನು. ಆಗ ನೀಲನು ತನ್ನ ಸೈನ್ಯ ಕ್ಕೆ ಭಯವಿಲ್ಲದಂತೆ ಯಾವಾಗಲೂ ರಕ್ಷಿಸುತ್ತಿರಬೇಕೆಂದು ವರವನ್ನು ಬೇಡಿಕೊಂಡನು. ಅದು ಮೊದಲು ನೀಲನನ್ನು ಯಾವ ವೈರಿರಾಜರು ಇದಿರಿಸಿದರೂ, ಅಗ್ನಿಯಿಂದ ದಗ್ಧರಾಗುವರು. ಓ ಜನಮೇಜಯರಾಜಾ! ಇದಲ್ಲದೆ ಆ ಮಾಹಿಷ್ಮತೀನಗರದಲ್ಲಿ ಅದುವರೆಗೆ ಸ್ತ್ರೀಯರಿಗೆ ಸ್ವಾತಂತ್ರ್ಯ ವಿಲ್ಲದೆ ಬಹಳ ಕಟ್ಟುಪಾಡುಗಳಿದ್ದುವು. ಅಗ್ನಿಯು ಅಲ್ಲಿನ ಸ್ತ್ರೀಯರಿಗೆ ಮುಂದೆ ಅಂತಹ ಕಟ್ಟುಪಾಡಿಲ್ಲದಂತೆ ವರವನ್ನು ಕೊಟ್ಟನು. ಇದ ರಿಂದ ಅಲ್ಲಿನ ಸುಂದರಿಯರು ತಮ್ಮಿಷ್ಟಾನುಸಾರವಾಗಿ ಸ್ವತಂತ್ರರಾಗಿರು ವರು. ಮತ್ತು ಈ ಅಗ್ನಿಭಯಕ್ಕಾಗಿ ಅದುಮೊದಲು ಯಾವ ಶತ್ರು ರಾಜರೂ ಆ ಮಾಹಿಷ್ಮತಿಗೆ ಕಾಲಿಕ್ಕದೆ ದೂರದಲ್ಲಿಯೇ ಇರುವರು.

ಅಗ್ನಿಯು ಆ ಮಾಹಿಷ್ಮತಿಯಲ್ಲಿ ನಿತ್ಯವಾಸಮಾಡುತ್ತ ಅಲ್ಲಿನ ರಾಜರನ್ನು ಕಾಪಾಡುವುದಕ್ಕೆ ಇದೇ ಕಾರಣವು.

ಓ ಜನಮೇಜಯರಾಜಾ! ಸಹದೇವನು ಈ ಯುದ್ಧದಲ್ಲಿ ತಲೆಯಿಕ್ಕಿ, ತನ್ನ ಸೈನ್ಯವೆಲ್ಲಾ ಉರಿಯಲ್ಲಿ ಸಿಕ್ಕಿ ಭಯದಿಂದ ತತ್ತಳಿಸುತ್ತಿರುವುದನ್ನು ಕಂಡನು. ಆದರೇನು? ಆ ಸ್ಥಿತಿಯಲ್ಲಿಯೂ ಸಹದೇವನು ಸ್ವಲ್ಪ ಮಾತ್ರವೂ ಎದೆಗುಂದದೆ, ನಿಶ್ಚಲವಾದ ಪರ್ವತದಂತೆ ಇದ್ದು, ಆಚಮನವನ್ನು ಮಾಡಿ ಶುಚಿಯಾಗಿ ಅಗ್ನಿಯನ್ನು ಹೀಗೆಂದು ಸ್ತುತಿಸುವನು.

“ಓ ಕೃಷ್ಣವರ್ತ್ಮಾ! ಈ ನನ್ನ ಪ್ರಯತ್ನವೆಲ್ಲ ನಿನಗಾಗಿಯೇ! ದೇವತೆಗಳಿಗೆ ನೀನು ಮುಖವೆಂದೆನಿಸಿರುವೆ. ಯಜ್ಞಸ್ವರೂಪಿಯೂ ನೀನೇ. ಎಲ್ಲವನ್ನೂ ಪರಿಶುದ್ಧಿಗೊಳಿಸುವುದರಿಂದ ನೀನು ಪಾವಕನೆನಿಸಿಕೊಳ್ಳುವೆ. ನಿನಗಾಗಿಯೇ ವೇದಗಳು ಹುಟ್ಟಿದುದರಿಂದ ಜಾತವೇದನೆಂದು ನಿನ್ನನ್ನು ಕರೆಯುವರು. ನೀನು ವಿಚಿತ್ರಕಾಂತಿಯುಳ್ಳವನು. ದೇವತೆಗಳಿಗೆ ಪ್ರಭು. ಹೇ ಅನಲಾ! ವಿಭಾವಸೂ! ನೀನು ಹೋಮಗಳನ್ನು ಭುಜಿಸತಕ್ಕವನು. ಸ್ವರ್ಗದ್ವಾರವನ್ನು ತೆರೆಯತಕ್ಕವನು. ಜ್ವಲನನು. ಶಿಖೆಗಳುಳ್ಳವನು. *ವೈಶ್ವಾನರನೆಂದೂ, ಪಿಂಗೇಶನೆಂದೂ, ಪ್ಲವಂಗನೆಂದೂ, ಭೂರಿತೇಜಸ್ಸೆಂದೂ ಕರೆಯಲ್ಪಡತಕ್ಕವನು. ಕುಮಾರಸ್ವಾಮಿಯನ್ನು ಪಡೆದವನು. ಭಗವಂತನಾದ ನೀನು ರುದ್ರಗರ್ಭನೆಂದೂ, ಹಿರಣ್ಯರೇತಸ್ಸೆಂದೂ ಕರೆಯಲ್ಪಡುವೆ. ಅಗ್ನಿಯು ನನಗೆ ತೇಜಸ್ಸನ್ನೂ, ವಾಯುವು ಪ್ರಾಣವನ್ನೂ, ಭೂಮಿಯು ಬಲವನ್ನೂ, ಜಲವು ಸುಖವನ್ನೂ ಕೊಡಲಿ! ಓ ಅಗ್ನಿದೇವಾ! ನೀನು ಜಲಗರ್ಭದಲ್ಲಿರತಕ್ಕವನು. ಮಹಾಬಲವುಳ್ಳವನು. ಓ ಜಾತವೇದಾ! ಓ ಸುರೇಶ್ವರಾ! ದೇವತೆಗಳಿಗೆ ಮುಖವೆನಿಸಿದ ನೀನು ನನ್ನನ್ನು ಸತ್ಯದಿಂದ ಪರಿಶುದ್ಧನಾಗಿ ಮಾಡು. ಓ ಧೂಮಕೇತೂ! ಶಿಖೀ! ನೀನು ಸಮಸ್ತಪಾಪಗಳನ್ನೂ ಪರಿಹರಿಸತಕ್ಕವನು.

---

* ವೈಶ್ವಾನರನೆಂದರೆ ಎಲ್ಲಾ ಜನರಲ್ಲಿಯೂ ಇರತಕ್ಕವನು. ಪಿಂಗೇಶನೆಂದರೆ, ಹೊಂಬಣ್ಣವುಳ್ಳವನು. ಪ್ಲವಂಗನೆಂದರೆ ಹಾರಿಹಾರಿ ಮುಂದೆ ಸಾಗುವವನು. ರುದ್ರಗರ್ಭನೆಂದರೆ ರುದ್ರನಲ್ಲಿ ನೆಲೆಗೊಂಡಿರುವವನೆಂದರ್ಥವು.

ವಾಯುವಿನಿಂದ ಹುಟ್ಟಿದವನು. ಎಲ್ಲಾ ಪ್ರಾಣಿಗಳಲ್ಲಿಯೂ ಯಾವಾಗಲೂ ಇರತಕ್ಕವನು. ನನ್ನನ್ನು ಸತ್ಯದಿಂದ ಪವಿತ್ರನನ್ನಾಗಿ ಮಾಡು. ಹೇ ಭಗವನ್! ಭಕ್ತಿಪೂರ್ವಕವಾಗಿ ಶುಚಿಯಾಗಿ ನಾನು ಮಾಡಿದ ಈ ಸ್ತೋತ್ರದಿಂದ ನೀನು ನನಗೆ ತುಷ್ಟಿಯನ್ನೂ, ಪುಷ್ಟಿಯನ್ನೂ, ಶಾಸ್ತ್ರಜ್ಞಾನವನ್ನೂ, ಭಕ್ತಿಯನ್ನೂ ಕೊಡು."

ಓ ಜನಮೇಜಯರಾಜಾ! ಈ ಅಗ್ನಿಮಂತ್ರವನ್ನು ಪಠಿಸಿ ಅಗ್ನಿಯಲ್ಲಿ ಯಾವನು ಹೋಮಮಾಡುವನೋ, ಅವನು ಯಾವಾಗಲೂ ಶ್ರೀಮಂತನಾಗಿ, ಜಿತೇಂದ್ರಿಯನಾಗಿ, ಸಮಸ್ತಪಾಪಗಳಿಂದಲೂ ಮುಕ್ತನಾಗುವನು. ಸಹದೇವನು ಈ ಆಗ್ನೇಯಮಂತ್ರವನ್ನು ಜಪಿಸಿದಮೇಲೆ "ಓ ಅಗ್ನಿದೇವಾ! ಎಲ್ಲಾ ಯಜ್ಞಗಳಿಗೂ ನೀನು ನಿರ್ವಾಹಕನೆನಿಸಿಕೊಂಡಿದ್ದು, ಈಗ ನಮ್ಮ ಯಾಗಕ್ಕೆ ವಿಘ್ನವನ್ನು ತರಬಹುದೆ?" ಎಂದು ಹೇಳುತ್ತ ಬೆಂಕಿಯುರಿಯಲ್ಲಿ ಸಿಕ್ಕಿ ಭಯದಿಂದ ನಡುಗುತಿದ್ದ ತನ್ನ ಸೈನ್ಯದ ಮುಂದೆ ನೆಲದಮೇಲೆ ದರ್ಭೆಯನ್ನು ಹಾಸಿ ಅದರಮೇಲೆ ಕುಳಿತು ಅಗ್ನಿಯನ್ನು ಧ್ಯಾನಮಾಡುತ್ತಿದ್ದನು. ಸಮುದ್ರವು ತನ್ನ ಮೇರೆಯನ್ನು ಮೀರದಹಾಗೆ, ಅಗ್ನಿಯು ಆ ಸಹದೇವನ ಪ್ರಾರ್ಥನೆಗೆ ಮೀರಲಾರದೆ, ಅವನಿಗೆ ಕಾಣಿಸಿಕೊಂಡು, ಮೃದುವಾಕ್ಯದಿಂದ "ಸಹದೇವಾ! ಏಳೇಳು! ನಾನು ನಿನ್ನನ್ನು ಪರೀಕ್ಷಿಸುವುದಕ್ಕಾಗಿ ಹೀಗೆ ಮಾಡಿದೆನು. ನಿನ್ನ ಮತ್ತು ಧರ್ಮರಾಜನ ಕೋರಿಕೆಗಳನ್ನು ನಾನು ಬಲ್ಲೆನು. ಈ ನೀಲರಾಜನ ಸಂತತಿಯಿರುವವರೆಗೆ ಈ ಪಟ್ಟಣಕ್ಕೆ ಕಾವಲಿರಬೇಕಾದುದು ನನ್ನ ಕರ್ತವ್ಯವು. ಆದರೆ ಇದಕ್ಕಾಗಿ ನಿನ್ನ ಸದುದ್ದೇಶವನ್ನು ನಾನು ಕೆಡಿಸುವುದಿಲ್ಲ"ವೆಂದನು. ಒಡನೆಯೇ ಸಹದೇವನು ಸಂತೋಷದಿಂದ ಕೈಮುಗಿದು ಅಗ್ನಿಯನ್ನು ಪೂಜಿಸಿದನು. ಇಷ್ಟರಲ್ಲಿಯೇ ಅಗ್ನಿಯು ಕಣ್ಮರೆಯಾದನು. ಆಮೇಲೆ ಸ್ವಲ್ಪಕಾಲದಲ್ಲಿ ಅಗ್ನಿದೇವನ ಆಜ್ಞೆಯಿಂದ ನೀಲರಾಜನು ತಾನಾಗಿಯೇ ಸಹದೇವನನ್ನು ಮರ್ಯಾದೆಯಿಂದ ಬರಮಾಡಿಕೊಂಡು ಸತ್ಕರಿಸಿ, ಅವನು ಕೋರಿದಷ್ಟು ಧನವನ್ನು ಕಪ್ಪವಾಗಿ ಕೊಟ್ಟನು. ಆಮೇಲೆ ಸಹದೇವನು ಅಲ್ಲಿಂದ ಹೊರಟು ಇನ್ನೂ ಮುಂದೆ ದಕ್ಷಿಣದಿಕ್ಕಿಗೆ ಹೋಗುತ್ತ ಮೊದಲು

ತ್ರೈಪುರದ ರಾಜನನ್ನು ಜಯಿಸಿದನು. ಆಮೇಲೆ ಪೌರವರಾಜನನ್ನೂ, ಅಲ್ಲಿಂದ ಮುಂದೆ ಕೌಶಿಕನಲ್ಲಿ ಧನುರ್ವಿದ್ಯೆಯನ್ನು ಕಲಿತ ಸುರಾಷ್ಟ್ರರಾಜನಾದ ಕೃಶಿಯೆಂಬುವನನ್ನು ಬಹಳ ಪ್ರಯತ್ನದಿಂದ ಜಯಿಸಿ ವಶಮಾಡಿಕೊಂಡನು. ಸುರಾಷ್ಟ್ರದೇಶದಲ್ಲಿದ್ದಂತೆಯೇ ಸಹದೇವನು ಭೋಜಕಟವೆಂಬ ಪಟ್ಟಣದಲ್ಲಿ ಇಂದ್ರನಿಗೆ ಸಾಕ್ಷಾತ್ ಸಖನಾದ ಭೀಷ್ಮಕನಿಗೂ, ಅವನ ಮಗನಾದ ರುಕ್ಮಿಗೂ ತಾನು ಬಂದ ಉದ್ದೇಶವನ್ನುಕುರಿತು ಶಾಸನವನ್ನು ಬರೆದುಕಳುಹಿಸಿದನು. ಒಡನೆಯೇ ಆ ತಂದೆಮಕ್ಕಳಿಬ್ಬರೂ ಕೃಷ್ಣನಿಗೆ ಪಾಂಡವರಲ್ಲಿರುವ ಅಭಿಮಾನವನ್ನು ನೋಡಿ, ಆ ಸಹದೇವನ ಆಜ್ಞೆಯನ್ನು ಪ್ರೀತಿಪೂರ್ವಕವಾಗಿ ನಡೆಸಿದರು. ಅಲ್ಲಿ ಸಹದೇವನು ಅನೇಕ ರತ್ನಗಳನ್ನು ಕಪ್ಪವಾಗಿ ತೆಗೆದುಕೊಂಡು, ಇನ್ನೂ ಮುಂದೆ ಹೊರಟು, ಕ್ರಮವಾಗಿ ಶೂರ್ಪಾರಕ, ತಾಲಾಕಟ, ದಂಡಕಾವನವೆಂಬ ಪ್ರದೇಶಗಳನ್ನೆಲ್ಲ ಜಯಿಸಿ ವಶಮಾಡಿಕೊಂಡನು. ಆಮೇಲೆ ಮ್ಲೇಚ್ಛಯೋನಿಯಲ್ಲಿ ಹುಟ್ಟಿ, ಸಮುದ್ರದ್ವೀಪವಾಸಿಗಳಾದ ನಿಷಾದರು, (ಬೇಡರು) ಪುರುಷಾದರು, (ನರಭಕ್ಷಕರು) ಕರ್ಣಪ್ರಾವಣರು, ಎಂಬೀ ಬೇರೆಬೇರೆ ಪಂಗಡದವರನ್ನೆಲ್ಲ ಜಯಿಸಿದನು. ಅಲ್ಲಿಂದ ಮುಂದೆ ಮನುಷ್ಯನಿಗೂ, ರಾಕ್ಷಸನಿಗೂ ಮಿಶ್ರವಾಗಿ ಹುಟ್ಟಿದ ಕಾಲಮುಖರೆಂಬವರನ್ನು ಜಯಿಸಿದನು. ಅಲ್ಲಿಂದ ಮುಂದೆ ಕೋಲಗಿರಿ, ಸುರಭಿನಗರ, ತಾಮ್ರದ್ವೀಪ, ರಾಮಕಪರ್ವತ, ಮುಂತಾದ ಸ್ಥಳಗಳನ್ನೆಲ್ಲ ವಶಮಾಡಿಕೊಂಡನು. ಅಲ್ಲಿಂದ ಮುಂದೆ ತಿಮಿಂಗಿಲನೆಂಬ ರಾಜನೊಡನೆ ಹೋರಾಡಿ ಅವನನ್ನು ಜಯಿಸಿದನು. ಅಲ್ಲಿಂದಾಚೆಗೆ ಒಂದೇ ಕಾಲುಳ್ಳ ಕೆಲವು ಪುರುಷರನ್ನೂ, ಕೇರಳರನ್ನೂ, ಕೆಲವು ಕಾಡುಜನರನ್ನೂ ಜಯಿಸಿದನು. ಆಮೇಲೆ ಸಂಜಯಂತಿ, ಪಾಷಂಡ, ಕರಹಾಟಕವೆಂಬ ಪ್ರದೇಶಗಳನ್ನು ತನ್ನ ಕಡೆಯ ದೂತರಿಂದಲೇ ಸ್ವಾಧೀನಪಡಿಸಿಕೊಂಡು, ಅವರಿಂದ ಕಪ್ಪವನ್ನು ಗ್ರಹಿಸಿದನು. ಆಮೇಲೆ ಕ್ರಮವಾಗಿ, ಪಾಂಡ್ಯರು, ದ್ರವಿಡರು, ಓಢ್ರರು, ಕೇರಳರು, ಆಂಧ್ರರು, ಕಾಲವನರು, ಕಳಿಂಗರು, ಉಷ್ಟ್ರಕರ್ಣಿಕರು, ಎಂಬ ವೀರರನ್ನೂ ರಮಣೀಯವಾದ ಅಟವೀಪುರ, ಯವನಪುರಗಳನ್ನೂ ತನ್ನ ದೂತರಮೂಲಕವಾಗಿಯೇ ವಶಮಾಡಿಕೊಂಡು ಅವರಿಂದ ಕಪ್ಪವನ್ನು ಗ್ರಹಿಸಿದನು. ಆಮೇಲೆ

ತಾಮ್ರಪರ್ಣಿ, ಕನ್ಯಾತೀರ್ಥಗಳನ್ನು ದಾಟಿ, ದಕ್ಷಿಣದಿಕ್ಕನ್ನೆಲ್ಲ ಜಯಿಸಿ, ಸಮುದ್ರದ ಉತ್ತರತೀರಕ್ಕೆ ಬಂದಾಗ ಅಲ್ಲಿ ಅವನಿಗೆ ತನ್ನಣ್ಣನ ಮಗನಾದ ಘಟೋತ್ಕಚನ ನೆನಪು ಬಂದಿತು. ಇವನು ಸ್ಮರಿಸಿದಮಾತ್ರಕ್ಕೆ ಘಟೋತ್ಕಚನು ಅವನ ಮುಂದೆ ಕಾಣಿಸಿಕೊಂಡನು. ಮೇರುಪರ್ವತಕ್ಕೆ ಸಮಾನವಾದ ಆಕಾರದಿಂದ ಮುಂದೆ ನಿಂತಿರುವ ಘಟೋತ್ಕಚನನ್ನು ನೋಡಿ ಸಹದೇವನು ಪ್ರಿಯವಾಕ್ಯದಿಂದ “ನೀನು ಯಾಗಕ್ಕಾಗಿ ಬರಬೇಕೆಂಬುದು ಧರ್ಮರಾಜನ ಆಜ್ಞೆ” ಎಂದನು. ಆಗ ಘಟೋತ್ಕಚನು ಸ್ಮರಣಮಾತ್ರದಿಂದ ತನ್ನ ಕಡೆಯ ಪರಿವಾರಗಳನ್ನು ಕರೆಸಿಕೊಂಡು, ಸಹದೇವನಿಗೆ ನಮಸ್ಕರಿಸಿ ಕೈಮುಗಿದು ನಿಂತು “ನಾನು ಆಜ್ಞಾಧೀನನಾಗಿ ನಡೆಯಲು ಸಿದ್ಧನಾಗಿರುವೆನು” ಎಂದನು. ಆಗ ಸಹದೇವನು ಅಲ್ಲಿದ್ದಂತೆಯೇ ಆ ಘಟೋತ್ಕಚನ ಮೂಲಕವಾಗಿ, ಪುಲಸ್ತ್ಯಕುಲದವನೂ, ಮಹಾತ್ಮನೂ ಆದ ವಿಭೀಷಣನಿಗೆ ಪ್ರೀತಿಪೂರ್ವಕವಾದ ಸಂದೇಶವನ್ನು ಹೇಳಿಕಳುಹಿಸಿದನು. ಧೀಮಂತನಾದ ವಿಭೀಷಣನು ಈ ಯಜ್ಞಕ್ಕೆ ಶ್ರೀಕೃಷ್ಣನು ಪ್ರವರ್ತಕನೆಂಬುದನ್ನು ತಿಳಿದು, ಒಡನೆಯೇ ಸಹದೇವನ ಸಂದೇಶವನ್ನು ಪ್ರೀತಿಯಿಂದ ನಡೆಸಿದನು. ಅನೇಕರತ್ನಗಳನ್ನೂ, ಗಂಧದ ಕೊರಡುಗಳು, ಅಗರುಚಂದನ, ದಿವ್ಯವಸ್ತ್ರಾಭರಣಗಳು ಮುಂತಾದ ಇನ್ನೂ ಬೇರೆ ಅಮೂಲ್ಯವಸ್ತುಗಳನ್ನೂ ಕಳುಹಿಸಿಕೊಟ್ಟನು.

ಇದು ಮೂವತ್ತೆರಡನೆಯ ಅಧ್ಯಾಯವು.



ಸಹದೇವನು ದ್ರವಿಡಪಾಂಡ್ಯದೇಶಗಳನ್ನು ಸುತ್ತಿದ ವಿವರವು.

ಈ ನಡುವೆ ಜನಮೇಜಯರಾಜನು ವೈಶಂಪಾಯನನನ್ನು ಕುರಿತು, “ಓ ಮುನೀಂದ್ರಾ! ಹಿಡಿಂಬಪುತ್ರನಾದ ಘಟೋತ್ಕಚನು ಬಂದುದು, ಸಹದೇವಾಜ್ಞೆಯಿಂದ ಲಂಕೆಗೆ ಹೋಗಿ ವಿಭೀಷಣನನ್ನು ಕಂಡುದು, ಸಹದೇವನು ಕಾವೇರೀನದಿಯನ್ನು ದರ್ಶಿಸಿದುದು, ಈ ವಿಷಯವನ್ನೆಲ್ಲ ಇನ್ನೂ ಕ್ರಮವಾಗಿ ನೀನು ನನಗೆ ವಿವರಿಸಬೇಕು. ಅದನ್ನು ವಿಸ್ತಾರವಾಗಿ ಕೇಳ

ಬೇಕೆಂಬುದು ನನ್ನ ಕೋರಿಕೆ'' ಎಂದನು. ಆಗ ವೈಶಂಪಾಯನನು ಓ ಜನಮೇಜಯರಾಜಾ! ಸಹದೇವನ ಸಾಹಸಗಳನ್ನೆಲ್ಲ ಯಥಾವತ್ತಾಗಿ ವಿವರಿಸುವೆನು ಕೇಳು. ಅವನು ತನ್ನ ಪರಾಕ್ರಮದಿಂದ ಅಲ್ಲಲ್ಲಿ ಅಡವಿಗಳಲ್ಲಿಯೂ, ದ್ವೀಪಗಳಲ್ಲಿಯೂ ಇದ್ದವರನ್ನೆಲ್ಲ ಜಯಿಸಿ ದಕ್ಷಿಣದಿಕ್ಕನ್ನು ವಶಮಾಡಿಕೊಂಡು ಚೋಳದೇಶಕ್ಕೆ ಬಂದನು. ಅಲ್ಲಿ ಅವನು ಪವಿತ್ರತೀರ್ಥವುಳ್ಳ ನದಿಗಳಿಗೆಲ್ಲಾ ಮೇಲೆನಿಸಿದ ಕಾವೇರಿಯನ್ನು ಕಂಡನು. ಆ ನದಿಯ ಸೊಬಗನ್ನು ಕೇಳಬೇಕೇ? ಅದರ ತೀರಪ್ರದೇಶಗಳೆಲ್ಲವೂ ಅನೇಕಪಕ್ಷಿಸಮೂಹಗಳಿಗೂ, ತಪಸ್ವಿಗಳಿಗೂ ಆಶ್ರಯವಾಗಿ, ಎಷ್ಟೋ ರಮ್ಯವಾಗಿರುವುದು. ಸಾಲ, ಲೋಧ್ರ, ಅರ್ಜುನ, ಬಿಲ್ವ, ನೇರಳೆ, ಬೂರುಗ, ಮುತ್ತುಗ, ಕಡವು, ಏಳೆಲೆಬಾಳೆ, ಕಶ್ಮರಿ, ಶಾಖೋಪಶಾಖೆಗಳಿಂದ ವಿಸ್ತಾರವಾಗಿ ಹರಡಿದ ಅರಳಿ, ಆಲ, ಅತ್ತಿ, ಬನ್ನಿ, ಬಸರಿ, ಪಲಾಶ, ಖದಿರ, ಬದರಿ, ಅಶ್ವಕರ್ಣ, ಮಾವು, ಬಾಳೆ, ಮುಂತಾದ ವಿವಿಧ ವೃಕ್ಷಗಳಿಂದಲೂ, ಗಿಡಗಳಿಂದಲೂ ಆವೃತವಾಗಿರುವುದು. ಮತ್ತು ಚಕ್ರವಾಕ, ಬಾತು, ನೀರುಕಾಗೆ, ಸಮುದ್ರದ ಕಾಗೆ, ಕ್ರೌಂಚ, ನೀರುಕೋಳಿ, ಮುಂತಾದ ನಾನಾ ಬಗೆಯ ಜಲಪಕ್ಷಿಗಳ ಕೋಲಾಹಲದಿಂದ ಕೂಡಿರುವುದು. ಅನೇಕಋಷ್ಯಾಶ್ರಮಗಳಿಂದಲೂ, ಪವಿತ್ರಗಳಾದ ಚೈತ್ಯವೃಕ್ಷಗಳಿಂದಲೂ ಶೋಭಿಸುತ್ತಿರುವುದು. ವೇದವೇದಾಂಗಪಾರಂಗತರೂ, ಶುದ್ಧರೂ ಆದ ಅನೇಕ ಬ್ರಾಹ್ಮಣರು ಅಲ್ಲಲ್ಲಿ ತಮ್ಮತಮ್ಮ ಕರ್ಮಗಳನ್ನು ನಡೆಸುತ್ತಿರುವರು. ಅಲ್ಲಿನ ತೀರವೃಕ್ಷಗಳು ಮೂಲಾಕಾರವಾಗಿ ಶೋಭಿಸುತ್ತಿರುವುವು. ಕೆಲವು ಕಡೆ ಪುಷ್ಪಸಮೃದ್ಧಗಳಾದ ಮರಗಳಿಂದಲೂ, ಕೆಲವುಕಡೆ ತಾವರೆ, ನೈದಿಲೆ, ಸೌಗಂಧಿಕ, ಕಲ್ಹಾರ ಮೊದಲಾದ ಅರಳಿದ ನೀರುಹೂಗಳಿಂದಲೂ ವಿಚಿತ್ರವಾಗಿ ಕಾಣುತ್ತಿರುವುದು. ಸಹದೇವನು ಅಂತಹ ಪುಣ್ಯನದಿಯನ್ನು ನೋಡಿ ಸಂತೋಷಪರವಶನಾಗಿ, "ನಮ್ಮ ದೇಶಕ್ಕೆ ಗಂಗೆಯು ಹೇಗೋ ಹಾಗೆ ಈ ದೇಶಕ್ಕೆ ಕಾವೇರಿನದಿಯು ಭೂಷಣಪ್ರಾಯವಾಗಿದೆ''ಯೆಂದು ಹೇಳುತ್ತ, ತನ್ನ ಅನುಚರರೊಡನೆ ಆ ನದಿಯನ್ನು ದಾಟಿ ದಕ್ಷಿಣತೀರಕ್ಕೆ ಬಂದನು. ಅವನು ಅಲ್ಲಿಂದ ಮುಂದೆ ಪ್ರಯಾಣಮಾಡುವಷ್ಟರಲ್ಲಿ ಆ ದೇಶವಾಸಿಗಳೆಲ್ಲರೂ ಸಹದೇವನು ತಮ್ಮ ದೇಶಕ್ಕೆ ಬಂದುದನ್ನು ಕೇಳಿ,

ಸಂತೋಷದಿಂದ ಅವನನ್ನು ನೋಡುವುದಕ್ಕೆ ಬಂದರು. ಕಾವೇರೀತೀರದಲ್ಲಿರುವ ದ್ರವಿಡದೇಶದ ಸ್ತ್ರೀಪುರುಷರೆಲ್ಲರೂ, ದಿವ್ಯಪುರುಷನಂತೆ ಕಾಣುವ ಆ ಸಹದೇವನನ್ನು ಎವೆಯುಚ್ಚದೆ ಆಶ್ಚರ್ಯದಿಂದ ನೋಡುತ್ತಿದ್ದರು. ಕುಮಾರಸ್ವಾಮಿಯಂತೆ ಸುಂದರಾಕಾರವುಳ್ಳ ಅವನನ್ನು ನೋಡಿ ಮಂಗಳಗಾನಗಳಿಂದ ಅವನನ್ನು ಸ್ತುತಿಸುತ್ತ, ವಿವಿಧರತ್ನಗಳಿಂದಲೂ, ಅವನಿಗೆ ಇಷ್ಟವಾದ ಭೋಗ್ಯವಸ್ತುಗಳಿಂದಲೂ ಸತ್ಕರಿಸಿದರು. ಸಹದೇವನು ಅವರ ಸತ್ಕಾರಕ್ಕೆ ಸಂತೋಷಪಟ್ಟು, ಅವರನ್ನೆಲ್ಲ ಕಳುಹಿಸಿಕೊಟ್ಟಮೇಲೆ, ಇನ್ನೂ ಮುಂದೆ ದಕ್ಷಿಣಕ್ಕೆ ಪ್ರಯಾಣಮಾಡಿದನು. ದ್ರವಿಡಾಧಿಪತಿಯಾದ ಚೋಳರಾಜನನ್ನು ದೂತನ ಮೂಲಕವಾಗಿಯೇ ತನಗೆ ವಶಮಾಡಿಕೊಂಡು, ಅವನಿಂದ ಅನೇಕರತ್ನಗಳನ್ನು ಕಪ್ಪವಾಗಿ ತೆಗೆದು ಪಾಂಡ್ಯದೇಶಕ್ಕೆ ಹೋದನು. ಈ ದ್ರವಿಡಪಾಂಡ್ಯದೇಶಗಳ ಜನರೆಲ್ಲರೂ, ಸಹದೇವನ ದಿವ್ಯರೂಪವನ್ನು ಎಷ್ಟೆಷ್ಟು ನೋಡಿದರೂ ತೃಪ್ತಿಯಿಲ್ಲದೆ, ಅವನು ಹೋದಕಡೆಗೆಲ್ಲಾ ಅವನನ್ನು ಹಿಂಬಾಲಿಸಿ ಹೋಗುತ್ತಿದ್ದರು. ಸಹದೇವನು ದಾರಿಯಲ್ಲಿ ಹೋಗುತ್ತಿರುವಾಗ, ಅಲ್ಲಲ್ಲಿನ ಕಾಡುಗಳಲ್ಲಿ ಜಿಂಕೆಗಳ ಹಿಂಡುಗಳನ್ನೂ, ಕಾಡಾನೆಗಳನ್ನೂ, ಹುಲಿ ಮೊದಲಾದ ಕ್ರೂರಮೃಗಗಳನ್ನೂ ಗಿಳಿ, ನವಿಲು, ಹದ್ದು, ಕಾಡುಕೋಳಿ, ಮುಂತಾದ ವಿವಿಧಪಕ್ಷಿಜಾತಿಗಳನ್ನೂ ನೋಡುತ್ತ, ಮುಂದೆ ಪಾಂಡ್ಯದೇಶವನ್ನು ಸೇರಿ, ಅಲ್ಲಿ ಅರ್ಜುನನಿಗೆ ಮಾವನಾದ †ಮಲಯಧ್ವಜನೆಂಬ ಪಾಂಡ್ಯರಾಜನಬಳಿಗೆ ತನ್ನ ದೂತರನ್ನು ಕಳುಹಿಸಿದನು.

ಒಡನೆಯೇ ಪಾಂಡ್ಯರಾಜನಾದ ಆ ಮಲಯಧ್ವಜನು ಸಹದೇವನ ಸಂದೇಶವನ್ನು ಪ್ರೀತಿಯಿಂದ ಗೌರವಿಸಿ, ಅವನು ಹೇಳಿದಂತೆ ನಡೆದುಕೊಂಡನು. ಅರ್ಜುನಪತ್ನಿಯಾದ ಆ ಮಲಯಧ್ವಜಕುಮಾರಿಗೆ ಚಿತ್ರಾಂಗದೆಯೆಂದು ಹೆಸರು. ಅವಳು ಒಳ್ಳೇ ಉತ್ತಮರೂಪವತಿ. ಶುಭಲಕ್ಷಣಗಳುಳ್ಳವಳು. ಸ್ತ್ರೀಯರಲ್ಲಿ ರತ್ನಪ್ರಾಯಳು. ಆ ದ್ರವಿಡರಾಜಕುಮಾರಿಗೆ,

† ಆದಿಪರ್ವದಲ್ಲಿ ಈ ಮಲಯಧ್ವಜನೇ ಚಿತ್ರವಾಹನನೆಂಬ ಹೆಸರಿನಿಂದ ಕರೆಯಲ್ಪಟ್ಟಿರುವನು.

ತನ್ನ ಮೈದುನನಾದ ಸಹದೇವನು ಅಲ್ಲಿಗೆ ಬಂದಿರುವ ವೃತ್ತಾಂತವು ತಂದೆಯ ಮೂಲಕವಾಗಿ ಅಂತಃಪುರದಲ್ಲಿದ್ದಾಗ ತಿಳಿಯಿತು. ಒಡನೆಯೇ ಅವಳು ಗೌರವಾರ್ಥವಾಗಿ ಅಂತಃಪುರದಿಂದ ಉತ್ತಮರತ್ನಗಳನ್ನು ಸಹದೇವನಿಗೆ ಕಳುಹಿಸಿಕೊಟ್ಟಳು. ಪಾಂಡ್ಯರಾಜನೂಕೂಡ ತನ್ನಲ್ಲಿದ್ದ ಬೆಲೆಯುಳ್ಳ ನಾನಾವಸ್ತುಗಳು, ಮುತ್ತು, ರತ್ನ, ಹವಳ, ದಾಸದಾಸಿಯರು, ಮುಂತಾದುವನ್ನೆಲ್ಲ ಕಳುಹಿಸಿಕೊಟ್ಟನು. ಈ ಸತ್ಕಾರಗಳನ್ನೆಲ್ಲ ಸಹದೇವನು ಅತ್ಯಂತ ಸಂತೋಷದಿಂದ ಕೈಕೊಂಡು, ತನ್ನ ಅಣ್ಣನ ಮಗನಾದ (ಚಿತ್ರಾಂಗದೆಯ ಮಗನಾದ) ಬಭ್ರುವಾಹನನಿಗೆ ತಾನೂ ಅನೇಕ ರತ್ನಗಳನ್ನು ಬಹುಮಾನಿಸಿದನು. ಅವನು ತನ್ನಣ್ಣನ ಮಾವನೂ, ದ್ರವಿಡದೇಶಕ್ಕೆ ಅರಸನೂ, ಮಣಲೂರುನಗರಾಧಿಪತಿಯೂ ಆದ ಮಲಯಧ್ವಜ ಪಾಂಡ್ಯನಿಂದ ಅನೇಕರತ್ನಗಳನ್ನು ಪಡೆದುಕೊಂಡು, ದ್ರವಿಡದೇಶವಾಸಿಗಳಾದ ಅನೇಕಜನರಿಂದ ಪರಿವೃತನಾಗಿ, ದೇವಲೋಕಕ್ಕೆ ಸಮಾನವೆನಿಸಿ ಅಗಸ್ತ್ಯಮುನಿಗೆ ವಾಸಸ್ಥಳವಾದ ಮಲಯಾದ್ರಿಯನ್ನು ಸಮೀಪಿಸಿದನು. ಆ ಪರ್ವತವನ್ನು ಭಕ್ತಿಯಿಂದ ಪ್ರದಕ್ಷಿಣಮಾಡಿ, ಅಲ್ಲಿಂದ ಹೊರಟು, ಶೀತಲವಾದ ಮತ್ತು ಸ್ವಚ್ಛವಾದ ಜಲವುಳ್ಳುದಾಗಿಯೂ, ಮನೋಹರವಾಗಿಯೂ ಇರುವ ತಾಮ್ರಪರ್ಣೀನದಿಯನ್ನು ದಾಟಿ, ಸಮುದ್ರತೀರಕ್ಕೆ ಬಂದು ಅಲ್ಲಿ ತಂಗಿನಿಂತನು.

ಇದು ಮೂವತ್ತು ಮೂರನೆಯ ಅಧ್ಯಾಯವು.

---

ಸಹದೇವನಿಂದ ಪ್ರೇರಿತನಾದ ಘಟೋತ್ಕಚನು ವಿಭೀಷಣನಿಂದ ಕಾಣಿಕೆಯನ್ನು ತಂದೊಪ್ಪಿಸಿದುದು. ಇವನ್ನೆಲ್ಲ ತೆಗೆದುಕೊಂಡು ಸಹದೇವನು ಇಂದ್ರಪ್ರಸ್ಥಕ್ಕೆ ಬಂದು ಧರ್ಮರಾಜನಿಗೆ ಒಪ್ಪಿಸಿದುದು.

ಓ ಜನಮೇಜಯರಾಜಾ! ಕೇಳು! ಆಮೇಲೆ ಸಹದೇವನು ಮುಂದಿನ ಪ್ರಯಾಣವನ್ನು ಕುರಿತು ಬುದ್ಧಿಶಾಲಿಗಳಾದ ತನ್ನ ಮಂತ್ರಿಗಳೊಡನೆ ಆಲೋಚಿಸಿ, ತನ್ನಣ್ಣನ ಮಗನಾದ ಘಟೋತ್ಕಚನನ್ನು ಮನಸ್ಸಿನಲ್ಲಿ

ನೆನೆಸಿಕೊಂಡನು. ಸ್ಮರಣಮಾತ್ರದಿಂದಲೇ ಆ ರಾಕ್ಷಸನು ಸಹದೇವನ ಮುಂದೆ ಕಾಣಿಸಿಕೊಂಡನು. ಘಟೋತ್ಕಚನ ರೂಪವನ್ನು ಕೇಳಬೇಕೆ? ಅತ್ಯುನ್ನತವಾದ ಆಕೃತಿ! ಅದಕ್ಕೆ ತಕ್ಕಂತೆ ದುಂಡಗೆ ಉಬ್ಬಿ ನೀಡಿದ ತೋಳುಗಳು! ಕಾಲಮೇಘದಂತೆ ಕಪ್ಪಾದ ಮೈ! ಕಿವಿಯಲ್ಲಿ ಅಗಲವಾದ ಸುವರ್ಣಕುಂಡಲಗಳು! ಕಂಠದಲ್ಲಿ ಸುವರ್ಣಮಾಲಿಕೆ! ರತ್ನಮಯಗಳಾದ ತೋಳ್ಬಳೆಗಳು ಮತ್ತು ಕೈಬಳೆಗಳು! ಅದ್ಭುತಕಾಂತಿಯಿಂದ ಜ್ವಲಿಸುವಂತಿರುವ ಕಿರೀಟ ಕಾಂಚೀದಾಮಾದ್ಯನೇಕ ದಿವ್ಯಾಭರಣಗಳು! ಕಡೆಬಾಯಿಗಳಲ್ಲಿ ಉದ್ದವಾದ ಕೋರೆದಾಡೆಗಳು! ತಲೆಯಲ್ಲಿ ರಕ್ತದಂತೆ ಕೆಂಪಾದ ಕೂದಲು! ಮುಖದಲ್ಲಿ ಕೆಮ್ಮಣ್ಣಿನ ಪಟ್ಟೆಯಂತೆ ಉದ್ದವಾದ ಮೀಸೆಗಳು! ಭಯಂಕರಾಕೃತಿ! ರಕ್ತಚಂದನಾನುಲೇಪನದಿಂದ ಶೋಭಿತವಾದ ಎದೆ! ಮೈಮೇಲೆ ಹೊದೆದ ಸಣ್ಣ ದುಕೂಲದಂತಿರುವ ಪಟ್ಟೆಮಡಿ! ಇಂತಹ ರೂಪದೊಡನೆ ಘಟೋತ್ಕಚನು ನೆಲವನ್ನು ನಡುಗಿಸುವಂತೆ ಅಲ್ಲಿಗೆ ನಡೆದುಬರುವಾಗ, ಬೆಟ್ಟದಂತಿರುವ ಅವನ ಆಕೃತಿಯನ್ನು ಕಂಡು, ಅಲ್ಲಿದ್ದ ದ್ರಾವಿಡರೆಲ್ಲರೂ ಸಿಂಹವನ್ನು ಕಂಡ ಕ್ಷುದ್ರಮೃಗಗಳಂತೆ ಭಯದಿಂದ ಓಡಲಾರಂಭಿಸಿದರು. ರಾವಣನು ತನ್ನ ತಂದೆಯಾದ ಪುಲಸ್ತ್ಯನಲ್ಲಿಗೆ ಬಂದಂತೆ, ಘಟೋತ್ಕಚನು ತನ್ನ ಚಿಕ್ಕ ತಂದೆಯಾದ ಸಹದೇವನ ಬಳಿಗೆ ಬಂದು ನಮಸ್ಕರಿಸಿ, ಕೈಮುಗಿದು ನಿಂತು ವಿನಯದಿಂದ "ಜನಕಾ! ನಾನು ನಿನಗಾಗಿ ಮಾಡಬೇಕಾದ ಕಾರ್ಯವೇನು?" ಎಂದು ಕೇಳಿದನು. ಮೇರುಶಿಖರದಂತೆ ಮುಂದೆ ಬಂದು ನಿಂತ ಆ ಘಟೋತ್ಕಚನನ್ನು ಸಹದೇವನು ಪ್ರೀತಿಯಿಂದಪ್ಪಿಕೊಂಡು, ಅವನ ತಲೆಯನ್ನಾಘ್ರಾಣಿಸಿ "ವತ್ಸ! ಘಟೋತ್ಕಚಾ! ಅಣ್ಣನಾದ ಧರ್ಮರಾಜನ ಯಾಗಕ್ಕೆ ಬೇಕಾದ ಧನಸಂಗ್ರಹಕ್ಕಾಗಿ ನಾನು ಬಂದವನು. ನೀನು ಲಂಕಾಧಿಪತಿಯಾದ ವಿಭೀಷಣನಲ್ಲಿಗೆ ಹೋಗಿ, ನಾನು ಕಳುಹಿಸಿದುದಾಗಿ ತಿಳಿಸಿ, ಮಹಾತ್ಮನಾದ ಆ ರಾಕ್ಷಸರಾಜನಿಂದ ರಾಜಸೂಯಕ್ಕಾಗಿ ಸಮೃದ್ಧವಾದ ಉತ್ತಮರತ್ನಗಳನ್ನು ಕೇಳಿ ತೆಗೆದುಕೊಂಡು ಬಾ!" ಎಂದನು. ಈ ಮಾತನ್ನು ಕೇಳಿದೊಡನೆ ಘಟೋತ್ಕಚನು ಅತ್ಯುತ್ಸಾಹದಿಂದ "ಜನಕಾ! ಹಾಗೆಯೇ ಮಾಡುವೆನು" ಎಂದು ಹೇಳಿ, ಸಹದೇವನಿಗೆ ಪ್ರದಕ್ಷಿಣಮಾಡಿ ಕೈ ಮುಗಿದು,

ದಕ್ಷಿಣಾಭಿಮುಖವಾಗಿ ಹೊರಟನು. ಅವನು ಪ್ರಯಾಣಮಾಡಿ ಬರುತ್ತಿರುವಾಗ, ದಾರಿಗಡ್ಡಲಾಗಿ ಆಮೆ, ಮೊಸಳೆ, ನೀರಾನೆ, ಮತ್ಸ್ಯ, ಮಹಾಮತ್ಸ್ಯಾದಿ ಜಲಜಂತುಗಳಿಂದಲೂ, ಮುತ್ತು, ಶಂಖ, ಮುತ್ತುಚಿಪ್ಪು ಮೊದಲಾದ ವಸ್ತುಗಳಿಂದಲೂ ತುಂಬಿದ ಮಹಾಸಮುದ್ರವನ್ನು ಸಂಧಿಸಿದನು. ಅಲ್ಲಿ ಶ್ರೀರಾಮನಿಂದ ಕಟ್ಟಲ್ಪಟ್ಟ ಪವಿತ್ರವಾದ ಸೇತುವನ್ನು ಕಂಡು, ಶ್ರೀರಾಮನ ಪ್ರಭಾವವನ್ನು ಮನಸ್ಸಿನಲ್ಲಿಯೇ ಕೊಂಡಾಡುತ್ತ, ಮುಂದೆ ಹೋಗುವಾಗ, ಅವನಿಗೆ ಲಂಕಾನಗರವು ದೃಷ್ಟಿಗೋಚರವಾಯಿತು. ಆ ನಗರವು ಸ್ವರ್ಗದಂತೆ ರಮ್ಯವಾಗಿ, ದೃಢವಾದ ಪ್ರಾಕಾರದಿಂದಲೂ, ಅಂದವಾದ ಗೋಪುರದ್ವಾರಗಳಿಂದಲೂ, ಬಿಳುಪು ಮತ್ತು ಕೆಂಪುಬಣ್ಣವುಳ್ಳ ಉಪ್ಪರಿಗೆ ಮನೆಗಳಿಂದಲೂ ಶೋಭಿಸುತ್ತಿರುವುದು ಅಲ್ಲಿ ಯಾವಾಗಲೂ ಇಂಪಾದ ಮೃದಂಗಧ್ವನಿಯೊಡನೆ ಗಾನಸ್ವರವು ಕೇಳಿಸುತ್ತಿರುವುದು. ಸದಾ ಪುಷ್ಪಫಲಸಮೃದ್ಧಿಯುಳ್ಳ ತೋಟಗಳು ಅನೇಕವಾಗಿರುವುವು. ಅಲ್ಲಿನ ರಾಜಮಾರ್ಗಗಳ ಸಾಲುಮರಗಳಲ್ಲಿರುವ ಪುಷ್ಪಗಳ ಸುಗಂಧವು ಯಾವಾಗಲೂ ಘಮಘಮಿಸುತ್ತಿರುವುದು. ಆ ನಗರವು ವಿವಿಧರತ್ನಸಮೃದ್ಧಿಯಿಂದ ಇಂದ್ರನ ಅಮರಾವತಿಯ ಸೌಭಾಗ್ಯವನ್ನು ನಿರಾಕರಿಸುವಂತಿರುವುದು. ರಾಕ್ಷಸಸಮೃದ್ಧವಾದ ಇಂತಹ ಲಂಕಾನಗರಿಯನ್ನು ಕಂಡು ಅದರಲ್ಲಿ ಪ್ರವೇಶಿಸಿದನು. ಅಲ್ಲಿ ಪ್ರಾಸ, ಶೂಲ, ಮೊದಲಾದ ವಿವಿಧಾಯುಧಗಳನ್ನು ಹಿಡಿದು, ಹಲವು ಬಗೆಯ ಉಡಿಗೆತೊಡಿಗೆಗಳಿಂದ ಅಲಂಕೃತರಾದ ಅನೇಕರಾಕ್ಷಸಭಟರನ್ನೂ, ದೇವಲೋಕದ ಪುಷ್ಪಮಾಲಿಕೆಗಳನ್ನೂ, ದಿವ್ಯಾಭರಣಗಳನ್ನೂ ಧರಿಸಿ, ಮದ್ಯಮದದಿಂದ ಕೆಂಪೇರಿದ ಕಣ್ಣುಗಳಿಂದಲೂ, ಉಬ್ಬಿದ ಸ್ತನನಿತಂಬಗಳಿಂದಲೂ ಕೂಡಿದ ಅನೇಕರಾಕ್ಷಸಸುಂದರಿಯರನ್ನೂ ಕಂಡನು. ಅಲ್ಲಿನ ಸ್ತ್ರೀಪುರುಷರೆಲ್ಲರೂ ಘಟೋತ್ಕಚನನ್ನು ನೋಡಿ ಆಶ್ಚರ್ಯದಿಂದ ಬೆರಗಾದರು. ಆಮೇಲೆ ಘಟೋತ್ಕಚನು ಇಂದ್ರಗೃಹಕ್ಕೆ ಸಮಾನವಾದ ಅಲ್ಲಿನ ರಾಜಗೃಹದ ಬಾಗಿಲಿಗೆ ಹೋಗಿ, ಅಲ್ಲಿದ್ದ ದ್ವಾರಪಾಲಕರನ್ನು ಕುರಿತು, “ಎಲೈ! ಹಿಂದೆ ಪಾಂಡುವೆಂದು ಪ್ರಸಿದ್ಧನಾದ ಮತ್ತು ಮಹಾಬಲಶಾಲಿಯಾದ ಕೌರವಶ್ರೇಷ್ಠನೊಬ್ಬನಿದ್ದನು. ಈಗ ಅವನ ಮಕ್ಕಳಲ್ಲಿ ಸಹದೇವನೆಂಬ ಕನಿಷ್ಠಪುತ್ರನ ಹೆಸ

ರನ್ನು ನೀವೂ ಕೇಳಿರಬಹುದು. ಅವನ ಕಡೆಯ ದೂತನಾಗಿ ನಾನು ಇಲ್ಲಿಗೆ ಬಂದಿರುವೆನು. ಧರ್ಮರಾಜನಿಗೆ ಕಪ್ಪವನ್ನು ತರಬೇಕೆಂದು ಅವನು ನನಗೆ ಆಜ್ಞಾಪಿಸಿರುವುದರಿಂದ, ಇಲ್ಲಿ ನಿಮ್ಮ ರಾಜನಾದ ವಿಭೀಷಣನನ್ನು ನಾನು ನೋಡಬೇಕಾಗಿದೆ. ನೀವು ಶೀಘ್ರದಲ್ಲಿಯೇ ನಾನು ಬಂದಿರುವುದನ್ನು ರಾಜನಿಗೆ ತಿಳಿಸಿಬನ್ನಿರಿ'' ಎಂದನು.

ಆಗ ದ್ವಾರಪಾಲಕರಲ್ಲಿ ಒಬ್ಬನು "ಹಾಗೆಯೇ ಆಗಲಿ'' ಎಂದು ಹೇಳಿ, ರಾಜಸ್ಥಾನಕ್ಕೆ ಹೋಗಿ, ರಾಜನಮುಂದೆ ಕೈಮುಗಿದು ನಿಂತು ಈ ದೂತಾಗಮನ ವೃತ್ತಾಂತವನ್ನು ವಿಭೀಷಣನಿಗೆ ತಿಳಿಸಿದನು. ವಿಭೀಷಣನು ಪರಮಧರ್ಮಾತ್ಮನಾದುದರಿಂದ, ಒಡನೆಯೇ ಆ ದೂತನನ್ನು ತನ್ನ ಬಳಿಗೆ ಕರೆತರುವಂತೆ ಆಜ್ಞಾಪಿಸಿದನು. ಕೂಡಲೇ ಆ ದ್ವಾರಪಾಲಕನು ಘಟೋತ್ಕಚನ ಬಳಿಗೆ ಬಂದು, "ಶೀಘ್ರದಲ್ಲಿಯೇ ನಿನ್ನನ್ನು ಕರೆತರುವಂತೆ ಮಹಾರಾಜನ ಆಜ್ಞೆಯಾಗಿದೆ'' ಎಂದನು. ಕೂಡಲೇ ಘಟೋತ್ಕಚನು ಅರಮನೆಯೊಳಗೆ ಪ್ರವೇಶಿಸಿ, ಅದರ ಸೊಬಗನ್ನು ಸುತ್ತಲೂ ಕಣ್ಣಿಟ್ಟು ನೋಡಿದನು. ರಾಕ್ಷಸರಾಜನ ಆ ದಿವ್ಯಭವನವು ಕೈಲಾಸದಂತೆ ಮಹೋನ್ನತವಾಗಿ ಶುಭ್ರವಾಗಿರುವುದು. ಅದಕ್ಕೆ ಸುತ್ತಲೂ ಸುವರ್ಣ ಪ್ರಾಕಾರಗಳು! ಅಲ್ಲಲ್ಲಿ ಗೋಪುರಗಳು! ಅಲ್ಲಲ್ಲಿ ಮೇಲಂತಸ್ತಿನ ಉಪ್ಪರಿಗೆಗಳು! ನಾನಾರತ್ನಗಳಿಂದ ಅಲಂಕೃತವಾದ ಆ ಮನೆಯಲ್ಲಿ, ಚಿನ್ನ, ಬೆಳ್ಳಿ, ವಜ್ರ, ವೈಡೂರ್ಯ, ಸ್ಫಟಿಕ ಮೊದಲಾದುವುಗಳಿಂದ ನಿರ್ಮಿತಗಳಾಗಿ, ಅತಿಮನೋಹರಗಳಾದ ಕಂಬದ ಸಾಲುಗಳು! ನಾನಾ ವರ್ಣದ ಧ್ವಜಪತಾಕೆಗಳು! ರತ್ನದಿಂದ ಕೆತ್ತಲ್ಪಟ್ಟ ಚಿತ್ರಕಾರ್ಯಗಳು! ಅಲ್ಲಲ್ಲಿ ತೂಗಾಡುತ್ತಿರುವ ವಿಚಿತ್ರವರ್ಣದ ಪುಷ್ಪಮಾಲಿಕೆಗಳು! ಚಿನ್ನದ ಜಗುಲಿಗಳು! ಇಂತಹ ಸೊಬಗನ್ನೆಲ್ಲ ನೋಡುತ್ತ ಘಟೋತ್ಕಚನು ಮುಂದೆ ಹೋಗುತ್ತಿರುವಾಗ, ಅಲ್ಲಿ ಒಂದು ಕಡೆಯಿಂದ ಲಯಬದ್ಧವಾಗಿಯೂ, ತಂತ್ರೀಧ್ವನಿ ಮತ್ತು ಗಾನಧ್ವನಿಗಳಿಂದ ಮಿಶ್ರಿತವಾಗಿಯೂ, ಕಿವಿಗಿಂಪಾಗಿಯೂ, ಮಿತವಾದ ಅಕ್ಷರಗಳುಳ್ಳುದಾಗಿಯೂ ಇರುವ ಮಧುರಗಾನವು ಕೇಳಿಸುತಿತ್ತು. ಇನ್ನೊಂದು ಕಡೆಯಿಂದ ದಿವ್ಯದುಂದುಭಿಧ್ವನಿಗಳೂ

ಮತ್ತೊಂದುಕಡೆಯಿಂದ ಮಂಗಳಕರಗಳಾದ ಬೇರೆಬೇರೆ ವಾದ್ಯಧ್ವನಿಗಳೂ ಕಿವಿಗೆ ಬೀಳುತಿದ್ದುವು. ಈ ವೈಭವಗಳನ್ನೆಲ್ಲ ಅನುಭವಿಸುತ್ತ ಘಟೋತ್ಕಚನು ಅತ್ಯಾನಂದಪರವಶನಾಗಿ, ಮನೋಹರಗಳಾದ ಅಲ್ಲಿನ ಹಲವು ತೊಟ್ಟಿಗಳನ್ನು ದಾಟಿ ಮುಂದೆ ಹೋದನು. ಇವನ್ನೆಲ್ಲ ದಾಟಿಹೋದಮೇಲೆ ದ್ವಾರಪಾಲಕನೊಡನೆ ವಿಭೀಷಣನಿದ್ದಕಡೆಗೆ ಹೋಗಿ, ಅಲ್ಲಿ ಸುವರ್ಣಮಯವಾದ ಉತ್ತಮಾಸನದಮೇಲೆ ಕುಳಿತಿದ್ದ ರಾಕ್ಷಸರಾಜನನ್ನು ಕಂಡನು. ಮಹಾತ್ಮನಾದ ವಿಭೀಷಣನ ವೈಭವವನ್ನು ಕೇಳಬೇಕೇ? ಆಕಾಶದಲ್ಲಿ ಸೂರ್ಯನು ಹೇಗೋಹಾಗೆ ದಿವ್ಯತೇಜಸ್ಸಿನಿಂದ ಬೆಳಗುತ್ತಿರುವನು. ಮುತ್ತಿನ ಹಾರಗಳು, ದಿವ್ಯಾಭರಣಗಳು, ದಿವ್ಯಮಾಲಿಕೆಗಳು, ದಿವ್ಯಗಂಧಗಳು, ಇವುಗಳಿಂದಲಂಕೃತನಾಗಿ, ದೇವತೆಗಳನಡುವೆ ಇಂದ್ರನಂತೆ ಅನೇಕ ಮಂತ್ರಿಗಳ ನಡುವೆ ಕುಳಿತಿರುವನು. ಯಕ್ಷರೂ, ದೇವಸ್ತ್ರೀಯರೂ, ಅವನನ್ನು ಸಂತೋಷಗೊಳಿಸುವ ಮಂಗಳಗಾನಗಳನ್ನು ಹಾಡುತ್ತಿರುವರು. ಉತ್ತಮಸ್ತ್ರೀಯರು ಅವನ ಉಭಯಪಾರ್ಶ್ವಗಳಲ್ಲಿಯೂ ನಿಂತು ಚಿನ್ನದ ಹಿಡಿಗಳುಳ್ಳ ಚಾಮರಗಳಿಂದಲೂ, ಬೀಸಣಿಗೆಗಳಿಂದಲೂ ಬೀಸುತ್ತಿರುವರು. ಕುಬೇರವರುಣರಂತೆ ದಿವ್ಯಕಾಂತಿಯಿಂದಲೂ, ದಿವ್ಯಸಂಪತ್ತಿನಿಂದಲೂ ಶೋಭಿಸುತ್ತ, ಇಕ್ಷ್ವಾಕುಕುಲನಾಥನಾದ ರಾಮನನ್ನು ಯಾವಾಗಲೂ ಮನಸ್ಸಿನಲ್ಲಿ ಧ್ಯಾನಿಸುತ್ತ, ಸದಾಕಾಲವೂ ಧರ್ಮದಲ್ಲಿಯೇ ಸ್ಥಿರಬುದ್ಧಿಯುಳ್ಳ ಮಹಾತ್ಮನಾದ ಆ ವಿಭೀಷಣನನ್ನು ಕಂಡೊಡನೆ ಘಟೋತ್ಕಚನು ಅವನಿಗೆ ಕೈಜೋಡಿಸಿ ತಲೆಬಗ್ಗಿ ನಮಸ್ಕರಿಸಿದನು. ಚಿತ್ರರಥನೆಂಬ ಗಂಧರ್ವನು ದೇವೇಂದ್ರನಮುಂದೆ ಹೇಗೋಹಾಗೆ, ಆ ಭೀಮಪುತ್ರನು ವಿಭೀಷಣನಮುಂದೆ ಅತಿವಿನೀತಭಾವದಿಂದ ಕೈಕಟ್ಟಿ ನಿಂತಿದ್ದನು

ಆಗ ವಿಭೀಷಣನು ದೂತನಾಗಿ ತನ್ನಲ್ಲಿಗೆ ಬಂದ ಆ ಘಟೋತ್ಕಚನನ್ನು ಉಚಿತರೀತಿಯಿಂದ ಗೌರವಿಸಿ, ಮೃದುವಾಕ್ಯದಿಂದ ಹೀಗೆಂದು ಪ್ರಶ್ನೆಮಾಡುವನು. “ಓ ಕುಮಾರಾ! ಈಗ ನನ್ನಿಂದ ಕಪ್ಪವನ್ನು ಕೋರುವ ರಾಜನು ಯಾವ ವಂಶದಲ್ಲಿ ಜನಿಸಿದವನು? ಅವನ ಸಹೋದರ

ರಾರು? ಅವನ ದೇಶವಾವುದು? ಅವನಿರುವ ರಾಜಧಾನಿಯಾವುದು? ನಿನಗೂ ಅವರಿಗೂ ಸಂಬಂಧವೇನು? ನೀನು ಬಂದ ಕಾರ್ಯವೇನು? ಇವೆಲ್ಲವನ್ನೂ ಸವಿಸ್ತರವಾಗಿ ನಿನ್ನಿಂದ ಕೇಳಿ ತಿಳಿಯಬೇಕೆಂದು ಕೋರು ವೆನು. ವಿವರವಾಗಿ ತಿಳಿಸು'' ಎಂದನು. ಅದಕ್ಕಾ ಘಟೋತ್ಕಚನು ವಿಭೀಷಣನ ಮುಂದೆ ಬದ್ಧಾಂಜಲಿಯಾಗಿ ನಿಂತು ಹೀಗೆಂದು ಹೇಳತೊಡ ಗಿದನು.

"ಚಂದ್ರವಂಶದಲ್ಲಿ ಪಾಂಡುವೆಂಬ ಮಹಾಬಲಾಢ್ಯನಾದ ರಾಜನಿ ದ್ದನು. ಅವನಿಗೆ ಇಂದ್ರನಿಗೆಣೆಯಾದ ಪರಾಕ್ರಮವುಳ್ಳ ಐದುಮಂದಿ ಪುತ್ರರಿರುವರು. ಅವರಲ್ಲಿ ಜ್ಯೇಷ್ಠನಿಗೆ ಯುಧಿಷ್ಠಿರನೆಂದು ಹೆಸರು. ಅವ ನು ಕೇವಲಧರ್ಮಮೂರ್ತಿಯಾಗಿ ಅಜಾತಶತ್ರುವೆಂದು ಹೆಸರುಗೊಂಡಿರು ವನು ಆ ಯುಧಿಷ್ಠಿರನು ಗಂಗೆಯ ದಕ್ಷಿಣತೀರದಲ್ಲಿರುವ ಹಸ್ತಿನಾ ವತಿಯಲ್ಲಿದ್ದು ರಾಜ್ಯವನ್ನಾಳುತಿದ್ದನು. ಆಮೇಲೆ ಆ ರಾಜ್ಯವನ್ನು ಧೃತ ರಾಷ್ಟ್ರನಿಗೆ ಒಪ್ಪಿಸಿಬಿಟ್ಟು, ತಾನು ಇಂದ್ರಪ್ರಸ್ಥಕ್ಕೆ ಬಂದು ಅಲ್ಲಿ ತನ್ನ ಸಹೋದರನೊಡನೆ ಸುಖದಿಂದಿರುವನು. ಓ ರಾಕ್ಷಸೇಂದ್ರಾ! ಆ ನಗರ ಗಳೆರಡೂ ಗಂಗೆ ಮತ್ತು ಯಮುನೆ, ಈ ಎರಡು ನದಿಗಳ ನಡುವೆ ಇರು ವುವು. ಯಾವಾಗಲೂ ಧರ್ಮನಿಷ್ಠನಾದ ಆ ಯುಧಿಷ್ಠಿರನು ಇಂದ್ರಪ್ರಸ್ಥ ದಲ್ಲಿದ್ದುಕೊಂಡು, ಅವನ ಅನುಚರರಾದ ನಮ್ಮೆಲ್ಲರನ್ನೂ ಪಾಲಿಸುತ್ತಿರು ವನು. ಆ ಯುಧಿಷ್ಠಿರನಿಗೆ ಭೀಮಸೇನನೆಂದು ಲೋಕದಲ್ಲಿ ಪ್ರಖ್ಯಾತಿ ಗೊಂಡ ತಮ್ಮನೊಬ್ಬನುಂಟು. ಅವನು ಮಹಾತೇಜಸ್ವಿ! ಮಹಾ ಯಶ ಸ್ವಿ! ಇಂದ್ರನಿಗೆಣೆಯಾದ ಪರಾಕ್ರಮವುಳ್ಳವನು. ಅವನು ಬಲದಲ್ಲಿ ಹತ್ತುಸಾವಿರ ಆನೆಗಳಿಗೆ ಸಾಟಿಯೆನಿಸಿದವನು. ಅವನ ತಮ್ಮನಿಗೆ ಅರ್ಜು ನನೆಂದು ಹೆಸರು. ಅವನೂ ಮಹಾಬಲಪರಾಕ್ರಮವುಳ್ಳವನು. ವೀರ್ಯ ದಲ್ಲಿ ಕಾರ್ತವೀರ್ಯನಿಗೂ, ಬಲದಲ್ಲಿ ಸಮುದ್ರಕ್ಕೂ, ಅಸ್ತ್ರವಿದ್ಯೆಯಲ್ಲಿ ಜಮದಗ್ನಿಪುತ್ರನಾದ ಪರಶುರಾಮನಿಗೂ, ಯುದ್ಧದಲ್ಲಿ ಶ್ರೀರಾಮನಿಗೂ, ರೂಪದಲ್ಲಿ ಇಂದ್ರನಿಗೂ, ತೇಜಸ್ಸಿನಲ್ಲಿ ಸೂರ್ಯನಿಗೂ ಸಮಾನನು. ಆ ಫಲ್ಗುನನನ್ನು ದೇವದಾನವ ಗಂಧರ್ವರಲ್ಲಿಯಾಗಲಿ, ಪಿಶಾಚ ಪನ್ನಗ ರಾಕ್ಷ

ಸರಲ್ಲಿಯಾಗಲಿ, ಮನುಷ್ಯರಲ್ಲಿಯಾಗಲಿ ಯಾರೂ ಯುದ್ಧದಲ್ಲಿ ಜಯಿಸಲಾರರು. ಹಿಂದೆ ಈ ಅರ್ಜುನನೇ ಖಾಂಡವವನದಲ್ಲಿ ಅಗ್ನಿಯನ್ನು ತೃಪ್ತಿಗೊಳಿಸಿದನು. ಆ ಕಾಲದಲ್ಲಿ ಸಕಲದೇವಸೈನ್ಯಗಳೊಡನೆ ತನ್ನನ್ನು ಇದಿರಿಸಿಬಂದ ದೇವೇಂದ್ರನನ್ನೂ ಜಯಿಸಿದನು. ಹೀಗೆ ಅವನು ಅಗ್ನಿಯನ್ನು ತೃಪ್ತಿಗೊಳಿಸಿ ಅವನಿಂದ ಅನೇಕ ದಿವ್ಯಾಸ್ತ್ರಗಳನ್ನು ಪಡೆದನು. ಅಲ್ಲದೆ, ಆ ಅರ್ಜುನನು ದೇವತೆಗಳಿಗೂ ದುರ್ಲಭಳಾದ ಸುಭದ್ರೆಯೆಂಬ ಕೃಷ್ಣನ ತಂಗಿಯನ್ನು ವಿವಾಹವಾದನು. ಅರ್ಜುನನ ತಮ್ಮನಿಗೆ ನಕುಲನೆಂದು ಹೆಸರು. ಅವನು ಮೂರ್ತಿವಂತನಾದ ಮನ್ಮಥನಂತೆ ಲೋಕಕ್ಕೆಲ್ಲ ಅತಿಶಯವಾದ ಸೌಂದರ್ಯವುಳ್ಳವನು. ಆ ನಕುಲನ ತಮ್ಮನಿಗೆ ಸಹದೇವನೆಂದು ಹೆಸರು. ಅವನೂ ಮಹಾಬಲಿಷ್ಠನು. ಯುದ್ಧದಲ್ಲಿ ಷಣ್ಮುಖನಿಗೆ ಸಮಾನನಾದವನು. ಆ ಸಹದೇವನೇ ಈಗ ನನ್ನನ್ನು ತಮ್ಮಲ್ಲಿಗೆ ಕಳುಹಿಸಿದನು. ರಾಜೇಂದ್ರಾ! ನಾನು ಭೀಮಸೇನನ ಮಗನು. ಘಟೋತ್ಕಚನೆಂದು ನನ್ನ ಹೆಸರು. ಮಹಾಭಾಗ್ಯವತಿಯಾದ ಹಿಡಿಂಬಿಯೆಂಬ ರಾಕ್ಷಸಿಯು ನನ್ನ ತಾಯಿ. ಪಾಂಡವರ ಉಪಕಾರಕ್ಕಾಗಿಯೇ ನಾನು ಈ ಭೂಮಿಯನ್ನೆಲ್ಲಾ ಸುತ್ತುತ್ತಿರುವೆನು. ಈಗ ನನ್ನ ದೊಡ್ಡಪ್ಪನಾದ ಯುಧಿಷ್ಠಿರನು ರಾಜಸೂಯವೆಂಬ ಮಹಾಯಾಗವನ್ನು ನಡೆಸಲುದ್ದೇಶಿಸಿ, ಎಲ್ಲಾ ರಾಜರಿಂದ ಕಪ್ಪವನ್ನು ತರುವುದಕ್ಕಾಗಿ, ತನ್ನ ನಾಲ್ವರು ತಮ್ಮಂದಿರನ್ನೂ ನಾಲ್ಕುದಿಕ್ಕಿಗೂ ಕಳುಹಿಸಿದನು. ಶ್ರೀಕೃಷ್ಣನೊಡನೆ ಕಲೆತ ಧರ್ಮರಾಜನು ತನ್ನ ತಮ್ಮಂದಿರನ್ನು ಈ ಕೆಲಸಕ್ಕಾಗಿ ಕಳುಹಿಸಿದನು. ಅರ್ಜುನನು ಉತ್ತರದಿಕ್ಕಿನಲ್ಲಿ ನೂರುಸಾವಿರ (ಲಕ್ಷ) ಯೋಜನಗಳ ದೂರದವರೆಗೆ ಹೋಗಿ, ಅನೇಕ ರಾಜರನ್ನು ಜಯಿಸಿದನು. ಕೆಲವರನ್ನು ಕೊಂದುಬಂದನು. ಸ್ವರ್ಗದ್ವಾರದವರೆಗೆ ಹೋಗಿ ಅಲ್ಲಲ್ಲಿಂದ ರತ್ನಗಳನ್ನೂ, ಬಗೆಬಗೆಯ ದಿವ್ಯಾಶ್ವಗಳನ್ನೂ, ಧನರಾಶಿಯನ್ನೂ ತಂದು, ಧರ್ಮರಾಜನಿಗೆ ಒಪ್ಪಿಸಿದನು. ಅದರಂತೆಯೇ ಭೀಮಸೇನನು, ಪೂರ್ವದಿಕ್ಕಿನಲ್ಲಿ ಅನೇಕ ರಾಜರನ್ನು ಜಯಿಸಿ ಧನವನ್ನು ತಂದುಕೊಟ್ಟನು. ನಕುಲನು ಇದೇ ಕಾರ್ಯಕ್ಕಾಗಿ ಪಶ್ಚಿಮದಿಕ್ಕಿಗೆ ಹೋಗಿರುವನು. ದಕ್ಷಿಣದಿಕ್ಕಿಗಾಗಿ ಹೊರಟ ಸಹದೇವನು, ನಿನ್ನಲ್ಲಿಗೆ ಕಪ್ಪವನ್ನು ತರುವುದಕ್ಕಾಗಿ ನನ್ನನ್ನು ಕಳು

ಹಿಸಿದನು. ಓ ಮಹಾತ್ಮಾ! ಪಾಂಡವರ ಚರಿತ್ರವನ್ನು ನಿನಗೆ ಸಂಕ್ಷೇಪವಾಗಿ ತಿಳಿಸಿದೆನು. ಆದರೆ ನಾವು ನಿನಗೆ ಈ ವಿಷಯದಲ್ಲಿ ಆಜ್ಞೆಮಾಡಲಾರೆವು. ನೀನಾಗಿಯೇ ಯುಧಿಷ್ಠಿರನ ಧರ್ಮಜ್ಞತೆಯನ್ನೂ, ಅವನು ತೊಡಗಿರುವ ಪವಿತ್ರವಾದ ರಾಜಸೂಯಯಾಗವನ್ನೂ, ಭಗವಂತನಾದ ಶ್ರೀಕೃಷ್ಣನೇ ಈ ಕಾರ್ಯಕ್ಕೆ ಪ್ರೋತ್ಸಾಹಕನಾಗಿರುವುದನ್ನೂ ನೋಡಿ ಧರ್ಮಜ್ಞನಾದ ನೀನು ಕಪ್ಪವನ್ನು ಕಳುಹಿಸಿಕೊಡಬೇಕು" ಎಂದನು.

ಈ ಮಾತನ್ನು ಕೇಳಿ ಧರ್ಮಾತ್ಮನಾದ ವಿಭೀಷಣನು ತನ್ನ ರಾಕ್ಷಸಮಂತ್ರಿಗಳೊಡನೆ ಆ ಘಟೋತ್ಕಚನು ತಂದ ಸಂದೇಶವನ್ನು ಬಹಳ ನಮ್ರತೆಯಿಂದಲೂ, ಸಂತೋಷದಿಂದಲೂ ಆದರಿಸಿದನು. ಶ್ರೀಕೃಷ್ಣನೇ ಸಾಕ್ಷಾತ್ತಾಗಿ ಈ ಕಾರ್ಯಕ್ಕೆ ಪ್ರವರ್ತಕನೆಂದು ತಿಳಿದುಕೊಂಡು, ಚಿತ್ರವಿಚಿತ್ರಗಳಾದ ಕಂಬಳಿಗಳನ್ನೂ, ಆಸ್ತರಣಗಳನ್ನೂ, ರತ್ನಖಚಿತಗಳಾಗಿ ಚಿನ್ನಬೆಳ್ಳಿ ದಂತಗಳಿಂದ ಮಾಡಲ್ಪಟ್ಟ ಮಂಚಗಳನ್ನೂ, ಬೆಲೆಯುಳ್ಳ ಆಭರಣಗಳನ್ನೂ, ಹವಳ ರತ್ನ ಮುಂತಾದುವುಗಳನ್ನೂ, ಆ ಘಟೋತ್ಕಚನ ವಶಕ್ಕೆ ತಂದುಕೊಟ್ಟನು. ಚಿನ್ನಬೆಳ್ಳಿಗಳಿಂದ ಮಾಡಲ್ಪಟ್ಟ ಹಂಡೆಗಳು, ಕೊಡಗಳು, ಪಾತ್ರೆಗಳು, ತಟ್ಟೆಗಳು, ಸ್ನಾನದ್ರೋಣಿಗಳು ಇವನ್ನೆಲ್ಲ ಸಾವಿರಾರುಲೆಕ್ಕದಿಂದ ತಂದೊಪ್ಪಿಸಿದನು. ರತ್ನಖಚಿತಗಳಾದ ಕುಂಡಲಗಳನ್ನೂ, ಚಿನ್ನದ ಹೂಗಳನ್ನೂ, ಚಂದ್ರನಂತೆ ಬಿಳುಪಾಗಿ ವಿಚಿತ್ರಾಕೃತಿಗಳಿಂದ ಕೂಡಿದ ಶಂಖಗಳನ್ನೂ ತಂದುಕೊಟ್ಟನು. ಯಾಗಶಾಲೆಗೆ ತೋರಣಸ್ತಂಭಗಳಾಗಿ ನಿಲ್ಲಿಸಲು ಯೋಗ್ಯವಾದ ಹದಿನಾಲ್ಕು ತಾಳೆಯ ಮರಗಳನ್ನೂ ತಂದುಕೊಟ್ಟನು. ಸುವರ್ಣಮಯವಾದ ತಾವರೆಯ ಹೂಗಳು, ರತ್ನದ ಪಲ್ಲಕ್ಕಿಗಳು, ಬೆಲೆಯುಳ್ಳ ಕಿರೀಟಗಳು, ಕಂಕಣಗಳು, ವಿಧವಿಧ ಚಂದನಗಳು, ವಿವಿಧ ವಸ್ತ್ರಗಳು ಇದನ್ನೆಲ್ಲ ಕೊಡಿಸಿದನು. ಈ ವಸ್ತುಗಳನ್ನೆಲ್ಲ ವಿಭೀಷಣಾಜ್ಞೆಯಿಂದ ಎಂಭತ್ತುಸಾವಿರಮಂದಿ ರಾಕ್ಷಸರು ಸಾಗಿಸಿಕೊಂಡು ಆ ಘಟೋತ್ಕಚನನ್ನು ಮುಂದಿಟ್ಟುಕೊಂಡು ಸಹದೇವನಬಳಿಗೆ ಹೊರಟರು. ಘಟೋತ್ಕಚನು ಹೊರಡುವಾಗ ವಿಭೀಷಣನಿಗೆ ನಮಸ್ಕರಿಸಿ, ಕೈಮುಗಿದು, ಅವನನ್ನು ಪ್ರದಕ್ಷಿಣವಾಗಿ ಸುತ್ತಿ

ಬಂದನು. ಆಮೇಲೆ ಎಲ್ಲಾ ರಾಕ್ಷಸರೊಡನೆ ಹೊರಟು ಸಮುದ್ರವನ್ನು ದಾಟಿ ಸಹದೇವನಬಳಿಗೆ ಬಂದನು. ಆಗ ಸಹದೇವನು ಅಷ್ಟುಮಂದಿ ಭಯಂಕರ ರಾಕ್ಷಸರು ಅಪಾರರತ್ನಗಳನ್ನು ಹೊತ್ತುತಂದಿರುವುದನ್ನೂ, ಘಟೋತ್ಕಚನು ಅವರನ್ನೆಲ್ಲ ತನ್ನಹಿಂದೆ ಕರೆತಂದುದನ್ನೂ ನೋಡಿ ಬೆರಗಾದನು. ಆ ರಾಕ್ಷಸರ ಸ್ವರೂಪವನ್ನು ನೋಡಿ, ಆ ದ್ರವಿಡದೇಶದ ಜನರೆಲ್ಲರೂ ಭಯದಿಂದ ಓಡುವುದಕ್ಕಾರಂಭಿಸಿದರು. ಘಟೋತ್ಕಚನು ತರಿಸಿಕೊಂಡುಬಂದ ರತ್ನಗಳನ್ನೆಲ್ಲ ಸಹದೇವನಮುಂದೆ ಇರಿಸಿ ವಿನಯದಿಂದ ಕೈಮುಗಿದು ನಿಂತನು. ಆ ರತ್ನರಾಶಿಯನ್ನು ನೋಡಿ ಸಹದೇವನಿಗೆ ಸಂತೋಷವು ಉಕ್ಕಿಬರಲು, ಘಟೋತ್ಕಚನನ್ನು ಕೈನೀಡಿ ಆಲಿಂಗಿಸಿಕೊಂಡನು ಆಮೇಲೆ ದ್ರವಿಡದೇಶದ ಜನರನ್ನೆಲ್ಲ ಕಳುಹಿಸಿಕೊಟ್ಟು ಅಲ್ಲಿಂದ ಹಿಂತಿರುಗಿದನು.

ಓ ಜನಮೇಜಯರಾಜಾ! ಹೀಗೆ ಸಹದೇವನು ದಕ್ಷಿಣದಿಕ್ಕಿನಲ್ಲಿ ತನ್ನ ಪರಾಕ್ರಮದಿಂದಲೂ, ಮೃದುವಾಕ್ಯದಿಂದಲೂ, ತನಗೆ ಕೈಗೂಡಿಬಂದ ಜಯಲಕ್ಷ್ಮಿಯಿಂದಲೂ, ಅನೇಕ ರಾಜರನ್ನು ಜಯಿಸಿ, ಅವರಿಂದ ಕಪ್ಪವನ್ನು ಸಂಗ್ರಹಿಸಿಕೊಂಡು ಹೊರಟನು. ಆ ಯಜ್ಞಶಾಲೆಗೆ ಬೇಕಾದ ಹದಿನಾಲ್ಕು ತಾಳೆಯ ಮರಗಳನ್ನೂ ಆ ರಾಕ್ಷಸರಿಂದಲೇ ಹೊರಿಸಿಕೊಂಡು, ತನ್ನ ಸಮಸ್ತ ಪರಿವಾರಗಳೊಡನೆ ವೇಗದಿಂದ ಇಂದ್ರಪ್ರಸ್ಥಕ್ಕೆ ಬಂದು, ತಾನು ತಂದ ಧನರಾಶಿಗಳನ್ನೆಲ್ಲ ಧರ್ಮರಾಜನಿಗೆ ಒಪ್ಪಿಸಿ ಕೈಮುಗಿದು ನಮಸ್ಕರಿಸಿದನು. ಆಗ ಧರ್ಮರಾಜನು, ಎಂಥವರಿಗೂ ದುರ್ಲಭವಾದ ಅಷ್ಟೊಂದು ಧನರಾಶಿಯು ಲಂಕೆಯಿಂದ ತನಗೆ ಬಂದುದನ್ನು ನೋಡಿ ಸಂತೋಷಾಶ್ಚರ್ಯಗಳಲ್ಲಿ ಮಗ್ನನಾದನು. ಸಹಸ್ರಕೋಟಿಗಳಿಗಿಂತಲೂ, ಅಧಿಕವಾದ ಧನವನ್ನೂ, ವಿವಿಧರತ್ನಗಳನ್ನೂ, ಗೋವುಗಳು, ಆಡುಗಳು ಕುರಿಗಳು, ಎಮ್ಮೆಗಳು ಮುಂತಾದ ಮೃಗಗಳನ್ನೂ ಸಹದೇವನು ಧರ್ಮರಾಜನಿಗೆ ಒಪ್ಪಿಸಿ, ತಾನು ಕೃತಾರ್ಥನಾದೆನೆಂದು ತಿಳಿದು ಸುಖದಿಂದಿದ್ದನು.

ಇದು ಮೂವತ್ತುನಾಲ್ಕನೆಯ ಅಧ್ಯಾಯವು.

## ನಕುಲನ ಪಶ್ಚಿಮದಿಗ್ವಿಜಯವು.

ಓ ಜನಮೇಜಯರಾಜಾ! ಇನ್ನು ನಕುಲನ ವಿಜಯಕಾರ್ಯಗಳನ್ನು ತಿಳಿಸುವೆನು ಕೇಳು. ಹಿಂದೆ ಪೌಂಡ್ರಕವಾಸುದೇವನು ಜಯಿಸಿ ವಶಪಡಿಸಿಕೊಂಡಿದ್ದ ಪಶ್ಚಿಮದಿಕ್ಕನ್ನೆಲ್ಲ ಇವನು ವಶಮಾಡಿಕೊಂಡನು. ಅವನು ದೊಡ್ಡ ಸೈನ್ಯದೊಡನೆ ಹೊರಟು, ತನ್ನ ಸಿಂಹನಾದಗಳಿಂದಲೂ, ಸೈನಿಕರ ಗರ್ಜನೆಗಳಿಂದಲೂ, ರಥನೇಮಿ ಧ್ವನಿಗಳಿಂದಲೂ, ಭೂಮಿಯನ್ನು ನಡುಗಿಸುವಂತೆ ಪ್ರಯಾಣಮಾಡಿ, ಮೊದಲು ರೋಹಿತಕ ಪರ್ವತಕ್ಕೆ ಬಂದನು. ಅದು ಧನಧಾನ್ಯಗಳಿಂದಲೂ, ಗೋಧನಗಳಿಂದಲೂ, ಸಮೃದ್ಧವಾದುದು. ಕುಮಾರಸ್ವಾಮಿಗೆ ಅತ್ಯಂತಪ್ರಿಯವಾದ ಸ್ಥಳವು. ಅಲ್ಲಿ ಮಹಾಶೂರರಾದ ಮತ್ತಮಯೂರರೆಂಬ ರಾಜರೊಡನೆ ನಕುಲನಿಗೆ ದೊಡ್ಡ ಯುದ್ಧವಾಯಿತು. ಆದರೇನು? ನಕುಲನು ಅವರನ್ನೆಲ್ಲ ಜಯಿಸಿ, ಅವರಿಗೆ ಅಧೀನವಾಗಿದ್ದ ಮರುಭೂಮಿಯನ್ನೂ, ಹಾಗೆಯೇ ಬಹುಧಾನ್ಯಕ, ಶೈರೀಷಕ, ಮಹೇಂದ್ರವೆಂಬ ದೇಶಗಳನ್ನೆಲ್ಲ ವಶಪಡಿಸಿಕೊಂಡನು. ಆಮೇಲೆ ದಶಾರ್ಣದೇಶದ ಆಕ್ರೋಶನೆಂಬ ರಾಜಋಷಿಯೊಡನೆ ನಕುಲನಿಗೆ ದೊಡ್ಡ ಯುದ್ಧವು ಜರುಗಿತು. ಆ ರಾಜನನ್ನೂ ಜಯಿಸಿ ದಶಾರ್ಣದೇಶಗಳನ್ನೆಲ್ಲ ತನ್ನ ವಶಪಡಿಸಿಕೊಂಡು ಮುಂದೆ ಹೊರಟನು. ಅಲ್ಲಿಂದ ಮುಂದೆ ಕ್ರಮವಾಗಿ, ಶಿಬಿಗಳು, ತ್ರಿಗರ್ತರು, ಅಂಬಷ್ಠರು, ಮಾಲವರು, ಕರ್ಪಟರೆಂಬ ಐದುದೇಶದ ರಾಜರನ್ನೂ, ಮಧ್ಯಮಕದೇಶೀಯರನ್ನೂ ಜಯಿಸಿದನು. ಆಮೇಲೆ ಬ್ರಾಹ್ಮಣಜಾತಿಯ ವಾಟಧಾನರೆಂಬವರನ್ನು ಜಯಿಸಿದನು. ಅಲ್ಲಿಂದ ತಿರುಗಿ ಸ್ವಲ್ಪ ಹಿಂದೆಬಂದು ಪುಷ್ಕರಾರಣ್ಯದಲ್ಲಿರುವ ಉತ್ಸವಸಂಕೇತಗಳೆಂಬ ಕೆಲವು ಪಂಗಡದವರನ್ನು ಜಯಿಸಿದನು. ಆಮೇಲೆ ಸಿಂಧುನದೀತೀರದಲ್ಲಿರುವ ಮಹಾಬಲಾಢ್ಯರಾದ ಗ್ರಾಮಣೀಯರೆಂಬವರನ್ನು ನಿಗ್ರಹಿಸಿದನು. ಆಮೇಲೆ ಸರಸ್ವತೀನದಿಯ ತೀರದಲ್ಲಿದ್ದುಕೊಂಡು ಮತ್ಸ್ಯಗಳಿಂದಲೇ ಜೀವಿಸುವ ಶೂದ್ರರು, ಗೊಲ್ಲರು ಮುಂತಾದ ಬೇರೆಬೇರೆ ಜಾತಿಯವರನ್ನೂ, ಪರ್ವತವಾಸಿಗಳನ್ನೂ ಜಯಿಸಿದನು. ಹೀಗೆ ನಕುಲನು, ಪಂಚನದವೆಂಬ ಪ್ರಾಂತ್ಯವನ್ನೆಲ್ಲ ಆಕ್ರಮಿಸಿಕೊಂಡು, ಅಮರ

ಪರ್ವತವೆಂಬ ಬೆಟ್ಟವನ್ನು ವಶಪಡಿಸಿಕೊಂಡನು. ಅಲ್ಲಿಂದ ಮುಂದೆ ಉತ್ತರಜ್ಯೋತಿಷ, ದಿವ್ಯಕಟವೆಂಬ ಪಟ್ಟಣಗಳನ್ನು ಜಯಿಸಿದನು. ಈ ಪಟ್ಟಣಗಳಿಗೆ ಹೊರಗಾವಲಾಗಿದ್ದ ರಾಜರನ್ನೂ ಸುಲಭವಾಗಿ ನಿಗ್ರಹಿಸಿದನು. ಅಲ್ಲಿಂದ ಮುಂದೆ ರಾಮಕರು, ಹಾರರು, ಹೂಣರು, ಮೊದಲಾಗಿ ಇನ್ನೂ ಪಶ್ಚಿಮದಿಕ್ಕಿನಲ್ಲಿರುವ ಯಾವಯಾವ ರಾಜರುಂಟೋ ಅವರನ್ನೆಲ್ಲ ತನ್ನ ಆಜ್ಞಾಮಾತ್ರದಿಂದಲೇ ವಶಮಾಡಿಕೊಂಡನು. ತಾನು ಆ ಸ್ಥಳದಲ್ಲಿದ್ದುಕೊಂಡೇ ವಾಸುದೇವನೆಂಬವನ ಬಳಿಗೆ ದೂತನನ್ನು ಕಳುಹಿಸಿದನು. ಆ ರಾಜನು ಲಜ್ಜೆಯಿಲ್ಲದೆ ನಕುಲನ ಶಾಸನಕ್ಕೆ ಅಧೀನವಾಗಿಬಿಟ್ಟನು. ಆಮೇಲೆ ನಕುಲನು, ಮದ್ರದೇಶಗಳಿಗೆ ರಾಜಧಾನಿಯಾದ ಶಾಕಲನಗರಕ್ಕೆ ಹೋಗಿ, ತನ್ನ ಮಾವನಾದ ಶಲ್ಯನನ್ನು ಪ್ರಿಯವಾಕ್ಯದಿಂದಲೇ ಕಪ್ಪವನ್ನು ಕೊಡುವಂತೆ ಮಾಡಿದನು. ಮತ್ತು ಅವನಿಂದ ಸತ್ಕಾರಗಳನ್ನು ಪಡೆದು ಬೇಕಾದಷ್ಟು ರತ್ನಗಳನ್ನು ತೆಗೆದುಕೊಂಡು ಮುಂದೆ ಹೊರಟನು. ಅಲ್ಲಿಂದ ಮುಂದೆ ಸಮುದ್ರಮಧ್ಯದ್ವೀಪಗಳಲ್ಲಿ ವಾಸಮಾಡತಕ್ಕ ಅತಿ ಕ್ರೂರಸ್ವಭಾವವುಳ್ಳ ಪಲ್ಲವರು, ಬರ್ಬರರು, ಕಿರಾತರು, ಯವನರು, ಶಕರು ಎಂಬ ಮ್ಲೇಚ್ಛಜಾತಿಯವರನ್ನೆಲ್ಲ ಅಡಗಿಸಿ, ಅವರಲ್ಲಿದ್ದ ಅನೇಕರತ್ನಗಳನ್ನು ಸಂಗ್ರಹಿಸಿಕೊಂಡನು. ಓ ಜನಮೇಜಯರಾಜಾ! ಮಹಾಬಲಶಾಲಿಯೂ, ವಿಚಿತ್ರೋಪಾಯಗಳನ್ನು ತಿಳಿದವನೂ ಆದ ನಕುಲನು ಸಂಪಾದಿಸಿದ ಆ ಅಪಾರಧನವನ್ನೆಲ್ಲ ಹತ್ತುಸಾವಿರ ಒಂಟೆಗಳು ಎಷ್ಟೋ ಕಷ್ಟದಿಂದ ಹೊತ್ತುತಂದುವು. ಹೀಗೆ ಜಯಲಕ್ಷ್ಮೀಸಂಪನ್ನನಾದ ನಕುಲನು ಮೊದಲೇ ಪೌಂಡ್ರಕವಾಸುದೇವನಿಂದ ಜಯಿಸಲ್ಪಟ್ಟಿದ್ದ ವರುಣದಿಕ್ಕನ್ನೆಲ್ಲ ಪೂರ್ಣವಾಗಿ ವಶಪಡಿಸಿಕೊಂಡು ಹಿಂತಿರುಗಿ, ತಾನು ತಂದ ಧನರಾಶಿಯನ್ನು ಧರ್ಮರಾಜನಿಗೆ ಒಪ್ಪಿಸಿದನು.

ಇದು ಮೂವತ್ತೈದನೆಯ ಅಧ್ಯಾಯವು.

**ಇಲ್ಲಿಗೆ ದಿಗ್ವಿಜಯಪರ್ವವು ಮುಗಿದುದು.**



# ರಾಜಸೂಯಪರ್ವವು.

---

ಕೃಷ್ಣಾಜ್ಞೆಯಿಂದ ಯುಧಿಷ್ಠಿರನು ಯಜ್ಞಸಾಮಗ್ರಿಗಳನ್ನು ಸಂಗ್ರಹಿಸಿದುದು. ವ್ಯಾಸಮಹರ್ಷಿಯು ಋತ್ವಿಕ್ಕುಗಳನ್ನು ಕರೆಸಿದುದು. ಅನೇಕ ಕ್ಷತ್ರಿಯರನ್ನೂ, ಬ್ರಾಹ್ಮಣರನ್ನೂ ಕರೆಸುವುದಕ್ಕಾಗಿ ದೂತರನ್ನು ಕಳುಹಿಸಿದುದು. ಧೃತರಾಷ್ಟ್ರಾದಿಗಳನ್ನು ಕರೆಯುವುದಕ್ಕಾಗಿ ನಕುಲನು ಹೊರಟುದು. ಧರ್ಮರಾಜನ ಯಜ್ಞದೀಕ್ಷೆ.

ಓ ಜನಮೇಜಯರಾಜಾ! ಕೇಳು! ಧರ್ಮರಾಜನ ಧರ್ಮಪರಿಪಾಲನದಿಂದಲೂ, ಅವನು ಸತ್ಯನಿರತನಾಗಿದ್ದುದರಿಂದಲೂ, ಶತ್ರುಗಳೆಲ್ಲರೂ ಅಡಗಿದುದರಿಂದಲೂ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಸ್ವಕರ್ಮಗಳಲ್ಲಿ ನಿರತರಾಗಿದ್ದರು. ನ್ಯಾಯವಾದ ಕಪ್ಪಗಳನ್ನು ತೆಗೆಯುವುದು, ಧರ್ಮದಿಂದ ಪ್ರಜೆಗಳನ್ನು ನಡೆಸುವುದು, ಇವುಗಳಿಂದ ಧರ್ಮರಾಜನ ರಾಜ್ಯದಲ್ಲಿ ಸಮೃದ್ಧವಾಗಿ ಕಾಲಕಾಲಕ್ಕೆ ಮಳೆಯು ಸುರಿಯುತ್ತಿತ್ತು. ದೇಶವೆಲ್ಲ ಸಂಪತ್ಸಮೃದ್ಧಿಯಿಂದ ತುಂಬಿದ್ದಿತು. ಕೃಷಿ, ವಾಣಿಜ್ಯ, ಗೋರಕ್ಷಣೆ, ಮುಂತಾದ ಎಲ್ಲಾ ವೃತ್ತಿಗಳೂ ಧರ್ಮರಾಜನ ಧರ್ಮಪಾಲನದಿಂದ ಚೆನ್ನಾಗಿ ನಡೆಯುತ್ತಿದ್ದುವು. ಕಳ್ಳತನ, ಮೋಸ, ಮುಂತಾದುವುಗಳೊಂದೂ ಅಲ್ಲಿರಲಿಲ್ಲ. ರಾಜಾಭಿಮಾನಕ್ಕೆ ಪಾತ್ರರಾದವರಿಂದಲೂ ಜನಗಳಿಗೆ ಯಾವ ಬಾಧೆಯೂ ಇರಲಿಲ್ಲ. ಸುಳ್ಳುಮಾತುಗಳು ಅಲ್ಲಿ ಕಿವಿಗೆ ಬೀಳುತ್ತಲೇ ಇರಲಿಲ್ಲ. ಧರ್ಮನಿರತನಾದ ಯುಧಿಷ್ಠಿರನ ರಾಜ್ಯದಲ್ಲಿ ಅತಿವೃಷ್ಟಿ, ಅನಾವೃಷ್ಟಿ, ರೋಗಭಯ, ಅಗ್ನಿಭಯ, ಮುಂತಾದುವೊಂದೂ ಇರಲಿಲ್ಲ. ಅನೇಕ ಪ್ರಬಲಕ್ಷತ್ರಿಯರು ಕೂಡ ಧರ್ಮರಾಜನಿಗೆ ಪ್ರಿಯವನ್ನುಂಟುಮಾಡುವುದಕ್ಕಾಗಲಿ, ಅವನ ಸೇವೆ ಮಾಡುವುದಕ್ಕಾಗಲಿ, ಪದ್ಧತಿಯಿಂದ ಸಲ್ಲಿಸಬೇಕಾದ ಕಪ್ಪಗಳನ್ನು ಸಲ್ಲಿಸುವುದಕ್ಕಾಗಲಿ ಅವನಲ್ಲಿಗೆ ಬರುತ್ತಿದ್ದರೇಹೊರತು, ಬೇರೆ ಯಾವ ದುರುದ್ದೇಶದಿಂದಲೂ ಬರುತ್ತಿರಲಿಲ್ಲ. ಧರ್ಮಾರ್ಜಿತವಾದ

ಹಣದಿಂದ ಧರ್ಮರಾಜನ ಬೊಕ್ಕಸವು ವಿಶೇಷವೃದ್ಧಿಯನ್ನು ಹೊಂದಿ, ನೂರಾರು ವರ್ಷಗಳು ವೆಚ್ಚಮಾಡಿದರೂ ಅದು ಕ್ಷೀಣಿಸದಸ್ಥಿತಿಯಲ್ಲಿದ್ದಿತು. ಧರ್ಮರಾಜನು ತನ್ನ ಧಾನ್ಯಶಾಲೆ, ಧನಶಾಲೆ ಇವೆರಡೂ ಸಮೃದ್ಧವಾಗಿರುವುದನ್ನು ನೋಡಿದಮೇಲೆ ಅವನಿಗೆ ಯಜ್ಞದಲ್ಲಿ ಮನಸ್ಸುಹುಟ್ಟಿತು. ಅವನ ಮಿತ್ರರೆಲ್ಲರೂ ಬೇರೆಬೇರೆಯಾಗಿಯೂ, ಒಟ್ಟಾಗಿಯೂ ಅವನಲ್ಲಿಗೆ ಬಂದು "ಓ ಪ್ರಭೂ! ನಿನಗೆ ಯಜ್ಞಮಾಡುವುದಕ್ಕೆ ಇದು ತಕ್ಕ ಕಾಲವು. ಅದಕ್ಕೆ ಬೇಕಾದುದನ್ನು ಈಗಲೇ ಮಾಡುವುದು ಯುಕ್ತವು" ಎಂದರು. ಹೀಗೆ ಅವರು ಮಾತಾಡುತ್ತಿರುವಾಗಲೇ ಪುರಾತನಮಹರ್ಷಿಯೆನಿಸಿಕೊಂಡು, ವೇದಸ್ವರೂಪಿಯಾಗಿ, ತನ್ನ ತತ್ವಗಳನ್ನು ತಿಳಿದ ಜ್ಞಾನಿಗಳಿಗೆ ಮಾತ್ರವೇ ಕಾಣಿಸತಕ್ಕವನೂ ಆದ ಶ್ರೀಕೃಷ್ಣನು, ತಂದೆಯಾದ ವಸುದೇವನನ್ನು ಯಾದವಸೈನ್ಯಕ್ಕೆಲ್ಲ ರಕ್ಷಕನಾಗಿರುವಂತೆ ಪ್ರಾರ್ಥಿಸಿ, ತಾನು ದೊಡ್ಡ ಸೈನ್ಯದೊಡನೆ ಧರ್ಮರಾಜನಿಗಾಗಿ ವಿಶೇಷದ್ರವ್ಯವನ್ನು ತೆಗೆದುಕೊಂಡು ಅಲ್ಲಿಗೆ ಬಂದು ಸೇರಿದನು. ಸಮುದ್ರದಂತೆ ಅಪಾರವಾಗಿಯೂ, ಅಕ್ಷಯವಾಗಿಯೂ ಇರುವ ಧನರಾಶಿಯನ್ನು ಸಾಗಿಸಿಕೊಂಡು ತನ್ನ ರಥಘೋಷದಿಂದ ನಗರವನ್ನೆಲ್ಲ ಮೊಳಗಿಸುವಂತೆ ವೇಗದಿಂದ ಬಂದು ಇಂದ್ರಪ್ರಸ್ಥವನ್ನು ಪ್ರವೇಶಿಸಿದನು. ಮೊದಲೇ ಪೂರ್ಣವಾದ ಆ ನಗರವನ್ನು ತನ್ನ ಸಾನ್ನಿಧ್ಯದಿಂದ ಮತ್ತಷ್ಟು ಪೂರ್ಣಮಾಡಿ ಪಾಂಡವವೈರಿಗಳಿಗೆಲ್ಲ ದುಃಖವನ್ನುಂಟುಮಾಡುವವನಾದನು. ಸೂರ್ಯನಿಲ್ಲದ ಸ್ಥಳಕ್ಕೆ ಸೂರ್ಯನೂ, ಗಾಳಿಯಿಲ್ಲದ ಸ್ಥಳಕ್ಕೆ ಗಾಳಿಯೂ ಬಂದು ಸೇರಿದಂತೆ, ಕೃಷ್ಣನು ಬಂದುದರಿಂದ ಇಂದ್ರಪ್ರಸ್ಥನಗರವೆಲ್ಲವೂ ಅಪೂರ್ವವಾದ ಉಲ್ಲಾಸವನ್ನು ಹೊಂದಿತು. ಶ್ರೀಕೃಷ್ಣನು ಬಂದೊಡನೆ ಧರ್ಮರಾಜನು ಪರಮಹರ್ಷದಿಂದ ಇದಿರುಗೊಂಡು ಬಂದು ಶಾಸ್ತ್ರೋಕ್ತವಾಗಿ ಸತ್ಕರಿಸಿ ಸುಖಾಸನವನ್ನು ಕೊಟ್ಟು ಕುಳ್ಳಿರಿಸಿ ಕುಶಲಪ್ರಶ್ನೆಯನ್ನು ಮಾಡಿದನು. ಧೌಮ್ಯರು, ವ್ಯಾಸರು ಮೊದಲಾದ ಮಹರ್ಷಿಗಳೂ, ಋತ್ವಿಕ್ಕುಗಳೂ ಭೀಮಾರ್ಜುನ ನಕುಲಸಹದೇವರೂ ತನ್ನನ್ನು ಸುತ್ತಿರಲು ಯುಧಿಷ್ಠಿರನು ಕೃಷ್ಣನನ್ನು ಕುರಿತು "ಕೃಷ್ಣಾ! ನಿನ್ನಿಂದಲೇ ಈ ಭೂಮಿಯೆಲ್ಲ ನನ್ನ ವಶವಾಗಿದೆ. ನಿನ್ನ ಅನುಗ್ರಹದಿಂದಲೇ ನನಗೆ ವಿಶೇಷ ಧನವೂ ಲಭಿಸಿದೆ. ಈ ಧನವನ್ನೆಲ್ಲ

ಬ್ರಾಹ್ಮಣೋತ್ತಮರಿಗೂ, ಯಾಗಕಾರ್ಯಕ್ಕೂ ವಿಧ್ಯುಕ್ತವಾಗಿ ವಿನಿಯೋಗಿಸಬೇಕೆಂಬುದು ನನ್ನ ಬಯಕೆ. ಓ ದಾಶಾರ್ಹಾ! ನಿನ್ನನ್ನು ಮುಂದಿಟ್ಟುಕೊಂಡೇ ನಾನು ನನ್ನ ತಮ್ಮಂದಿರೊಡನೆ ರಾಜಸೂಯವನ್ನು ನಡೆಸಬೇಕೆಂದಿರುವೆನು. ಆದುದರಿಂದ ಈ ಯಜ್ಞದೀಕ್ಷೆಯನ್ನು ನೀನೇ ನಡೆಸಿಕೊಳ್ಳುವನಾಗು. ನೀನು ಯಾಗಮಾಡುವುದರಿಂದಲೇ ನಾವೆಲ್ಲರೂ ಪಾಪವಿಮುಕ್ತರಾಗುವೆವು. ಹಾಗಿಲ್ಲವೇ ಈ ನನ್ನ ಸಹೋದರರೊಡನೆ ನಾನೇ ಯಜ್ಞವನ್ನು ನಡೆಸುವುದಕ್ಕಾದರೂ ಅನುಜ್ಞೆಯನ್ನು ಕೊಡು. ನಿನ್ನ ಅನುಮತಿಯಿಂದಲೇ ಆ ಮಹಾಯಜ್ಞವನ್ನು ನಾನು ನಡೆಸುವೆನು" ಎಂದನು. ಆಗ ಕೃಷ್ಣನು ಧರ್ಮರಾಜನ ಗುಣಾತಿಶಯಗಳನ್ನು ಕುರಿತು ಬಹಳವಾಗಿ ಪ್ರಶಂಸೆಮಾಡುತ್ತ ಅವನನ್ನು ಕುರಿತು, "ಓ ರಾಜಶಾರ್ದೂಲಾ! ನೀನು ರಾಜಾಧಿರಾಜನೆನಿಸಿಕೊಂಡವನು. ಈ ಮಹಾಯಾಗವನ್ನು ಮಾಡುವುದಕ್ಕೆ ನೀನೇ ಅರ್ಹನು. ಆ ಯಾಗಫಲವನ್ನು ನೀನೇ ಪಡೆಯುವವನಾಗು. ಅದರಿಂದ ನಾವೂ ಕೃತಾರ್ಥರಾಗುವೆವು. ನೀನು ಉದ್ದೇಶಿಸಿರುವ ಯಜ್ಞವನ್ನು ನಡೆಸು. ನಾನು ಯಾವಾಗಲೂ ನಿನ್ನ ಶ್ರೇಯಸ್ಸಿಗಾಗಿ ಕೈಕಟ್ಟಿ ನಿಂತಿರುವೆನು. ನಾನು ಮಾಡಬೇಕಾದ ಕಾರ್ಯವೇನಿದ್ದರೂ ನನಗೆ ಆಜ್ಞಾಪಿಸು. ನೀನು ಹೇಳಿದುದನ್ನೆಲ್ಲ ನಡೆಸುವೆನು" ಎಂದನು.

ಅದಕ್ಕಾ ಯುಧಿಷ್ಠಿರನು "ಓ ಹೃಷೀಕೇಶಾ! ನಾನು ಮನಸ್ಸಿನಲ್ಲಿ ನೆನೆಸಿದೊಡನೆ ನೀನು ಇಲ್ಲಿಗೆ ಬಂದಾಗಲೇ ನನ್ನ ಸಂಕಲ್ಪವು ಸಿದ್ಧಿಸಿದಂತೆಯೇ! ನನ್ನ ಕಾರ್ಯಸಿದ್ಧಿಯೂ ನಿಶ್ಚಯವೇ" ಎಂದು ಹೇಳಿ, ಉದ್ದೇಶಿಸಿದ ರಾಜಸೂಯಯಾಗಕ್ಕೆ ಬೇಕಾದ ಸಾಧನಗಳನ್ನೆಲ್ಲ ಸಿದ್ಧಪಡಿಸತೊಡಗಿದನು. ಸಹದೇವನನ್ನೂ, ಮಂತ್ರಿಗಳನ್ನೂ ಕರೆಸಿ, "ಸಹದೇವಾ! ಎಲೈ ಮಂತ್ರಿಗಳೇ! ಈ ಯಜ್ಞಕ್ಕೆ ಶಾಸ್ತ್ರೋಕ್ತಗಳಾದ ಅಂಗಗಳನ್ನೂ, ಮಂಗಳಸಾಮಗ್ರಿಗಳನ್ನೂ, ಇತರ ಸಲಕರಣೆಗಳನ್ನೂ ಬ್ರಾಹ್ಮಣರು ಹೇಳಿದಂತೆ ಸಿದ್ಧಪಡಿಸಿರಿ! ನಮ್ಮ ಪುರೋಹಿತರಾದ ಧೌಮ್ಯರು ಹೇಳುವ ಯಜ್ಞಸಂಭಾರಗಳನ್ನೆಲ್ಲ ಶೀಘ್ರದಲ್ಲಿಯೇ ತರಿಸಿಡಿರಿ. ಇಂದ್ರ

ಸೇನನು, ವಿಶೋಕನು, ಅರ್ಜುನಸಾರಥಿಯಾದ ಪೂರು, ಇವರನ್ನು ಅನ್ನಾದಿಗಳನ್ನು ಸಿದ್ಧಪಡಿಸುವುದಕ್ಕೆ ನಿಯಮಿಸಿರಿ. ಬ್ರಾಹ್ಮಣರಿಗೆ ಪ್ರೀತಿಕರವಾಗುವಂತೆ ಒಳ್ಳೇ ರುಚಿಯಿಂದಲೂ, ಸುಗಂಧದಿಂದಲೂ ಕೂಡಿದ ಎಲ್ಲಾ ಆಹಾರಗಳೂ ಸಿದ್ಧಪಡಿಸಲ್ಪಡಲಿ!'' ಎಂದನು. ಸಹದೇವನು ಈ ಮಾತನ್ನು ಕೇಳಿದೊಡನೆ ‘‘ಅಣ್ಣಾ! ಎಲ್ಲವೂ ಸಿದ್ಧವಾಗಿಯೇ ಇರುವುವು'' ಎಂದನು. ಇಷ್ಟರಲ್ಲಿಯೇ ವ್ಯಾಸಮಹರ್ಷಿಯು ಮೂರ್ತಿಮತ್ತಾದ ವೇದಗಳಂತಿರುವ ಶುದ್ಧರಾದ ಬ್ರಾಹ್ಮಣರನ್ನು ಋತ್ವಿಕ್ಕುಗಳನ್ನಾಗಿ ಆಮಂತ್ರಿಸಿ ಕರೆಸಿದನು. ತಾನೇ ಬ್ರಹ್ಮಸ್ಥಾನಕ್ಕೆ ನಿಂತು ಕೆಲಸಗಳನ್ನು ಮಾಡಿಸಿದನು. ಧನಂಜಯಗೋತ್ರದಲ್ಲಿ ಶ್ರೇಷ್ಠನೆನಿಸಿದ ಸುಸಾಮನು ಸಾಮವೇದವನ್ನು ಪಾರಾಯಣಮಾಡುವ ಉದ್ಗಾತೃಸ್ಥಾನದಲ್ಲಿದ್ದನು. ಬ್ರಹ್ಮಜ್ಞಾನಿಗಳಲ್ಲಿ ಮೇಲೆನಿಸಿದ ಯಾಜ್ಞವಲ್ಕ್ಯನು ಯಜುರ್ವೇದಗಳನ್ನು ಪಾರಾಯಣಮಾಡುವವರಿಗೆ ಪ್ರಧಾನವಾದ ಅಧ್ವರ್ಯುವೆನಿಸಿದನು. ವಸುಪುತ್ರನಾದ ಪೈಲನೆಂಬವನು ಧೌಮ್ಯರೊಡನೆ ಸೇರಿ ಋಗ್ವೇದವನ್ನು ಪಠಿಸುವವರಿಗೆ ಪ್ರಧಾನವಾದ ಹೋತೃಸ್ಥಾನದಲ್ಲಿದ್ದನು. ವೇದವೇದಾಂತಗಳಲ್ಲಿ ಪಾರಂಗತರೆನಿಸಿದ ಇವರ ಮಕ್ಕಳು, ಶಿಷ್ಯರು, ಮೊದಲಾದವರೆಲ್ಲ ಹೋತೃಸ್ಥಾನದಲ್ಲಿಯೇ ಇದ್ದರು. ಅವರೆಲ್ಲರೂ ಮೊದಲು ಪುಣ್ಯಾಹವಾಚನವನ್ನು ಮಾಡಿಸಿ, ಶಾಸ್ತ್ರೋಕ್ತವಾದ ಮಹಾಸಂಕಲ್ಪವನ್ನು ನಡೆಸಿದರು. ಮೊದಲು ಯಜ್ಞಭೂಮಿಗೆ ಪೂಜೆಯು ನಡೆಯಿತು. ಒಳ್ಳೇ ಶಿಲ್ಪಿಗಳು ಆ ಭೂಮಿಯಲ್ಲಿ ದೇವಗೃಹಗಳಿಗೆ ಸಮಾನವಾದ ಗೃಹಗಳನ್ನು ಕಟ್ಟಿದರು. ಆ ಗೃಹಗಳೆಲ್ಲವೂ ಸುಗಂಧದಿಂದ ಘಮಘಮಿಸುತ್ತ ವಿಶಾಲವಾಗಿದ್ದುವು. ಆಮೇಲೆ ಧರ್ಮರಾಜನು ಯಾವಾಗಲೂ ತನಗೆ ಮಂತ್ರಿಯಂತಿದ್ದ ಸಹದೇವನನ್ನು ಕರೆದು ‘‘ವತ್ಸ ಸಹದೇವಾ! ಶೀಘ್ರಗಮನವುಳ್ಳ ದೂತರನ್ನು ಅಲ್ಲಲ್ಲಿಗೆ ಕಳುಹಿಸಿ, ಈ ಯಜ್ಞಕ್ಕಾಗಿ ಎಲ್ಲರನ್ನೂ ಕರೆಸು'' ಎನಲು, ಸಹದೇವನು ಅದರಂತೆಯೇ ಅನೇಕದೂತರನ್ನು ಕರೆಸಿ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ಎಲ್ಲಾ ವರ್ಣದವರನ್ನೂ ಈ ಮಹೋತ್ಸವಕ್ಕಾಗಿ ಕರೆದು ಬನ್ನಿರಿ'' ಎಂದನು. ಅದರಂತೆಯೇ ಆ ದೂತರು ಮೊದಲು ರಾಜರನ್ನೆಲ್ಲ ಕರೆದುಬಂದರು. ಇಷ್ಟರಲ್ಲಿಯೇ ಸಹದೇವನ್ನು

ಇನ್ನೂ ಅನೇಕ ದೂತರನ್ನು ಎಲ್ಲಾ ಕಡೆಗೂ ಕಳುಹಿಸಿದನು. ಅವರೆಲ್ಲರೂ ವಾಹನಗಳನ್ನೇರಿ ಅನೇಕ ರಾಷ್ಟ್ರಗಳನ್ನು ಸುತ್ತಿ ಎಲ್ಲರನ್ನೂ ಕರೆದುಬಂದರು. ಆಮೇಲೆ ಧರ್ಮರಾಜನು ನಕುಲನನ್ನು ಕರೆದು, ಭೀಷ್ಮದ್ರೋಣರನ್ನೂ, ಧೃತರಾಷ್ಟ್ರವಿದುರರನ್ನೂ, ಕೃಪನನ್ನೂ, ತನ್ನ ಜ್ಞಾತಿಗಳಾದ ದುರ್ಯೋಧನಾದಿಗಳೆಲ್ಲರನ್ನೂ, ತನ್ನಲ್ಲಿ ಪ್ರೀತಿಯುಳ್ಳ ಇಷ್ಟಮಿತ್ರರು ಯಾರುಯಾರುಂಟೋ ಅವರೆಲ್ಲರನ್ನೂ ಕರೆತರುವುದಕ್ಕಾಗಿ ಹಸ್ತಿನಾವತಿಗೆ ಕಳುಹಿಸಿದನು. ಆಮೇಲೆ ಇತ್ತಲಾಗಿ ಬ್ರಾಹ್ಮಣರು ಉಚಿತಕಾಲವನ್ನು ನೋಡಿ, ಯುಧಿಷ್ಠಿರನಿಗೆ ಯಾಗದೀಕ್ಷೆಯನ್ನು ನಡೆಸಿದರು. ಜ್ಯೇಷ್ಠ ಮತ್ತು ಮೂಲಾನಕ್ಷತ್ರಗಳೆರಡೂ ಸಂಧಿಸಿದ ಅಮಾವಾಸ್ಯೆಯದಿನದಲ್ಲಿ ಧರ್ಮರಾಜನು ಕೃಷ್ಣಾಜಿನವನ್ನು ಮೇಲುತ್ತರೀಯವಾಗಿ ಧರಿಸಿ, ಬರೀ ಚುಕ್ಕಿಯುಳ್ಳ ಮತ್ತೊಂದು ಕೃಷ್ಣಾಜಿನವನ್ನು ನಡುವಿಗೆ ಸುತ್ತಿ, ಮೈಗೆಲ್ಲಾ ಬೆಣ್ಣೆಯನ್ನು ಲೇಪನಮಾಡಿಕೊಂಡು, ಸಾವಿರಾರುಮಂದಿ ಬ್ರಾಹ್ಮಣರಿಂದ ಪರಿವೃತನಾಗಿ, ಯಜ್ಞಶಾಲೆಗೆ ಹೊರಟನು. ಆಗ ಅವನನ್ನು ಸಹೋದರರು, ಬಂಧುಗಳು, ಜ್ಞಾತಿಗಳು, ಮಿತ್ರರು, ಮಂತ್ರಿಗಳು, ನಾನಾದೇಶದಿಂದ ಬಂದ ರಾಜರು, ಪ್ರಧಾನಪುರುಷರು ಇವರೆಲ್ಲರೂ ಹಿಂಬಾಲಿಸಿಬಂದರು. ಮೂರ್ತಿಮತ್ತಾದ ಧರ್ಮದೇವತೆಯಂತೆಯೇ ಕಾಣಿಸುತ್ತ, ಅವನು ಯಜ್ಞಶಾಲೆಗೆ ಸೇರಿದನು. ಇಷ್ಟರಲ್ಲಿಯೇ ನಾನಾದೇಶಗಳಿಂದ ಸರ್ವವಿದ್ಯಾಪಾರಂಗತರೂ, ವೇದವೇದಾಂಗಗಳನ್ನು ಬಲ್ಲವರೂ ಆದ ಅನೇಕ ಬ್ರಾಹ್ಮಣರು ಯಜ್ಞಶಾಲೆಗೆ ಬಂದು ಸೇರಿದರು. ಧರ್ಮರಾಜಾಜ್ಞೆಯಿಂದ ಆ ಬ್ರಾಹ್ಮಣರೆಲ್ಲರಿಗೂ ಅವರವರ ಪರಿವಾರಗಳೊಡನೆ ಸುಖವಾಗಿರುವುದಕ್ಕೆ ಅನುಕೂಲವಾದ ಗೃಹಗಳು ನಿರ್ಮಿಸಲ್ಪಟ್ಟುವು. ಆ ಗೃಹಗಳಲ್ಲಿ ಅನ್ನವಸ್ತ್ರಾದಿಗಳೆಲ್ಲವೂ ಸಮೃದ್ಧವಾಗಿದ್ದು, ಅವು ಸಮಸ್ತಋತುಗುಣಗಳಿಂದ ಕೂಡಿದ್ದುವು. ಹೀಗೆ ಶಿಲ್ಪಿಗಳು ಕಲ್ಪಿಸಿದ ಸಾವಿರಾರು ಮನೆಗಳಲ್ಲಿ ಆ ಬ್ರಾಹ್ಮಣರೆಲ್ಲರೂ ಬಂದಿಳಿದರು. ಅವರೆಲ್ಲರೂ ರಾಜನಿಂದ ಸತ್ಕೃತರಾಗಿ, ತಮ್ಮತಮ್ಮೊಳಗೆ ವಿಧವಿಧವಾದ ಕಥೆಗಳನ್ನು ಹೇಳುತ್ತಲೂ, ನಾಟ್ಯನರ್ತನಗಳನ್ನು ನೋಡುತ್ತಲೂ ಸಂತೋಷದಿಂದಿರುತಿದ್ದರು. ಆ ಬ್ರಾಹ್ಮಣರ ಭೋಜನಸಂಭ್ರಮಗಳಿಂದಲೂ, ಅವರ ಸಂಭಾಷಣಗಳಿಂದಲೂ ಉಂಟಾ

ದ ಘೋಷವು ಎಡೆಬಿಡದೆ ಕೇಳಿಸುತ್ತಿತ್ತು. ಆ ಬ್ರಾಹ್ಮಣರ ಸಂತೋಷ ಕೋಲಾಹಲಗಳು ಯಜ್ಞಶಾಲೆಯನ್ನೆಲ್ಲ ತುಂಬಿಹೋದುವು. “ಇನ್ನೂ ಕೊಡಿರಿ! ಮತ್ತಷ್ಟು ಕೊಡಿರಿ! ಇದನ್ನು ಭುಜಿಸಿರಿ! ಅದನ್ನು ಭುಜಿಸಿರಿ!” ಎಂಬ ಮಾತುಗಳೇ ಅಲ್ಲಿ ಕೇಳಿಸುತ್ತಿತ್ತು. ಧರ್ಮರಾಜನು ಅವರೆಲ್ಲರಿಗೂ ಗೋವುಗಳನ್ನೂ, ಧನಗಳನ್ನೂ, ಸ್ತ್ರೀಯರನ್ನೂ, ಸುವರ್ಣವನ್ನೂ, ಹಾಸಿಗೆ, ಹೊದ್ದಿಕೆ, ಮೊದಲಾದುವುಗಳನ್ನೂ ಬೇರೆಬೇರೆಯಾಗಿ ಲಕ್ಷಸಂಖ್ಯೆಯಿಂದ ಕೊಟ್ಟನು. ಲೋಕೈಕವೀರನೂ ಮಹಾತ್ಮನೂ, ಆದ ಆ ಧರ್ಮರಾಜನ ಯಾಗವು, ಸ್ವರ್ಗದಲ್ಲಿ ಇಂದ್ರನ ಯಾಗವೈಭವದಂತೆ ಮಹಾತಿಶಯ ವಾಗಿ ನಡೆಯುತ್ತಿತ್ತು.

ಇದು ಮೂವತ್ತಾರನೆಯ ಅಧ್ಯಾಯವು.



## ಯಾಗಕ್ಕಾಗಿ ಕರೆಸಲಟ್ಟವರೆಲ್ಲರೂ ಇಂದ್ರಪ್ರಸ್ಥಕ್ಕೆ ಬಂದು ಸೇರಿದುದು.

ಓ ಜನಮೇಜಯರಾಜಾ! ಕೇಳು! ಧರ್ಮರಾಜನಿಂದ ದೂತರ ಮೂಲಕವಾಗಿ ಮರ್ಯಾದೆಯಿಂದ ಕರೆಸಲ್ಪಟ್ಟ ರಾಜರೆಲ್ಲರೂ, ತಮ್ಮ ತಮ್ಮ ಪಟ್ಟಣಗಳಿಂದ ಹೊರಟು, ವಿಮಾನಗಳಲ್ಲಿ ಬರುವ ದೇವತೆಗಳಂತೆ ಬಹಳ ವೈಭವದಿಂದ ಬರುತಿದ್ದರು! ನಾನಾದಿಕ್ಕುಗಳಿಂದಲೂ ರಾಜರು ಬೆಲೆಯುಳ್ಳ ನಾನಾವಿಧ ರತ್ನಗಳನ್ನೂ, ಅನೇಕ ದ್ರವ್ಯವನ್ನೂ ಕಾಣಿಕೆ ಯಾಗಿ ತೆಗೆದುಕೊಂಡು ಬಂದರು. ಅವರು ಧರ್ಮರಾಜನ ಸಭೆಯನ್ನೂ, ದೀಕ್ಷೆಯಲ್ಲಿರುವ ಧರ್ಮರಾಜನನ್ನೂ ನೋಡುವ ಆತುರದಿಂದ, ಇಂದ್ರ ಪ್ರಸ್ಥಕ್ಕೆ ಬಂದು ಸೇರಿದರು. ಅತ್ತಲಾಗಿ ಹಸ್ತಿನಾಪುರಿಗೆ ಭೀಷ್ಮಾದಿಗಳನ್ನು ಕರೆಯುವುದಕ್ಕಾಗಿ ಹೋಗಿದ್ದ ನಕುಲನು, ಮೊದಲು ಭೀಷ್ಮನನ್ನೂ, ಆ ಮೇಲೆ ಧೃತರಾಷ್ಟ್ರನನ್ನೂ ಕಂಡು ವಿನಯದಿಂದ ಅವರನ್ನು ಆಹ್ವಾನ ಮಾಡಿದನು. ಭರತವಂಶದ ಹಿರಿಯರೆಲ್ಲರನ್ನೂ ಆಮಂತ್ರಿಸಿದನು. ಮಹಾ ಧೀಮಂತನಾದ ವಿದುರನನ್ನೂ ಕರೆದನು. ದುರ್ಯೋಧನನೇ ಮೊದಲಾದ

ತನ್ನ ಜ್ಞಾತಿಗಳನ್ನೆಲ್ಲ ಕರೆದನು. ದ್ರೋಣಾಚಾರ್ಯನೇ ಮೊದಲಾದವರೆಲ್ಲರೂ, ಧರ್ಮರಾಜನು ಆರಂಭಿಸಿರುವ ಯಜ್ಞವೃತ್ತಾಂತವನ್ನು ಕೇಳಿ, ಸಂತೋಷದಿಂದ ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಹೊರಟರು. ಧೃತರಾಷ್ಟ್ರನು, ಭೀಷ್ಮನು, ವಿದುರನು, ದುರ್ಯೋಧನನೇ ಮೊದಲಾದ ಸಹೋದರರು, ಗಾಂಧಾರರಾಜನಾದ ಸುಬಲನು, ಶಕುನಿ, ಅಚಲನು, ವೃಷಕನು, ರಥಿಕಶ್ರೇಷ್ಠನಾದ ಕರ್ಣನು, ಶಲ್ಯನು, ಬಾಹ್ಲೀಕನು, ಸೋಮದತ್ತನು, ಭೂರಿಶ್ರವಸ್ಸು, ಶಲನು, ಕೃಪಾಶ್ವತ್ಥಾಮರು, ಸಿಂಧುದೇಶದ ಜಯದ್ರಥನು, ಪುತ್ರಸಹಿತನಾದ ಯಜ್ಞಸೇನನು, ಸಾಲ್ವನು, ಪ್ರಾಗ್ಜ್ಯೋತಿಷಪತಿಯಾದ ಭಗದತ್ತನು, ಇವರೆಲ್ಲರೂ ಹೊರಟುಬಂದರು. ಈ ಭಗದತ್ತನು ಸಮುದ್ರದ್ವೀಪವಾಸಿಗಳಾದ ಅನೇಕ ಮ್ಲೇಚ್ಛರಾಜರೆಲ್ಲರನ್ನೂ ತನ್ನೊಡನೆ ಕರೆತಂದನು. ಇನ್ನೂ ಪರ್ವತವಾಸಿಗಳಾದ ಅನೇಕರಾಜರೂ, ಬೃಹದ್ಬಲನೆಂಬ ರಾಜನೂ, ಪೌಂಡ್ರಕವಾಸುದೇವನೂ, ವಂಗ ಕಳಿಂಗ ರಾಜರೂ, ಹೊರಟುಬಂದರು. ಹಾಗೆಯೇ ಆಕರ್ಷರು, ಕುಂತಲರು, ಗಾಲವರು, ಆಂಧ್ರರು, ದ್ರವಿಡರು, ಸಿಂಹಲರು, ಈ ದೇಶಾಧಿಪತಿಗಳೆಲ್ಲರೂ ಬಂದರು. ಮತ್ತು ಕಾಶ್ಮೀರರಾಜನೂ, ಕುಂತಿಭೋಜನೂ, ಗೌರವಾಹನನೆಂಬ ರಾಜನೂ ಬಂದನು. ಬಾಹ್ಲೀಕ, ಶೂರಸೇನದೇಶದ ಎಲ್ಲಾ ರಾಜರೂ ಬಂದರು. ವಿರಾಟನು ತನ್ನ ಇಬ್ಬರು ಮಕ್ಕಳೊಡನೆ ಬಂದು ಸೇರಿದನು. ಮಹಾಬಲಾಢ್ಯನಾದ ಮಾವೇಲ್ಲನೆಂಬ ರಾಜನು ಬಂದು ಸೇರಿದನು. ಹೀಗೆಯೇ ನಾನಾದೇಶದ ರಾಜರೂ, ರಾಜಪುತ್ರರೂ ಬಂದರು. ಯುದ್ಧದಲ್ಲಿ ಬಹಳ ಕೊಬ್ಬುಳ್ಳ ಮತ್ತು ಮಹಾವೀರ್ಯಶಾಲಿಯಾದ ಶಿಶುಪಾಲನೂ ತನ್ನ ಮಗನೊಡನೆ ಧರ್ಮರಾಜನ ಯಜ್ಞವನ್ನು ನೋಡುವುದಕ್ಕಾಗಿ ಬಂದನು. ಮತ್ತು ಬಲರಾಮನು, ಅನಿರುದ್ಧನು, ಕಂಕಸಾರಣರು, ಗದನು, ಪ್ರದ್ಯುಮ್ನನು, ಸಾಂಬನು, ಚಾರುಧೇಷ್ಣ್ಯನು, ಉಲ್ಮುಕನು, ನಿಶಠನು, ಅಂಗಾವಹನು ಇವರೆಲ್ಲರೂ ಬಂದು ಸೇರಿದರು. ಮತ್ತು ಮಹಾರಥರಾದ ಅನೇಕ ವೃಷ್ಣಿಗಳೂ, ಮಧ್ಯದೇಶದ ಇನ್ನೂ ಅನೇಕರಾಜರೂ ಧರ್ಮರಾಜನ ರಾಜಸೂಯಯಾಗಕ್ಕಾಗಿ ಬಂದು ಸೇರಿದರು. ಧರ್ಮರಾಜನ ಆಜ್ಞೆಯಿಂದ ಒಬ್ಬೊಬ್ಬರಿಗೂ ಅನುಕೂಲವಾದ ಬೇರೆಬೇರೆ ವಸತಿ

ಗಳು ಕಲ್ಪಿಸಲ್ಪಟ್ಟುವು. ಒಂದೊಂದು ಮನೆಯಲ್ಲಿಯೂ ನಾನಾವಿಧ ಭಕ್ಷ್ಯ ಗಳೂ, ಕೊಳ, ಬಾವಿ ಮೊದಲಾದ ಸೌಕರ್ಯಗಳೂ, ಅಂದವಾದ ತೋಟ ಗಳೂ ಇದ್ದುವು. ಧರ್ಮರಾಜನು ತಾನೇ ಆ ರಾಜರೆಲ್ಲರನ್ನೂ ಕಂಡು, ಆದ ರಿಸಿ ಸತ್ಕರಿಸಿದನು. ಅವರವರು ತಮಗೆ ನಿರ್ಣೀತಗಳಾದ ಮನೆಗಳಿಗೆ ಹೋ ದರು. ಒಂದೊಂದು ಮನೆಯೂ, ಕೈಲಾಸಶಿಖರದಂತೆ ಮಹೋನ್ನತವಾ ಗಿರುವುದು. ಅಂದವಾದ ದ್ರವ್ಯಗಳಿಂದ ಶೋಭಿತವಾಗಿ ಸುತ್ತಲೂ ಬಿಳೀ ಪ್ರಾಕಾರಗಳಿಂದ ಆವರಿಸಲ್ಪಟ್ಟಿರುವುದು. ಒಂದೊಂದು ಮನೆಯೂ, ಚಿನ್ನ ದ ಗವಾಕ್ಷಗಳು, ರತ್ನದ ನೆಲಗಟ್ಟುಗಳು, ಅನಾಯಾಸವಾಗಿ ಮೇಲೇರ ತಕ್ಕ ಸೋಪಾನಗಳು, ಉತ್ತಮಾಸನಗಳು, ಪುಷ್ಪಮಾಲಿಕೆಗಳು, ಅಗರು ಧೂಪಗಳು ಇವುಗಳಿಂದ ಅಲಂಕೃತವಾಗಿರುವುದು. ಹಂಸದಂತೆಯೂ, ಚಂದ್ರನಂತೆಯೂ ಬಿಳುಪಾದ ಆ ಮನೆಗಳು ಒಂದು ಯೋಜನದೂರಕ್ಕೇ ಕಾಣುವಷ್ಟು ಎತ್ತರವಾಗಿರುವುದು. ಒಂದೊಂದು ಮನೆಯೂ ಇಕ್ಕಟ್ಟಿಲ್ಲದೆ ವಿಶಾಲವಾಗಿ, ಒಂದೇ ಸಾಲಾದ ಬಾಗಿಲುಗಳುಳ್ಳುದಾಗಿ, ಸಣ್ಣದು ದೊಡ್ಡ ದೆಂಬ ವ್ಯತ್ಯಾಸವಿಲ್ಲದೆ ಸಮಸ್ತ ಸಾಮಗ್ರಿಗಳಿಂದ ತುಂಬಿರುವುದು. ಹಲವು ಬಗೆಯ ಧಾತುಗಳಿಂದ ತುಂಬಿದ ಹಿಮವತ್ಪರ್ವತದ ಶಿಖರದಂತಿರುವುದು. ಇಂತಹ ಮನೆಗಳಲ್ಲಿಳಿದು, ಆ ರಾಜರೆಲ್ಲರೂ ಮಾರ್ಗಾಯಾಸವನ್ನು ಕಳೆದು ಕೊಂಡಮೇಲೆ ಯಾಗಶಾಲೆಗೆ ಬಂದು, ಅಲ್ಲಿ ಅನೇಕ ಸದಸ್ಯರನಡುವೆ ಭೂ ರಿದಕ್ಷಿಣೆಗಳನ್ನು ಕೊಡಿಸುತ್ತ ಯಜ್ಞದೀಕ್ಷಿತನಾಗಿದ್ದ ಧರ್ಮರಾಜನನ್ನು ಕಂಡರು. ಅನೇಕರಾಜರಿಂದಲೂ, ಬ್ರಾಹ್ಮಣರಿಂದಲೂ, ಮಹರ್ಷಿಗಳಿಂ ದಲೂ, ತುಂಬಿದ ಆ ಯಜ್ಞಸಭೆಯು ದೇವತೆಗಳಿಂದ ತುಂಬಿದ ದೇವ ಲೋಕದಂತೆ ಕಾಣಿಸಿತು.

ಇದು ಮೂವತ್ತೇಳನೆಯ ಅಧ್ಯಾಯವು.



ಧರ್ಮರಾಜನು ಭೀಷ್ಮಾದಿಗಳನ್ನು ಸನ್ಮಾನಿಸಿ, ಅವರನ್ನು ಆಯಾ ಅಧಿಕಾರಗಳಲ್ಲಿ ನಿಯಮಿಸಿದುದು. ರಾಜಸೂಯಯಾಗವು.

ಜನಮೇಜಯರಾಜಾ! ಕೇಳು! ಭೀಷ್ಮದ್ರೋಣರಿಬ್ಬರೂ ಬಂದು ದನ್ನು ಕೇಳಿದೊಡನೆ ಯುಧಿಷ್ಠಿರನು ಇದಿರೆದ್ದು ಬಂದು, ಅವರಿಗೆ ನಮಸ್ಕರಿಸಿದನು. ಆಮೇಲೆ ಭೀಷ್ಮನನ್ನೂ, ದ್ರೋಣನನ್ನೂ, ಕೃಪಾಶ್ವತ್ಥಾಮರನ್ನೂ, ದುರ್ಯೋಧನನನ್ನೂ, ವಿವಿಂಶತಿಯನ್ನೂ ಕರೆಸಿಕೊಂಡು, ಅವರನ್ನು ಕುರಿತು, ನೀವೆಲ್ಲರೂ ಈ ಯಾಗದಲ್ಲಿ ನನಗೆ ಸಹಾಯಕರಾಗಿ ಅನುಗ್ರಹಿಸಬೇಕು. ನನ್ನಲ್ಲಿರುವ ಅಪಾರ ಧನವಾವುದುಂಟೋ, ಅವೆಲ್ಲವೂ, ನಿಮ್ಮದೆಂದೇ ಭಾವಿಸಿ, ನಿಮ್ಮಿಷ್ಟದಂತೆ ವಿನಿಯೋಗಿಸಬಹುದು. ನನಗೂ, ಮುಂದೆ ನಡೆಯಬೇಕಾದ ರೀತಿಗಳನ್ನು ಆಗಾಗ ತಿಳಿಸುತ್ತಿರಬೇಕೆಂ"ದು ಹೇಳಿ ಅವರೆಲ್ಲರನ್ನೂ ಯಥಾಯೋಗ್ಯವಾಗಿ, ಆಯಾ ಅಧಿಕಾರಗಳಲ್ಲಿ ನಿಯೋಗಿಸಿದನು. ಊಟಕ್ಕಾಗಿ ಬಂದವರನ್ನು ವರಿಸೆಯಾಗಿ ಕುಳ್ಳಿರಿಸುವುದು, ಊಟಮಾಡಿ ಮಿಗಿಸಿದ ಎಂಜಲನ್ನವನ್ನು ಎತ್ತಿಹಾಕಿಸುವುದು, ಭೋಜನಕಾಲದಲ್ಲಿ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು, ಈ ಕಾರ್ಯಕ್ಕಾಗಿ ಯುಯುತ್ಸುವನ್ನು ನಿಯಮಿಸಿದನು. ಭಕ್ಷ್ಯಭೋಜ್ಯಗಳ ಅಧಿಕಾರವನ್ನು ದುಶ್ಶಾಸನನಿಗೆ ಕೊಟ್ಟನು. ಬ್ರಾಹ್ಮಣರನ್ನು ವಿಚಾರಿಸಿಕೊಳ್ಳುವುದಕ್ಕಾಗಿ ಅಶ್ವತ್ಥಾಮನನ್ನು ಪ್ರಾರ್ಥಿಸಿಕೊಂಡನು. ರಾಜರನ್ನು ಆದರಿಸುವುದಕ್ಕಾಗಿ ಸಂಜಯನನ್ನೂ, ನಡೆದುದು ನಡೆಯತಕ್ಕುದು ಇವುಗಳನ್ನು ವಿಚಾರಿಸುವುದಕ್ಕಾಗಿ ಭೀಷ್ಮದ್ರೋಣರನ್ನೂ, ಧನಕನಕ ರತ್ನಾದಿಗಳನ್ನು ನೋಡಿಕೊಳ್ಳುವುದನ್ನೂ, ದಕ್ಷಿಣೆಗಳನ್ನು ಕೊಡುವುದಕ್ಕೂ ಕೃಪಾಚಾರ್ಯನನ್ನೂ ನಿಯಮಿಸಿದನು. ಹೀಗೆಯೇ ಬೇರೆಬೇರೆ ಪ್ರಧಾನಮನುಷ್ಯರನ್ನೆಲ್ಲ ಆಯಾ ಕಾರ್ಯಗಳಲ್ಲಿ ನಿಯಮಿಸಿದನು. ಧೃತರಾಷ್ಟ್ರ, ಬಾಹ್ಲಿಕ, ಸೋಮದತ್ತ, ಜಯದ್ರಥರೆಂಬೀ ನಾಲ್ವರೂ ಮುಖ್ಯಾಧಿಕಾರಿಗಳಂತೆ ಇರಿಸಲ್ಪಟ್ಟರು. ಧರ್ಮಜ್ಞನಾದ ವಿದುರನು ಹಣದ ವೆಚ್ಚವನ್ನೆಲ್ಲ ನಡೆಸುತಿದ್ದನು. ದುರ್ಯೋಧನನು ಅಲ್ಲಲ್ಲಿಂದ ಧರ್ಮರಾಜನಿಗೆ ಬಂದ ಕಾಣಿಕೆಗಳನ್ನೆಲ್ಲ ತೆಗೆದಿಡುವ ಕಾರ್ಯಕ್ಕೆ ನಿಂತನು. ಕುಂತಿ

ಮತ್ತು ಗಾಂಧಾರಿ ಇವರಿಬ್ಬರೂ ಯಾಗಕ್ಕಾಗಿ ಬಂದ ಸ್ತ್ರೀಯರನ್ನು ಆದರಿಸುತಿದ್ದರು. ಇವರಿಬ್ಬರ ಸೊಸೆಯರೆಲ್ಲ, ತಮ್ಮ ಅತ್ತೆಯವರು ಹೇಳಿದ ಕೆಲಸಗಳನ್ನು ಮಾಡುತಿದ್ದರು. ಅರ್ಜುನನು ಆಗಾಗಿನ ಕಾರ್ಯಗಳನ್ನು ಕೃಷ್ಣನನ್ನು ಕೇಳಿ ನಡೆಸುವುದಕ್ಕಾಗಿ ಕೃಷ್ಣನಬಳಿಯಲ್ಲಿಯೇ ಇರಿಸಲ್ಪಟ್ಟನು. ಸರ್ವಲೋಕೇಶ್ವರನೂ, ಲೋಕಪೂಜಿತನೂ ಆದ ಶ್ರೀಕೃಷ್ಣನು, ಎಲ್ಲರಿಗಿಂತಲೂ ಮೇಲಾದ ಫಲವನ್ನು ಬಯಸಿ, ಅಲ್ಲಿಗೆ ಬಂದ ಬ್ರಾಹ್ಮಣರ ಪಾದವನ್ನು ತೊಳೆಯುವ ಭಾರವನ್ನು ತಾನೇ ವಹಿಸಿಕೊಂಡನು. ಧರ್ಮರಾಜನ ನೂತನಸಭೆಯನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದವರಲ್ಲಿ ಸಾವಿರಕ್ಕಿಂತಲೂ ಕಡಿಮೆಯಾಗಿ ಕಾಣಿಕೆಯನ್ನು ತಂದವನೊಬ್ಬನೂ ಇರಲಿಲ್ಲ. ಒಬ್ಬೊಬ್ಬ ರಾಜನೂ ತನ್ನಿಂದಾದಷ್ಟು ರತ್ನರಾಶಿಗಳನ್ನು ತಂದು ಧರ್ಮರಾಜನನ್ನು ಪ್ರೋತ್ಸಾಹಗೊಳಿಸುತಿದ್ದರು. ಒಬ್ಬೊಬ್ಬರೂ, ತಾವು ಕೊಡತಕ್ಕ ರತ್ನಗಳಿಂದಲೇ ಧರ್ಮರಾಜನ ಯಾಗವೆಲ್ಲ ಪೂರ್ತಿಯಾಗಬೇಕೆಂದು ಮೇಲೆಮೇಲೆ ಸ್ಪರ್ಧೆಯಿಂದ ಧನವನ್ನು ತಂದೊಪ್ಪಿಸಿದರು. ಓ ಜನಮೇಜಯರಾಜಾ! ಆಗ ಧರ್ಮರಾಜನ ಯಾಗಭೂಮಿಯಲ್ಲಿ ಎಲ್ಲಿ ನೋಡಿದರೂ ಮೇಲುಪ್ಪರಿಗೆಗಳಿಂದಲೂ, ಶಿಖರಗಳಿಂದಲೂ, ಸೇನಾಬಲರಕ್ಷಿತಗಳಾದ ಪ್ರಾಕಾರಗಳಿಂದಲೂ ಕೂಡಿದ ರಾಜಭವನಗಳು! ಅಲ್ಲಲ್ಲಿ ಯಜ್ಞದರ್ಶನಕ್ಕಾಗಿ ಬಂದ ದಿಕ್ಪಾಲಕರ ವಿಮಾನಗಳು! ಅಲ್ಲಲ್ಲಿ ಬ್ರಾಹ್ಮಣಗೃಹಗಳು! ಅಲ್ಲಲ್ಲಿ ರತ್ನಖಚಿತಗಳಾಗಿ ವಿಚಿತ್ರಾಕೃತಿಯುಳ್ಳ ವಿಮಾನಸದೃಶಗಳಾದ ಮಂದಿರಗಳು! ಕಾಣಿಸುತ್ತಿದ್ದುವು. ಐಶ್ವರ್ಯದಲ್ಲಿ ವರುಣನನ್ನೂ ಮೀರಿಸುವಂತಿರುವ ಯುಧಿಷ್ಠಿರರಾಜನು * ಆರಗ್ನಿಗಳಿಂದಲೂ, ಭೂರಿದಕ್ಷಿಣೆಗಳಿಂದಲೂ ಕೂಡಿದ ಆ ಯಾಗವನ್ನು ಆರಂಭಿಸಿ ಆಯಾಕಾಲದಲ್ಲಿ ಸಮಸ್ತ ಜನರನ್ನೂ, ಅವರವರ ಸಮಸ್ತ ಕಾಮಗಳಿಂದಲೂ ತೃಪ್ತಿಗೊಳಿಸಿದನು. ಅನ್ನಗಳಿಂದಲೂ, ಬಹುವಿಧ ಭಕ್ಷ್ಯಗಳಿಂದಲೂ ತೃಪ್ತರಾದ ಅನೇಕ ಜನಸಮೂಹದಿಂದಲೂ, ನಾನಾಕಡೆಗಳಿಂದ ಬಂದ

---

* ಆರಗ್ನಿಗಳೆಂದರೆ, ಆರಂಭಣೀಯ, ಕ್ಷತ್ರಧೃತಿ, ವ್ಯುಷ್ಟಿ, ದ್ವಿರಾತ್ರ, ದಶಪೇಯ, ಸಪ್ತಪೇಯಗಳೆಂಬಿವು.

ರತ್ನದ ಕಾಣಿಕೆಗಳಿಂದಲೂ ಆ ಸಭೆಯು ಅತ್ಯಂತಶೋಭಾಯುಮಾನವಾಗಿದ್ದಿತು. ಮಂತ್ರ, ತಂತ್ರ, ಸ್ವರ, ಲಕ್ಷಣಾದಿಗಳಲ್ಲಿ ನಿಪುಣರಾದ ಮಹರ್ಷಿಗಳಿಂದ ನಡೆಸಲ್ಪಟ್ಟ ಆ ಯಾಗದಲ್ಲಿ, ಇಡಾಹೋಮ, ಆಜ್ಯಹೋಮಾದಿ ಕ್ರಿಯಾಕಲಾಪಗಳಿಂದ ದೇವತೆಗಳೆಲ್ಲರೂ ತೃಪ್ತರಾದರು. ಬ್ರಾಹ್ಮಣರೂ, ಇತರವರ್ಣದವರೂ ದಕ್ಷಿಣೆಗಳಿಂದಲೂ, ಅನ್ನಪಾನಗಳಿಂದಲೂ, ಧನಕನಕಾದಿಗಳಿಂದಲೂ ದೇವತೆಗಳಂತೆಯೇ ತೃಪ್ತರಾಗಿ ಸಂತೋಷದಿಂದಿದ್ದರು.

ಇದು ಮೂವತ್ತೆಂಟನೆಯ ಅಧ್ಯಾಯವು.

**ಇಲ್ಲಿಗೆ ರಾಜಸೂಯಪರ್ವವು ಮುಗಿದುದು.**



# ಅರ್ಘಾಹರಣಪರ್ವವು.



{ ಯಾಗಾಂತ್ಯದಲ್ಲಿ ಭೀಷ್ಮಾಜ್ಞೆಯಿಂದ ಸಹದೇವನು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದುದು. ಶಿಶುಪಾಲನು ಅದನ್ನು ಸಹಿಸಲಾರದೆ ನಿಂದಿಸಿದುದು. }

ಜನಮೇಜಯರಾಜಾ! ಕೇಳು! ಯಾಗಕಾರ್ಯವು ಮುಗಿಯುತ್ತ ಬಂದು, ಆ ಯಾಗಕ್ಕೆ ಅಂಗವಾದ ಅಭಿಷೇಚನೀಯವೆಂಬ ದಿನವು ಪ್ರಾಪ್ತವಾಯಿತು. ಆ ದಿನದಲ್ಲಿ ಸೋಮಯಾಗವನ್ನು ಮಾಡುವಾಗ ಪೂಜ್ಯರಾದ ಮಹರ್ಷಿಗಳೂ, ಬ್ರಾಹ್ಮಣರೂ, ರಾಜರೂ ಅಂತರ್ವೇದಿಯೆಂಬ ಯಾಗಶಾಲೆಯ ಒಳಭಾಗಕ್ಕೆ ಪ್ರವೇಶಿಸಿದರು. ಅಲ್ಲಿ ಧರ್ಮರಾಜನು ಅನೇಕ ರಾಜರ್ಷಿಗಳೊಡನೆಯೂ, ದೇವರ್ಷಿಗಳೊಡನೆಯೂ ಕುಳಿತಿರಲು, ಅದು ನಾರದಾದಿ ದೇವರ್ಷಿಗಳಿಂದಲೂ, ದೇವತೆಗಳಿಂದಲೂ ಕೂಡಿದ ಬ್ರಹ್ಮಸಭೆಯಂತೆ ಶೋಭಿಸಿತು. ಆ ಮಹರ್ಷಿಗಳೆಲ್ಲರೂ ಯಾಗಕಾರ್ಯವು ನಡೆಯುತ್ತಿದ್ದಾಗ ಧರ್ಮರಾಜನ ಪಕ್ಕದಲ್ಲಿ ಅನೇಕಶಾಸ್ತ್ರವಾದಗಳನ್ನು ನಡೆಸುತ್ತಿ

ದ್ದರು. 'ಇದು ಹೀಗೆಯೇ' ಎಂದು ಕೆಲವರು! 'ಇದು ಹಾಗಲ್ಲ'ವೆಂದು ಕೆಲವರು! 'ಇದು ಹೀಗಲ್ಲದೆ ಎಂದಿಗೂ ಹಾಗಲ್ಲ'ವೆಂದು ಮತ್ತೆ ಕೆಲವರು! ಹೀಗೆ ತಮತಮಗೆ ತೋರಿದಂತೆ ಅನ್ಯೋನ್ಯವಾಗಿ ವಿತಂಡಾವಾದಗಳನ್ನು ಮಾಡುತಿದ್ದರು. ಕೆಲವರು ತಮ್ಮ ವಾದಚಮತ್ಕಾರದಿಂದ ಸಾರವಿಲ್ಲದ ವಿಷಯಗಳನ್ನು ಸಾರವತ್ತಾಗಿ ಮಾಡುವರು! ಸಾರವತ್ತಾದ ವಿಷಯಗಳನ್ನು ಶಾಸ್ತ್ರೀಯವಾದ ನಿರೂಪಣಗಳಿಂದ ನಿಸ್ಸಾರವಾಗಿ ಮಾಡುವರು! ಒಳ್ಳೇ ಬುದ್ಧಿಶಾಲಿಗಳಾದ ಕೆಲವರು, ಹದ್ದುಗಳು ಆಕಾಶಕ್ಕೆಸೆದ ಮಾಂಸವನ್ನು ತಟ್ಟನೆ ಹಿಡಿದು ನುಂಗುವಂತೆ, ಮತ್ತೊಬ್ಬರು ಹೇಳಿದ ವಿಷಯಗಳನ್ನು, ತಮ್ಮ ವಾಕ್ಚಾತುರ್ಯದಿಂದ ಹಾರಿಸಿಬಿಡುವರು. (ಜಯಿಸುವರು) ಅಲ್ಲಿ ಧರ್ಮಾರ್ಥಗಳಲ್ಲಿ ನಿಪುಣರಾದವರು ಕೆಲವರು. ಮಹಾವ್ರತದಲ್ಲಿ ನೆಲೆಗೊಂಡವರು ಕೆಲವರು! ಎಲ್ಲಾ ಭಾಷ್ಯಗಳನ್ನೂ ತಿಳಿದವರು ಕೆಲವರು! ಇಂತವರೆಲ್ಲರೂ ಅನ್ಯೋನ್ಯವಾದಗಳಿಂದ ವಿನೋದಿಸುತಿದ್ದರು. ಆಕಾಶವು ನಕ್ಷತ್ರಗಳಿಂದ ಹೇಗೋ ಹಾಗೆ ಆ ವೇದಿಕೆಯು ವೇದಜ್ಞರಾದ ದೇವರ್ಷಿಗಳಿಂದಲೂ, ಬ್ರಹ್ಮರ್ಷಿಗಳಿಂದಲೂ ಶೋಭಿಸುತಿದ್ದಿತು. ಅಲ್ಲಿ ಜಾತಿಭ್ರಷ್ಟನಾದ ಶೂದ್ರನಾಗಲಿ, ಕರ್ಮಭ್ರಷ್ಟನಾದ ಪತಿತನಾಗಲಿ ಒಬ್ಬನಾದರೂ ಇರಲಿಲ್ಲ. ಆಗ ಯಜ್ಞದೀಕ್ಷೆಯನ್ನು ವಹಿಸಿ ಅಪೂರ್ವಕಾಂತಿಯಿಂದ ಬೆಳಗುತಿದ್ದ ಆ ಧರ್ಮರಾಜನನ್ನು ನೋಡಿ ಅಲ್ಲಿದ್ದ ನಾರದನಿಗೆ ಅತ್ಯಂತ ಸಂತೋಷವಾಯಿತು. ಅಲ್ಲಿ ಧರ್ಮರಾಜನನ್ನೂ, ಅವನ ಸುತ್ತಲೂ ನೆರೆದಿದ್ದ ಕ್ಷತ್ರಿಯರನ್ನೂ ನೋಡಿ, ಅವನ ಮನಸ್ಸಿನಲ್ಲಿ ಒಂದು ಆಲೋಚನೆಯು ಹುಟ್ಟಿತು. ಹಿಂದೆ ದೇವತೆಗಳು ತಮ್ಮತಮ್ಮ ಅಂಶಗಳಿಂದ ಭೂಮಿಯಲ್ಲಿ ಅವತರಿಸುವ ಕಾಲದಲ್ಲಿ, ಬ್ರಹ್ಮಲೋಕದಲ್ಲಿ ನಡೆದ ಪೂರ್ವವೃತ್ತಾಂತವೆಲ್ಲ ಅವನ ಸ್ಮರಣೆಗೆ ಬಂದಿತು. ಆ ದೇವತೆಗಳ ಕೂಟವೇ ಇಲ್ಲಿರುವುದೆಂದು ತಿಳಿದು ನಾರದನು, ಪುಂಡರೀಕಾಕ್ಷನಾದ ಶ್ರೀಕೃಷ್ಣನನ್ನು ಮನಸಾ ಧ್ಯಾನಿಸುತ್ತ, "ದೈತ್ಯಧ್ವಂಸಿಯಾದ ಆ ಸಾಕ್ಷಾನ್ನಾರಾಯಣನೇ ತನ್ನ ಪ್ರತಿಜ್ಞೆಯನ್ನು ಪಾಲಿಸುವುದಕ್ಕಾಗಿ ಇಲ್ಲಿ ಕೃಷ್ಣನಾಗಿ ಅವತರಿಸಿರುವನು. ಸಮಸ್ತಭೂತಗಳಿಗೂ ಸೃಷ್ಟಿಕರ್ತನಾದ ಯಾವನು ಹಿಂದೆ ದೇವತೆಗಳಿಗೆ ಆಜ್ಞೆಮಾಡಿದನೋ, ಆ ಪ್ರಭುವೇ ಈಗ ಕ್ಷತ್ರಿಯವಂಶದಲ್ಲಿ ಹುಟ್ಟಿ

ರುವನು. ಆಗ ಅವನು ಆ ದೇವತೆಗಳನ್ನು ನೋಡಿ, "ನೀವು ಭೂಲೋಕ ದಲ್ಲಿ ಹುಟ್ಟಿ, ಒಬ್ಬರಿಗೊಬ್ಬರು ಹೊಡೆದಾಡಿ ಸತ್ತು ತಿರುಗಿ ನಿಮ್ಮ ಈ ಲೋಕಗಳನ್ನು ಹೊಂದುವಿರಿ" ಎಂದು ಅವರಿಗೆ ಆಜ್ಞೆಮಾಡಿ ತಾನೂ ವಸುದೇವನ ಗೃಹದಲ್ಲಿ ಅಂಧಕರ ಮತ್ತು ವೃಷ್ಣಿಗಳ ವಂಶದಲ್ಲಿ ಜನಿಸಿದನು. ನಕ್ಷತ್ರಗಳ ನಡುವೆ ಇರುವ ಚಂದ್ರನಂತೆ ಯಾದವರಗುಂಪಿನಲ್ಲಿ ಅತಿಶಯ ಕಾಂತಿಯಿಂದ ಶೋಭಿಸುತ್ತಿರುವನು. ಇಂದ್ರಾದಿದೇವತೆಗಳೆಲ್ಲರೂ ಯಾವನ ಬಾಹುಬಲವನ್ನು ಆಶ್ರಯಿಸಿರುವರೋ, ಅಂತವನು ಈಗ ಸಾಮಾನ್ಯ ಮನುಷ್ಯನಂತಿರುವನು. ಆಹಾ! ಏನಾಶ್ಚರ್ಯವು? ತನಗೆ ತಾನೇ ಉತ್ಪನ್ನನಾಗಿ, ಈ ಪ್ರಪಂಚವೆಲ್ಲವೂ ತಾನೇ ಆಗಿರುವ ಪರವಸ್ತು ಯಾವುದುಂಟೋ, ಅಂತಹ ಮಹಾಪುರುಷನು ಇಂತಹ ಬಲವಿಶಿಷ್ಟವಾದ ಕ್ಷತ್ರಕುಲವನ್ನೆಲ್ಲ ಉಪಸಂಹರಿಸಿ ತನ್ನಲ್ಲಿ ಅಡಗಿಸಿಟ್ಟುಕೊಳ್ಳುವ ಉದ್ದೇಶದಿಂದಿರುವನು" ಎಂದು ಯೋಚಿಸಿದನು. ಹೀಗೆ ಸರ್ವಜ್ಞನಾದ ನಾರದಮುನಿಯು ಯಜ್ಞಾರಾಧ್ಯನೂ, ಸರ್ವೇಶ್ವರನೂ ಆದ ನಾರಾಯಣನೇ ಈ ಕೃಷ್ಣನೆಂದು ತನ್ನ ಜ್ಞಾನದೃಷ್ಟಿಯಿಂದರಿತು, ಆ ಧರ್ಮರಾಜನ ರಾಜಸೂಯಕಾಲದಲ್ಲಿ, ಭಕ್ತಿಗೌರವಗಳಿಂದ ಅಲ್ಲಿದ್ದ ಕೃಷ್ಣನನ್ನು ಕಣ್ಣಿಟ್ಟುನೋಡಿದನು. ಒಳ್ಳೇ ಗುಣಾಢ್ಯರೂ, ಶುದ್ಧಮನಸ್ಕರೂ, ಜಯಶೀಲರೂ ಆದ ಪಾಂಚಾಲರೂ, ವೃಷ್ಣಿಗಳೂ, ಸೇನಾಪ್ರಮುಖರೂ ತಮ್ಮತಮ್ಮ ಪತ್ನಿಯರೊಡನೆಯೂ, ಪರಿವಾರಗಳೊಡನೆಯೂ, ಮಂತ್ರಿಗಳೊಡನೆಯೂ ಕೂಡಿ, 'ಇದು ತಮ್ಮ ಕರ್ತವ್ಯ'ವೆಂದು ಭಾವಿಸಿ ರತ್ನರಾಶಿಗಳನ್ನು ಹೊರಿಸಿಕೊಂಡು ಬಂದರು. ಅವರು ಬಹಳ ದೂರದೇಶದಲ್ಲಿದ್ದುದರಿಂದಲೂ, ಧನಭಾರವು ಬಹಳ ಮಹತ್ತಾದುದರಿಂದಲೂ, ಕೃಷ್ಣನು ಇಂದ್ರಪ್ರಸ್ಥಕ್ಕೆ ಬಂದು ಸೇರಿದ ಮೇಲೆಯೇ ಅವರೂ ಅಲ್ಲಿಗೆ ಬಂದು ಸೇರಿದರು. ಅಲ್ಲಿ ಮಿಂಚಿನಿಂದಕೂಡಿದ ಮೇಘಗಳಂತೆ ದೇಹವುಳ್ಳವರೂ, ಸಿಂಹದಂತೆ ಬಲವುಳ್ಳವರೂ ಆದ ಶಿಶುಪಾಲನ ಕಡೆಯ ರಾಜರು ಯಜ್ಞಕ್ಕಾಗಿ ಬಂದು ಭೂಮಿಯನ್ನು ಮರೆಸುವಂತೆ ದೊಡ್ಡ ಗುಂಪಾಗಿ ನೆರೆದಿದ್ದರು. ಕಾಡಿನಲ್ಲಿ ಆನೆಯ ಸಲಗವು ಬೇರೆ ಸಲಗಗಳನ್ನು ನೋಡುವಂತೆ ಕೃಷ್ಣನು ಅವರನ್ನೆಲ್ಲ ನೋಡಿದನು. ಯಜ್ಞಕ್ಕಾಗಿ ಬಂದ ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ ಸತ್ಕಾರಗಳನ್ನು ನಡೆಸು

ವುದಕ್ಕಾಗಿ ಧರ್ಮಾರ್ಥಗಳನ್ನು ಬಲ್ಲವನೂ, ರಾಜನೀತಿ ವಿಶೇಷಗಳನ್ನು ತಿಳಿದವನೂ ಆದ ಸಹದೇವನು ನಿಯಮಿಸಲ್ಪಟ್ಟಿದ್ದನಷ್ಟೆ? ಸೂರ್ಯತೇಜಸ್ಸಿನಿಂದ ಬೆಳಗುತ್ತ, ಯಜ್ಞಭೂಮಿಗೆ ಪ್ರವೇಶಿಸುತ್ತಿರುವ ಬಲರಾಮನ ತಮ್ಮನಾದ ಶ್ರೀಕೃಷ್ಣನನ್ನು ಕಂಡೊಡನೆ ಸಹದೇವನು ಗೌರವದಿಂದ ಇದಿರುಗೊಂಡನು. ಆ ಕೃಷ್ಣನೇನು ಸಾಮಾನ್ಯನೇ? ತೇಜಸ್ಸಿನ ರಾಶಿಯೆಲ್ಲವೂ ಒಂದಾಗಿ ಸೇರಿದಂತಿರುವನು. ಸರ್ವೇಶ್ವರನು! ಪುರಾತನ ಮಹರ್ಷಿಯೆನಿಸಿಕೊಂಡವನು! ತಿಳಿದಂತೆ ಭಾವಿಸುವ ವಿದ್ವಾಂಸರಿಗೂ ತಿಳಿಯದವನು! ವಯೋಧಿಕರಾದ ಬ್ರಹ್ಮನಿಷ್ಠರಿಗೆ ಉತ್ತಮಶ್ರೇಯಸ್ಸಿಗೆ ಮಾರ್ಗವೆನಿಸಿರುವನು. ಸ್ಥಾವರಜಂಗಮಾತ್ಮಕವಾದ ಸಕಲಪ್ರಪಂಚಕ್ಕೂ ಉತ್ಪತ್ತಿ ಮತ್ತು ಸ್ಥಿತಿಗಳಿಗೆ ಕಾರಣನು. ಕೊನೆಯಿಲ್ಲದವನು. ಶತ್ರುಗಳನ್ನು ಕೊನೆಗಾಣಿಸತಕ್ಕವನು. ಸಮಸ್ತಭೂತಗಳಿಗೂ ಆದಿಕಾರಣನು. ಆಪನ್ನರಿಗೆ ಅಭಯವನ್ನು ಕೊಡತಕ್ಕವನು. ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿಯೂ ಇರತಕ್ಕವನು. ಇಂತಹ ಕೃಷ್ಣನು ಸಭಾಪ್ರವೇಶಮಾಡುವುದನ್ನು ಕಂಡೊಡನೆ ಧರ್ಮಪುತ್ರನು, ಥಟ್ಟನೆ ಇದಿರೆದ್ದು, ಯೋಗ್ಯರೀತಿಯಿಂದ ಅವನನ್ನು ಪೂಜಿಸಿದನು. ಲೋಕದಲ್ಲಿ ದೊಡ್ಡವರು ಚಿಕ್ಕವರೆಂಬ ವ್ಯತ್ಯಾಸವು ಗುಣಾಗುಣಗಳಿಂದಲೇ ಉಂಟಾಗುವುದೆಂಬುದನ್ನು ಚೆನ್ನಾಗಿ ಬಲ್ಲ ಧರ್ಮರಾಜನು, ಮೊದಲು ಬ್ರಾಹ್ಮಣರನ್ನು ಪೂಜಿಸಿ, ಆಮೇಲೆ ಕೃಷ್ಣನಿಗೆ ಪೂಜೆಯನ್ನು ಮಾಡಬೇಕೆಂದು ಉದ್ದೇಶಿಸಿದನು. ಇದಕ್ಕೆ ಮೊದಲು ಯಾರೂ ಕುಳ್ಳಿರದ, ಮತ್ತು ಸೂರ್ಯನಂತೆ ಜ್ವಲಿಸುವ ಒಂದು ಉತ್ತಮಾಸನವನ್ನು ತಂದು ಆ ಶ್ರೀಕೃಷ್ಣನಿಗೆ ಸಮರ್ಪಿಸಿದನು. ಕೃಷ್ಣನು ಆ ದಿವ್ಯಾಸನವನ್ನಲಂಕರಿಸಿದಮೇಲೆ, ಭೀಷ್ಮನು ಧರ್ಮರಾಜನನ್ನು ಕುರಿತು ಹೀಗೆಂದು ಹೇಳುವನು. “ಯುಧಿಷ್ಠಿರಾ! ನೀನು ಇನ್ನುಮೇಲೆ ಎಲ್ಲರಿಗೂ ಯೋಗ್ಯರೀತಿಯಿಂದ ಮರ್ಯಾದೆಗಳನ್ನು ನಡೆಸು. ಆಯಾ ರಾಜರ ಯೋಗ್ಯತೆಯನ್ನರಿತು ಅವರವರನ್ನು ಸನ್ಮಾನಿಸು. ಆಚಾರ್ಯನು, ಋತ್ವಿಕ್ಕು, ಸಂಬಂಧಿ, ಸ್ನಾತಕನು, ಸ್ನೇಹಿತನು, ರಾಜನು, ಈ ಆರುಮಂದಿಯೂ ಮುಖ್ಯಪೂಜಾರ್ಹರೆಂದು ಹೇಳುವರು. ಇವರೆಲ್ಲ ಒಂದು ಸಂವತ್ಸರಕಾಲದವರೆಗೆ ಯಾಗಕಾರ್ಯಗಳನ್ನು ನಡೆಸಿದಮೇಲೆ, ಅವರಿಗೆ ತಕ್ಕ

ಮರ್ಯಾದೆಯನ್ನು ನಡೆಸಬೇಕೆಂದು ಹೇಳುವರು. ಇವರಾದರೋ ಬಹು ಕಾಲದಿಂದ ನಮ್ಮಲ್ಲಿ ಬಂದಿರತಕ್ಕವರು. ಆದುದರಿಂದ ಇವರಲ್ಲಿ ಒಬ್ಬೊಬ್ಬರಿಗೂ ಬೇರೆಬೇರೆಯಾಗಿ ಬಹುಮಾನಗಳನ್ನು ತರಿಸಿಕೊಡು. ಎಲ್ಲಕ್ಕಿಂತಲೂ ಮೊದಲು ಇವರೊಳಗೆಲ್ಲ ಶ್ರೇಷ್ಠನೂ, ಎಲ್ಲರಿಗಿಂತಲೂ ಸಮರ್ಥನೂ ಆದವನಿಗೆ ಅಗ್ರಪೂಜೆಯನ್ನು ನಡೆಸಬೇಕು" ಎಂದನು. ಆಗ ಧರ್ಮರಾಜನು "ಓ ಪಿತಾಮಹಾ! ಈ ಮಹಾಸಭೆಯಲ್ಲಿ ಯಾವನಿಗೆ ಮೊದಲು ಮರ್ಯಾದೆಯನ್ನು ನಡೆಸಬೇಕೋ, ಅದನ್ನು ನೀನೇ ನಿರ್ಣಯಿಸಿ ಹೇಳಬೇಕು. ನಿನಗೆ ಯುಕ್ತವಾಗಿ ತೋರಿದುದನ್ನು ಹೇಳು" ಎಂದನು. ಓ ಜನಮೇಜಯರಾಜಾ! ಈ ಮಾತನ್ನು ಕೇಳಿ ಭೀಷ್ಮನು ತನ್ನಲ್ಲಿ ತಾನೇ ಬುದ್ಧಿಯಲ್ಲಿ ಆಲೋಚಿಸಿ "ಶ್ರೀಕೃಷ್ಣನೇ ಎಲ್ಲರಿಗಿಂತಲೂ ಮೇಲಾದವನು. ಅವನಿಗೇ ಅಗ್ರಪೂಜೆಯನ್ನು ನಡೆಸಬೇಕಾದುದು ಯುಕ್ತವು" ಎಂದು ತನ್ನಲ್ಲಿ ತಾನು ನಿರ್ಧರಿಸಿಕೊಂಡನು. ಆಮೇಲೆ ಧರ್ಮರಾಜನನ್ನು ಕುರಿತು, "ಓ ಧರ್ಮಪುತ್ರಾ! ಈ ಸಮಸ್ತಜನಸಮೂಹದಲ್ಲಿ ಎಲ್ಲರಿಗಿಂತಲೂ ಮೇಲಾದವನು ಈ ಕೃಷ್ಣನೇ! ಗ್ರಹಗಳ ನಡುವೆ ಸೂರ್ಯನು ಹೇಗೋ ಹಾಗೆ ಎಲ್ಲಾ ರಾಜಸಮೂಹದ ನಡುವೆ ಈ ಕೃಷ್ಣನು ತೇಜಸ್ಸಿನಿಂದಲೂ, ಬಲದಿಂದಲೂ, ಪರಾಕ್ರಮದಿಂದಲೂ ಅತಿಶಯವಾಗಿ ಬೆಳಗುತ್ತಿರುವುದನ್ನು ನೋಡು. ಸೂರ್ಯನಿಲ್ಲದ ಸ್ಥಳವು ಸೂರ್ಯನಿಂದಲೂ, ಗಾಳಿಯಿಲ್ಲದ ಕಡೆಯು ಗಾಳಿಯಿಂದಲೂ ಕೂಡಿ ಉಲ್ಲಾಸಹೊಂದುವಹಾಗೆ ಈ ನಮ್ಮ ಸಭೆಯು ಈ ಕೃಷ್ಣನಿಂದ ಪ್ರಕಾಶಗೊಂಡಿರುವುದು" ಎಂದನು. ಭೀಷ್ಮನು ಈ ಮಾತನ್ನು ಹೇಳಿದೊಡನೆ ಸಹದೇವನು ಗೋವನ್ನೂ, ಅರ್ಘ್ಯವನ್ನೂ, ಮಧುಪರ್ಕವನ್ನೂ ತಂದು, ಶ್ರೀಕೃಷ್ಣನಿಗೆ ವಿಧ್ಯುಕ್ತವಾಗಿ ಪೂಜೆಯನ್ನು ನಡೆಸತೊಡಗಿದನು. ಓ ಜನಮೇಜಯರಾಜಾ! ಈ ಸಮಯದಲ್ಲಿ ಒಂದು ಆಶ್ಚರ್ಯವು ನಡೆಯಿತು. ಕೃಷ್ಣನಿಗೆ ನಡೆದ ಆ ಅಗ್ರಪೂಜೆಯನ್ನು ನೋಡಿ ಎಲ್ಲಾ ಕ್ಷತ್ರಿಯರೂ ಒಬ್ಬರ ಮುಖವನ್ನೊಬ್ಬರು ನೋಡಲಾರಂಭಿಸಿದರು. ಅವರಿಗೆ ಆ ಸನ್ನಿವೇಶವು ಮನಸ್ಸನನ್ನು ಚುಚ್ಚಿದಂತಾಯಿತು. ಶಾಸ್ತ್ರೋಕ್ತವಾಗಿ ನಡೆಸಿದ ಆ ಪೂಜೆಯನ್ನು ಕೃಷ್ಣನು ಪ್ರೀತಿಯಿಂದ ಸ್ವೀಕರಿಸಿದನು. ಕೃಷ್ಣನಿಗೆ ನಡೆದ ಈ ಪೂಜೆಯನ್ನು ನೋಡಿ ಶಿಶುಪಾಲ

ನಿಗೆ ಸಹಿಸದಂತಾಯಿತು. ಆ ಮಹಾಸಭೆಯಲ್ಲಿ ಮೊದಲು ಭೀಷ್ಮನನ್ನೂ, ಆಮೇಲೆ ಧರ್ಮರಾಜನನ್ನೂ ನಿಂದಿಸಿ, ಕೃಷ್ಣನನ್ನು ಕೂಡ ಹೀನ ವಾಕ್ಯಗಳಿಂದ ತಿರಸ್ಕರಿಸುವುದಕ್ಕೆ ಆರಂಭಿಸಿದನು. ಅಲ್ಲಿದ್ದ ಎಲ್ಲಾ ರಾಜರ, ಮುಖ್ಯವಾಗಿ ಶಿಶುಪಾಲನ, ಮನೋಭಾವವನ್ನು ತಿಳಿದ ಸಹದೇವನಿಗೆ ದುಸ್ಸಹವಾದ ಕೋಪವುಂಟಾಯಿತು. ಆ ರಾಜರ ಅಸೂಯಾಸ್ವಭಾವವನ್ನು ಸಹಿಸಲಾರದೆ ಅವನು ಮಾನಿಷ್ಠರೂ, ಬಲಿಷ್ಠರೂ ಆದ ಆ ಎಲ್ಲಾ ರಾಜರಮುಂದೆ ತನ್ನ ಕಾಲುಗಳನ್ನೆತ್ತಿ ಝಾಡಿಸಿ ಒದರಿದನು. ಆಗ ಆಕಾಶದಿಂದ ಸಹದೇವನ ತಲೆಯಮೇಲೆ ಪುಷ್ಪವೃಷ್ಟಿಯು ಸುರಿಯಿತು. ಇಷ್ಟರಲ್ಲಿಯೇ ವೃಷ್ಣಿಕುಲಕ್ಕೆ ಆಜನ್ಮಶತ್ರುವಾದ ಶಿಶುಪಾಲನು ಹೀಗೆಂದು ಹೇಳಲಾರಂಭಿಸಿದನು. "ಎಲೈ ಸಭೆಯವರೇ! ಇಲ್ಲಿನ ನಡವಳಿಕೆಗಳು ಎಷ್ಟು ಚೆನ್ನಾಗಿದೆಯೋ ನೋಡಿರಿ! ಗರ್ಭಶುದ್ಧಿಯಿಲ್ಲದೆ ವಿಯೋನಿಯಲ್ಲಿ ಹುಟ್ಟಿದ ರಾಜನೊಬ್ಬನು ಪ್ರಶ್ನೆಮಾಡುವವನು. ಅದಕ್ಕೆ ಉತ್ತರವನ್ನು ಹೇಳುವವನು ಎಲ್ಲಿಯೋ ಒಂದು ಹೊಳೆಯಲ್ಲಿ ಹುಟ್ಟಿದವನು. ಇವರಿಬ್ಬರ ಆಲೋಚನೆಯಮೇಲೆ ತನಗೆ ನಡೆದ ಮರ್ಯಾದೆಯನ್ನು ಗ್ರಹಿಸತಕ್ಕವನು ಗೊಲ್ಲನು. ಪರಪುರುಷ ಸಂಬಂಧದಿಂದ ದೂಷಿತವಾದ ಗರ್ಭದಲ್ಲಿ ಜನಿಸಿದವನು ಆ ಪೂಜೆಯನ್ನೊಪ್ಪಿಸತಕ್ಕವನು. ಇಂತಹ ಅಸಂಬದ್ಧಗಳೆಲ್ಲವೂ ಇಲ್ಲಿ ನಡೆಯುವಾಗ, ಈ ಸಭೆಯಲ್ಲಿದ್ದವರೆಲ್ಲರೂ ಮೂಗರಂತೆ ಬಾಯೆತ್ತದೆ ಕುಳಿತಿರುವರಲ್ಲ. ಇದಕ್ಕೇನು ಹೇಳುವುದು?" ಎಂದು ಹೇಳಿ, ದೊಡ್ಡದಾಗಿ ನಕ್ಕು, ಧರ್ಮರಾಜನ ಕಡೆಗೆ ತಿರುಗಿ ಹೀಗೆಂದು ಹೇಳುವನು. "ಓ ಪಾಂಡುಪುತ್ರಾ! ಇಷ್ಟುಮಂದಿ ಪೂಜ್ಯರೆಲ್ಲರೂ ಸೇರಿರುವಾಗ, ಈ ಗೊಲ್ಲನಿಗೆ ನೀನು ಅಗ್ರಪೂಜೆಯನ್ನು ನಡೆಸಿದೆಯಾ? ಎಲ್ಲರಿಗಿಂತಲೂ ಅವನನ್ನೇ ಮೇಲೆಂದು ತಿಳಿದೆಯೇನು? ಅಥವಾ ಬೇರೊಬ್ಬರು ನಿನ್ನ ಕಣ್ಣಿಗೆ ಬೀಳಲಿಲ್ಲವೋ? ನಿಜವನ್ನು ಹೇಳು. ಇದ್ದುದಕ್ಕಿಂತ ಹೆಚ್ಚಾಗಿ ತಿಳಿಯುವುದು, ತಿಳಿವಳಿಕೆಯಿಲ್ಲದಿರುವುದು, ಇವೆರಡೂ ಕಾರ್ಯಗಳನ್ನು ಕೆಡಿಸತಕ್ಕವುಗಳೇ. ಇವುಗಳಲ್ಲಿ ಯಾವುದು ನಿನ್ನ ಅವಿವೇಕಕ್ಕೆ ಕಾರಣವೋ ಹೇಳು!" ಎಂದನು.

ಇದು ಮೂವತ್ತೊಂಭತ್ತನೆಯ ಅಧ್ಯಾಯವು.

ಶಿಶುಪಾಲನು ಕೃಷ್ಣನನ್ನು ಇನ್ನೂ ಅನೇಕವಿಧವಾಗಿ ನಿಂದಿಸಿ, ಸಭೆಯನ್ನು ಬಿಟ್ಟು ಹೊರಟುದು.

ಇಷ್ಟುಮಂದಿ ಮಹಾತ್ಮರಾದ ರಾಜರೆಲ್ಲರೂ ನೆರೆದಿರುವಾಗ, ಈ ವಾರ್ಷ್ಣೇಯನು ಈ ಸಭೆಯಲ್ಲಿ ರಾಜಯೋಗ್ಯವಾದ ಪೂಜೆಗೆ ಎಂದಿಗೂ ಅರ್ಹನಲ್ಲ! ಮಹಾತ್ಮರೆನಿಸಿದ ಪಾಂಡವರಿಗಾದರೂ ಈ ನಡತೆಯು ಯೋಗ್ಯವಲ್ಲ. ಪಾಂಡುಪುತ್ರಾ! ಯಾವ ಆಸೆಯಿಂದ ನೀನು ಈ ದೇವಕಿಯ ಮಗನನ್ನು ಹೀಗೆ ಪೂಜಿಸಿದೆ? ಎಲೈ ಪಾಂಡವರೇ! ನೀವು ಇನ್ನೂ ಹುಡುಗರು. ನಿಮಗೆ ಯಾವುದೂ ತಿಳಿಯದು. ಧರ್ಮವು ಬಹಳ ಸೂಕ್ಷ್ಮವಾದುದು! ನಿಮ್ಮ ಮಾತೂ ಹಾಗಿರಲಿ! ನದೀಪುತ್ರನಾದ ಈ ಭೀಷ್ಮನೂಕೂಡ ಅಲ್ಪಬುದ್ಧಿಯನ್ನು ಹಿಡಿದು, ಮರ್ಯಾದೆಯನ್ನು ಮೀರಿ ಕಾರ್ಯವನ್ನು ನಡೆಸಿದನಲ್ಲವೆ? ಓ ಧರ್ಮಪುತ್ರಾ! ಸದಾ ಧರ್ಮನಿರತನೆನಿಸಿಕೊಂಡ ನೀನೂ ಆ ಭೀಷ್ಮನ ಪ್ರೀತಿಗಾಗಿ ಇಂತಹ ಮಾಡಬಾರದ ಕಾರ್ಯವನ್ನು ಮಾಡಿದೆ. ಒಂದುವೇಳೆ ಭೀಷ್ಮನು ನಿನಗೆ ದೊಡ್ಡವನಾಗಿರಬಹುದು. ಇಂತಹ ಅಕಾರ್ಯವನ್ನು ನಿಮ್ಮಿಂದ ಮಾಡಿಸಿದ ಈ ಭೀಷ್ಮನು ಲೋಕದಲ್ಲಿ ಸತ್ಪುರುಷರಿಗೆಲ್ಲ ಅವಮಾನಾರ್ಹನೇ! ರಾಜನಲ್ಲದ ಈ ದಾಶಾರ್ಹನಾದರೂ ಈ ಎಲ್ಲಾರಾಜರ ಮುಂದೆ ಹೇಗೆತಾನೆ ಪೂಜೆಯನ್ನು ಪಡೆಯುವುದಕ್ಕೆ ಯೋಗ್ಯನಾಗುವನು? ನೀವು ಬುದ್ಧಿಗೆಟ್ಟು ಕಾರ್ಯವನ್ನು ನಡೆಸಿದಂತೆ, ಬೇರೆ ಯಾರುತಾನೇ ನಡೆಸುವರು? ಓ ಕುರುಪುಂಗವಾ! ಒಂದುವೇಳೆ ಕೃಷ್ಣನು ವಯಸ್ಸಿನಲ್ಲಿ ದೊಡ್ಡವನೆಂದು ತಿಳಿದಿರುವೆಯಾ? ವೃದ್ಧನಾದ ವಸುದೇವನಿರುವಾಗ, ಅವನ ಮುಂದೆ ಅವನ ಮಗನು ಆ ಗೌರವಕ್ಕಾದರೂ ಹೇಗೆ ಅರ್ಹನಾಗುವನು? ಒಂದು ವೇಳೆ ಕೃಷ್ಣನು ನಿಮಗೆ. ಹಿತೈಷಿಯೆಂದೂ, ಸಮಯದಲ್ಲಿ ಸಹಾಯಮಾಡತಕ್ಕವನೆಂದೂ ಅವನನ್ನು ಪೂಜಿಸಿದೆಯಾ? ನಿಮಗೆ ಸರ್ವವಿಧದಲ್ಲಿಯೂ ಸಹಾಯಕನಾದ ದ್ರುಪದನಿರುವಾಗ, ಅವನನ್ನು ಬಿಟ್ಟು ಇವನಿಗೆ ಪೂಜೆಯೆಂದರೇನು? ಕೃಷ್ಣನು ನಿಮಗೆ ಆಚಾರ್ಯನೆಂದು ತಿಳಿದೆಯಾ? ದ್ರೋಣಾಚಾರ್ಯನಿರುವಾಗ ಈ ವಾರ್ಷ್ಣೇಯನನ್ನು ಪೂಜಿಸಿದೆಯೇಕೆ? ಈ ಕೃಷ್ಣನನ್ನು ನೀನು ಈ ಯಾಗಕ್ಕಾಗಿ ಬಂದ ದೊಡ್ಡ ಋತ್ವಿಕ್ಕೆಂದು ಭಾವಿಸಿದೆಯಾ? ವೃದ್ಧನಾದ ವ್ಯಾಸ

ಮಹರ್ಷಿಯಿರುವಾಗ, ಅವನ ಮುಂದೆ ಇವನಿಗೆ ಪೂಜೆಯೇ? ಶಂತನುಪುತ್ರನೂ, ಪುರುಶ್ರೇಷ್ಠನೂ, ವಯೋವೃದ್ಧನೂ, ತನ್ನ ಸ್ವೇಚ್ಛೆಯಿಂದಲೇ ಸಾಯತಕ್ಕವನೂ ಆದ ಭೀಷ್ಮನಿರುವಾಗ, ಅವನ ಮುಂದೆ ಈ ಕೃಷ್ಣನಿಗೆ ಪೂಜೆಮಾಡುವುದು ಯೋಗ್ಯವೆ? ಸರ್ವಾಸ್ತ್ರವಿಶಾರದನೆನಿಸಿದ ವೀರನಾದ ಅಶ್ವತ್ಥಾಮನು ಇಲ್ಲಿರುವಾಗ, ಅವನ ಮುಂದೆ ಈ ಕೃಷ್ಣನಿಗೆ ಅಗ್ರಪೂಜೆಯೇ? ಅಲ್ಲದೆ ಈ ಸಭೆಯಲ್ಲಿ ರಾಜಾಧಿರಾಜನೆನಿಸಿದ ದುರ್ಯೋಧನನಿರುವನು! ಭರತಕುಲಕ್ಕೆಲ್ಲ ಆಚಾರ್ಯನಾದ ಕೃಪನಿರುವನು! ಇವರನ್ನು ಬಿಟ್ಟು ಈ ಕೃಷ್ಣನಿಗೆ ಪೂಜೆಯೆಂದರೇನು? ಮತ್ತು ಇಲ್ಲಿ ಕಿಂಪುರುಷರಿಗೆಲ್ಲ ಆಚಾರ್ಯನಾದ ದ್ರುಮನಿರುವಾಗ, ಅವನನ್ನು ಬಿಟ್ಟು ಈ ಕೃಷ್ಣನಿಗೆ ಪೂಜೆಯೆಂದರೇನು? ಅಲ್ಲದೆ, ಇಲ್ಲಿ ಎಂತವರಿಗೂ ದುರ್ಜಯನೂ, ನಿನ್ನ ತಂದೆಯಾದ ಪಾಂಡುವಿನಂತೆ ಸರ್ವಲಕ್ಷಣಸಂಪನ್ನನೂ ಆದ ಭೀಷ್ಮಕನಿರುವನು! (ಸರ್ವಲಕ್ಷಣಸಂಪನ್ನನಾದ ಪಾಂಡ್ಯನಿರುವನು) ರಾಜನಾದ ರುಕ್ಮಿಯಿರುವನು! ಏಕಲವ್ಯನಿರುವನು! ಮದ್ರಾಧಿಪತಿಯಾದ ಶಲ್ಯನಿರುವನು! ಇವರೆಲ್ಲರನ್ನೂ ಬಿಟ್ಟು ಕೃಷ್ಣನಿಗೆ ಅಗ್ರಮರ್ಯಾದೆಯೆ? ಅದೆಲ್ಲವೂ ಇರಲಿ! ಇದೋ! ಇಲ್ಲಿ ಮಹಾಶೂರನೂ, ಬಲಗರ್ವಿತನೂ, ಸಾಕ್ಷಾತ್ಪರಶುರಾಮನ ಪ್ರಿಯಶಿಷ್ಯನೂ ಆದ ಕರ್ಣನಿರುವನು. ಯಾವನು ತನ್ನ ಆತ್ಮಬಲದಿಂದಲೇ ಯುದ್ಧದಲ್ಲಿ ಅನೇಕ ರಾಜರನ್ನು ಜಯಿಸಿದನೋ ಅಂತಹ ರಾಧೇಯನನ್ನೂ ಲಕ್ಷ್ಯಮಾಡದೆ ಕೃಷ್ಣನನ್ನು ನೀನು ಹೇಗೆ ಪೂಜಿಸಿದೆ? ಕೌರವಶ್ರೇಷ್ಠಾ! ಈ ಕೃಷ್ಣನು ನಿನಗೆ ಆಚಾರ್ಯನೂ ಅಲ್ಲ! ಋತ್ವಿಕ್ಕೂ ಅಲ್ಲ! ರಾಜನೂ ಅಲ್ಲ! ಹೀಗಿರುವಾಗ ನೀನು ಯಾವ ಆಸೆಗಾಗಿ ಅವನನ್ನು ಹೀಗೆ ಪೂಜಿಸಿದೆ? ಒಂದುವೇಳೆ ಈ ಗೊಲ್ಲನಲ್ಲಿ ನಿಮಗೆ ಪೂಜ್ಯಭಾವವಿದ್ದರೂ ಇರಲಿ! ನೀನು ಅವನನ್ನು ಮನೆಯಲ್ಲಿಟ್ಟು ರಹಸ್ಯವಾಗಿ ಪೂಜಿಸಬೇಕಾಗಿದ್ದಿತು. ಹಾಗಿಲ್ಲದೆ ದೊಡ್ಡದೊಡ್ಡ ರಾಜರನ್ನೆಲ್ಲ ಇಲ್ಲಿಗೆ ಕರೆಸಿಕೊಂಡು ಹೀಗೆ ಮಾಡಿದುದೇಕೆ? ಅವರೆಲ್ಲರನ್ನೂ ಅವಮಾನಗೊಳಿಸುವುದಕ್ಕಾಗಿಯೇ ಹೀಗೆ ಮಾಡಿದಂತಿದೆ. ನಾವೆಲ್ಲರೂ ನಿಮ್ಮ ಭಯಕ್ಕಾಗಿ ನಿನಗೆ ಕಪ್ಪವನ್ನು ಕೊಟ್ಟು ಕಳುಹಿಸಿದೆವೆಂದು ಎಣಿಸಬೇಡ! ನಿಮ್ಮಲ್ಲಿ ಭಯದಿಂದಾಗಲಿ, ಲೋಭದಿಂದಾಗಲಿ, ನಿಮ್ಮ ಪ್ರಿಯವಾಕ್ಯ

ಗಳಿಗೆ ಮರುಳಾಗಿಯಾಗಲಿ ನಾವು ನಿಮಗೆ ಕಪ್ಪವನ್ನು ಕೊಟ್ಟವರಲ್ಲ. ಸಾಮ್ರಾಜ್ಯವನ್ನಪೇಕ್ಷಿಸಿದ ಧರ್ಮರಾಜನು ಧರ್ಮದಲ್ಲಿಯೇ ನಿರತನಾಗಿರುವನೆಂಬ ಗೌರವಬುದ್ಧಿಯಿಂದ ನಾವು ಕಪ್ಪವನ್ನು ಕೊಟ್ಟೆವು. ಇವನಾದರೆ, ನಮ್ಮನ್ನೆಲ್ಲ ಸೇರಿಸಿ ಹೀಗೆ ಅವಮಾನಗೊಳಿಸುತ್ತಿರುವನು. ಯುಧಿಷ್ಠಿರಾ! ಈ ರಾಜಸಭೆಯಲ್ಲಿ ರಾಜಲಕ್ಷಣವಿಲ್ಲದ ಕೃಷ್ಣನಿಗೆ ನೀನು ಅರ್ಘ್ಯವನ್ನು ಕೊಟ್ಟು ಪೂಜೆಮಾಡಿದೆ. ಧರ್ಮವನ್ನೇ ತಿಳಿಯದ ನಿನಗೆ ಧರ್ಮಾತ್ಮನೆಂಬ ಹೆಸರು ಹೇಗೋ ಅಕಸ್ಮಾತ್ತಾಗಿ ಬಂದುಹೋಯಿತು. ಇದಲ್ಲದೆ ವೃಷ್ಣಿಕುಲದಲ್ಲಿ ಹುಟ್ಟಿ, ದೊಡ್ಡ ರಾಜನೂ, ಮಹಾತ್ಮನೂ ಆದ ಜರಾಸಂಧನನ್ನು ಅನ್ಯಾಯದಿಂದ ಯಾವನು ಕೊಂದನೋ ಅಂತಹ ಧರ್ಮಭ್ರಷ್ಟನೂ, ದುರಾತ್ಮನೂ ಆದ ಈ ಕೃಷ್ಣನಿಗೆ ಯಾವ ವಿವೇಕಿಯು ತಾನೇ ಹೀಗೆ ಪೂಜೆಯನ್ನು ನಡೆಸುವನು. ಈ ಅಕಾರ್ಯದಿಂದ ಯುಧಿಷ್ಠಿರನಿಗಿದ್ದ ಧರ್ಮಾತ್ಮನೆಂಬ ಹೆಸರೂ ಈಗ ತಪ್ಪಿಹೋಯಿತು. ಇವನು ಕೈಲಾಗದ ಕೃಪಣನೆಂಬುದೂ ಹೊರಪಟ್ಟಿತು. ಕೃಷ್ಣಾ! ಒಂದುವೇಳೆ ಪಾಂಡವರು ಕೈಲಾಗದೆ ಭಯಪಟ್ಟು, ಶೋಚನೀಯವಾದ ಸ್ಥಿತಿಯಲ್ಲಿ ಸಿಕ್ಕಿಬಿದ್ದು ವಿಧಿಯಿಲ್ಲದೆ ನಿನಗೆ ಪೂಜೆಯನ್ನು ಮಾಡುವುದಕ್ಕೆ ಯತ್ನಿಸಿರಬಹುದು. ನಿನಗೆ ಅದನ್ನು ಪಡೆಯುವ ಯೋಗ್ಯತೆಯಿಲ್ಲವೆಂಬುದನ್ನು ನೀನಾದರೂ ತಿಳಿದುಕೊಳ್ಳಬೇಡವೆ? ಭೀರುಸ್ವಭಾವದಿಂದ ಕೈಲಾಗದ ಈ ಪಾಂಡವರು ಮಾಡಿದ ಮರ್ಯಾದೆಯನ್ನು, ಅದಕ್ಕೆ ಯೋಗ್ಯನಲ್ಲದ ನೀನು ಹೇಗೆತಾನೇ ಸಮ್ಮತಿಸಿದೆ? ಯಾರೂ ಇಲ್ಲದ ಕಡೆಯಲ್ಲಿ ಕೈತಪ್ಪಿ ಬಿದ್ದುಹೋದ ಹವಿಸ್ಸನ್ನು ನಾಯಿಯು ಸಂತೋಷದಿಂದ ನೆಕ್ಕುವಂತೆ, ನಿನಗೆ ಯೋಗ್ಯವಲ್ಲದ ಪೂಜೆಯನ್ನು ನೀನು ಪಡೆದು, ಅದಕ್ಕಾಗಿ ಹಿಗ್ಗುತ್ತಿರುವೆ. ಜನಾರ್ದನಾ! ಇದರಿಂದ ಇಲ್ಲಿ ಬಂದಿರುವ ರಾಜರಿಗೇನೂ ಅವಮಾನವಿಲ್ಲ! ವಾಸ್ತವದಲ್ಲಿ ಕೌರವರು ನಿನ್ನನ್ನೇ ವಂಚಿಸಿ ಅಪಹಾಸ್ಯಕ್ಕೆ ಗುರಿಮಾಡಿದಂತಾಯಿತು. ನಪುಂಸಕನಿಗೆ ಮದುವೆಯು ಹೇಗೋ, ಕುರುಡನ ಮುಂದೆ ಕನ್ನಡಿಯನ್ನು ತೋರಿಸಿದರೆ ಹೇಗೋ ಹಾಗೆ ರಾಜನಲ್ಲದ ನಿನಗೆ ರಾಜನಂತೆ ಇಲ್ಲಿ ಪೂಜೆಯೇನೋ ನಡೆಯಿತು. ಮುಖ್ಯವಾಗಿ ಈ ಸಭೆಯಲ್ಲಿ ಯುಧಿಷ್ಠಿರನ ಬುದ್ಧಿ, ಈ ಭೀಷ್ಮನ ಬುದ್ಧಿ, ಈ ಕೃಷ್ಣನ ಬುದ್ಧಿ, ಇವು ಮೂರೂ ಎಂತದೆಂದು

ಸ್ಪಷ್ಟವಾಯಿತು. ಮೂರೂ ಸರಿಯಾಗಿಯೇ ಸೇರಿವೆ" ಎಂದನು. ಶಿಶುಪಾಲನು ಹೀಗೆಂದು ಹೇಳಿ, ತಾನು ಕುಳಿತಿದ್ದ ಆಸನದಿಂದೆದ್ದು ಸಭೆಯನ್ನು ಬಿಟ್ಟು ಹೊರಟನು.

ಇದು ನಾಲ್ವತ್ತನೆಯ ಅಧ್ಯಾಯವು.

ಧರ್ಮರಾಜನು ಶಿಶುಪಾಲನನ್ನು ಸಮಾಧಾನಪಡಿಸಿ ಕರೆತರಲು ಹೋದಾಗ, ಭೀಷ್ಮನು ಧರ್ಮರಾಜನನ್ನು ತಡೆದು ಕೃಷ್ಣನನ್ನು ಪೂಜಿಸುವುದೇ ನ್ಯಾಯವೆಂದು ನಿರ್ಧರಿಸಿದುದು.

ಓ ಜನಮೇಜಯರಾಜಾ! ಶಿಶುಪಾಲನು ಕೋಪದಿಂದ ಆಸನವನ್ನು ಬಿಟ್ಟು ಹೋಗುವುದನ್ನು ನೋಡಿ ಧರ್ಮರಾಜನು, ಅವನನ್ನು ಹಿಂಬಾಲಿಸಿ ಓಡುತ್ತ, ಸಮಾಧಾನಪೂರ್ವಕವಾಗಿ ಅವನನ್ನು ಕುರಿತು, "ಚೇದಿರಾಜಾ! ನೀನು ಇಂತಹ ಮಾತುಗಳನ್ನಾಡಬಾರದು. ಇದು ಅಧರ್ಮವು. ನಿನ್ನ ಪರುಷವಾಕ್ಯಗಳೇನೂ ಪ್ರಯೋಜನಕ್ಕೆ ಬಂದುದಲ್ಲ. ಸುಮ್ಮನೆ ಮತ್ತೊಬ್ಬರನ್ನು ನಿಂದಿಸುವುದೇಕೆ? ಪಿತಾಮಹನಾದ ಭೀಷ್ಮನು ಎಂದಿಗೂ ಧರ್ಮವನ್ನು ತಿಳಿಯದೆ ಮಾತಾಡತಕ್ಕವನಲ್ಲ. ನೀನು ಅವನನ್ನು ಗೌರವಿಸಬೇಕೇಹೊರತು ಹೀಗೆ ಅವಮಾನಪಡಿಸಬಾರದು. ಶಿಶುಪಾಲರಾಜೇಂದ್ರಾ! ಅದೂ ಹೋಗಲಿ! ನಿನಗಿಂತಲೂ ವೃದ್ಧರಾದ ಎಷ್ಟೋ ಮಂದಿ ರಾಜರು ಈ ಸಭೆಯಲ್ಲಿ ನೆರೆದಿರುವುದನ್ನು ನೋಡು. ಇವರಲ್ಲಿ ಯಾರೂ ಬಾಯೆತ್ತದೆ ಕೃಷ್ಣನಿಗೆ ನಡೆದ ಪೂಜೆಯನ್ನು ನೋಡಿ ಸುಮ್ಮನಿರುವರಲ್ಲವೆ? ಅದರಂತೆಯೇ ನೀನೂ ಏಕೆ ಸಹಿಸಿಕೊಂಡಿರಬಾರದು? ಓ ಚೇದಿರಾಜಾ! ಕೃಷ್ಣನ ನಿಜಸ್ಥಿತಿಯೇನೆಂಬುದು ಭೀಷ್ಮಕನಿಗೆ ಚೆನ್ನಾಗಿ ತಿಳಿಯುವುದು. ಅವನಿಗೆ ತಿಳಿದಷ್ಟು ತತ್ವವು ನಿನಗೂ ತಿಳಿಯದು" ಎಂದನು.

ಇಷ್ಟರಲ್ಲಿಯೇ ಭೀಷ್ಮನು ಧರ್ಮರಾಜನನ್ನು ಕುರಿತು, "ಧರ್ಮರಾಜಾ! ಇವನಿಗೆ ಇಷ್ಟೊಂದು ಸಮಾಧಾನವೇಕೆ? ಇವನು ಇಂತಹ ಅನುನಯಗಳಿಗೆಲ್ಲ ಯೋಗ್ಯನಲ್ಲ. ಮೂರು ಲೋಕಕ್ಕೂ ಮೇಲೆನಿಸಿದ,

ಕೃಷ್ಣನಿಗೆ ನಡೆದ ಪೂಜೆಯನ್ನೇ ಸಹಿಸಲಾರದ ಇವನಿಗೆ ಇನ್ನೆಷ್ಟು ಹೇಳಿದರೆತಾನೇ ಪ್ರಯೋಜನವೇನು? ಯುದ್ಧಸಮರ್ಥನಾದ ಕ್ಷತ್ರಿಯನೊಬ್ಬನು ಬೇರೊಬ್ಬ ಕ್ಷತ್ರಿಯನನ್ನು ಯುದ್ಧದಲ್ಲಿ ಜಯಿಸಿ ವಶಮಾಡಿಕೊಂಡು ಆಮೇಲೆ ಅವನನ್ನು ಬಿಟ್ಟುಬಿಟ್ಟರೂ ಅವನು ಪರಾಜಿತನಾದವನಿಗೆ ಗುರುವೆನಿಸುವನು. ಈ ಸಭೆಯಲ್ಲಿ ನೆರೆದಿರುವ ಅನೇಕರಾಜರಲ್ಲಿ ಕೃಷ್ಣನಿಗೆ ಸೋಲದವನು ಒಬ್ಬನಾದರೂ ನನ್ನ ಕಣ್ಣಿಗೆ ಬೀಳುವುದಿಲ್ಲ. ಯುಧಿಷ್ಠಿರಾ! ಈ ಕೃಷ್ಣನು ನಮ್ಮ ರಾಜಕುಲಕ್ಕೆ ಮಾತ್ರವೇ ಅಲ್ಲ. ತ್ರೈಲೋಕ್ಯಕ್ಕೂ ಪೂಜಾರ್ಹನು. ಈ ಕೃಷ್ಣನಿಂದ ಯುದ್ಧದಲ್ಲಿ ಎಷ್ಟೋ ರಾಜರು ಜಯಿಸಲ್ಪಟ್ಟಿರುವರು. ಸಮಸ್ತಜಗತ್ತೂ ಈ ಕೃಷ್ಣನಲ್ಲಿ ನೆಲೆಗೊಂಡಿರುವುದು. ಆದುದರಿಂದ ಈ ಸಭೆಯಲ್ಲಿ ಇನ್ನೂ ಅನೇಕವೃದ್ಧರಿದ್ದರೂ, ಈ ಕೃಷ್ಣನಿಗಲ್ಲದೆ ಬೇರೊಬ್ಬರಿಗೆ ಆ ಅಗ್ರಪೂಜೆಯನ್ನು ಮಾಡುವುದು ಯೋಗ್ಯವಲ್ಲ. ಓ ಶಿಶುಪಾಲಾ! ನೀನು ಇಂತಹ ಮಾತುಗಳನ್ನಾಡಬಾರದು! ನಿನ್ನ ಬುದ್ಧಿಯು ಹೀಗೆ ವಿಪರೀತವಾಗಿ ಹೋಗಬಾರದು! ನಾನು ಇದುವರೆಗೆ ಜ್ಞಾನವೃದ್ಧರಾದ ಅನೇಕರನ್ನು ಉಪಾಸನೆಮಾಡಿರುವೆನು. ಅವರೆಲ್ಲರೂ ಈ ಶ್ರೀಕೃಷ್ಣನ ಪ್ರಭಾವವನ್ನು ಚೆನ್ನಾಗಿ ತಿಳಿದವರು. ಈ ಕೃಷ್ಣನಿಂದಲೇ ಅನೇಕಸಮಯಗಳಲ್ಲಿ ಕಾಪಾಡಲ್ಪಟ್ಟವರು. ಅಂತಹ ಮಹನೀಯರೂಕೂಡ ಶ್ರೀಕೃಷ್ಣನ ಗುಣಗಳನ್ನು ಕೊಂಡಾಡುವರು. ಈ ಕೃಷ್ಣನು ಹುಟ್ಟಿದುದುಮೊದಲು ನಡೆಸಿದ ಅದ್ಭುತಕಾರ್ಯಗಳನ್ನೆಲ್ಲ ಅವರು ಆಗಾಗ ನನ್ನ ಮುಂದೆ ಹೇಳಿದುದನ್ನೂ ಕೇಳಿರುವೆನು. ಓ ಚೇದಿರಾಜಾ! ನಾವು ಯಾವುದೋ ಆಸೆಯಿಂದಾಗಲಿ, ಒಂದು ಸಂಬಂಧವನ್ನು ಮುಂದಿಟ್ಟುಕೊಂಡಾಗಲಿ, ಭಯದಿಂದಾಗಲಿ, ಅಭಿಮಾನದಿಂದಾಗಲಿ ಇವನನ್ನು ಪೂಜಿಸಿದವರಲ್ಲ. ಸಮಸ್ತಭೂತಗಳಿಗೂ ಕ್ಷೇಮಪ್ರದನಾಗಿ, ಲೋಕದಲ್ಲಿ ಸತ್ಪುರುಷರಿಂದ ಆರಾಧಿಸಲ್ಪಟ್ಟ ಈ ಶ್ರೀಕೃಷ್ಣನನ್ನು ಪೂಜಿಸಬೇಕಾದುದು ನಮಗೆ ಕರ್ತವ್ಯವೆಂದೇ ತಿಳಿದು ಪೂಜಿಸಿರುವೆವು. ಶಿಶುಪಾಲಾ! ಇವನ ಯಶಸ್ಸು, ಇವನ ಶೌರ್ಯ, ಇವನ ಜಯ, ಇವನ್ನೆಲ್ಲ ತಿಳಿದೇ ನಾವು ಇವನನ್ನು ಪೂಜಿಸಿರುವೆವು. ಈ ಮಹಾಸಭೆಯಲ್ಲಿ ಅಗ್ರಪೂಜೆಯನ್ನೆತ್ತುವುದಕ್ಕೆ ಮೊದಲು, ಇಲ್ಲಿಗೆ ಬಂದಿರುವ ಒಂದು ಸಣ್ಣ ಪಿಳ್ಳೆಯನ್ನಾ

ದರೂ ನಾವು ಪರ್ಯಾಲೋಚಿಸದೆ ಬಿಟ್ಟವರಲ್ಲ. ಇಲ್ಲಿರುವ ಎಲ್ಲಾ ವೃದ್ಧರಿಗಿಂತಲೂ ಈ ಕೃಷ್ಣನೇ ಸಮಸ್ತ ಗುಣಗಳಿಂದಲೂ ನಮಗೆ ಪೂಜ್ಯತಮನೆಂದು ತಿಳಿಯಿತು. ಬ್ರಾಹ್ಮಣರಲ್ಲಿ ಜ್ಞಾನವೃದ್ಧನಿಗೂ, ಕ್ಷತ್ರಿಯರಲ್ಲಿ ಎಲ್ಲರಿಗಿಂತಲೂ ಹೆಚ್ಚು ಬಲಾಢ್ಯನಿಗೂ, ವೈಶ್ಯರಲ್ಲಿ ಎಲ್ಲರಿಗಿಂತಲೂ ಹೆಚ್ಚು ಧನಧಾನ್ಯ ಸಮೃದ್ಧಿಯುಳ್ಳ ಶ್ರೀಮಂತನಿಗೂ, ಶೂದ್ರರಲ್ಲಿಮಾತ್ರ ವಯಸ್ಸಿನಲ್ಲಿ ಹಿರಿಯನಿಗೂ ಮೊದಲು ಮರ್ಯಾದೆಯು ಸಲ್ಲಬೇಕಾದುದು ನ್ಯಾಯವು. ಈ ಕೃಷ್ಣನಾದರೋ ವೇದವೇದಾಂಗಜ್ಞಾನವುಳ್ಳವನು. ಬಲದಲ್ಲಿಯೂ ಎಲ್ಲರಿಗಿಂತಲೂ ಮೇಲಾದವನು. ಹೀಗಿರುವಾಗ ಈ ಬ್ರಾಹ್ಮಣರೂ, ಕ್ಷತ್ರಿಯರೂ ನೆರೆದ ಮಹಾಸಭೆಯಲ್ಲಿ ಇವನಿಗಿಂತಲೂ ಪೂಜ್ಯನು ಬೇರೆ ಯಾವನಿರುವನು? ಇವನು ಪೂಜ್ಯನೆಂಬುವುದಕ್ಕೆ ಮೇಲಿನ ಎರಡು ಕಾರಣಗಳೂ ಕಲೆತಿರುವುವು. ಇವನಿಗಿಂತಲೂ ಮೇಲಾದವನು ಈ ಲೋಕದಲ್ಲಿಯೇ ಬೇರೊಬ್ಬನಿಲ್ಲ. ಔದಾರ್ಯ, ಕಾರ್ಯಸಾಮರ್ಥ್ಯ, ಶಾಸ್ತ್ರಜ್ಞಾನ, ಶೌರ್ಯ, ಲಜ್ಜೆ, ಕೀರ್ತಿ, ಉತ್ತಮಬುದ್ಧಿ, ನಮ್ರತೆ, ಸಂಪತ್ತು, ಧೈರ್ಯ, ತುಷ್ಟಿ, ಪುಷ್ಟಿ, ಈ ಸಮಸ್ತಗುಣಗಳೂ ಈತನಲ್ಲಿ ಸ್ಥಿರವಾಗಿ ನೆಲೆಗೊಂಡಿರುವುವು. ಲೋಕಕ್ಕೆಲ್ಲ ಇವನು ಆಚಾರ್ಯನೂ, ಗುರುವೂ, ತಂದೆಯೂ ಆಗಿರುವನು. ಸಮಸ್ತ ಲೋಕಕ್ಕೂ ಪೂಜ್ಯನಾಗಿ ಹಿಂದೆಯೂ ಎಲ್ಲರಿಂದಲೂ ಪೂಜಿತನಾದ ಈ ಕೃಷ್ಣನನ್ನು ನಾವು ಪೂಜಿಸಿರುವೆವು. ನೀವೆಲ್ಲರೂ ಮನ್ನಿಸಬೇಕು. ಋತ್ವಿಕ್ಕು, ಆಚಾರ್ಯನು, ಮದುವೆಯ ಗಂಡು, ಸ್ನಾತಕನು, ರಾಜನು, ಸ್ನೇಹಿತನು, ಎಲ್ಲರೂ ನಮಗೆ ಈ ಹೃಷೀಕೇಶನೇ (ಕೃಷ್ಣನೇ) ಆಗಿರುವನು. ಆದುದರಿಂದ ಇವನನ್ನು ನಾವು ಪೂಜಿಸಿದೆವು. ಅಷ್ಟೇಕೆ? ಸಮಸ್ತಲೋಕಕ್ಕೂ ಈ ಕೃಷ್ಣನೇ ಉತ್ಪತ್ತಿ ಕಾರಣನು! ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವೂ ಅವನಲ್ಲಿಯೇ ನೆಲೆಗೊಂಡಿರುವುದು! ಲೋಕಕ್ಷಯಕ್ಕೂ ಇವನೇ ಕಾರಣನು. ಹೀಗೆ ಸೃಷ್ಟಿ, ಸ್ಥಿತಿ, ಸಂಹಾರಗಳು ಮೂರೂ ಇವನ ಅಧೀನವು. ಜಗತ್ಸೃಷ್ಟಿಗೆ ಮೊದಲು ಅವ್ಯಕ್ತವಾಗಿದ್ದ ಪ್ರಕೃತಿಯೂ ಇವನೇ! ಅದನ್ನು ಪಡೆದ ಆದಿಪುರುಷನೂ ಇವನೇ! ಎಲ್ಲಕ್ಕಿಂತಲೂ ಬೇರೆಯಾದ ಪರಸ್ವರೂಪನೂ ಇವನೇ! ಆದುದರಿಂದ ಈ ಕೃಷ್ಣನೇ ನಮಗೆ ಪೂಜ್ಯತಮನು. ಮನ

ಸ್ಸು, ಬುದ್ಧಿ, ಮಹದಾದಿ ತತ್ವಗಳು, ಭೂಮಿ, ತೇಜಸ್ಸು, ವಾಯು, ಆಕಾಶ, ಜಲ, (ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ) ಚತುರ್ವಿಧ ಭೂತಗಳು, ಎಲ್ಲವೂ ಕೃಷ್ಣನಲ್ಲಿಯೇ ನೆಲೆಗೊಂಡಿರುವುವು. ಸೂರ್ಯಚಂದ್ರಾದಿ ಗ್ರಹಗಳು, ನಕ್ಷತ್ರಗಳು, ದಿಕ್ಕುಗಳು, ವಿದಿಕ್ಕುಗಳು, ಎಲ್ಲವೂ ಈ ಕೃಷ್ಣನಲ್ಲಿಯೇ ನೆಲೆಗೊಂಡಿರುವುವು. ಸರ್ವಾತ್ಮಕನಾದ ರುದ್ರನೂ ಇವನೇ! ಸನಾತನಧರ್ಮವೂ ಇವನೇ. ನಾಮರೂಪಾದಿಗಳೊಂದೂ ಇಲ್ಲದೆ ಅಕ್ಷರಸ್ವರೂಪನಾದ ಇವನು ಮನುಷ್ಯರೂಪದಿಂದ ಇಲ್ಲಿ ಅವತರಿಸಿರುವನು. ವೇದಗಳಿಗೆ ಅಗ್ನಿಯೇ ಮುಖವು. (ಪ್ರಧಾನವು) ಮಂತ್ರಗಳಿಗೆ ಗಾಯತ್ರಿಯು ಮುಖವು, ಮನುಷ್ಯರಿಗೆ ಅರಸನೇ ಮುಖವು, ಹಾಗೆಯೇ ನದಿಗಳಿಗೆ ಸಮುದ್ರವೂ, ನಕ್ಷತ್ರಗಳಿಗೆ ಚಂದ್ರನೂ, ತೇಜಸ್ಸುಗಳಿಗೆ ಸೂರ್ಯನೂ, ಪರ್ವತಗಳಿಗೆ ಮೇರುವೂ, ಪಕ್ಷಿಗಳಿಗೆ ಗರುಡನೂ ಮುಖವೆನಿಸಿಕೊಂಡಿರುವರು. ಅದರಂತೆಯೇ ಈ ಜಗತ್ತಿನ ಊರ್ಧ್ವಗತಿ, ಅಧೋಗತಿ, ತಿರ್ಯಗ್ಗತಿಗಳೆಂಬ ಯಾವಯಾವ ಗತಿಗಳುಂಟೋ ದೇವಾಸುರರೊಡಗೂಡಿದ ಸಮಸ್ತ ಲೋಕಗಳಾವುವುಂಟೋ, ಅವಕ್ಕೆಲ್ಲ ಈ ಶ್ರೀಕೃಷ್ಣನೇ ಮುಖವು. ಎಲೈ ರಾಜನೇ! ಈ ಶಿಶುಪಾಲನಾದರೋ ಇನ್ನೂ ಬಾಲನು. ಯಾವುದನ್ನೂ ತಿಳಿಯನು! ಆದುದರಿಂದಲೇ ಯಾವಾಗಲೂ ಎಲ್ಲೆಲ್ಲಿಯೂ ಕೃಷ್ಣನನ್ನು ಈ ವಿಧವಾಗಿ ನಿಂದಿಸುತ್ತಲೇ ಇರುವನು. ಬುದ್ಧಿಶಾಲಿಯಾದ ಯಾವ ಮನುಷ್ಯನು ಉತ್ತಮಾಧಮಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡುವನೋ, ಅವನೇ ಅದರ ತತ್ವವನ್ನು ಚೆನ್ನಾಗಿ ತಿಳಿಯಬಲ್ಲನು. ಈ ಶಿಶುಪಾಲನಿಗೆ ಆ ಶಕ್ತಿಯಿಲ್ಲ. ಲೋಕದಲ್ಲಿ ಬಾಲಕರು, ವೃದ್ಧರು ಮೊದಲುಗೊಂಡು ಯಾರೇ ಆಗಲಿ, ರಾಜರಲ್ಲಿ ಯಾವನೇ ಆಗಲಿ ಈ ಕೃಷ್ಣನು ಪೂಜಾರ್ಹನೆಂಬುದನ್ನು ತಿಳಿಯದವನಿಲ್ಲ! ಅವನನ್ನು ಪೂಜಿಸದವನಿಲ್ಲ! ಈ ಶಿಶುಪಾಲನಾದರೋ ಅಜ್ಞತೆಯಿಂದ ಇವನಿಗೆ ಈ ಪೂಜೆಯು ಯೋಗ್ಯವಲ್ಲವೆಂದು ತಿಳಿದಿರುವನು. ಹೀಗಿರುವುದರಿಂದ ಅಸಂಬದ್ಧವಾದ ಕಾರ್ಯಗಳಲ್ಲಿ ಅವಿವೇಕಿಯು, ನಡೆಯುವ ಮಾರ್ಗವನ್ನೇ ಇವನೂ ಹಿಡಿದಿರುವನು. ಇದು ಇವನಿಗೆ ನ್ಯಾಯವೇ.

ಇದು ನಾಲ್ವತ್ತೊಂದನೆಯ ಅಧ್ಯಾಯವು.

ಕೃಷ್ಣನ ಅಗ್ರಪೂಜೆಗೆ ಸಮ್ಮತಿಸದ ರಾಜರ ತಲೆಯನ್ನು ಮೆಟ್ಟುವುದಾಗಿ ಸಹದೇವನು ವೀರೋಕ್ತಿಗಳನ್ನಾಡಿ ಕಾಲನ್ನೊದರಿದುದು.

ಭೀಷ್ಮನು ಹೇಳಿದ ಮಾತುಗಳನ್ನು ಕೇಳಿ ಶಿಶುಪಾಲನಿಗೆ ಮಿತಿಮಿಾರಿದ ಕೋಪವುಂಟಾಯಿತು. ಆವನ ಕೋಪವನ್ನು ನೋಡಿ ಸಹದೇವನು “ ಚೇದಿರಾಜಾ! ಈಗ ನಾನು ಮಾಡಿದುದೆಲ್ಲವೂ ನನ್ನ ಸ್ವಬುದ್ಧಿಯನ್ನು ಪಯೋಗಿಸಿ ಊಹಾಪೋಹಗಳನ್ನು ತಿಳಿದು ಮಾಡಿದುದೇಹೊರತು ಬೇರೆಯಲ್ಲ. ಇದರ ನಿಜಾಂಶವನ್ನು ತಿಳಿಸುವೆನು ಕೇಳು! ಇಲ್ಲಿನ ರಾಜರಿಗೆಲ್ಲರಿಗೂ ಕೃಷ್ಣನೊಬ್ಬನೇ ಹಿರಿಯನು! ಅವನಿಗೆ ಸಮಾನರಿಲ್ಲ. ಆದುದರಿಂದ ಆ ಮಹಾನುಭಾವನು ನಮ್ಮಿಂದ ಪೂಜಿಸಲ್ಪಟ್ಟನು! ಇಲ್ಲಿರುವವರಾರಾದರೂ ಇದನ್ನು ಸಮ್ಮತಿಸಲೇಬೇಕು! ಯಾರು ಇದನ್ನು ಅಂಗೀಕರಿಸಲಾರರೋ, ಅವರು ತಮ್ಮ ಸೈನ್ಯದೊಡನೆ ಯುದ್ಧಕ್ಕೆ ನಿಲ್ಲಲಿ! ಅಂಥವರನ್ನು ಇದೋ! ಈ ನನ್ನ ಕಾಲಿನಿಂದ ಮೆಟ್ಟುವೆನು. ನಾನು ಕೃಷ್ಣನನ್ನು ಅಗ್ರಪೂಜೆಯಿಂದ ಆರಾಧಿಸಿದುದಕ್ಕೆ ಕಾರಣವನ್ನು ತಿಳಿಸಿದೆನು. ಯಾರಾದರೂ ನನಗೆ ಪ್ರತ್ಯುತ್ತರವನ್ನು ಕೊಡಲಿ” ಎಂದನು. ಹೀಗೆ ಬುದ್ಧಿವಂತರೂ, ಪೂಜಾರ್ಹರೂ, ಮತ್ತು ಬಲವಂತರೂ ಆದ ರಾಜರ ನಡುವೆ ಸಹದೇವನು ಕಾಲೆತ್ತಿ ತೋರಿಸಿದಾಗಲೂ, ಯಾರೂ ಬಾಯೆತ್ತದೆ ಸುಮ್ಮನಿದ್ದರು. ಸಹದೇವನ ಈ ಮಾತುಗಳನ್ನು ಕೇಳಿ ಶಿಶುಪಾಲನ ಕಣ್ಣುಗಳು ಕೆಂಪೇರಿದುವು. ಅವನ ಕೋಪವನ್ನು ಕಂಡು ಬುದ್ಧಿಯಲ್ಲಿಯೂ, ಮಾತಿನಲ್ಲಿಯೂ ಚತುರನಾದ ಭೀಷ್ಮನು, ಆ ಶಿಶುಪಾಲನಿಗೆ ಕೃಷ್ಣನ ಗುಣಾತಿಶಯಗಳನ್ನು ವಿಸ್ತಾರವಾಗಿ ತಿಳಿಸಲಾರಂಭಿಸಿ ಶಿಶುಪಾಲನನ್ನೂ ಅವನ ಗುಂಪಿನಲ್ಲಿ ಕುಳಿತಿದ್ದ ರಾಜರುಗಳನ್ನೂ ಕುರಿತು “ ಓ ರಾಜಶ್ರೇಷ್ಠರೇ! ಕೃಷ್ಣನ ವಿಷಯವಾಗಿ ಸಹದೇವನು ಹೇಳಿದುದೆಲ್ಲ ವಾಸ್ತವವೇ! ಅದು ಹಾಗೆಯೇ ಸರಿ! ಇದೇ ವಿಷಯವಾಗಿ ನಾನೊಂದು ಮಾತನ್ನು ಹೇಳುವೆನು ಕೇಳಿರಿ! ಸಾವಧಾನವಾಗಿ ಕೇಳಿರಿ!” ಎಂದನು.

ಇದು ನಾಲ್ವತ್ತೆರಡನೆಯ ಅಧ್ಯಾಯವು.

ಕೃಷ್ಣನ ಮಹಿಮೆಯನ್ನು ವಿವರಿಸಿ ಹೇಳಬೇಕೆಂದು ಧರ್ಮ
ರಾಜನು ಕೇಳಲು, ಭೀಷ್ಮನು ಆತನೇ ವಿಷ್ಣುರೂಪಿ
ಯೆಂಬುದನ್ನೂ, ಅವನ ಜಗತ್ಸೃಷ್ಟಿ ಮೊದಲಾದ
ಕಾರ್ಯಗಳನ್ನೂ ಕ್ರಮವಾಗಿ ವಿವರಿಸಿದುದು.

ಭೀಷ್ಮನು ಹೇಳಿದ ಮಾತುಗಳನ್ನು ಕೇಳಿ ಧರ್ಮರಾಜನು ಕೃಷ್ಣನ ಮಹಿಮೆಯನ್ನು ಅಲ್ಲಿದ್ದವರೆಲ್ಲರಿಗೂ ತಿಳಿಸಬೇಕೆಂಬ ಕುತೂಹಲದಿಂದ ಭೀಷ್ಮನನ್ನು ಕುರಿತು “ ಓ ಪಿತಾಮಹಾ ! ಭಗವಂತನೂ, ಆದಿಪುರುಷನೂ ಆದ ಶ್ರೀಕೃಷ್ಣನ ಲೀಲೆಗಳನ್ನು ವಿವರವಾಗಿ ಕೇಳಬೇಕೆಂದಿರುವೆನು. ಕೃಷ್ಣನ ಅವತಾರಗಳು, ಅವನ ಕಾರ್ಯಕ್ರಮಗಳು, ಶ್ರೀಕೃಷ್ಣನಲ್ಲಿ ಪ್ರಕೃತಿಯು ಅಡಗಿರುವ ರೀತಿ, ಇವನ್ನೆಲ್ಲ ನನಗೆ ಹೇಳಬೇಕು ” ಎಂದನು. ಅದಕ್ಕಾ ಭೀಷ್ಮನು, ಆ ರಾಜಸಭೆಯಲ್ಲಿ ದೇವೇಂದ್ರನಂತೆ ಪ್ರಕಾಶಿಸುತಿದ್ದ ಕೃಷ್ಣನ ಸಮಕ್ಷಮದಲ್ಲಿಯೇ, ಅವನ ದೇವಮಾನುಷಲೀಲೆಗಳನ್ನೆಲ್ಲ ಧರ್ಮರಾಜನಿಗೆ ವಿಶದವಾಗಿ ಹೇಳಲಾರಂಭಿಸಿ, ಸಭೆಯಲ್ಲಿ ನೆರೆದಿದ್ದ ಎಲ್ಲಾ ರಾಜರೂ ಕೇಳುತ್ತಿರುವಹಾಗೆ, ಅಲ್ಲಿದ್ದ ಶಿಶುಪಾಲನನ್ನೂ ಹೆಸರುಹಿಡಿದು ಕರೆಯುತ್ತ, ಹೀಗೆಂದು ಹೇಳುವನು.

“ ರಾಜಾ ! ಯುಧಿಷ್ಠಿರಾ ! ಸರ್ವೇಶ್ವರನ ಕಾರ್ಯಗತಿಯು ಎಂತವರಿಗೂ ದುರವಗಾಹವಾದುದು. ಅಂತಹ ಪರಮಪುರುಷನು ಹಿಂದೆ ನಡೆಸಿದ ಮತ್ತು ಈಗ ನಡೆಸುತ್ತಿರುವ ಲೀಲೆಗಳನ್ನೆಲ್ಲ ತಿಳಿಸುವೆನು ಕೇಳು. ಎಂತವರಿಗೂ ಅಗೋಚರನಾದ ಆತನು, ಈಗ ನಮ್ಮ ಕಣ್ಣಮುಂದೆ ಕೃಷ್ಣರೂಪದಿಂದ ಮನುಷ್ಯನಾಗಿ ಗೋಚರಿಸುತ್ತಿರುವನು. ಈತನು ತನ್ನಲ್ಲಿ ತಾನೇ ನೆಲೆಗೊಂಡವನು. ಬ್ರಹ್ಮದೇವನ ಪಿತನು. ಅಚಲನು ! ಅಪ್ರಮೇಯನು ! ನಿತ್ಯನು. ಸಹಸ್ರಶೀರ್ಷನು. ಸಹಸ್ರಮುಖನು. ಸಹಸ್ರಪಾದನು. ಸಹಸ್ರ ಬಾಹುವುಳ್ಳವನು. ಸಹಸ್ರನಾಮನು. ಸಹಸ್ರ ಕಿರೀಟನು. ಸರ್ವವ್ಯಾಪಿ ! ಸರ್ವಜ್ಞನು, ವಿಶ್ವರೂಪನು, ದೇವದೇವನು, ಅನೇಕವರ್ಣನು ! ದೇವತೆಗಳೆಲ್ಲರಿಗೂ ಆದಿಪುರುಷನೆನಿಸಿದ ಆ ಭಗವಂತನಾದ ಶ್ರೀಮನ್ನಾರಾಯಣನು ಸೃಷ್ಟಿಗೆಮೊದಲು ಪ್ರಕೃತಿಯೆಲ್ಲವನ್ನೂ

ತನ್ನಲ್ಲಿಯೇ ಅಡಗಿಟಿಸ್ಕಿಕೊಂಡಿದ್ದನು. ಆ ನಾರಾಯಣನು ಮೊದಲು ಜಲವನ್ನು ಸೃಷ್ಟಿಸಿದನು. ಆಮೇಲೆ ಅದೇ ಜಲ(ಸಮುದ್ರ) ದಲ್ಲಿ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು. ಆ ಬ್ರಹ್ಮದೇವನು ಇತರ ಲೋಕಗಳನ್ನೆಲ್ಲ ಸೃಷ್ಟಿಸಿದನು. ಆದಿಯಲ್ಲಿ ಲೋಕಸೃಷ್ಟಿಕ್ರಮವು ಇದೇ! ಹಿಂದೆ ಪ್ರಳಯಕಾಲದಲ್ಲಿ ಸ್ಥಾವರಜಂಗಮಗಳೆಲ್ಲ ನಷ್ಟವಾಗಿ, ಬ್ರಹ್ಮಾದಿ ದೇವತೆಗಳೂ, ಪಂಚಭೂತಗಳೂ ಪ್ರಕೃತಿಯಲ್ಲಿ ಲೀನವಾಗಿರುವಾಗ, ಪರಮಾತ್ಮನೂ, ಸರ್ವೇಶ್ವರನೂ, ನಾಶರಹಿತನೂ ಆದ ಶ್ರೀಮನ್ನಾರಾಯಣನೊಬ್ಬನುಮಾತ್ರ ಉಳಿದಿದ್ದನು. ಸಮಸ್ತ ದೇವತೆಗಳೂ ಆ ನಾರಾಯಣನ ಅಂಗಾಂಗಗಳು. ಊರ್ಧ್ವಲೋಕವೇ ಆತನ ಶಿರಸ್ಸು! ಆಕಾಶವು ಅವನ ನಾಭಿ! ಭೂಮಿಯು ಅವನ ಪಾದಗಳು! ಅಶ್ವಿನೀ ದೇವತೆಗಳೇ ಆತನ ಕಿವಿಗಳು. ಚಂದ್ರಸೂರ್ಯರು ಕಣ್ಣುಗಳು. ಇಂದ್ರನೂ, ಅಗ್ನಿಯೂ ಆ ಮಹಾತ್ಮನ ಮುಖವು. ಇನ್ನೂ ಇತರದೇವತೆಗಳೆಲ್ಲ ಆ ಮಹಾಪುರುಷನ ಮಿಕ್ಕ ಅವಯವಗಳು. ಹಾರದಲ್ಲಿ ಪೋಣಿಸಲ್ಪಟ್ಟ ಮಣಿಗಳಂತೆ ಎಲ್ಲಾ ವಸ್ತುಗಳೂ ಅವನನ್ನೇ ಆಶ್ರಯಿಸಿರುವುವು. ಮಹಾಯೋಗಿಯೂ, ಸರ್ವಜ್ಞನೂ, ಪರಮಾತ್ಮನೂ, ಪರಬ್ರಹ್ಮನೂ ಆದ ನಾರಾಯಣನು, ಮಹಾಪ್ರಳಯವಾದಮೇಲೆ, ಸಮಸ್ತವೂ ತಮಸ್ಸೆಂಬ ಮೂಲಪ್ರಕೃತಿಯಲ್ಲಿ ಅಡಗಿರುವುದನ್ನು ಕಂಡು ಮೊದಲು ತನ್ನನ್ನು ತಾನೇ ಬ್ರಹ್ಮರೂಪದಿಂದ ಸೃಷ್ಟಿಸಿಕೊಂಡನು. ಬ್ರಹ್ಮರೂಪದಿಂದ ಕಾಣಿಸಿದ ಆತನೇ ಆಮೇಲೆ ಸನತ್ಕುಮಾರನನ್ನೂ, ರುದ್ರನನ್ನೂ, ತಪೋನಿಷ್ಠರಾದ ಸಪ್ತರ್ಷಿಗಳನ್ನೂ, ಸಪ್ತಲೋಕಗಳನ್ನೂ, ಮನುಷ್ಯರನ್ನೂ, ಇತರ ಚರಾಚರಗಳನ್ನೂ ಸೃಷ್ಟಿಸಿದನು. ಯುಧಿಷ್ಠಿರಾ! ಇವರೆಲ್ಲ ಆಯಾಸ್ಥಳಗಳಲ್ಲಿ ತಮಗೆ ಬೇಕಾದ ನಾನಾವಸ್ತುಗಳನ್ನು ಏರ್ಪಡಿಸಿಕೊಂಡುದರಿಂದ ಈ ಮಹಾತ್ಮರಿಂದ ಪ್ರಕೃತಿಯು ಅನೇಕರೂಪಗಳಾಗಿ ವಿಸ್ತರಿಸಿತು. ಈ ವಿಧವಾಗಿ ಇದಕ್ಕೆ ಹಿಂದೆ ಎಷ್ಟೋ ಕೋಟ್ಯನುಕೋಟಿ ಪ್ರಳಯಗಳೂ, ಸೃಷ್ಟಿಗಳೂ ಕಳೆದುಹೋಗಿವೆ. ರಾಜಾ! ಮನ್ವಂತರಗಳೂ, ದೇವಯುಗಗಳೂ, ಮನುಷ್ಯಯುಗಗಳೂ, ಪ್ರಳಯಗಳೂ, ಚಕ್ರದಹಾಗೆ ಸುತ್ತಿಸುತ್ತಿ ಬರುತ್ತಿರುವುವು. ಹೀಗೆ ಈ ಪ್ರಪಂಚವೆಲವೂ ಕೊನೆಗೆ ಕ್ಷೀಣವಾಗತಕ್ಕುದೇ! ಜಗ

ನ್ನಾಥನಾದ ಆ ಭಗವಂತನು, ಆಗಾಗ ಚತುರ್ಮುಖನನ್ನು ಸೃಷ್ಟಿಸುತ್ತ ಎಲ್ಲಾ ಲೋಕಗಳಿಗೂ ಹಿತವನ್ನು ಬಯಸಿ ತಾನು ಕ್ಷೀರಾಬ್ಧಿಯಲ್ಲಿ ಶಯನಿಸಿರುವನು. ಅದರಿಂದ ಸಮಸ್ತ ಲೋಕಗಳಿಗೂ ಬ್ರಹ್ಮನೇ ಪಿತಾಮಹನು. ಆತನ ತಂದೆಯಾದ ನಾರಾಯಣನು ಎಲ್ಲರಿಗೂ ಪ್ರಪಿತಾಮಹನಾಗಿರುವನು. ಇದು ನಾಲ್ವತ್ತುಮೂರನೆಯ ಅಧ್ಯಾಯವು.

---

## ವಿಷ್ಣುವು ಮಧುಕೈಟಭರನ್ನು ಕೊಂದ ವೃತ್ತಾಂತವು.

ಯುಧಿಷ್ಠಿರಾ! ಅವ್ಯಕ್ತನಾಗಿದ್ದರೂ ಜ್ಞಾನಿಗಳಿಗೆ ದಿವ್ಯಮಂಗಳ ಮೂರ್ತಿಯಿಂದ ಗೋಚರಿಸತಕ್ಕವನೂ, ಸರ್ವೇಶ್ವರನೂ ಆದ ಭಗವಂತನು, ಮೊದಲು ನರನಾರಾಯಣಾವತಾರವನ್ನೆತ್ತಿ ಆಮೇಲೆ ಕೃಷ್ಣನಾದನು. ಸರ್ವದಾ ಇರತಕ್ಕವನೂ, ಸರ್ವಾಂತರ್ಯಾಮಿಯೂ, ಸರ್ವಾತ್ಮಕನೂ ಆದ ಆ ಭಗವಂತನೇ, ತನ್ನ ಲೀಲೆಗಳಿಗೆ ತಕ್ಕಹಾಗೆ ಬ್ರಹ್ಮ, ಇಂದ್ರ, ಸೂರ್ಯ, ಧರ್ಮದೇವತೆಗಳೆಂಬ ವಿವಿಧಾವತಾರಗಳನ್ನೆತ್ತಿರುವನು. ದೇವಗಣಗಳಲ್ಲಿ ಸೇರಿದ ಅವನ ಕೆಲವು ಅವತಾರಗಳನ್ನು ಮೊದಲು ತಿಳಿಸುವೆನು ಕೇಳು. ಆ ಭಗವಂತನು ಸಾವಿರಯುಗಗಳ ವರೆಗೆ ನಿದ್ರಾಲೋಲನಾಗಿ ಮಲಗಿದ್ದು, ಆಗಾಗ ತನ್ನ ಲೀಲಾಕಾರ್ಯಗಳನ್ನು ನಡೆಸುವುದಕ್ಕಾಗಿ ಅವತಾರವನ್ನೆತ್ತುವನು. ಅಗ್ನಿಜ್ವಾಲೆಗಳಂತೆ ಕೇವಲತೇಜೋಮಯನೂ, ಆದಿದೇವನೂ, ಜಗತ್ಪತಿಯೂ ಆದ ಆ ಶ್ರೀಮನ್ನಾರಾಯಣನು, ಹಲವು ಸಹಸ್ರಯುಗಗಳಾದಮೇಲೆ, ಬ್ರಹ್ಮನನ್ನೂ, ಕಶ್ಯಪನನ್ನೂ, ಕಪಿಲನನ್ನೂ, ಪರಮೇಷ್ಠಿಯನ್ನೂ, ದೇವತೆಗಳನ್ನೂ, ಸಪ್ತರ್ಷಿಗಳನ್ನೂ, ಶಂಕರನನ್ನೂ, ಸನತ್ಕುಮಾರನನ್ನೂ, ಮತ್ತು ಪ್ರಜಾಧಿಪತಿಯನ್ನೂ ಸೃಷ್ಟಿಸಿದನು. ಪ್ರಳಯಕಾಲದಲ್ಲಿ ಸ್ಥಾವರಜಂಗಮಗಳೂ, ದೇವತೆಗಳೂ, ರಾಕ್ಷಸರೂ, ನಾಶಹೊಂದಿದಾಗ, ಸಮುದ್ರಮಧ್ಯದಲ್ಲಿ ಮಧುಕೈಟಭರೆಂಬ ಇಬ್ಬರು ಅಣ್ಣತಮ್ಮಂದಿರುಮಾತ್ರ ವಾಸಿಸುತಿದ್ದರು. ಅವರಿಬ್ಬರೂ ಸಮುದ್ರಶಾಯಿಯಾದ ಭಗವಂತನನ್ನು ಯುದ್ಧಕ್ಕಾಗಿ ಇದಿರಿಸಿದಾಗ ಅವನು ಅವರನ್ನು

ಸಂಹರಿಸಿದನು. ರಾಕ್ಷಸಕುಲಕ್ಕೆ ಮೊದಲನೆಯವರಾದ ಇವರಿಬ್ಬರನ್ನೂ ಆ ಭಗವಂತನೇ ಸೃಷ್ಟಿಸಿ, ಭೂಮಿಯಲ್ಲಿ ಯಾರಿಂದಲೂ ಜಯಿಸಲಾಗದಂತೆ ಅವರಿಗೆ ವರಗಳನ್ನಿತ್ತನು. ಮಹಾಸಮುದ್ರದಲ್ಲಿ ಶಯನಿಸುತಿದ್ದ ವಿಷ್ಣುವಿನ ಕಿವಿಯ ಗುಗ್ಗೆಯಿಂದ ಇವರಿಬ್ಬರೂ ಹುಟ್ಟಿದರು. ಇವರಿಬ್ಬರೂ ದೊಡ್ಡ ಪರ್ವತಗಳಂತೆ ಸಮುದ್ರದಲ್ಲಿ ಮಲಗಿದ್ದರು. ಒಮ್ಮೆ ಬ್ರಹ್ಮಾಜ್ಞೆಯಿಂದ ವಾಯುದೇವನು ಅವರ ದೇಹದೊಳಗೆ ಹೊಕ್ಕನು. ಅದರಿಂದ ಈ ರಾಕ್ಷಸರಿಬ್ಬರೂ, ಆಕಾಶವನ್ನೆಲ್ಲ ಆಕ್ರಮಿಸಿಕೊಳ್ಳುವಹಾಗೆ ಬೆಳೆಯುತ್ತ ಬಂದರು. ವಾಯುವಿನಂತೆ ಪ್ರವರ್ಧಮಾನರಾಗಿ ಬೆಳೆಯುತ್ತಿರುವ ರಾಕ್ಷಸರನ್ನು ಕಂಡು ಬ್ರಹ್ಮನು ವಿಸ್ಮಿತನಾಗಿ, ಅವರಿಬ್ಬರನ್ನೂ ಮೆಲ್ಲಗೆ ತನ್ನ ಕೈಯಿಂದ ಮುಟ್ಟಿ ನೋಡಿದನು. ಅವರಲ್ಲಿ ಒಬ್ಬನು ಮೃದುವಾದ ಶರೀರವುಳ್ಳವನೆಂದೂ, ಮತ್ತೊಬ್ಬನು ಕಠಿನದೇಹವುಳ್ಳವನೆಂದೂ ಬ್ರಹ್ಮನಿಗೆ ತೋರಿತು. ಮೃದುವಾಗಿದ್ದವನಿಗೆ ಮಧುವೆಂದೂ, ಕಠಿನವಾಗಿದ್ದವನಿಗೆ ಕೈಟಭನೆಂದೂ ಹೆಸರನ್ನಿಟ್ಟನು. ಧರ್ಮರಾಜಾ! ಹೀಗೆ ಪ್ರಖ್ಯಾತರಾದ ಆ ರಾಕ್ಷಸರಿಬ್ಬರೂ ಬಲದಿಂದ ಕೊಬ್ಬಿ ಆಕಾಶವನ್ನೆಲ್ಲ ವ್ಯಾಪಿಸಿಕೊಂಡರು. ಆಕಾಶವನ್ನೂ, ಜಲಮಯವಾದ ಈ ಲೋಕವನ್ನೂ ಆಕ್ರಮಿಸಿದ್ದ ಈ ರಾಕ್ಷಸರಿಗೆ ಯುದ್ಧವನ್ನು ಮಾಡಬೇಕೆಂಬ ಮದವು ಹುಟ್ಟಿತು. ಇವರು ಬರುವುದನ್ನು ಕಂಡು ಲೋಕಕರ್ತನಾದ ಬ್ರಹ್ಮನು, ಆಗ ಏಕಾರ್ಣವರೂಪದಿಂದ ಒಂದೇ ಜಲಮಯವಾಗಿದ್ದ ಈ ಲೋಕದಲ್ಲಿ ಅವಿತುಕೊಂಡನು. ಆ ಬ್ರಹ್ಮನು ಪದ್ಮನಾಭನ ನಾಭಿಕಮಲದಲ್ಲಿ ಜನಿಸಿದವನು. ಹೀಗೆ ಕೆಸರಿನಲ್ಲಿ ಹುಟ್ಟಿದ ಅಪೂರ್ವಕಮಲದಿಂದ ಜನಿಸಿದ ಆ ಬ್ರಹ್ಮನು, ತನ್ನ ಜನ್ಮಸ್ಥಾನವಾದ ಆ ಕಮಲವನ್ನೇ ಆಶ್ರಯಿಸಿ ಸೇವಿಸುತಿದ್ದನು. ಅನೇಕ ಸಹಸ್ರವರ್ಷಗಳವರೆಗೆ ಬ್ರಹ್ಮವಿಷ್ಣುಗಳಿಬ್ಬರೂ ಕದಲದೆ ಸಮುದ್ರಗರ್ಭದಲ್ಲಿಯೇ ಇರುತಿದ್ದರು. ಹೀಗೆ ಬಹುದೀರ್ಘಕಾಲವು ಕಳೆದುಹೋದಮೇಲೆ, ಆ ರಾಕ್ಷಸರಿಬ್ಬರೂ ಬ್ರಹ್ಮನಿದ್ದಸ್ಥಾನಕ್ಕೆ ಬರಲು, ಆ ರಾಕ್ಷಸರನ್ನು ನೋಡಿ, ವಿಷ್ಣುವು ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ತನ್ನ ಶಯ್ಯೆಯಿಂದ ಥಟ್ಟನೆ ಮೇಲೆದ್ದನು. ಯುಧಿಷ್ಠಿರಾ! ತ್ರೈಲೋಕ್ಯವೂ ಕೇವಲ ಜಲಮಯವಾಗಿದ್ದಾಗಲೇ, ಆ ರಾಕ್ಷಸರಿಗೂ, ವಿಷ್ಣುವಿಗೂ ಭಯಂಕರವಾದ ಯುದ್ಧ

ವು ಆರಂಭಿಸಿತು. ಈ ಘೋರಯುದ್ಧವು ಅನೇಕ ಸಹಸ್ರವರ್ಷಗಳ ವರೆಗೆ ನಡೆದರೂ, ಆ ರಾಕ್ಷಸರಿಗೆ ದೇಹದಲ್ಲಿ ಸ್ವಲ್ಪವಾದರೂ ಬಳಲಿಕೆ ತೋರಲಿಲ್ಲ. ಆದರೇನು ? ಕೊನೆಗೆ ಆ ರಾಕ್ಷಸರಿಬ್ಬರೂ ಶ್ರೀಮನ್ನಾರಾಯಣನ ಅಸಾಧಾರಣಶಕ್ತಿಗೆ ಬೆರಗಾಗಿ, ಮನಸ್ಸಿನಲ್ಲಿ ಸಂತೋಷದಿಂದ "ದೇವಾ! ನಿನ್ನ ಯುದ್ಧಸಾಮರ್ಥ್ಯಕ್ಕೆ ನಾವು ಸಂತುಷ್ಟರಾದೆವು. ನಿನ್ನಂತವನು ನಮಗೆ ಮೃತ್ಯುವಾಗುವುದು ಶ್ಲಾಘ್ಯವೇ! ನೀರಿನಲ್ಲಿ ನೆನೆಯದ ಸ್ಥಳದಲ್ಲಿ ನೀನು ನಮ್ಮನ್ನು ಸಂಹರಿಸು! ದೇವಶ್ರೇಷ್ಠಾ! ನಿನ್ನ ಕೈಯಲ್ಲಿ ಸಂಹೃತರಾದರೆ, ನಾವು ನಿನ್ನ ಪುತ್ರರಾಗಿ ಹುಟ್ಟುವೆವು. ಯಾವನು ನಮ್ಮನ್ನು ಯುದ್ಧದಲ್ಲಿ ಕೊಲ್ಲುವನೋ ಅವನ ಪುತ್ರರಾಗಿ ಹುಟ್ಟಬೇಕೆಂಬುದು ವಿಧಿ" ಎಂದರು. ಶ್ರೀಮನ್ನಾರಾಯಣನು ಅವರು ಹೇಳುವ ಮಾತನ್ನು ಕೇಳಿ ಮುಗುಳ್ನಗೆಯೊಡನೆ ಅವರನ್ನು ತನ್ನ ಭುಜಗಳಿಂದಲೂ, ತೊಡೆಗಳಿಂದಲೂ ತಿಕ್ಕಿ ಕೊಂದನು. ಹೀಗೆ ಹತವಾದ ದೇಹಗಳೆರಡೂ ನೀರಿನಲ್ಲಿ ಕರಗಿ ಒಂದಾಗಿಹೋಯಿತು. ಅಲೆಗಳಿಂದ ಹೊಡೆಯಲ್ಪಟ್ಟ ಈ ರಾಕ್ಷಸದೇಹಗಳಿಂದ ಕೊಬ್ಬು (ಮೇದಸ್ಸು) ಹೊರಗೆ ಬಂದಿತು. ಈ ಮೇದಸ್ಸಿನಿಂದ ಗಡ್ಡೆಕಟ್ಟಿ ಜಲರಾಶಿಯೇ ಅದೃಶ್ಯವಾಯಿತು. ಆಮೇಲೆ ನಾರಾಯಣನು ಅನೇಕ ಪ್ರಜೆಗಳನ್ನು ಸೃಷ್ಟಿಸಿದನು. ಧರ್ಮರಾಜಾ! ಭೂಮಿಯೆಲ್ಲವೂ ಆ ರಾಕ್ಷಸರ ಮೇದಸ್ಸಿನಿಂದ ಮುಚ್ಚಲ್ಪಟ್ಟುದರಿಂದ, ಅದುಮೊದಲು ಈ ಭೂಮಿಗೆ **ಮೇದಿನಿ**ಯೆಂಬ ಹೆಸರಾಯಿತು. ಹೀಗೆ ಶ್ರೀಮನ್ನಾರಾಯಣನ ಪ್ರಭಾವದಿಂದ ಭೂಮಿಯು ಮನುಷ್ಯನಿಗೆ ಸ್ಥಿರವಾದ ವಾಸಯೋಗ್ಯಸ್ಥಾನವಾಯಿತು.

ಇದು ನಾಲ್ವತ್ತನಾಲ್ಕನೆಯ ಅಧ್ಯಾಯವು.



## ವರಾಹಾವತಾರದ ಕಥೆ.

ಓ ಧರ್ಮರಾಜಾ! ಕೇಳು! ಇದುವರೆಗೆ ಶ್ರೀ ಮಹಾವಿಷ್ಣುವಿನ ಸಾವಿರಾರುಬಗೆಯ ಅವತಾರಗಳು ನಡೆದುಹೋದುವು. ನನ್ನ ಶಕ್ತಿಯಿದ್ದಷ್ಟು ಅದನ್ನು ಸಂಗ್ರಹಿಸಿ ಹೇಳುವೆನು ಕೇಳು. ಹಿಂದೆ ಸಮುದ್ರಶಾಯಿ

ಯಾಗಿದ್ದ ಶ್ರೀವಿಷ್ಣುವಿನ ನಾಭಿಕಮಲದಿಂದ ದೇವತೆಗಳೂ, ಮಹರ್ಷಿಗಳೂ ಹುಟ್ಟಿದರಲ್ಲವೆ? ಆ ಅವತಾರಕ್ಕೆ ಪೌಷ್ಕರಿಕಾವತಾರವೆಂದು ಹೆಸರು. ಮಂತ್ರಬ್ರಾಹ್ಮಣರೂಪಗಳಾದ ವೇದಗಳನ್ನೇ ಸ್ವರೂಪವಾಗಿ ಉಳ್ಳ ವರಾಹಾವತಾರದ ಚರಿತ್ರವು ಪುರಾಣಗಳಲ್ಲಿ ನಿರೂಪಿಸಲ್ಪಟ್ಟು ಕೇಳುವುದಕ್ಕೂ ಎಷ್ಟೋ ಪ್ರಿಯವಾಗಿರುವುದು. ದೇವದೇವನೂ, ಮಾಯಾತೀತನೂ, ಮಹಾತಪಸ್ವಿಯೂ, ಮಹಾಮಹಿಮನೂ, ಧರ್ಮಮೂರ್ತಿಯೂ, ಸತ್ಯಸ್ವರೂಪನೂ, ಚರಿತ್ರಗಳಿಂದಲೂ, ಪರಾಕ್ರಮಗಳಿಂದಲೂ ಪೂಜ್ಯನೂ ಆದ ಆ ಭಗವಂತನು, ವರಾಹರೂಪವನ್ನು ತಾಳಿ ಪರ್ವತಾರಣ್ಯಗಳೊಡಗೂಡಿದ ಭೂಮಿಯನ್ನು ಜಲಮಧ್ಯದಿಂದ ಉದ್ಧರಿಸಿದನು. ಆಗ ಆ ವರಾಹರೂಪದಿಂದ ಗೋಚರಿಸಿದ ಆ ಭಗವಂತನಿಗೆ ನಾಲ್ಕುವೇದಗಳೇ ನಾಲ್ಕು ಕಾಲುಗಳು. ಯಜ್ಞದ ಯೂಪಸ್ತಂಭವೇ ಅವನ ಕೋರೆಹಲ್ಲು. ಯಾಗಗಳೆಲ್ಲವೂ ಅವನ ಇತರ ದಂತಗಳು. ಚಯನವೆಂಬ ಅಗ್ನಿವೇದಿಕೆಯೇ ಅವನ ಮುಖವು. ಅಗ್ನಿಯೇ ನಾಲಗೆ! ದರ್ಭೆಗಳೇ ಅವನ ರೋಮಗಳು. ಬ್ರಹ್ಮಸ್ಥಾನದಲ್ಲಿರುವ ಋತ್ವಿಕ್ಕೇ ಅವನ ತಲೆ! ಅಹೋರಾತ್ರಗಳೆರಡೂ ಅವನ ಎರಡು ಕಣ್ಣುಗಳು. ವೇದವೇ ಅವನ ಒಡಲು. ಸ್ವರಗಳೇ ಆಭರಣಗಳು. ಆಜ್ಯವೇ ಮೂಗು. ಸ್ರುವವೆಂಬ ಯಜ್ಞದರ್ವಿಯೇ ಅವನ ಮೂತಿ! ಸಾಮವೇದಘೋಷವೇ ಅವನ ಧ್ವನಿ. ಪ್ರಾಯಶ್ಚಿತ್ತವೇ ಮುಖವು. ಯಜ್ಞಪಶುವೇ ಅವನ ಜಾನು. ಧರ್ಮವೇ ಮೂರ್ತಿ! ಸಾಮಗಾನದೊಡನೆ ಉದ್ಗಾತೃವು ಮಾಡತಕ್ಕ ಹೋಮವೇ ಅವನ ಪುರುಷಲಿಂಗವು. ಪಶುಗಳೂ, ಸೋಮಲತೆಯೂ ಬೀಜಗಳು! ಮಂತ್ರಗಳೇ ಅಸ್ಥಿಗಳು. ·ಯಾಗವೇದಿಕೆಯೇ ಅವನ ತೋಳುಗಳು. ಹವಿಸ್ಸೇ ದೇಹಗಂಧವು. ಹವ್ಯಕವ್ಯಗಳೇ ಮಲಮೂತ್ರಗಳು. ಪ್ರಾಗ್ವಂಶವೆಂಬ ಯಾಗಶಾಲೆಯ ಮುಂದಿನ ಅಂಗಳವೇ ಅವನ ಮುಂದಿನ ದೇಹವು. ಯಾಗದೀಕ್ಷೆಯೇ ಅವನ ಬಲವು. ದಕ್ಷಿಣೆಯೇ ಹೃದಯವು. ಬಾಹ್ಯವಸ್ತುಗಳಾದ ಜಡಗಳಿಗೂ, ಅಂತರ್ಯವಾದ ಜೀವಕ್ಕೂ ಆತ್ಮಭೂತನೂ, ಮಹಾತೇಜಸ್ವಿಯೂ, ಶಾಸ್ತ್ರಮೂರ್ತಿಯೂ, ಎಲ್ಲಕ್ಕಿಂತಲೂ ಉತ್ತಮನೂ, ಸ್ಥಿರನೂ ಆದ ಆ ಭಗವಂತನಿಗೆ, ಆಗಿನ ವರಾಹವತಾರದಲ್ಲಿ ಉಪಾಕರ್ಮ

ವೆಂಬ ಅಧ್ಯಯನಾರಂಭವೇ ತುಟಿಗಳು. ಪ್ರವರ್ಗ್ಯವೆಂಬ ಯಾಗಾಂಗದ ಕ್ರಿಯೆಯೇ ಅವನಿಗೆ ಅಲಂಕಾರಭೂತಗಳಾದ ಸುಳಿಗಳು. ಯಜ್ಞಶಾಲೆಯೇ ಅವನಿಗೆ ಸಮೀಪದಲ್ಲಿದ್ದು ಸಹಾಯಕಳಾದ ಧರ್ಮಪತ್ನಿ! ಇಂತಹ ರೂಪವುಳ್ಳ ಆ ಭಗವಂತನು, ರತ್ನಮಯವಾದ ಶೃಂಗದಿಂದ ಮತ್ತಷ್ಟು ಉನ್ನತಾಕಾರದೊಡನೆ, ಯಜ್ಞವರಾಹಮೂರ್ತಿಯಾಗಿ ಗೋಚರಿಸಿ, ಮಹಾಸಮುದ್ರದಲ್ಲಿ ಮುಳುಗಿದ್ದ ತನ್ನ ಪತ್ನಿಯಾದ ಭೂದೇವಿಯನ್ನು, ಆಗ ತನ್ನೊಡನೆ ಮಹಾಸಮುದ್ರದಲ್ಲಿದ್ದ ಮಾರ್ಕಂಡೇಯನು ನೋಡುತಿದ್ದ ಹಾಗೆಯೇ ತನ್ನ ಕೊಂಬಿನ ತುದಿಯಿಂದ ಉದ್ಧರಿಸಿ, ಲೋಕಕ್ಕೆಲ್ಲ ಹಿತವನ್ನುಂಟುಮಾಡಿದನು. ಸಹಸ್ರ ಶಿರಸ್ಸುಳ್ಳವನೂ, ದೇವದೇವನೂ, ಭೂತಭವಿಷ್ಯದ್ವರ್ತಮಾನಗಳೆಂಬ ಎಲ್ಲಾ ವಸ್ತುಗಳಿಗೂ ಆತ್ಮಭೂತನೂ, ಸರ್ವಸಮರ್ಥನೂ ಆದ ಆ ಯಜ್ಞವರಾಹರೂಪಿಯು, ಸಮುದ್ರಾವೃತವಾದ ಸಮಸ್ತಭೂಮಿಯನ್ನೂ ಹೀಗೆ ಜಲಮಧ್ಯದಿಂದ ಉದ್ಧರಿಸಿ ನೆಲೆಗೊಳಿಸಿದನು. ಆ ಕಾಲದಲ್ಲಿ ಆ ಮಹಾವಿಷ್ಣುವು ಅನೇಕದಾನವರನ್ನು ಸಂಹರಿಸಿದನು. ಯುಧಿಷ್ಠಿರಾ! ಇದು ವರಾಹಾವತಾರದ ಚರಿತ್ರವು. ಇನ್ನು ಹಿರಣ್ಯಕಶಿಪುವನ್ನು ಕೊಂದ ನರಸಿಹ್ಮಾವತಾರದ ಕಥೆಯನ್ನು ಹೇಳುವೆನು ಕೇಳು" ಎಂದನು.

ಇದು ನಾಲ್ವತ್ತೈದನೆಯ ಅಧ್ಯಾಯವು.

---

ಹಿರಣ್ಯಕಶಿಪುವಿನ ತಪಸ್ಸು, ಅವನಿಗೆ ಬ್ರಹ್ಮನಿಂದ ವರಪ್ರಾಪ್ತಿ, ವರಬಲದಿಂದ ಕೊಬ್ಬಿದ ಆ ದೈತ್ಯನನ್ನು ಶ್ರೀವಿಷ್ಣುವು ನೃಸಿಂಹಾವತಾರವನ್ನೆತ್ತಿ ಕೊಂದುದು, ಈ ಮೊದಲಾದ ನೃಸಿಂಹಾವತಾರದ ಚರಿತ್ರಗಳು.

ಧರ್ಮರಾಜಾ! ಹಿಂದೆ ಹಿರಣ್ಯಕಶಿಪುವೆಂಬ ಅಸುರರಾಜನಿದ್ದನು. ಅವನು ಮಹಾಬಲಗರ್ವಿತನು. ದೇವತೆಗಳಲ್ಲಿ ಬದ್ಧವೈರವುಳ್ಳವನು. ಮೂರುಲೋಕಕ್ಕೂ ಕಂಟಕಪ್ರಾಯನಾಗಿದ್ದವನು. ಅಸುರರಿಗೆಲ್ಲ ಮೂಲಪುರುಷನೆನಿಸಿದ್ದವನು. ಪರಾಕ್ರಮದಲ್ಲಿ ಎಣೆಯಿಲ್ಲದವನು. ಅವನು

ಸಮುದ್ರದಲ್ಲಿ ಪ್ರವೇಶಿಸಿ, ಹನ್ನೊಂದು ಸಾವಿರದ ಐನೂರು ವರ್ಷಗಳ ಕಾಲದವರೆಗೆ ಜಲದಲ್ಲಿಯೇ ಮಹಾ ತಪಸ್ಸನ್ನು ಮಾಡಿದನು. ಅಷ್ಟು ಕಾಲವೂ ದೃಢವಾದ ಮೌನವ್ರತವನ್ನೂ, ಉಪವಾಸವನ್ನೂ ಹಿಡಿದು, ಮನಸ್ಸನ್ನೂ, ಪಂಚೇಂದ್ರಿಯಗಳನ್ನೂ ನಿಗ್ರಹಿಸಿ, ನಿಶ್ಚಲನಾಗಿ, ಕಠಿನವಾದ ಬ್ರಹ್ಮಚರ್ಯ್ಯದಲ್ಲಿದ್ದನು. ಇವನ ದೃಢವ್ರತಕ್ಕೂ, ನಿಯಮಗಳಿಗೂ ಮೆಚ್ಚಿ ಬ್ರಹ್ಮದೇವನು ಅವನಿಗೆ ಪ್ರಸನ್ನನಾದನು. ಚರಾಚರಗಳಿಗೆಲ್ಲ ಜನಕನೂ, ಸ್ವಯಂಭುವೂ, (ತನಗೆತಾನೇ ಜನಿಸಿದವನು) ಬ್ರಹ್ಮಜ್ಞಾನಿಗಳಲ್ಲಿ ಪ್ರಧಾನನೂ, ಮಹಾಮಹಿಮೆಯುಳ್ಳವನೂ ಆದ ಚತುರ್ಮುಖಬ್ರಹ್ಮನು, ಹಂಸಗಳನ್ನು ಕಟ್ಟಿದ ಸೂರ್ಯಸಮಾನವಾದ ತನ್ನ ವಿಮಾನದಲ್ಲಿ ಕುಳಿತು, ಆದಿತ್ಯರು, ವಸುಗಳು, ಸಾಧ್ಯರು, ದೇವತೆಗಳು, ರುದ್ರರು, ವಿಶ್ವೇದೇವತೆಗಳು, ಯಕ್ಷ ರಾಕ್ಷಸ ಕಿನ್ನರರು, ದಿಕ್ಕುವಿದಿಕ್ಕುಗಳು, ನದನದೀಸಮುದ್ರಗಳು, ಗ್ರಹನಕ್ಷತ್ರಗಳು, ಮುಹೂರ್ತಗಳು, ಸಿದ್ಧರು, ದೇವಋಷಿಗಳು, ರಾಜಋಷಿಗಳು, ಸಪ್ತಋಷಿಗಳು, ಗಂಧರ್ವರು, ಅಪ್ಸರಸ್ಸುಗಳು, ಇವರೆಲ್ಲರೂ ತನ್ನನ್ನು ಸುತ್ತಿ ಬರಲು, ಆ ಹಿರಣ್ಯಕಶಿಪುವಿನ ಬಳಿಗೆ ಬಂದು “ಓ ದೈತ್ಯೇಂದ್ರಾ! ನಿನ್ನ ಭಕ್ತಿಗೂ, ತಪಸ್ಸಿಗೂ ಮೆಚ್ಚಿದೆನು. ನಿನಗೆ ಬೇಕಾದ ವರವನ್ನು ಕೇಳು” ಎಂದನು. ಅದಕ್ಕಾ ಹಿರಣ್ಯಕಶಿಪುವು “ಓ ಪಿತಾಮಹಾ! ದೇವ ಗಂಧರ್ವ ಯಕ್ಷ ರಾಕ್ಷಸ ಪಿಶಾಚ ಪನ್ನಗ ಮನುಷ್ಯರಲ್ಲಿ ಯಾರೇ ಆಗಲಿ ನನ್ನನ್ನು ಕೊಲ್ಲಬಾರದು. ಒಳ್ಳೇ ತಪಸ್ವಿಗಳಾದ ಮಹರ್ಷಿಗಳು ಕೋಪದಿಂದ ನನ್ನನ್ನು ಶಪಿಸಿದರೂ ಆ ಶಾಪದಿಂದ ನನಗೇನೂ ಕೇಡಾಗಬಾರದು. ಯಾವ ಶಸ್ತ್ರಾಸ್ತ್ರಗಳಿಂದಾಗಲಿ, ಕಲ್ಲು, ಮರ, ಬೆಟ್ಟ ಇವುಗಳಿಂದಾಗಲಿ, ಒಣಗಿದ ವಸ್ತುಗಳಿಂದಾಗಲಿ, ಹಸಿಯ ವಸ್ತುಗಳಿಂದಾಗಲಿ ನನಗೆ ಸಾವಿರಬಾರದು ಅಂತರಿಕ್ಷದಲ್ಲಿಯಾಗಲಿ, ನೆಲದಲ್ಲಿಯಾಗಲಿ, ರಾತ್ರಿಯಾಗಲಿ, ಹಗಲಾಗಲಿ, ಒಳಗಾಗಲಿ, ಹೊರಗಾಗಲಿ, ನನಗೆ ಸಾವಿರಬಾರದು. ನೀನು ನನ್ನಲ್ಲಿ ಪ್ರಸನ್ನನಾಗಿ ವರಗಳನ್ನು ಕೊಡುವುದಾದರೆ, ಈ ವರಗಳನ್ನೇ ಕೊಡಬೇಕು” ಎಂದನು. ಅದಕ್ಕಾ ಬ್ರಹ್ಮನು “ಓ ದೈತ್ಯೇಂದ್ರಾ! ನಿನ್ನ ಇಷ್ಟದಂತೆಯೇ ನಾನು ಈ ವರಗಳನ್ನು ಕೊಟ್ಟಿರುವೆನು. ನನ್ನ ಅನುಗ್ರಹದಿಂದ ಇನ್ನೂ ನಿನಗೆ ಬೇಕಾದ ಕೋ

ರಿಕೆಗಳನ್ನೆಲ್ಲ ಪಡೆಯುವೆ" ಎಂದು ಹೇಳಿ, ತಾನು ಬಂದ ದಾರಿಯನ್ನು ಹಿಡಿದು ಆಕಾಶದಲ್ಲಿ ಕಣ್ಮರೆಯಾಗಿ, ತನ್ನ ಲೋಕಕ್ಕೆ ಹೋಗಿ ಸೇರಿ, ಅಲ್ಲಿ ಅನೇಕ ಬ್ರಹ್ಮಋಷಿಗಳಿಂದ ಸೇವಿತನಾಗಿ ಇರುತಿದ್ದನು. ಇಷ್ಟರಲ್ಲಿ ದೇವತೆಗಳೂ, ನಾಗರೂ, ಗಂಧರ್ವರೂ ತಮ್ಮ ಶತ್ರುವಾದ ಹಿರಣ್ಯಕಶಿಪುವಿಗೆ ಬ್ರಹ್ಮನು ಯಾತರಿಂದಲೂ ಸಾವಿಲ್ಲದಂತೆ ವರವನ್ನು ಕೊಟ್ಟುಹೋದ ಸಂಗತಿಯನ್ನು ಕೇಳಿ ಭಯಗ್ರಸ್ತರಾದರು. ಒಡನೆಯೇ ಎಲ್ಲರೂ ಗುಂಪಾಗಿ ಬ್ರಹ್ಮನ ಬಳಿಗೆ ಬಂದು "ಓ ದೇವೋತ್ತಮಾ! ಹಿರಣ್ಯಕಶಿಪುವು ಮೊದಲೇ ನಮ್ಮನ್ನೆಲ್ಲ ಬಾಧಿಸುತ್ತಿರುವನು. ಈಗ ನೀನು ಕೊಟ್ಟ ವರದಿಂದ ಅವನು ಮತ್ತಷ್ಟು ಗರ್ವಿತನಾಗಿ ನಮ್ಮನ್ನು ಇನ್ನೂ ಬಲವಾಗಿ ಬಾಧಿಸುವನಲ್ಲ. ಹೇ ಭಗವನ್! ನಮ್ಮಲ್ಲಿ ಪ್ರಸನ್ನನಾಗು. ಅವನ ವಧಕ್ಕೆ ಉಪಾಯವೇನೋ ಅದನ್ನು ಯೋಚಿಸು" ಎಂದರು. ಆಗ ಬ್ರಹ್ಮನು ಆ ಸಮಸ್ತ ದೇವಗಣಗಳನ್ನೂ ನೋಡಿ, ಸಮಾಧಾನವಾಕ್ಯದಿಂದ ಹೀಗೆಂದು ಹೇಳುವನು. "ಎಲೈ ದೇವತೆಗಳಿರಾ! ಆ ಹಿರಣ್ಯಕಶಿಪುವು ಬಹಳ ದೊಡ್ಡ ತಪಸ್ಸನ್ನು ಮಾಡಿದನು. ಆ ತಪಸ್ಸಿಗೆ ತಕ್ಕ ಫಲವನ್ನು ಅವನು ಪಡೆಯದೆ ತೀರದು. ಆದರೇನು? ಇವನ ತಪಃಫಲವು ತೀರಿದಮೇಲೆ ಭಗವಂತನು ಹೇಗಾದರೂ ಅವನನ್ನು ಕೊಂದು ತೀರಿಸಿಬಿಡುವನು" ಎಂದನು. ಬ್ರಹ್ಮನು ಹೇಳಿದ ಈ ಮಾತನ್ನು ಕೇಳಿ, ದೇವತೆಗಳೆಲ್ಲರೂ ಸಂತೋಷದಿಂದ ಹಿಂತಿರುಗಿ ತಮ್ಮತಮ್ಮ ಸ್ಥಾನಕ್ಕೆ ಬಂದು ಸೇರಿದರು. ಇತ್ತಲಾಗಿ ಮೊದಲೇ ಕ್ರೂರಸ್ವಭಾವವುಳ್ಳ ಆ ಹಿರಣ್ಯಕಶಿಪುವು, ತನಗೆ ಸಾವಿಲ್ಲದಂತೆ ವರವು ಸಿಕ್ಕಿದೆಯೆಂಬ ದರ್ಪದಿಂದ, ಪ್ರಜೆಗಳನ್ನೆಲ್ಲ ಬಾಧಿಸತೊಡಗಿದನು. ಅನೇಕ ದೈತ್ಯರೊಡನೆ ಸೇರಿ ದೊಡ್ಡ ರಾಜ್ಯವನ್ನು ವಿಸ್ತರಿಸಿದನು. ಲೋಕಾಲೋಕಪರ್ವತದವರೆಗೆ ಸಪ್ತದ್ವೀಪಗಳನ್ನೂ ಬಲಾತ್ಕಾರದಿಂದ ತನ್ನ ವಶಮಾಡಿಕೊಂಡನು. ಲೋಕದಲ್ಲಿ ದೊರೆಯಬಹುದಾದ ಸಮಸ್ತ ದಿವ್ಯಭೋಗಗಳನ್ನೂ ಅನುಭವಿಸಿದನು. ದೇವತೆಗಳನ್ನೆಲ್ಲ ಸ್ವರ್ಗದಿಂದೋಡಿಸಿ, ತ್ರೈಲೋಕ್ಯವನ್ನೂ ತನ್ನ ವಶಮಾಡಿಕೊಂಡು, ಸ್ವರ್ಗರಾಜ್ಯದಲ್ಲಿ ತಾನೇ ನೆಲೆಯಾಗಿ ನಿಂತನು. ವರಬಲದಿಂದ ಮದೋನ್ಮತ್ತನಾದ ಆ ದೈತ್ಯನು, ಎಲ್ಲಾ ಲೋಕಗಳನ್ನೂ ಜಯಿಸಿದಮೇಲೆ "ನಾನೇ ಇಂದ್ರನು! ನಾನೇ

ಚಂದ್ರನು! ಅಗ್ನಿವಾಯುಗಳೂ ನಾನೇ! ಜಲವೂ, ಅಂತರಿಕ್ಷವೂ, ನಕ್ಷತ್ರಗಳೂ, ದಶದಿಕ್ಕುಗಳೂ ನಾನೇ! ಕಾಮಕ್ರೋಧಗಳೂ, ವಸುಗಳೂ, ಸೂರ್ಯನೂ ನಾನೇ! ಯಕ್ಷಕಿಂಪುರುಷಾದಿಗಳಿಗೆಲ್ಲ ಅಧಿಪತಿಯೂ, ಧನಾಧ್ಯಕ್ಷನೂ ಆದ ಕುಬೇರನೂ ನಾನೇ! ಎಲ್ಲವೂ ನಾನೇ ಆಗಿ ಈ ಅಧಿಕಾರಗಳನ್ನೆಲ್ಲ ನಾನೇ ನಡೆಸುವೆನು'' ಎಂದು ಹೇಳುತ್ತ, ಇವರೆಲ್ಲರ ಪದವಿಗಳನ್ನೂ ಬಲಾತ್ಕಾರದಿಂದ ಆಕ್ರಮಿಸಿಕೊಂಡು, ಅವರವರ ಕಾರ್ಯಗಳನ್ನೆಲ್ಲ ತಾನೇ ನಡೆಸುವುದಕ್ಕಾರಂಭಿಸಿದನು. ಯಜ್ಞಾರಾಧ್ಯರಾದ ದೇವ ಕಿನ್ನರ ಶ್ರೇಷ್ಠರೆಲ್ಲ ತಾವೇ ಯಜ್ಞದಿಂದ ಆ ಹಿರಣ್ಯಕಶಿಪುವನ್ನು ಆರಾಧಿಸಬೇಕಾಗಿ ಬಂದಿತು. ಅಲ್ಲದೆ ಆ ಹಿರಣ್ಯಕಶಿಪುವು ತನ್ನ ಅಧಿಕಾರದಲ್ಲಿ, ನರಕದಲ್ಲಿ ಬಿದ್ದವರನ್ನೆಲ್ಲ ಸ್ವರ್ಗಕ್ಕೇರಿಸುವನು! ಸ್ವರ್ಗವಾಸಿಗಳನ್ನು ತಂದು ನರಕದಲ್ಲಿಡುವನು! ಹೀಗೆ ಆ ದಾನವನು ತನ್ನ ಮನಸ್ಸಿಗೆ ತೋರಿದಂತೆ ಕಾರ್ಯಗಳನ್ನು ನಡೆಸಿದುದಲ್ಲದೆ, ಆಗಾಗ ಋಷ್ಯಾಶ್ರಮಗಳಿಗೆ ಹೋಗಿ, ಮಹಾತ್ಮರೂ, ದೃಢವ್ರತರೂ, ಸತ್ಯಧರ್ಮಪರಾಯಣರೂ, ಜಿತೇಂದ್ರಿಯರೂ ಆದ ತಪಸ್ವಿಗಳನ್ನೆಲ್ಲ ಬಾಧಿಸಿ ಕೊಲ್ಲುತ್ತಿದ್ದನು. ಅವನ ಕಾಲದಲ್ಲಿ ದೇವತೆಗಳೇ ಯಜ್ಞಮಾಡತಕ್ಕವರಾಗಿಯೂ, ದೈತ್ಯರು ಆ ಯಾಗಗಳಲ್ಲಿ ಹವಿರ್ಭಾಗಗಳನ್ನು ಭುಜಿಸತಕ್ಕವರಾಗಿಯೂ ಆದರು. ದೇವತೆಗಳು ಹೋದ ಕಡೆಗಳಿಗೆಲ್ಲ ಇವನು ಬೆನ್ನಟ್ಟಿ ಹೋಗುತ್ತ, ಅವರವರ ಸ್ಥಾನಗಳನ್ನೆಲ್ಲ ಆಕ್ರಮಿಸಿಕೊಳ್ಳುತ್ತಿದ್ದನು. ಹೀಗೆ ಆ ದುರಾತ್ಮನು ಐದುಕೋಟಿಯೂ ಎಪ್ಪತ್ತುಸಾವಿರದ ಅರುವತ್ತೊಂದು ವರ್ಷಗಳವರೆಗೆ ಸ್ವೇಚ್ಛಾಧಿಕಾರವನ್ನು ನಡೆಸುತ್ತಲಿದ್ದನು. ಇಷ್ಟುಕಾಲವೂ ಆ ಹಿರಣ್ಯಕಶಿಪುವು ಬೇಕಾದ ಸುಖಗಳನ್ನೂ, ಐಶ್ವರ್ಯಗಳನ್ನೂ ಅನುಭವಿಸುತಿದ್ದನು. ಇವನಿಂದ ದೇವತೆಗಳಿಗೆ ಉಂಟಾಗುತಿದ್ದ ಬಾಧೆಯು ದುಸ್ಸಹವಾಯಿತು. ಆಗ ಅವರೆಲ್ಲರೂ ಇಂದ್ರನನ್ನು ಮುಂದಿಟ್ಟುಕೊಂಡು, ಬ್ರಹ್ಮಲೋಕಕ್ಕೆ ಹೋಗಿ, ಬ್ರಹ್ಮನ ಮುಂದೆ ಕೈಮುಗಿದು ನಿಂತು ಹೀಗೆಂದು ವಿಜ್ಞಾಪಿಸುವರು. "ಓ ದೇವಾ! ಭೂತಭವಿಷ್ಯತ್ತುಗಳಿಗೆಲ್ಲ ಒಡೆಯನಾದ ನೀನು ನಮ್ಮನ್ನು ಕಾಪಾಡಬೇಕು. ನಮ್ಮನ್ನು ಹಗಲು ರಾತ್ರಿಯೂ ಆ ದೈತ್ಯನ ಭಯವು ಬಾಧಿಸುತ್ತಿರುವುದು. ಹೇ ಭಗವನ್! ನೀನು ಸ್ವಯಮಾಗಿ ಹುಟ್ಟಿದವನು. ಆದಿಯಲ್ಲಿ ಎಲ್ಲಾ ಅಸುರರನ್ನೂ ಸೃಷ್ಟಿ

ಸಿದವನೂ ನೀನೆ! ಎಲ್ಲಕ್ಕೂ ನೀನೇ ಈಶ್ವರನು. ಹವ್ಯಕವ್ಯಗಳಿಗೆಲ್ಲ ಭಾಗಿಯಾದವನೂ ನೀನೇ! ಅವ್ಯಕ್ತನಾದ ಮೂಲಪುರುಷನೂ ನೀನೇ! ನಾಶರಹಿತನಾದ ನೀನು ನಮ್ಮನ್ನು ಆ ದೈತ್ಯನ ಬಾಧೆಯಿಂದ ರಕ್ಷಿಸಬೇಕು.'' ಎಂದರು. ಆಗ ಬ್ರಹ್ಮನು ಆ ದೇವತೆಗಳನ್ನು ನೋಡಿ ''ಎಲೈ ದೇವಶ್ರೇಷ್ಠರೇ! ಲೋಕಕ್ಕೆ ಇಂತಹ ಮಹಾವಿಪತ್ತು ಬಂದೊದಗುವುದೆಂದು ನನಗೂ ತಿಳಿಯದೆ ಹೋಯಿತು. ಆದರೇನು? ನಮ್ಮೆಲ್ಲರನ್ನೂ ಆಪತ್ತಿನಿಂದ ಉದ್ಧರಿಸತಕ್ಕ ಪರಮಪುರುಷನೊಬ್ಬನಿರುವನು. ಸರ್ವಾಂತರಾತ್ಮನೂ, ವಿಶ್ವಸ್ವರೂಪನೂ, ದಿವ್ಯತೇಜಸ್ವಿಯೂ, ಸಮಸ್ತಭೂತಗಳಿಗೂ ಅಗೋಚರನೂ, ಅಚಿಂತ್ಯನೂ, ಪ್ರಭುವೂ, ನಾಶರಹಿತನೂ ಆದ ಆ ನಾರಾಯಣನೇ ಇಂತಹ ವ್ಯಸನಕಾಲದಲ್ಲಿ ನನಗೂ, ನಿಮಗೂ ದಿಕ್ಕೆನಿಸಿರುವನು. ಆ ಭಗವಂತನು ಅವ್ಯಕ್ತವೆಂದು ಕರೆಯಲ್ಪಡುವ ಮೂಲಪ್ರಕೃತಿಗಿಂತಲೂ ಮೇಲಾದವನು. ಅವನಿಗೆ ಅಧೀನವಾದ ಆ ಅವ್ಯಕ್ತದಿಂದ ಹುಟ್ಟಿದವನು ನಾನು. ನನ್ನಿಂದ ಸಮಸ್ತಲೋಕಗಳೂ, ಪ್ರಜೆಗಳೂ ಸೃಷ್ಟಿಸಲ್ಪಟ್ಟುವು. ಎಲೈ ದೇವತೆಗಳಿರಾ! ನಿಮಗೆ ನಾನು ಹೇಗೋ ಹಾಗೆ ನನಗೆ ಆ ಶ್ರೀಮನ್ನಾರಾಯಣನು ತಂದೆಯೂ, ಪ್ರಭುವೂ, ನಿಯಾಮಕನೂ ಆಗಿರುವನು. ಈ ಜಗತ್ತಿಗೆಲ್ಲ ನಾನು ಪಿತಾಮಹನು. (ತಾತನು). ಆ ವಿಷ್ಣುವು ಪ್ರಪಿತಾಮಹನು. (ಮುತ್ತಾತನು). ಎಲೈ ದೇವತೆಗಳಿರಾ! ನಿಶ್ಚಯವಾಗಿಯೂ ಆ ವಿಷ್ಣುವು ಹಿರಣ್ಯಕಶಿಪುವನ್ನು ಶೀಘ್ರದಲ್ಲಿಯೇ ಕೊಲ್ಲುವನು. ಆ ಭಗವಂತನಿಗೆ ಅಸಾಧ್ಯಕಾರ್ಯವಾವುದೂ ಇಲ್ಲ. ಇನ್ನು ನೀವು ಹೋಗಿರಿ'' ಎಂದನು. ಬ್ರಹ್ಮನ ಈ ಮಾತನ್ನು ಕೇಳಿದಮೇಲೆ ದೇವತೆಗಳೆಲ್ಲರೂ ಆ ಪಿತಾಮಹನನ್ನೇ ಮುಂದಿಟ್ಟುಕೊಂಡು ಕ್ಷೀರಸಮುದ್ರಕ್ಕೆ ಹೊರಟರು. ದ್ವಾದಶಾದಿತ್ಯರು, ಅಷ್ಟವಸುಗಳು, ಸಾಧ್ಯರು, ಮರುತ್ತುಗಳು, ವಿಶ್ವೇದೇವತೆಗಳು, ಏಕಾದಶರುದ್ರರು, ಮಹರ್ಷಿಗಳು, ಅಶ್ವಿನೀದೇವತೆಗಳು, ಇನ್ನೂ ಇತರ ದೇವತೆಗಳೆಲ್ಲ ತಮ್ಮತಮ್ಮ ಸಮಸ್ತಪರಿವಾರಗಳೊಡನೆ ಶ್ರೀವಿಷ್ಣುವಿನ ನಿವಾಸವಾದ ಶ್ವೇತದ್ವೀಪಕ್ಕೆ ಬಂದು, ''ಓ ದೇವದೇವಾ! ಹಿರಣ್ಯಕಶಿಪುವಿನ ಕೊಲೆಯಿಂದ ನಮ್ಮನ್ನು ಕಾಪಾಡಬೇಕು. ನಮಗೂ, ನಮ್ಮ ಒಡೆಯನಾದ ಬ್ರಹ್ಮನಿಗೂ ನೀನೇ ಸರ್ವವಿಧ

ದಲ್ಲಿಯೂ ರಕ್ಷಕನು. ಓ ಪುಂಡರೀಕಾಕ್ಷಾ! ದೈತ್ಯವಂಶನಾಶಕ್ಕಾಗಿ, ನಿನ್ನಲ್ಲಿ ನಾವು ಮರೆಹೊಕ್ಕಿರುವೆವು. ನಮ್ಮನ್ನು ರಕ್ಷಿಸು" ಎಂದರು.

ಓ ಧರ್ಮರಾಜಾ! ಆಗ ಸರ್ವವ್ಯಾಪಕನೂ, ಶುದ್ಧಕೀರ್ತಿಯೂ ಆದ ಆ ಶ್ರೀಮನ್ನಾರಾಯಣನು, ಅಲ್ಲಿ ಬಂದವರ ಕಣ್ಣಿಗೆ ಕಾಣಿಸದಂತೆಯೇ ಅದೃಶ್ಯನಾಗಿ, "ಎಲೈ ದೇವತೆಗಳಿರಾ! ನಿಮ್ಮ ಭಯವನ್ನು ಬಿಡಿರಿ! ಇದೋ ಅಭಯವನ್ನು ಕೊಡುವೆನು. ತಿರುಗಿ ನಿಮಗೆ ಶೀಘ್ರದಲ್ಲಿಯೇ ಸ್ವರ್ಗವಾಸವು ಲಭಿಸುವುದು. ದೈತ್ಯರಾಜನಾದ ಹಿರಣ್ಯಕಶಿಪುವು ವರಬಲದಿಂದ ಕೊಬ್ಬಿ ತಾನು ಯಾರಿಗೂ ವಧ್ಯನಲ್ಲವೆಂದು ತಿಳಿದಿರುವನು. ನಾನು ಅವನನ್ನು ಅವನ ಸಮಸ್ತಪರಿವಾರಗಳೊಡನೆ ಕೊಲ್ಲಬಲ್ಲೆನು" ಎಂದನು. ಆಗ ಬ್ರಹ್ಮನು "ಮಹಾತ್ಮಾ! ದೇವೇಶಾ! ಈ ದೇವತೆಗಳ ಕಷ್ಟವು ದುಸ್ಸಹವಾಗಿದೆ. ಶೀಘ್ರದಲ್ಲಿಯೇ ಆ ದೈತ್ಯನನ್ನು ನೀನು ಕೊಲ್ಲಬೇಕು. ಅವನನ್ನು ಕೊಲ್ಲುವುದಕ್ಕೆ ಇದೇ ತಕ್ಕಕಾಲವು. ಇನ್ನು ವಿಳಂಬ ಮಾಡಬೇಡ" ಎಂದನು. ಆಗ ವಿಷ್ಣುವು "ನಾನು ಶೀಘ್ರದಲ್ಲಿಯೇ ಆ ದೈತ್ಯವಧವನ್ನು ನಡೆಸುವೆನು. ನೀನು ದೇವತೆಗಳನ್ನು ಕರೆದುಕೊಂಡು ನಿನ್ನ ಲೋಕಕ್ಕೆ ಹೋಗು" ಎಂದನು. ಹೀಗೆ ವಿಷ್ಣುವು ದೇವತೆಗಳಿಗೆ ಅಭಯವನ್ನು ಕೊಟ್ಟು ಕಳುಹಿಸಿದಮೇಲೆ, ಸ್ವಲ್ಪ ಕಾಲದಲ್ಲಿಯೇ ದೇಹದಲ್ಲಿ ಅರ್ಧ ಮನುಷ್ಯರೂಪವೂ, ಅರ್ಧ ಸಿಂಹರೂಪವೂ ಉಳ್ಳ ನೃಸಿಂಹಾವತಾರವನ್ನು ಕೈಕೊಂಡನು. ಜಾಜ್ವಲ್ಯಮಾನವಾದ ತೇಜಸ್ಸಿನಿಂದ, ಕೋಪಾವಿಷ್ಟನಾಗಿ ಕೈಗಳನ್ನು ಹಿಸುಕುತ್ತ, ದೊಡ್ಡದಾಗಿ ಬಾಯನ್ನು ತೆರೆದುಕೊಂಡು, ಯಮನಂತೆ ಆ ಹಿರಣ್ಯಕಶಿಪುವನ್ನು ಹಿಡಿಯುವುದಕ್ಕೆ ಮುಂದೆ ಬಂದನು. ಇದನ್ನು ನೋಡಿ, ಹಿರಣ್ಯಕಶಿಪುವಿನ ಕಡೆಯ ರಾಕ್ಷಸರೆಲ್ಲರೂ ಆ ನರಸಿಹ್ಮಾಕೃತಿಯಮೇಲೆ ಆಯುಧವರ್ಷಗಳನ್ನು ಸುರಿಸಿದರು. ನೃಸಿಹ್ಮನು ಆ ಆಯುಧಗಳನ್ನೆಲ್ಲ ನುಂಗಿಬಿಟ್ಟು, ಸಾವಿರಾರು ಮಂದಿ ರಾಕ್ಷಸಭಟರನ್ನೆಲ್ಲ ಕ್ಷಣಮಾತ್ರದಲ್ಲಿ ವಧಿಸಿ, ಆಮೇಲೆ ಹಿರಣ್ಯಕಶಿಪುವನ್ನು ಹಿಡಿದನು. ಮೇಘದಂತೆ ಮೈಬಣ್ಣವೂ, ಮೇಘದಂತೆ ಗರ್ಜನೆಯೂ, ಮೇಘದೊಳಗಿನ ಮಿಂಚಿನಂತೆ ದಿವ್ಯ ತೇಜಸ್ಸೂ ಉಳ್ಳ ಆ ನೃಸಿಹ್ಮಮೂರ್ತಿಯು, ಕೊಬ್ಬಿದ

ಹುಲಿಯಂತಿರುವ ಆ ಹಿರಣ್ಯಕಶಿಪುವನ್ನು ಹಿಡಿದು, ತನ್ನ ಉಗುರುಗಳಿಂದ ಲೂ, ಬಾಯಿಂದಲೂ ಅವನೊಡನೆ ಬಹಳ ಹೊತ್ತು ಯುದ್ಧಮಾಡಿ, ಕೊನೆಗೆ ಸಂಜೆಯಹೊತ್ತಿನಲ್ಲಿ, ಅವನ ಮನೆಯ ಹೊಸಲಿನಮೇಲೆ, ಅವನನ್ನು ತನ್ನ ತೊಡೆಯಮೇಲೆಯೇ ಮಲಗಿಸಿಕೊಂಡು, ತನ್ನ ಉಗುರುಗಳಿಂದ ಅವನ ಎದೆಯನ್ನು ಸೀಳಿಬಿಟ್ಟನು ಓ ಧರ್ಮರಾಜಾ! ಮಹಾವೀರ್ಯಶಾಲಿಯಾಗಿ ವರಬಲದಿಂದ ಕೊಬ್ಬಿದ್ದ ಆ ದೈತ್ಯನನ್ನೂ, ಅವನ ಪರಿವಾರಗಳನ್ನೂ ವಿಷ್ಣುವು ಕ್ಷಣಮಾತ್ರದಲ್ಲಿ ಕೊಂದು, ದೇವತೆಗಳಿಗೂ, ಪ್ರಜೆಗಳಿಗೂ ಕ್ಷೇಮವನ್ನುಂಟುಮಾಡಿದನು. ಭೂಮಿಯಲ್ಲಿ ಧರ್ಮವನ್ನು ನೆಲೆಗೊಳಿಸಿ ಅದರಿಂದ ತಾನೂ ತೃಪ್ತನಾದನು. ಇದು ನೃಸಿಹ್ಮಾವತಾರದ ಚರಿತ್ರವು. ಇನ್ನು ಅದರ ಮುಂದಿನ ವಾಮನಾವತಾರದ ಕಥೆಯನ್ನು ಕೇಳು.

ಇದು ನಾಲ್ವತ್ತಾರನೆಯ ಅಧ್ಯಾಯವು.



## ವಾಮನಾವತಾರ ಚರಿತ್ರವು.

ಧರ್ಮರಾಜಾ! ಕೇಳು! ಹಿಂದೊಮ್ಮೆ ತ್ರೇತಾಯುಗದಲ್ಲಿ ಬಲಿಯೆಂಬ ದೈತ್ಯನೊಬ್ಬನಿದ್ದನು. ಅವನು ವಿರೋಚನನ ಮಗನು. ಬಲದಲ್ಲಿ ಸಾಟಿಯಿಲ್ಲದವನು. ದೈತ್ಯರಿಗೆಲ್ಲ ಪ್ರಭುವೆನಿಸಿರುವನು. ಅವನು ಒಮ್ಮೆ ಇಂದ್ರನನ್ನು ಜಯಿಸುವುದಕ್ಕಾಗಿ ತನ್ನ ದೈತ್ಯಗಣಗಳೊಡನೆ ಇಂದ್ರಲೋಕಕ್ಕೆ ಹೋದನು. ಆ ಬಲಿಗೆ ಭಯಪಟ್ಟು ಇಂದ್ರಾದಿಗಳೆಲ್ಲ ಅಲ್ಲಿಂದ ಪಲಾಯನಮಾಡಿ ಚತುರ್ಮುಖ ಬ್ರಹ್ಮನ ಬಳಿಗೆ ಬಂದು, ಅವನನ್ನೇ ಮುಂದಿಟ್ಟುಕೊಂಡು, ವಿಷ್ಣುವಿನಲ್ಲಿ ಮೊರೆಯಿಡುವುದಕ್ಕಾಗಿ ಕ್ಷೀರಸಮುದ್ರಕ್ಕೆ ಬಂದರು. ಆಗ ವಿಷ್ಣುವು ಆ ದೇವತೆಗಳಲ್ಲಿ ಕನಿಕರದಿಂದ ಅವರಿಗೆ ದರ್ಶನವನ್ನು ಕೊಟ್ಟು ಅಭಯಪ್ರದಾನವನ್ನು ಮಾಡಿದನು. ಇದಕ್ಕಾಗಿ ವಿಷ್ಣುವು ಉಪೇಂದ್ರನೆಂಬ ಹೆಸರಿನಿಂದ ಅದಿತಿಯಲ್ಲಿ ಇಂದ್ರನಿಗೆ ತಮ್ಮನಾಗಿ ಹುಟ್ಟಿದನೆಂದು ಹೇಳಲ್ಪಟ್ಟಿದೆ. ಆಮೇಲೆ ಸ್ವಲ್ಪಕಾಲಕ್ಕೆ ಆ ಬಲಿ ಚಕ್ರವರ್ತಿಯು ಯಾಗಗಳಲ್ಲಿ ಮೇಲಾದ ಅಶ್ವಮೇಧವನ್ನು ಮಾಡತೊಡಗಿ

ದನು. ಬಲಿಯು ಆ ಯಾಗವನ್ನು ನಡೆಸುತ್ತಿರುವಕಾಲದಲ್ಲಿ ವಿಷ್ಣುವು (ಉಪೇಂದ್ರನು) ತನ್ನ ರೂಪವನ್ನು ಒಂದು ಬ್ರಾಹ್ಮಣವೇಷದಿಂದ ಮರೆಸಿಕೊಂಡು, ತಲೆಯನ್ನು ಕ್ಷೌರಮಾಡಿಸಿಕೊಂಡು, ಶಿಖಾಯಜ್ಞೋಪವೀತಗಳನ್ನೂ, ಕೃಷ್ಣಾಜಿನವನ್ನೂ ಧರಿಸಿ, ಮುತ್ತುಗದ ಕೋಲನ್ನು ಕೈಯಲ್ಲಿ ಹಿಡಿದು, ಆಶ್ಚರ್ಯಕರವಾದ ಆಕಾರವುಳ್ಳ ಕುಳ್ಳಬ್ರಹ್ಮಚಾರಿಯಂತೆ ಆ ಯಾಗಶಾಲೆಗೆ ಬಂದನು. ಅಲ್ಲಿ ಬಲಿಯು ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡುತ್ತಿದ್ದಕಾಲದಲ್ಲಿ ಮುಂದೆ ಹೋಗಿ "ನನಗೆ ಇದೇ ಸ್ಥಳದಲ್ಲಿ ಮೂರಡಿಗಳ ನೆಲವನ್ನು ದಕ್ಷಿಣಾರೂಪವಾಗಿ ಕೊಡು. ನನಗೆ ಬೇಕಾದುದು ಮೂರಡಿಗಳ ನೆಲವುಮಾತ್ರವೇ" ಎಂದನು. ಆಗ ಬಲಿಯು, ಒಡನೆಯೇ ಕೊಡುವುದಾಗಿ ವಾಗ್ದಾನಮಾಡಿದನು. ಬಲಿಯ ಬಾಯಿಂದ ಆ ಮಾತು ಹೊರಟಕೂಡಲೆ, ವಾಮನಬ್ರಹ್ಮಚಾರಿಯು ದೊಡ್ಡ ಆಕಾರವನ್ನು ತಾಳಿ, ತನ್ನ ಮೂರಡಿಗಳಿಂದಲೇ ಊರ್ಧ್ವಲೋಕಗಳೆಲ್ಲವನ್ನೂ, ಆಕಾಶವನ್ನೂ, ಭೂಮಿಯನ್ನೂ, ಅಧೋಲೋಕಗಳನ್ನೂ ಅಳೆದು ತನ್ನ ವಶಮಾಡಿಕೊಂಡನು. ಇದನ್ನು ನೋಡಿ ವಿಪ್ರಚಿತ್ತಿ ಮೊದಲಾದ ಬಲಿಯ ಕಡೆಯ ದೈತ್ಯರೆಲ್ಲರೂ ಬಹಳ ಕೋಪಗೊಂಡು ಆ ವಿಷ್ಣುವಿನಮೇಲೆ ಬೀಳುವುದಕ್ಕೆ ಬಂದರು. ನಾನಾತರದ ಮುಖಗಳಿಂದಲೂ, ನಾನಾಬಗೆಯ ಆಕೃತಿಗಳಿಂದಲೂ ಕೂಡಿ ಭಯಂಕರರೂಪವುಳ್ಳ ಅನೇಕರಾಕ್ಷಸರು, ಕೈಯಲ್ಲಿ ವಿವಿಧಾಯುಧಗಳನ್ನೆತ್ತಿಕೊಂಡು ಆ ತ್ರಿವಿಕ್ರಮನಮೇಲೆ ಬಿದ್ದು ಹೊಡೆಯಲಾರಂಭಿಸಿದರು. ತಮ್ಮಲ್ಲಿದ್ದ ಆಯುಧಗಳನ್ನೆಲ್ಲ ಅವನಮೇಲೆ ಬೀಸಿದರು. ಆದರೇನು? ವಿಷ್ಣುವು ಆ ಸಮಸ್ತದೈತ್ಯರನ್ನೂ ತನ್ನ ಕೈಗಳಿಂದಲೂ, ಕಾಲುಗಳಿಂದಲೂ ಅಪ್ಪಳಿಸಿ, ಭಯಂಕರವಾದ ತನ್ನ ರೂಪವನ್ನು ತೋರಿಸಿ, ಆ ಬಲಿಗೆ ಸ್ವಾಧೀನವಾಗಿದ್ದ ರಾಜ್ಯವನ್ನೆಲ್ಲ ಅಪಹರಿಸಿದನು. ಭೂವ್ಯೋಮಾಕಾಶಗಳೆಲ್ಲವನ್ನೂ ಆವರಿಸಿ, ಸೂರ್ಯಮಂಡಲವನ್ನು ಮುಟ್ಟಿದನು. ತನಗೆ ನಿವಾಸವಾದ ಸೂರ್ಯಬಿಂಬದಲ್ಲಿ ಸೇರಿ ಸೂರ್ಯನಿಗಿಂತಲೂ ಅತಿಶಯವಾಗಿ ಪ್ರಕಾಶಿಸಿದನು. ಅವನ ತೇಜಸ್ಸಿನಿಂದ ದಿಕ್ಕುವಿದಿಕ್ಕುಗಳೂ, ಸಮಸ್ತಲೋಕಗಳೂ ಪ್ರಕಾಶಗೊಂಡುವು. ಭೂಮಿಯನ್ನಳೆಯುವಾಗ, ಆ ತ್ರಿವಿಕ್ರಮರೂಪಿಗೆ ಚಂದ್ರಸೂರ್ಯರಿಬ್ಬರೂ ಮೊದಲು ಸ್ತನಗಳ ಸ್ಥಾನ

ದಲ್ಲಿದ್ದರು. ಆಕಾಶವನ್ನಳೆಯುವಾಗ ಅವರೇ ನಾಭಿಸ್ಥಾನದಲ್ಲಿ ಕಾಣಿಸಿದರು. ಅವನು ಇನ್ನೂ ಮೇಲೆ ಬೆಳೆದು ಅದಕ್ಕೂ ಮೇಲಿನ ಲೋಕವನ್ನಾಕ್ರಮಿಸಿದಾಗ, ಅವನ ಮೊಳಕಾಲುಗಳಲ್ಲಿ ಕಾಣಿಸಿದರು. ಹೀಗೆಂದು ಅಪ್ರಮೇಯಮಹಿಮನಾದ ಆ ವಿಷ್ಣುವಿನ ತ್ರಿವಿಕ್ರಮಸ್ವರೂಪವನ್ನು ಬ್ರಾಹ್ಮಣರು ವರ್ಣಿಸಿರುವರು. ಆ ಭಗವಂತನು ಕಾಲನ್ನು ಮೇಲೆ ನೀಡಿದಾಗ ಬ್ರಹ್ಮಾಂಡವು ಒಡೆಯಿತು. ಅದರ ರಂಧ್ರದಿಂದ ಒಂದು ನದಿಯು ಪ್ರವಹಿಸಿತು. ಅದೇ ಆಕಾಶಗಂಗೆಯೆಂಬ ಪವಿತ್ರನದಿಯಾಗಿ ಸಮುದ್ರವನ್ನು ಸೇರಿತು. ಆ ವಾಮನನು ಆ ಆಕೃತಿಯಿಂದ ದಾನವರನ್ನೆಲ್ಲ ಕೊಂದು, ದೈತ್ಯರ ಸಂಪತ್ತನ್ನೆಲ್ಲ ಕಿತ್ತುಕೊಂಡು ತ್ರೈಲೋಕ್ಯವನ್ನೂ ಸ್ವಾಧೀನಪಡಿಸಿಕೊಂಡನು. ನಮುಚಿ, ಶಂಬರನು ಮತ್ತು ಮಹೋದಾರಸ್ವಭಾವವುಳ್ಳ ಪ್ರಹ್ಲಾದನೆಂಬ ಈ ದೈತ್ಯರನ್ನುಮಾತ್ರ ಅವರ ಪತ್ನೀ ಪುತ್ರರೊಡನೆ ಪಾತಾಳಲೋಕದಲ್ಲಿ ನೆಲೆಗೊಳಿಸಿದನು. ಸರ್ವಭೂತಾತ್ಮಕನಾದ ಆ ಹರಿಯು ತಮ್ಮತಮ್ಮ ವಿಶೇಷಾಕೃತಿಗಳೊಡನೆ ಕೂಡಿದ ಪಂಚ ಮಹಾಭೂತಗಳನ್ನೂ, ಕಾಲವನ್ನೂ ತನ್ನ ರೂಪದಲ್ಲಿಯೇ ಕಾಣಿಸಿದನು. ಸಮಸ್ತಜಗತ್ತನ್ನೂ ಅವನ ದೇಹದಲ್ಲಿಯೇ ಜನರು ಕಾಣಬಹುದಾಯಿತು. ಆ ಭಗವಂತನು ಆಕ್ರಮಿಸದ ಭಾಗವೊಂದಾದರೂ ಲೋಕದಲ್ಲಿರಲಿಲ್ಲ. ಆ ತ್ರಿವಿಕ್ರಮರೂಪವನ್ನು ನೋಡಿ ದೇವ ದಾನವ ಮಾನವರೆಲ್ಲರೂ, ಅದರ ತೇಜಸ್ಸನ್ನು ಸಹಿಸಲಾರದೆ ಮೂರ್ಛಿತರಾದರು. ಬಲಗರ್ವಿತನಾಗಿದ್ದ ಬಲಿಯು, ಅವನ ಯಾಗಶಾಲೆಯಲ್ಲಿದ್ದಂತೆಯೇ ಬಂಧಿಸಲ್ಪಟ್ಟನು. ಆಗ ವಿಷ್ಣುವಿನಿಂದ ವಿರೋಚನನ ಸಂತತಿಯವರೆಲ್ಲ ಪಾತಾಳದಲ್ಲಿಯೇ ಅಡಗಿಸಿಡಲ್ಪಟ್ಟರು. ಸರ್ವಶಕ್ತನಾದ ಭಗವಂತನು ಇಂತಹ ಅದ್ಭುತಕಾರ್ಯವನ್ನು ನಡೆಸಿಯೂ, ಅದಕ್ಕಾಗಿ ಹೆಮ್ಮೆಗೊಳ್ಳದೆ, ದೈತ್ಯರ ಪಾಲಾಗಿದ್ದ ಐಶ್ವರ್ಯವನ್ನೂ, ತ್ರೈಲೋಕ್ಯವನ್ನೂ ಇಂದ್ರನಿಗೆ ಕೊಟ್ಟನು. ಓ ಧರ್ಮರಾಜಾ! ಇದು ವೇದವಿತ್ತುಗಳಾದ ಬ್ರಾಹ್ಮಣರಿಂದ ಪ್ರತಿಪಾದಿಸಲ್ಪಟ್ಟ ವಾಮನಾವತಾರದ ಕಥೆ. ಇನ್ನು ಆ ಭಗವಂತನ ಮನುಷ್ಯಾವತಾರಗಳನ್ನು ತಿಳಿಸುವೆನು ಕೇಳು.

ಇದು ನಾಲ್ವತ್ತೇಳನೆಯ ಅಧ್ಯಾಯವು.

ವಿಷ್ಣುವು ದತ್ತಾತ್ರೇಯಾವತಾರದಲ್ಲಿ ಕಾರ್ತವೀರ್ಯನಿಗೆ ವರಗಳನ್ನು ಕೊಟ್ಟುದು.

ಓ ಧರ್ಮರಾಜಾ! ಪ್ರಸಿದ್ಧನಾದ ದತ್ತಾತ್ರೇಯನೆಂಬ ಮಹರ್ಷಿಯ ಖ್ಯಾತಿಯನ್ನು ನೀನೂ ಕೇಳಿರಬಹುದು. ಅದೂ ವಿಷ್ಣುವಿನ ಅವತಾರವೇ! ಲೋಕದಲ್ಲಿ ವೇದಗಳೂ, ವೇದಧರ್ಮಗಳೂ, ಯಾಗಾದಿಕರ್ಮಗಳೂ ಕೆಟ್ಟುಹೋಗಿ, ವರ್ಣಸಂಕರವಾಗಿ, ಪಾಪವು ಪ್ರಬಲಿಸಿ, ಅಧರ್ಮವು ಹೆಚ್ಚಿ, ಧರ್ಮವು ನಿರ್ಮೂಲವಾದಾಗ, ಆ ವೈದಿಕಧರ್ಮಗಳನ್ನೆಲ್ಲ ಉದ್ಧರಿಸುವುದಕ್ಕಾಗಿ ಭಗವಂತನು ಆ ದತ್ತಾತ್ರೇಯರೂಪದಿಂದ ಅವತರಿಸಿದನು. ಹಾಗೆ ಅವತರಿಸಿದಮೇಲೆ ಯಜ್ಞಯಾಗಾದಿಕ್ರಿಯೆಗಳನ್ನೂ, ವೇದಗಳನ್ನೂ ತಿರುಗಿ ಪ್ರಚಾರಕ್ಕೆ ತಂದನು. ಅವನು ಹೈಹಯದೇಶದ ಕಾರ್ತವೀರ್ಯಾರ್ಜುನನೆಂಬ ರಾಜನಿಗೆ ಪ್ರಸನ್ನನಾಗಿ, ವರಗಳನ್ನು ಕೊಟ್ಟನು. ಮಹಾತ್ಮನಾದ ಆ ಕಾರ್ತವೀರ್ಯನು ವರ್ಣಸಂಕರವಾಗದಂತೆ ಚತುರ್ವರ್ಣಗಳನ್ನೂ ಬೇರೆಬೇರೆಯಾಗಿ ನೆಲೆಗೊಳಿಸಿದನು. ಆ ಕಾರ್ತವೀರ್ಯನು ದತ್ತಾತ್ರೇಯನ ಅನುಗ್ರಹವನ್ನು ಪಡೆಯುವುದಕ್ಕಾಗಿ, ಕಾಮಕ್ರೋಧಗಳನ್ನೂ, ಅಹಂಕಾರಮಮಕಾರಗಳನ್ನೂ ಬಿಟ್ಟು, ಬಹುಕಾಲದವರೆಗೆ ಅವನನ್ನು ಶುಶ್ರೂಷೆಮಾಡಿ, ಅವನು ತನ್ನಲ್ಲಿ ಪ್ರಸನ್ನನಾದಾಗ ತನಗೆ ವರಗಳನ್ನು ಕೊಡಬೇಕೆಂದು ಕೇಳಿದನು. ಆಗ ದತ್ತಾತ್ರೇಯನು ಅವನನ್ನು ಕುರಿತು, ಮರಣವಿಲ್ಲದುದೊಂದುಹೊರತು, ಬೇರೆ ಯಾವುದಾದರೂ ನಾಲ್ಕು ವರಗಳನ್ನು ಕೇಳೆಂದು ಹೇಳಲು, ಆ ರಾಜನು ತನಗೆ ಐಶ್ವರ್ಯವೂ, ಬಲವೂ, ಉದಾರ ಬುದ್ಧಿಯೂ, ಸತ್ಯಸಂಧತೆಯೂ, ಅಸೂಯಾರಾಹಿತ್ಯವೂ, ಸಾವಿರ ತೋಳುಗಳೂ ಉಂಟಾಗಬೇಕೆಂದು ಮೊದಲನೆಯ ವರವನ್ನು ಕೇಳಿಕೊಂಡನು. ಜರಾಯುಜ, ಅಂಡಜಗಳಿಂದ ಕೂಡಿದ ಚರಾಚರಗಳನ್ನೆಲ್ಲ ಧರ್ಮದಿಂದ ಪಾಲಿಸಬೇಕೆಂಬುದು ತನ್ನ ಉದ್ದೇಶವಾದುದರಿಂದ, ಅದು ತನ್ನ ಎರಡನೆಯ ವರವೆಂದು ಕೇಳಿಕೊಂಡನು. ಪಿತೃಗಳನ್ನೂ, ದೇವತೆಗಳನ್ನೂ, ಋಷಿಗಳನ್ನೂ, ಬ್ರಾಹ್ಮಣರನ್ನೂ, ಯೋಗ್ಯ ಕರ್ಮಗಳಿಂದಲೂ, ಶತ್ರುಗಳನ್ನು ತೀಕ್ಷ್ಣಬಾಣಗಳಿಂದಲೂ ತಾನು ವಶಪಡಿಸಿಕೊಳ್ಳಬೇಕೆಂಬುದು ತನಗೆ ಮೂರನೆಯ ವರವಾಗಿ ಕೇಳಿಕೊಂಡನು. ಭೂಮಿಯಲ್ಲಿಯಾ

ಗಲಿ, ಸ್ವರ್ಗದಲ್ಲಿಯಾಗಲಿ, ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ, ಯಾವನಿಗೆ ಸಾಟಿಯಾದವನು ಬೇರೊಬ್ಬನಿಲ್ಲವೋ, ಅಂತವನಿಂದಲೇ ತನಗೆ ಸಾವಾಗಬೇಕೆಂದು ನಾಲ್ಕನೆಯ ವರವನ್ನು ಕೇಳಿಕೊಂಡನು. ಓ ಧರ್ಮರಾಜಾ! ಆ ಕಾರ್ತವೀರ್ಯನು ಯುದ್ಧದಲ್ಲಿ ಅಸಮಾನನು. ಅನೇಕ ಸಹಸ್ರವರ್ಷಗಳವರೆಗೆ ಮಾಹಿಷ್ಮತೀ ನಗರದಲ್ಲಿ ಮೇಲೆ ಮೇಲೆ ಅಭಿವೃದ್ಧಿಯನ್ನೂ, ಪ್ರಖ್ಯಾತಿಯನ್ನೂ ಹೊಂದಿದನು. ಅವನು ಸಮಸ್ತಭೂಮಿಯನ್ನೂ, ಸಮುದ್ರಾವೃತಗಳಾದ ದ್ವೀಪಗಳನ್ನೂ ಜಯಿಸಿ, ಆಕಾಶದಲ್ಲಿ ಸೂರ್ಯನಂತೆ ತನ್ನ ಪುಣ್ಯಕರ್ಮಗಳಿಂದ ಪ್ರಕಾಶಿಸುತ್ತಿದ್ದನು. ಅಸಮಾನ ಪರಾಕ್ರಮಿಯಾದ ಅವನು, ಹಿಂದೆ ಯಾರಿಂದಲೂ ಜಯಿಸಲ್ಪಡದ ಇಂದ್ರದ್ವೀಪ, ಕಶೇರುದ್ವೀಪ, ಕಾಮುದ್ವೀಪ, ಗಭಸ್ತಿಮಂತ ವರುಣ, ಗಂಧರ್ವ, ಸೌಕ್ಷ್ಮಷ್ಟಗಳೆಂಬ ದ್ವೀಪಗಳೆಲ್ಲವನ್ನೂ ಜಯಿಸಿದನು. ಆ ಕಾರ್ತವೀರ್ಯನು ಸಮುದ್ರದಲ್ಲಿ ಹೋದರೂ ಅವನ ವಸ್ತ್ರವು ನೆನೆಯಲಾರದು. ಇಂತಹ ಅಸಾಧಾರಣಮಹಿಮೆಯೊಂದು ಅವನಲ್ಲಿದ್ದಿತು. ಹಿಂದೆಯಾಗಲಿ, ಮುಂದೆಯಾಗಲಿ, ಅವನಿಗೆ ಸಮಾನವಾದ ನಡತೆಯುಳ್ಳ ರಾಜರೇ ಇಲ್ಲವೆಂದು ತಿಳಿ! ಅವನ ಮಂದಿರಗಳೆಲ್ಲವೂ ಕೇವಲಸುವರ್ಣಮಯವಾಗಿಯೇ ಇದ್ದುವು. ಅವನು ತನ್ನನ್ನೇ ನಾಲ್ಕು ಅಂಶಗಳನ್ನಾಗಿ ವಿಭಾಗಿಸಿಕೊಂಡು ರಾಜ್ಯಪಾಲನವನ್ನು ಮಾಡಿದನು. ಅವುಗಳಲ್ಲಿ ಒಂದಂಶದಿಂದ ಸೇನೆಗಳನ್ನು ನಡೆಸುವನು. ಎರಡನೆಯ ಅಂಶದಿಂದ ಅಂತಃಪುರದಲ್ಲಿರುವನು. ಮೂರನೆಯ ಅಂಶದಿಂದ ಯಾಗಾದಿಗಳನ್ನು ನಡೆಸಿ ಧರ್ಮಪರಿಪಾಲನದಿಂದ ಪ್ರಜೆಗಳನ್ನು ವಶಪಡಿಸಿಕೊಳ್ಳುವನು. ನಾಲ್ಕನೆಯ ಅಂಶದಿಂದ ಗ್ರಾಮಗಳಲ್ಲಿಯೂ, ಕಾಡುಗಳಲ್ಲಿಯೂ ಇರುವ ದುಷ್ಟರನ್ನೆಲ್ಲ ನಿಗ್ರಹಿಸುವನು. ಅವನಿಗೆ ಸೇರಿದ ಪಟ್ಟಣದಲ್ಲಿಯಾಗಲಿ, ದೇಶದಲ್ಲಿಯಾಗಲಿ, ಜನರು ಕಳ್ಳರ ಭಯಕ್ಕಾಗಿ ಬಾಗಿಲನ್ನು ಮುಚ್ಚಬೇಕಾದುದೇ ಇಲ್ಲ. ಆ ಅರ್ಜುನನು ಇದರಿಂದ ತಾನೇ ರಾಷ್ಟ್ರಪಾಲಕನೂ, ಅಬಲೆಯರಾದ ಸ್ತ್ರೀಯರನ್ನು ಕಾಪಾಡುವವನೂ, ಗೋವುಗಳನ್ನೂ, ಆಡುಗಳನ್ನೂ ರಕ್ಷಿಸತಕ್ಕವನೂ ಆಗಿದ್ದನು. ಹೀಗೆ ಅವನು ದತ್ತಾತ್ರೇಯನ ಅನುಗ್ರಹದಿಂದ ಅನೇಕ ಸಂವತ್ಸರಗಳವರೆಗೆ ರಾಜ್ಯಪರಿಪಾಲನವನ್ನು ಮಾಡುತ್ತ

ಎಷ್ಟೋ ಲೋಕಕ್ಷೇಮಕಾರ್ಯಗಳನ್ನು ಮಾಡಿದನು. ಇದು ಆ ವಿಷ್ಣು ವಿನ ದತ್ತಾತ್ರೇಯಾವತಾರ ಚರಿತ್ರವು. ಇದೇ ಕಥೆಗೆ ಸಂಬಂಧಪಟ್ಟ ಮತ್ತೊಂದವತಾರವನ್ನು ಹೇಳುವೆನು ಕೇಳು.

ಇದು ನಾಲ್ವತ್ತೆಂಟನೆಯ ಅಧ್ಯಾಯವು.



೪

 ಪರಶುರಾಮಾವತಾರವು. 

ಓ ಧರ್ಮರಾಜಾ! ಆ ಭಗವಂತನು ಭೃಗುವಂಶದಲ್ಲಿ ಜಮದಗ್ನಿ ಪುತ್ರನಾಗಿ ಹುಟ್ಟಿದ ಕಾರಣವನ್ನೂ ತಿಳಿಸುವೆನು ಕೇಳು. ಆ ಜಮದಗ್ನಿ ಪುತ್ರನೇ ಕಾರ್ತವೀರ್ಯನನ್ನು ಕೊಂದವನು. ಅವನಿಗೆ ರಾಮನೆಂದು ಹೆಸರು. ಮಹಾವೀರ್ಯವಂತನು. ಬಲದಲ್ಲಿ ಸಾಟಿಯಿಲ್ಲದವನು. ಹೈಹಯರಾಜ್ಯಾಧಿಪತಿಯಾದ ಆ ಕಾರ್ತವೀರ್ಯನು ಇವನ ಕೋಪಕ್ಕೆ ಗುರಿಯಾಗಿ ಅವನಿಂದ ಹತನಾದನು. ಅಮಿತಪರಾಕ್ರಮಿಯಾದ, ಆ ಕಾರ್ತವೀರ್ಯನು ರಥವನ್ನೇರಿ ಯುದ್ಧಮಾಡುತಿದ್ದಾಗ, ರಾಮನು ಅವನನ್ನು ರಥದಿಂದ ಕೆಡೆಹಿ ಕೊಂದನು. ಜಂಭನೆಂಬ ರಾಜನೊಬ್ಬನು ಯಜ್ಞವನ್ನು ಮಾಡುತ್ತಿದ್ದಾಗ ಅವನ ಯಾಗಗಳನ್ನು ಕೆಡಿಸಿ, ಅಲ್ಲಿದ್ದ ಋತ್ವಿಕ್ಕುಗಳನ್ನೂ ಹೊಡೆದೋಡಿಸಿ, ಆ ರಾಜನ ತಲೆಯನ್ನು ಹಾರಿಸಿದನು. ಈ ರಾಮನೇ ಶತದುಂದುಭಿಯೆಂಬವನನ್ನು ಕೊಂದನು. ಓ ಧರ್ಮರಾಜಾ! ಮಹಾಶಕ್ತಿಯುಳ್ಳ ಈ ಕೃಷ್ಣನೇ ಸಹಸ್ರಜಿತ್ತೆಂದೂ, ಸಹಸ್ರಬಾಹುವೆಂದೂ, ಪ್ರಸಿದ್ಧನಾದ ಕಾರ್ತವೀರ್ಯನನ್ನು ಕೊಲ್ಲುವುದಕ್ಕಾಗಿ, ಪರಶುರಾಮಾವತಾರವನ್ನೆತ್ತಿದನೆಂದು ತಿಳಿ! ಆ ರಾಮನು ಹಿಂದೆ ಸರಸ್ವತೀನದಿಯ ತೀರದಲ್ಲಿ ಕೂಟವಾಗಿ ಕೂಡಿದ್ದ ಬ್ರಹ್ಮದ್ವೇಷಿಗಳಾದ ಆರುಲಕ್ಷದ ನಾಲ್ವತ್ತುಸಾವಿರ ಕ್ಷತ್ರಿಯರನ್ನು ತನ್ನ ಧನುಸ್ಸಿನಿಂದ ಸವರಿದನು. ಅಪರಮೇಲೆ ಆ ಪರಶುರಾಮನು ಇನ್ನೂ ಕ್ರೂರಸ್ವಭಾವವನ್ನು ತಾಳಿ, ಬೇರೆ ಹದಿನಾಲ್ಕುಸಾವಿರ ಕ್ಷತ್ರಿಯರನ್ನು ಕೊಂದನು. ಆಮೇಲೆ ಮತ್ತೊಮ್ಮೆ ಸಾವಿರ ಕ್ಷತ್ರಿಯರನ್ನು ಕೊಂದನು. ಇನ್ನೊಮ್ಮೆ ಸಾವಿರಮಂದಿಯನ್ನು ಒನಕೆಯಿಂದ ಬಡಿದನು.

ಮತ್ತೊಮ್ಮೆ ಸಾವಿರಮಂದಿಯನ್ನು ಖಡ್ಗದಿಂದ ಕತ್ತರಿಸಿದನು. ಹದಿನಾಲ್ಕು ಸಾವಿರಮಂದಿಗೆ ಬೆಂಕಿಯ ಕಿಡಿಗಳನ್ನೂ, ಹೊಗೆಯನ್ನೂ ಕುಡಿಸಿ ಕೊಂದನು. ಆದರಮೇಲೆಯೂ ಬ್ರಹ್ಮದ್ವೇಷವನ್ನು ಬಿಡದೆ ಲೋಕಹಿಂಸೆಯನ್ನು ಮಾಡುತಿದ್ದ ಕ್ಷತ್ರಿಯಶೇಷವನ್ನೆಲ್ಲ ಕೊಂದು ಆಮೇಲೆ ತಾನು ಸ್ನಾನವನ್ನು ಮಾಡಿದನು. ಕ್ಷತ್ರಿಯರ ಬಾಧೆಯನ್ನು ಸಹಿಸಲಾರದ ಬ್ರಾಹ್ಮಣರು ಬಹಳ ಕಷ್ಟದಿಂದ "ರಾಮಾ! ರಾಮಾ!" ಎಂದು ಮೊರೆಯಿಟ್ಟಾಗಲೆಲ್ಲ ಆ ದೀನಧ್ವನಿಯನ್ನು ಸಹಿಸಲಾರದೆ ಪರಶುರಾಮನು ಲಕ್ಷಸಂಖ್ಯೆಯಿಂದ ಕ್ಷತ್ರಿಯರನ್ನು ತನ್ನ ಕೊಡಲಿಯಿಂದ ಕಡಿಯುತಿದ್ದನು. "ಓ ಭೃಗುರಾಮಾ! ಬೇಗ ಬಾ!" ಎಂದು ಬ್ರಾಹ್ಮಣರು ಮೊರೆಯಿಟ್ಟು ಕೂಗಿದೊಡನೆ, ಪರಶುರಾಮನು ಅವರ ಗೋಳಾಟವನ್ನು ಸಹಿಸಲಾರದೆ ಅಲ್ಲಲ್ಲಿ ಹೋಗಿ ಕಾಶ್ಮೀರ, ದರದ, ಕುಂತಿ, ಕ್ಷುದ್ರಕ, ಮಾಲವ, ಶಕ, ಚೇದಿ, ಕಾಶಿ, ಕರೂಶ, ಋಷಿಕ, ಕ್ರಥಕೈಶಿಕ, ಅಂಗ, ವಂಗ, ಕಳಿಂಗ, ಮಾಗಧ, ಕೋಸಲ, ವಿದರ್ಭ, ಕಾಶಿ, ಕೋಸಲ, ರಾತ್ರಾಯಣ, ವೀತಿಹೋತ್ರ, ಕಿರಾತ, ಕಾರ್ತಿಕಾವತ ಮೊದಲಾದ ದೇಶಾಧಿಪತಿಗಳನ್ನೂ, ಇನ್ನೂ ಇತರ ಕ್ಷತ್ರಿಯರನ್ನೂ ಸಾವಿರಾರು ಸಂಖ್ಯೆಯಿಂದ ಅಲ್ಲಲ್ಲಿ ನಿಗ್ರಹಿಸಿ, ಅನೇಕರನ್ನು ತನ್ನ ಬಾಣಗಳಿಂದ ಕೊಂದು ಅವರನ್ನೆಲ್ಲ ಸೂರ್ಯನಲ್ಲಿಗೆ (ಸೂರ್ಯಬಿಂಬ ಮಾರ್ಗವಾಗಿ ಲೋಕಾಂತರಕ್ಕೆ) ಕಳುಹಿಸಿದನು. ಮೇರು ಮಂದರಪರ್ವತಗಳನ್ನೇ ಭೂಷಣವಾಗಿ ಉಳ್ಳ ಈ ಸಮಸ್ತಭೂಮಿಯೂ, ಕ್ಷತ್ರಿಯರ ಹೆಣಗಳಿಂದ ತುಂಬಿಹೋಯಿತು. ಹೀಗೆ ಪರಶುರಾಮನು ಇಪ್ಪತ್ತೊಂದುಸಾರಿ ಅಲ್ಲಲ್ಲಿ ಹುಡುಕಿ ಕ್ಷತ್ರಿಯರನ್ನು ಕೊಂದು, ಭೂಮಿಯಲ್ಲಿ ಕ್ಷತ್ರಿಯರೇ ಇಲ್ಲದಂತೆ ಮಾಡಿದನು. ಹೀಗೆ ಮಹಾಯಶಸ್ವಿಯಾದ ಆ ಪರಶುರಾಮನು ಕ್ಷತ್ರಿಯರನ್ನು ಕೊಂದು, ಇಂದ್ರಗೋಪವೆಂಬ ಹುಳಕ್ಕೂ, ಚಕೋರಪಕ್ಷಿಗೂ ಸಮಾನವಾದ ವರ್ಣವುಳ್ಳ ಆ ಕ್ಷತ್ರಿಯರ ರಕ್ತದಿಂದ ಅನೇಕನದಿಗಳನ್ನೂ, ತಟಾಕಗಳನ್ನೂ ತುಂಬಿ, ಆ ರಕ್ತದ ಮಡುಗಳಲ್ಲಿಯೇ ತನ್ನ ಪಿತೃಗಳಿಗೆ ತರ್ಪಣವನ್ನು ಬಿಟ್ಟನು! ಪರಶುರಾಮನು ಹದಿನೆಂಟು ದ್ವೀಪಗಳನ್ನು ತನ್ನ ಸ್ವಾಧೀನಮಾಡಿಕೊಂಡು, ಸಾವಿರಾರು ಅಶ್ವಮೇಧಗಳನ್ನೂ, ಸಾವಿರಾರು ನರಮೇಧಗಳನ್ನೂ ಮಾಡಿ, ತನಗೆ ಸ್ವಾಧೀನವಾಗಿದ್ದ ಸಮುದ್ರ

ಪರ್ಯಂತವಾದ ಸಮಸ್ತಭೂಮಿಯನ್ನೂ ಕಶ್ಯಪನೆಂಬ ಬ್ರಾಹ್ಮಣನಿಗೆ ದಾನಮಾಡಿಬಿಟ್ಟನು. ಹೀಗೆ ಅವನು ಭೂಮಿಯಲ್ಲಿ ದುಷ್ಟಕ್ಷತ್ರಿಯರನ್ನೆಲ್ಲ ಅಡಗಿಸಿ, ಅದರ ಕೊನೆಯನ್ನು ಪ್ರದಕ್ಷಿಣಮಾಡಿ ಬಂದನು. ಓ ಧರ್ಮ ರಾಜಾ! ಪೂರ್ವಕಥೆಗಳನ್ನು ಬಲ್ಲ ವಿದ್ವಾಂಸರು ಮಹಾತ್ಮನಾದ ಆ ಪರಶುರಾಮನನ್ನು ಕುರಿತು, ಆ ಕಾಲದಲ್ಲಿ ಮಾಡಿದ ಮತ್ತು ಸತ್ಯ ವಾದ ಒಂದು ಶ್ಲೋಕವನ್ನು ಹೇಳುವರು. "ಹದಿನೆಂಟು ಅಡಿಗಳ ಅಗಲವೂ, ಒಂದು ಪುರುಷಪ್ರಮಾಣಕ್ಕೆ ಮೇಲೆ ಎತ್ತರವೂ ಉಳ್ಳ ಸುವರ್ಣಮಯವಾದ ಒಂದು ಯಾಗವೇದಿಕೆಯನ್ನು ಆ ಪರಶುರಾಮ ನಿಂದ ಕಾಶ್ಯಪನು ಪಡೆದನು" ಎಂಬುದೇ ಆ ಶ್ಲೋಕಾರ್ಥವು. ಮಹಾ ಬಾಹುವಾದ ಆ ಜಾಮದಗ್ನ್ಯನು ಹೀಗೆ ಭೂರಿದಕ್ಷಿಣೆಯುಳ್ಳ ಅನೇಕ ಯಾಗಗಳನ್ನು ಮಾಡಿ, ಆಮೇಲೆ ನೂರುವರ್ಷಗಳ ವರೆಗೆ ಸೌಭ ರಾಜನಾದ ಸಾಲ್ವನೊಡನೆ ಯುದ್ಧಮಾಡಿದನು. ಪರಶುರಾಮನು ತನ್ನ ಅಂದವಾದ ರಥವನ್ನೇರಿ ಸೌಭನೊಡನೆ ಯುದ್ಧಮಾಡುತ್ತಿರುವಾಗ ಯೌ ವನಕ್ಕೆ ಬಾರದ ಕೆಲವು ಕನ್ಯೆಯರು "ರಾಮಾ! ರಾಮಾ! ಮಹಾಬಾ ಹೂ! ಭೃಗುವಂಶಕ್ಕೆ ಕೀರ್ತಿಯನ್ನು ತರತಕ್ಕವನೇ! ನಿನ್ನ ಶಸ್ತ್ರಗಳ ನ್ನೆಲ್ಲ ಬಿಟ್ಟುಹೋಗು! ನೀನು ಸೌಭನನ್ನು ಕೊಲ್ಲಲಾರೆ. ಶಂಕಚಕ್ರ ಗದಾಪಾಣಿಯೂ, ದೇವತೆಗಳಿಗೆ ಅಭಯವನ್ನು ಕೊಡತಕ್ಕವನೂ ಆದ ಕೃಷ್ಣನು, ಪ್ರದ್ಯುಮ್ನನೊಡನೆಯೂ, ಸಾಂಬನೊಡನೆಯೂ ಸೇರಿ ಮುಂದೆ ಯುದ್ಧದಲ್ಲಿ ಈ ಸೌಭನನ್ನು ಕೊಲ್ಲುವನು" ಎಂಬ ಅರ್ಥದಿಂದ ಗಾನ ಮಾಡುತ್ತಿರುವ ಕಂಠಧ್ವನಿಯು ಕೇಳಿಸಿತು. ಪುರುಷಶ್ರೇಷ್ಠನಾದ ಪರಶು ರಾಮನು ಈ ಮಾತುಗಳನ್ನು ಕೇಳಿದೊಡನೆ, ಆಯುಧಗಳನ್ನೆಲ್ಲ ಬಿಸುಟು, ಅಲ್ಲಿಂದ ಹಾಗೆಯೇ ವನಕ್ಕೆ ಹೊರಟನು. ತಾನು ಕುಳಿತಿದ್ದ ರಥ, ತನ್ನ ಕೈ ಯಲ್ಲಿದ್ದ ಆಯುಧಗಳು, ಕೊಡಲಿ, ತಾನು ತಂದಿದ್ದ ಬಿಲ್ಲು, ಇವೆಲ್ಲವನ್ನೂ ನೀರಿನಲ್ಲಿ ಬಿಸುಟು, ದೊಡ್ಡ ತಪಸ್ಸನ್ನು ಮಾಡಲಾರಂಭಿಸಿದನು. ಧರ್ಮಾ ತ್ಮನಾದ ಆ ಜಾಮದಗ್ನ್ಯನು, ಲಜ್ಜೆ, ಕೀರ್ತಿ, ಶಕ್ತಿ, ಬುದ್ಧಿ, ಸಂಪತ್ತು ಇವನ್ನುಮಾತ್ರ ತನ್ನದಾಗಿಟ್ಟುಕೊಂಡು, ಆಯುಧಸಹಿತವಾದ ತನ್ನ ರಥ ವನ್ನು ಇದ್ದಲ್ಲಿಯೇ ಬಿಟ್ಟುಹೋದನು. ಓ ಧರ್ಮರಾಜಾ! ಈಶ್ವರ ಸ್ಟೃ

ರೂಪಿಯಾದ ಆ ಪರಶುರಾಮನು, ಆದಿಯಿಂದಲೂ ಕೃಷ್ಣನ ಪಾಲಿಗೆ ಏರ್ಪ ಟ್ಟಿದ್ದ ಆ ಸೌಭವಧವನ್ನು ಅವನಿಗಾಗಿ ಬಿಟ್ಟನೇ ಹೊರತು ಅವನನ್ನು ಕೊಲ್ಲುವುದಕ್ಕೆ ತನಗೆ ಶಕ್ತಿಯಿಲ್ಲದೆ ಬಿಡಲಿಲ್ಲ. ದೈವಸಂಕಲ್ಪದಲ್ಲಿ ನಂಬಿ ಕೆಯನ್ನು ಹುಟ್ಟಿಸುವುದಕ್ಕಾಗಿ, ಸೌಭನನ್ನು ತಾನು ಕೊಲ್ಲದೆ ಅದನ್ನು ಕೃಷ್ಣನ ಪಾಲಿಗೆ ಬಿಟ್ಟುಹೋದನು. ಧರ್ಮರಾಜಾ! ಜಮದಗ್ನಿಪುತ್ರನೆಂ ದು ಪ್ರಸಿದ್ಧನಾದ ಆ ಮಹರ್ಷಿಯೂ ಈ ಕೃಷ್ಣನ ಪೂರ್ವಾವತಾರವೆಂದೇ ತಿಳಿ. ಆ ಪರಶುರಾಮನು ಈಗಲೂ ಮಹಾತಪಸ್ಸಿನಲ್ಲಿ ನೆಲೆಗೊಂಡಿರುವನು.

ಇದು ನಾಲ್ವತ್ತೊಂಭತ್ತನೆಯ ಅಧ್ಯಾಯವು.



## ರಾಮಾವತಾರವು ಮತ್ತು ಕೃಷ್ಣಾವತಾರದ ಸಂಗ್ರಹವು.

ರಾಜಾ! ಮಹಾತ್ಮನಾದ ವಿಷ್ಣುವಿನ ಮುಂದಿನ ಅವತಾರಗಳನ್ನು ಹೇಳುವೆನು ಕೇಳು. ಮಹಾಪುರುಷನಾದ ಶ್ರೀವಿಷ್ಣುವು, ಇಪ್ಪತ್ತೆಂಟನೆ ಯ ಚತುರ್ಯುಗದಲ್ಲಿ ಮಾರ್ಕಂಡೇಯನನ್ನು ಮುಂದಿಟ್ಟುಕೊಂಡು, ತನ್ನ ಅಂಶವನ್ನೇ ನಾಲ್ಕಾಗಿ ವಿಭಾಗಿಸಿ, ನವಮೀತಿಥಿಯಲ್ಲಿ ದಶರಥ ಕುಮಾರನಾಗಿ ಶ್ರೀರಾಮನೆಂಬ ಹೆಸರಿನಿಂದ ಹುಟ್ಟಿದನು. ಕುಂತೀ ಪುತ್ರಾ! ಆ ಮಹಾವಿಷ್ಣುವು ಪರಾಕ್ರಮದಲ್ಲಿ ಸೂರ್ಯನಿಗೆ ಸಾಟಿಯಾಗಿ, ರಾಮನೆಂಬ ಹೆಸರಿನಿಂದ ಧರ್ಮಸಂರಕ್ಷಣಕ್ಕೂ, ಲೋಕಾನುಗ್ರಹಕ್ಕೂ ಭೂಮಿಯಲ್ಲಿ ಜನಿಸಿದನು. ಆ ದಶರಥಮಹಾರಾಜನನ್ನು ಕೂಡ ಸಕ ಲ ಲೋಕಪಾಲಕನಾದ ಭಗವಂತನ ಶರೀರವೆಂದೇ ಹೇಳುವರು. ಆ ರಾಮಾವತಾರದಲ್ಲಿ ವಿಶ್ವಾಮಿತ್ರನ ಯಜ್ಞಕ್ಕೆ ಭಂಗವನ್ನು ಮಾಡಿದ ಸು ಬಾಹುವೆಂಬ ರಾಕ್ಷಸನನ್ನು ಕೊಂದನು. ಮಾರೀಚನೂ ಪ್ರಬಲವಾಗಿ ಭಂಗಿಸಲ್ಪಟ್ಟನು. ಆಗ ವಿಶ್ವಾಮಿತ್ರನು, ತೀಕ್ಷ್ಣಗಳಾದ ಅನೇಕ ದಿವ್ಯಾ ಸ್ತ್ರಗಳನ್ನು ಆ ರಾಮನಿಗೆ ಕೊಟ್ಟನು. ಜನಕಮಹಾರಾಜನ ಯಾಗದಲ್ಲಿ ಆ ರಾಮನು ಮಹೇಶ್ವರನ ಧನುಸ್ಸನ್ನು ಸುಲಭವಾಗಿ ಮುರಿದು, ಜನಕ ಪುತ್ರಿಯಾದ ಸೀತೆಯನ್ನು ವಿವಾಹವಾದನು. ಆಮೇಲೆ ಸೀತಾಸಮೇತ ನಾಗಿ ಅಯೋಧ್ಯೆಗೆ ಬಂದು ಸುಖದಿಂದಿದ್ದನು. ಕೆಲವು ದಿನಗಳು ಕಳೆದ

ಮೇಲೆ ಪಿತೃವಾಕ್ಯಪರಿಪಾಲನಕ್ಕೂ, ಕೈಕೇಯಿಯ ಇಷ್ಟವನ್ನು ಪೂರೈಸು ರೈಸುವುದಕ್ಕೂ ಅವನು ಲಕ್ಷ್ಮಣನೊಡಗೂಡಿ ಅರಣ್ಯಕ್ಕೆ ಹೋಗಿ, ಹದಿನಾಲ್ಕು ವರ್ಷಗಳು ವನವಾಸವನ್ನು ಮಾಡಿದನು. ಆತನನ್ನು ಯಾವಾಗಲೂ ಎಡೆಬಿಡದಿರುವ ಮಹಾಲಕ್ಷ್ಮಿಯೂ ಕೂಡ, ಸೀತೆಯೆಂಬ ಹೆಸರಿನಿಂದ ಮನುಷ್ಯರೂಪದಲ್ಲಿದ್ದು ಶ್ರೀರಾಮನನ್ನು ಹಿಂಬಾಲಿಸುತ್ತ, ಹದಿನಾಲ್ಕು ವರ್ಷಗಳು ವನದಲ್ಲಿದ್ದು ಕಷ್ಟಪಡುತ್ತಿದ್ದಳು. ಧರ್ಮಾತ್ಮನಾದ ರಾಮನು ಜನಸ್ಥಾನದಲ್ಲಿರುವಾಗ ಮಾರೀಚ, ಖರ, ದೂಷಣ, ತ್ರಿಶಿರಸ್ಸುಗಳೇ ಮೊದಲಾದ ಹದಿನಾಲ್ಕು ಸಾವಿರಮಂದಿ ರಾಕ್ಷಸರನ್ನು ಲೋಕಹಿತಕ್ಕಾಗಿ ಕೊಂದು, ತನ್ನ ಅವತಾರದ ಕಾರ್ಯವನ್ನು ನೆರವೇರಿಸಿದನು. ಶಾಪದಿಂದ ರಾಕ್ಷಸರಾಗಿ ಹುಟ್ಟಿದ್ದ ವಿರಾಧ ಕಬಂಧರೆಂಬ ಗಂಧರ್ವರನ್ನು ಶಾಪವಿಮುಕ್ತರನ್ನಾಗಿ ಮಾಡಿದನು. ರಾವಣನ ತಂಗಿಯಾದ ಶೂರ್ಪಣಖೆಯ ಮೂಗನ್ನು ಕುಯ್ದನು. ಈ ಕಾರಣದಿಂದ ಅವನು ತನ್ನ ಪತ್ನಿಯನ್ನು ಕಳೆದುಕೊಂಡು ಅವಳನ್ನು ಹುಡುಕುತ್ತ ಅರಣ್ಯವನ್ನೆಲ್ಲ ಸುತ್ತಿದನು. ಆಮೇಲೆ ಅವನು ಜನಸ್ಥಾನದಿಂದ ಹೊರಟು, ಪಂಪೆಯೆಂಬ ಸರಸ್ಸನ್ನು ಸೇರಿ, ಅಲ್ಲಿಂದ ಋಶ್ಯಮೂಕಪರ್ವತಕ್ಕೆ ಹೋಗಿ, ಅಲ್ಲಿ ಸುಗ್ರೀವಾಂಜನೇಯರನ್ನು ಕಂಡು, ಅವರ ಸ್ನೇಹವನ್ನು ಬೆಳೆಸಿದನು. ಆಮೇಲೆ ಸುಗ್ರೀವನೊಡನೆ ಕಿಷ್ಕಿಂಧೆಗೆ ಹೋಗಿ, ಮಹಾಬಲಶಾಲಿಯೂ, ವಾನರರಾಜನೂ ಆದ ವಾಲಿಯನ್ನು ಕೊಂದು, ಸುಗ್ರೀವನನ್ನು ವಾನರರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿದನು. ಪತ್ನಿಯನ್ನಗಲಿ ವ್ಯಸನಪಡುತಿದ್ದ ಆ ಮಹಾವೀರನಿಗಾಗಿ ಅವಳನ್ನು ಹುಡುಕಲು ಹೋಗಿದ್ದ ವಾಯುಪುತ್ರನಾದ ಹನುಮಂತನು, ಸೀತೆಯು ಲಂಕೆಯಲ್ಲಿರುವಳೆಂಬುದನ್ನು ತಿಳಿಸಿದನು. ಇದನ್ನು ಕೇಳಿ ರಾಮನು, ಆ ಸೀತೆಯನ್ನು ತರಲು ಸಮುದ್ರದಮೇಲೆ ದೊಡ್ಡ ಸೇತುವೆಯನ್ನು ಕಟ್ಟಿ ಲಂಕಾಪಟ್ಟಣವನ್ನು ಸೇರಿದನು. ಆ ರಾವಣನಾದರೋ, ದೇವತೆಗಳಾಗಾಗಲಿ, ನಾಗರಿಗಾಗಲಿ, ಯಕ್ಷರಾಕ್ಷಸರಿಗಾಗಲಿ, ಗರುಡರಿಗಾಗಲಿ ಯಾರಿಗೂ ಜಯಿಸಲೂ, ಕೊಲ್ಲಲೂ ಅಸಾಧ್ಯನಾಗಿದ್ದನು. ಕಾಡಿಗೆಯಂತೆ ಕಪ್ಪುಮೈಯುಳ್ಳ ಆತನು ಅನೇಕ ರಾಕ್ಷಸ ಸೇನಾಬಲವುಳ್ಳವನು. ವರಬಲದಿಂದ ಕೊಬ್ಬಿದ ಆತನಿಗೆ ಯಾವ ದೇವತೆಗಳೂ ಲಕ್ಷ್ಯವಿಲ್ಲ. ಶ್ರೀರಾಮ

ನು ಆ ರಾಕ್ಷಸನನ್ನೂ, ಅವನ ಮಂತ್ರಿಗಳನ್ನೂ, ಅವನ ಕುಲದವರನ್ನೂ ಯುದ್ಧದಲ್ಲಿ ಸಂಹರಿಸಿದನು. ಹೀಗೆ ರಾಮನು, ತ್ರಿಲೋಕಕಂಟಕನೂ, ಮಹಾಬಲಾಢ್ಯನೂ ಆದ ರಾವಣನನ್ನೂ, ಅವನ ಪರಿವಾರವನ್ನೂ ಕೊಂದು ಮಹಾತ್ಮನಾದ ವಿಭೀಷಣನಿಗೆ ಲಂಕಾನಗರದಲ್ಲಿ ಪಟ್ಟಾಭಿಷೇಕವನ್ನು ಮಾಡಿ, ಅವನಿಗೆ ಅಮರತ್ವವನ್ನೂ ಕೊಟ್ಟನು. ಆಮೇಲೆ ರಾಮನು ಸೀತೆಯೊಡನೆ ಪುಷ್ಪಕವಿಮಾನವನ್ನೇರಿ ಸೇನೆಗಳೊಡನೆ ತನ್ನ ರಾಜಧಾನಿಯಾದ ಅಯೋಧ್ಯಾಪುರವನ್ನು ಸೇರಿ ಧರ್ಮದಿಂದ ರಾಜ್ಯವನ್ನಾಳುತಿದ್ದನು. ಆಮೇಲೆ ಶತ್ರುಘ್ನನು ರಾಮನ ಆಜ್ಞೆಯಮೇರೆಗೆ ಮಧುವೆಂಬ ರಾಕ್ಷಸನ ಪುತ್ರನೂ, ಮಹಾಬಲಾಢ್ಯನೂ ಆದ ಲವಣನೆಂಬ ರಾಕ್ಷಸನನ್ನು ಕೊಂದನು. ಹೀಗೆ ಧರ್ಮರಕ್ಷಣೆಗಾಗಿ ಕೈಕಟ್ಟಿದ ಶ್ರೀರಾಮನು ಲೋಕಹಿತಕ್ಕಾಗಿ ಅನೇಕ ಕಾರ್ಯಭಾರಗಳನ್ನು ಕೈಕೊಂಡು, ರಾಜ್ಯವನ್ನು ಧರ್ಮದಿಂದ ಪರಿಪಾಲಿಸುತಿದ್ದನು. ಸಾಮಘೋಷದಿಂದ ಕೂಡಿದ ನೂರಶ್ವಮೇಧಯಾಗಗಳನ್ನು ಬಹು ಸುಲಭವಾಗಿ ನಡೆಸಿದನು. ರಾಮನು ರಾಜ್ಯಪಾಲನವನ್ನು ಮಾಡುವಾಗ, ಅವನ ರಾಷ್ಟ್ರದಲ್ಲಿ ಆರ್ತಸ್ವರವಾಗಲಿ, ಅಮಂಗಳಧ್ವನಿಯಾಗಲಿ ಕಿವಿಗೆ ಬೀಳುತ್ತಿರಲಿಲ್ಲ. ಪ್ರಾಣಿಗಳಿಗೆ ಅಕಾಲ ಮರಣಗಳಿಲ್ಲ! ಕಳ್ಳರ ಭಯವಿರಲಿಲ್ಲ! ಆತನ ಆಳ್ವಿಕೆಯಲ್ಲಿ ಭೂಮಿಯೊಳಗಣ ಎಲ್ಲಾ ಜನಗಳೂ, ಋಷಿಗಳೂ, ದೇವತೆಗಳೂ, ಮನುಷ್ಯರೂ ತಮ್ಮತಮ್ಮ ನಿತ್ಯಕರ್ತವ್ಯಗಳನ್ನು ಯಥಾವಿಧಿಯಾಗಿ ನಡೆಸುತಿದ್ದರು. ರಾಮರಾಜ್ಯವು ನಡೆಯುವಾಗ, ಯಾವ ಮನುಷ್ಯನೂ, ಯಾವ ಪ್ರಾಣಿಗಳಿಗೂ ಯಾವ ಕೇಡನ್ನೂ ಮಾಡಲು ಸಾಧ್ಯವಿರಲಿಲ್ಲ. ಪ್ರಾಣಾಪಾನಗಳು (ಒಳ್ಳೆಯದನ್ನು ಗ್ರಹಿಸುವುದು. ಕೆಟ್ಟದನ್ನು ನೀಗಿಸುವುದು.) ಸಮಾನವಾಗಿದ್ದುವು. ಇದೇ ರಾಮರಾಜ್ಯದ ವಿಷಯವಾಗಿ ಪೌರಾಣಿಕರು ಒಂದು ಆರ್ಯೋಕ್ತಿಯನ್ನಾಡುವರು. "ತರುಣನೂ, ಕಂಜದಳಾಕ್ಷನೂ, ಶ್ಯಾಮಲವರ್ಣನೂ, ಸೌಮ್ಯಮುಖನೂ, ಸಿಂಹದಂತೆ ಭುಜಬಲವುಳ್ಳವನೂ, ಆನೆಯಂತೆ ಮಹಾಬಲಿಷ್ಠನೂ ಆದ ಶ್ರೀರಾಮನು, ಹನ್ನೊಂದು ಸಾವಿರವರ್ಷಗಳು ಸುಖಸಂಪತ್ತುಗಳೊಡನೆ ಈ ಭೂಮಂಡಲವನ್ನು ಧರ್ಮದಿಂದ ಪರಿಪಾಲಿಸುತ್ತಿದ್ದನು." ಎಂಬುದೇ ಆ ಗಾಥಾರ್ಥವು.

ರಾಮನು ರಾಜ್ಯವನ್ನಾಳುವಾಗ, ಪ್ರಜೆಗಳಿಗೆ "ರಾಮಾ! ರಾಮಾ! ರಾಮಾ!" ಎಂಬೀ ಶಬ್ದವೇ ಸದಾ ಬಾಯಲ್ಲಿ ಹೊರಡುತ್ತಿದ್ದಿತು. ಜಗತ್ತೆಲ್ಲವೂ ರಾಮಮಯವಾಗಿದ್ದಿತು. ಬ್ರಾಹ್ಮಣರು ಯಾವಾಗಲೂ ವೇದಗಳನ್ನು ಪಠಿಸುತ್ತಿದ್ದರು. ಆತನು ದಂಡಕಾರಣ್ಯದಲ್ಲಿ ಅನೇಕ ರಾಕ್ಷಸರನ್ನು ಕೊಂದು, ದೇವಕಾರ್ಯವನ್ನು ನಡೆಸಿದನು. ತನ್ನ ಪತ್ನಿಯನ್ನಪಹರಿಸಿದವನೂ, ದೇವಗಂಧರ್ವರಿಗೆ ಶತ್ರುವೂ, ವೀರಾಗ್ರೇಸರನೂ ಆದ ರಾವಣನನ್ನು ಸಂಹರಿಸಿದನು. ಹೀಗೆ ಸತ್ಯವಂತನೂ, ಗುಣಸಂಪನ್ನನೂ, ಆತ್ಮತೇಜಸ್ಸಿನಿಂದಲೇ ಪ್ರಕಾಶಿಸುವವನೂ, ಮಹಾಬಾಹುವೂ, ಇಕ್ಷ್ವಾಕುಕುಲವರ್ಧನನೂ ಆದ ಶ್ರೀರಾಮನು, ರಾವಣನನ್ನೂ, ಅವನ ಕುಲದವರನ್ನೂ ಸಂಹರಿಸಿ, ಲೋಕವಿಖ್ಯಾತಿಯನ್ನು ಪಡೆದು, ಆಮೇಲೆ ತನ್ನ ಲೋಕವನ್ನು ಸೇರಿದನು. ಯುಧಿಷ್ಠಿರಾ! ಮಹಾತ್ಮನಾದ ದಶರಥರಾಮನ ಅವತಾರವನ್ನು ಹೇಳಿದುದಾಯಿತು. ಇಪ್ಪತ್ತೆಂಟನೆಯ ಮಹಾಯುಗದಲ್ಲಿ ಆ ಅವತಾರವಾದಮೇಲೆ, ಮಹಾಭುಜನೂ, ಭಯಪಟ್ಟವರಿಗೆ ಅಭಯಪ್ರದಾತನೂ, ಶ್ರೀವತ್ಸಲಕ್ಷಣನೂ ಆದ ಆ ವಿಷ್ಣುವೇ, ಶ್ರೀಕೃಷ್ಣನಾಗಿ ಅವತರಿಸಿದನು. ಆವನು ಕೃಷ್ಣಾವತಾರದಲ್ಲಿ ಅತ್ಯಂತ ಸುಂದರನಾಗಿ, ನೋಡುವವರಿಗೆ ಸಂತೋಷವನ್ನುಂಟುಮಾಡುತ್ತ ಎಲ್ಲರಿಂದಲೂ ಅಧಿಕವಾಗಿ ಆದರಿಸಲ್ಪಡುವನು. ತನ್ನನ್ನಾಶ್ರಯಿಸುವವರನ್ನು ಮರೆಯಲಾರನು. ದೇಶಕಾಲಗಳನ್ನರಿತವನು. ಶಂಖ ಚಕ್ರ ಗದಾ ಖಡ್ಗಗಳನ್ನು ಧರಿಸಿದವನು. ಎಲ್ಲಾ ವೇಳೆಗಳಲ್ಲಿಯೂ ಲೋಕಕ್ಕೆ ಹಿತವನ್ನೇ ಮಾಡುವನು. ಆತನು ಭೂಲೋಕಕ್ಕೆ ಉಪಕಾರಮಾಡಲೆಳಿಸಿ, ವೃಷ್ಣಿಕುಲದಲ್ಲಿ ವಾಸುದೇವನೆಂಬ ನಾಮದಿಂದ ಅವತರಿಸಿರುವನು. ಆತನು ಶತ್ರುಭಯಂಕರನು. ಕೇಳಿದುದನ್ನೆಲ್ಲ ಕೊಡುವ ದಾತನು! ಮಧುವೆಂಬ ರಾಕ್ಷಸನನ್ನು ಸಂಹರಿಸಿ, ಪ್ರಖ್ಯಾತಿಯನ್ನು ಪಡೆದವನು, ಆತನು ಶಕಟಾಸುರನನ್ನೂ, ಮತ್ತಿಮರಗಳಾಗಿದ್ದ ಯಮಳಾರ್ಜುನರನ್ನೂ, ಪೂತನೆಯನ್ನೂ, ಮನುಷ್ಯರೂಪದಿಂದಿದ್ದ ಕಂಸನೇ ಮೊದಲಾದ ಅನೇಕ ಅಸುರರನ್ನೂ ಯುದ್ಧದಲ್ಲಿ ಕೊನೆಮುಟ್ಟಿಸಿದನು. ಮಹಾತ್ಮನಾದ ಭಗವಂತನ ಕೃಷ್ಣಾವತಾರವು ಲೋಕಹಿತಾರ್ಥವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಭರತೋತ್ತಮಾ! ಇನ್ನು ಮುಂದೆ ಕಲಿಯು

ಗದ ಕೊನೆಯಲ್ಲಿ ಧರ್ಮವೆಲ್ಲ ನಷ್ಟವಾಗಿ, ಅಧರ್ಮವು ಹೆಚ್ಚುತ್ತಿರುವಾಗ ಧರ್ಮವನ್ನುದ್ಧರಿಸುವುದಕ್ಕಾಗಿಯೂ, ಗೋ ಬ್ರಾಹ್ಮಣ ಹಿತಕ್ಕಾಗಿಯೂ ವಿಷ್ಣುವು ವಿಷ್ಣುಯಶನೆಂಬ ಹೆಸರಿನಿಂದ ಕಲ್ಕಿಯಾಗಿ ಅವತರಿಸುವನು. ವಿಷ್ಣುವಿಗೆ ಈ ಅವತಾರಗಳೊಡನೆ ಸೇರಿದ ಇನ್ನೂ ಹಲವು ಅವತಾರಗಳು ಪುರಾಣದಲ್ಲಿ ಬ್ರಹ್ಮಜ್ಞಾನವುಳ್ಳವರಿಂದ ಹೇಳಲ್ಪಟ್ಟಿವೆ" ಎಂದನು.

ಇದು ಐವತ್ತನೆಯ ಅಧ್ಯಾಯವು.

## { ಭೀಷ್ಮನು ಧರ್ಮರಾಜನಿಗೆ ಶ್ರೀಕೃಷ್ಣಾವತಾರದ ಕಾರಣಗಳನ್ನು ಹೇಳಿದುದು. }

ಆಗ ಯುಧಿಷ್ಠಿರನು ಭೀಷ್ಮನನ್ನು ಕುರಿತು "ಓ ಪುರುಷಶ್ರೇಷ್ಠಾ! ಶ್ರೀಕೃಷ್ಣನು ಯದುವಂಶದಲ್ಲಿ ಅವತರಿಸಿದ ವೃತ್ತಾಂತವನ್ನು ಕುರಿತು ನಿನ್ನಿಂದ ವಿವರವಾಗಿ ಕೇಳಬೇಕೆಂಬ ಆಸೆಯಿದೆ. ಆ ಮಹಾವಿಷ್ಣುವು ಕೃಷ್ಣನಾಗಿ ಅವತರಿಸಿದ ಕಾರಣವನ್ನು ನನಗೆ ತಿಳಿಸು" ಎಂದನು. ಆಗ ಭೀಷ್ಮನು, ಭಗವಂತನು ಯದುವಂಶದಲ್ಲಿ ಅವತರಿಸಿದ ವೃತ್ತಾಂತವನ್ನು ಕುರಿತು ಹೀಗೆಂದು ಹೇಳತೊಡಗಿದನು. "ಕೌರವಶ್ರೇಷ್ಠಾ! ನೀನು ಕೇಳಿದುದು ಸಂತೋಷವು. ಭಗವಂತನಾದ ನಾರಾಯಣನು ಯಾವ ಕಾರಣಕ್ಕಾಗಿ ಯಾದವವಂಶದಲ್ಲಿ ಈ ಕೃಷ್ಣರೂಪದಿಂದ ಅವತರಿಸಿದನೋ ಅದರ ತತ್ವವನ್ನು ಯಥಾಸ್ಥಿತವಾಗಿ ತಿಳಿಸುವೆನು ಕೇಳು. ಹಿಂದೆ ಕೃತಯುಗದಲ್ಲಿ ಮೂರು ಲೋಕದಲ್ಲಿಯೂ ಪ್ರಖ್ಯಾತವಾದ ತಾರಕಾಮಯವೆಂಬ ಮಹಾಯುದ್ಧವೊಂದು ನಡೆಯಿತು. ವಿರೋಚನನು, ಮಯನು, ತಾರನು, ವರಾಹನು, ಶ್ವೇತನು, ವಿಪ್ರಚಿತ್ತಿ, ಪ್ರಲಂಬನು, ವೃತ್ರನು, ಜಂಭನು, ಬಲಾಸುರನು, ನಮುಚಿ, ಕಾಲನೇಮಿ, ಪ್ರಹ್ರಾದನು, ಲಂಬನು ಕಿಶೋರನು, ಸ್ವರ್ಭಾನುವೆಂಬಿವರೇ ಮೊದಲಾಗಿ ಇನ್ನೂ ಅನೇಕ ದಾನವರ ಸಂಘಗಳು, ಸಾವಿರಾರು ಸಂಖ್ಯೆಯಿಂದ ಗುಂಪುಕೂಡಿ, ನಾನಾವಿಧ ಶಸ್ತ್ರಾಸ್ತ್ರಗಳನ್ನೂ, ಉಡಿಗೆ ತೊಡಿಗೆಗಳನ್ನೂ ಧರಿಸಿ, ವಿವಿಧವಾಹನಗಳನ್ನೇರಿ ದೇವತೆಗಳನ್ನು ಇದಿರಿಸುವುದಕ್ಕೆ ಹೊರಟರು. ಇತ್ತಲಾಗಿ ದೈತ್ಯರ ಯು

ದ್ಧಸನ್ನಾಹವನ್ನು ನೋಡಿ, ದೇವತೆಗಳೂ ಕೂಡ ತಮ್ಮತಮ್ಮ ಕಡೆಯುವ ರನ್ನು ಸೇರಿಸಿಕೊಂಡು ಇದಿರಾದರು. ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಸಾಧ್ಯರು, ವಿಶ್ವೇದೇವತೆಗಳು, ಮರುದ್ಗಣಗಳು, ಇಂದ್ರ, ಯಮ, ವರುಣರು, ಚಂದ್ರನು, ಧನಾಧಿಪತಿಯಾದ ಕುಬೇರನು, ಮಹಾವೀರ್ಯವುಳ್ಳ ಅಶ್ವಿನೀದೇವತೆಗಳಿಬ್ಬರು, ಇನ್ನೂ ಬೇರೆ ಯಾವ ಯಾವ ದೇವಗಣಗಳುಂಟೋ ಅವರೆಲ್ಲರೂ ಒಂದುಗೂಡಿ, ಯುದ್ಧಕ್ಕಿದಿರಾದರು. ಎರಡು ಕಡೆಯುವರಿಗೂ ಭಯಂಕರವಾದ ಯುದ್ಧವು ನಡೆಯಿತು. ಎರಡು ಕಡೆಯ ಸೈನ್ಯಗಳೂ ಪ್ರಬಲವಾಗಿ ಹೋರಾಡತೊಡಗಿದುವು. ಇಬ್ಬರೂ ಅನ್ಯೋನ್ಯವಾಗಿ ಶಸ್ತ್ರಾಸ್ತ್ರಗಳನ್ನು ಕರೆಯುತ್ತ ಕ್ರೂರಯುದ್ಧವನ್ನು ಮಾಡಿದರು. ಮೊದಲು ಆ ಸೈನ್ಯಗಳೆರಡಕ್ಕೂ ಮೊತ್ತದಲ್ಲಿ ದೊಂಬಿಯುದ್ಧವು ನಡೆಯಿತು. ದೈತ್ಯರು ಸಿಕ್ಕಿಸಿಕ್ಕಿದ ಕಡೆಯಲ್ಲಿ ದೇವ ಗಂಧರ್ವ ಯಕ್ಷರನ್ನೂ, ನಾಗರನ್ನೂ, ಚಾರಣರನ್ನೂ ಕೊಲ್ಲುತ್ತ ಬಂದರು. ಈ ಘೋರ ಯುದ್ಧದಲ್ಲಿ ದೇವತೆಗಳಿಗೆ ಉಳಿಗಾಲವಿಲ್ಲದಂತಾಯಿತು. ದೈತ್ಯರಿಂದ ಸಿಕ್ಕಿದಕಡೆಯಲ್ಲಿ ಕೊಲ್ಲಲ್ಪಡುತ್ತಿದ್ದ ದೇವತೆಗಳು, ಇನ್ನು ತಮ್ಮನ್ನು ಸರ್ವೇಶ್ವರನಾದ ಆ ನಾರಾಯಣನೇ ಈ ವಿಪತ್ತಿನಿಂದ ತಪ್ಪಿಸಬೇಕಲ್ಲದೆ ಬೇರೆ ಯಿಲ್ಲವೆಂದು ಮನಸ್ಸಿನಲ್ಲಿ ನೆನೆಸಿಕೊಂಡರು. ಅವರು ಹಾಗೆ ಸ್ಮರಿಸಿದೊಡನೆಯೇ ಮಹಾವಿಷ್ಣುವು ಶಂಖಚಕ್ರಗದಾಧಾರಿಯಾಗಿ ತನ್ನ ತೇಜಸ್ಸಿನಿಂದ ಭೂಮಿಯನ್ನೆಲ್ಲ ಬೆಳಗುವಂತೆ ಅದೇ ಸ್ಥಳದಲ್ಲಿ ಕಾಣಿಸಿಕೊಂಡನು. ಗರುಡಾರೂಢನಾಗಿ ತಮ್ಮಲ್ಲಿಗೆ ಬಂದ ವಿಷ್ಣುವನ್ನು ನೋಡಿ ದೇವತೆಗಳಿಗೆ ಮಿತಿಮೀರಿದ ಸಂತೋಷವಾಯಿತು. ಅವರ ಮನಸ್ಸಿನಲ್ಲಿದ್ದ ಭೀತಿಯೂ ಬಿಟ್ಟು ಹೋಯಿತು. ಶ್ರೀಮಹಾವಿಷ್ಣುವು ತಮಗೆ ಬೆಂಬಲವಾಗಿರುವನೆಂಬ ಧೈರ್ಯದಿಂದ, ತಿರುಗಿ ಅವರು ದೈತ್ಯರೊಡನೆ ಯುದ್ಧವನ್ನಾರಂಭಿಸಿದರು. ಆಗಿನ ಯುದ್ಧವು ಅತಿಭಯಂಕರವಾಗಿ, ಹೀಗೆಂದು ಊಹಿಸುವುದಕ್ಕೂ ಅಸಾಧ್ಯವಾಗಿ, ನೋಡುವವರಿಗೆ ಮೈಯಲ್ಲಿ ರೋಮಾಂಚವನ್ನು ಹುಟ್ಟಿಸುವಂತಿತ್ತು. ಇಂದ್ರಾದಿ ದೇವತೆಗಳೆಲ್ಲರೂ ಸಿಕ್ಕಿದ ಕಡೆಯಲ್ಲಿ ದೈತ್ಯರನ್ನು ಕೊಲ್ಲುತ್ತಬಂದರು. ದೇವತೆಗಳ ವೀರ್ಯವನ್ನು ತಡೆಯಲಾರದೆ ದಾನವರೆಲ್ಲರೂ ಯುದ್ಧವನ್ನು ಬಿಟ್ಟು ಓಡಲಾರಂಭಿಸಿದರು. ಹೀಗೆ ತನ್ನ ಕಡೆಯ

ದಾನವರು ಭಯದಿಂದ ಓಡಿಹೋಗುತ್ತಿರುವುದನ್ನು ಕಾಲನೇಮಿಯೆಂಬ ದಾನವರಾಜನು ನೋಡಿ ಸಹಿಸಲಾರದೆಹೋದನು. ಅವನೋ ಸಾಮಾನ್ಯ ದಾನವನಲ್ಲ! ಭಯಂಕರವಾಗಿ ಕೊಲೆಮಾಡತಕ್ಕವನು. ಅವನಿಗೆ ನೂರು ತೋಳುಗಳು! ನೂರು ತಲೆಗಳು! ಮತ್ತು ನೂರು ಬಾಯಿಗಳು! ಇಂತಹ ಭಯಂಕರಾಕಾರದಿಂದ ಅವನು, ನೂರು ಶಿಖರಗಳುಳ್ಳ ಪರ್ವತದಂತೆ ಕಾಣುವನು. ಅಪಾರಸಂಪತ್ತುಳ್ಳವನು! ಅವನ ತಲೆಯಲ್ಲಿ ಸೂರ್ಯನಂತೆ ಕಾಂತಿವಿಶಿಷ್ಟವಾದ ಕಿರೀಟವು ಶೋಭಿಸುತ್ತಿರುವುದು. ಅವನ ಕೈಬಳೆ ಮುಂತಾದ ಆಭರಣಗಳು ಝಗಝಗಿಸುತ್ತಿರುವುವು. ಅವನ ಧ್ವಜವು, ಹೊಗೆಯಬಣ್ಣಕ್ಕೆ ಆಕಾಶವನ್ನೆಲ್ಲ ಆವರಿಸಿರುವುದು. ಅವನ ಮೀಸೆಗಳು ನೀಲವರ್ಣವಾಗಿರುವುವು. ಕೋಪದಿಂದ ತುಟಿಗಳನ್ನು ಕಚ್ಚಿಕೊಂಡು, ಲೋಕವನ್ನೆಲ್ಲ ಆಕ್ರಮಿಸುವಂತಿರುವ ದೊಡ್ಡ ದೇಹದಿಂದ ಕೂಡಿದ್ದ ಆ ಕಾಲನೇಮಿಯು ತನ್ನ ಗರ್ಜನೆಯಿಂದ ದೇವತೆಗಳನ್ನೆಲ್ಲ ಹೆದರಿಸುತ್ತ, ತನ್ನ ನಡೆಯ ವೇಗದಿಂದ ದಿಕ್ಕುಗಳನ್ನೆಲ್ಲ ಒರೆಸುತ್ತ ಬಾಯಿಬಿಟ್ಟುಕೊಂಡು ಬರುವ ಕಾಲಯಮನಂತೆ ದೇವತೆಗಳನ್ನಿದಿರಿಸಿ ಆ ದೇವತೆಗಳಮೇಲೆ ಶಸ್ತ್ರಸಮೂಹಗಳನ್ನು ಪ್ರಯೋಗಿಸಿದನು. ಇದರಿಂದ ದೇವತೆಗಳ ಕೈ ಸ್ವಲ್ಪ ದುರ್ಬಲವಾದಂತೆ ತೋರಿತು. ಅತ್ತಲಾಗಿ ದೈತ್ಯದಾನವರೆಲ್ಲರಿಗೂ ಧೈರ್ಯವು ಹೆಚ್ಚಿತು. ಅವರು ಹಿಂತಿರುಗಿ ಬಂದು ದೇವತೆಗಳನ್ನು ಬೆನ್ನಟ್ಟಿ ಹೊಡೆಯಲಾರಂಭಿಸಿದರು. ಈ ದೈತ್ಯರ ಹಾವಳಿಯನ್ನು ಸಹಿಸಲಾರದೆ ದೇವತೆಗಳು ದಿಕ್ಕುದಿಕ್ಕಿಗೆ ಪಲಾಯನಮಾಡತೊಡಗಿದರು. ಕಾಲನೇಮಿಗೆ ಮೇಲೆಮೇಲೆ ವೀರ್ಯೋತ್ಸಾಹಗಳು ಹೆಚ್ಚುತ್ತ ಬಂದುವು. ಅವನು ಕ್ರಮವಾಗಿ ಇಂದ್ರ, ಯಮ, ವರುಣ, ವಾಯು, ಕುಬೇರ, ಸೂರ್ಯನೇ ಮೊದಲಾದ ದೇವತೆಗಳನ್ನೆಲ್ಲ ಹೊಡೆದೋಡಿಸುತ್ತ ಬಂದನು. ಅವರ ಅಧಿಕಾರಗಳನ್ನೆಲ್ಲ ತಾನೇ ವಹಿಸಿಕೊಂಡನು. ಹೀಗೆ ಕಾಲನೇಮಿಯೆಂಬ ಆ ಮಹಾದೈತ್ಯನು ಇವರೆಲ್ಲರನ್ನೂ ಜಯಿಸಿದಮೇಲೆ, ಆಕಾಶದಲ್ಲಿ ತನ್ನಿದಿರಿಗೆ ಗರುಡಾರೂಢನಾಗಿ ಬೆಳಗುತಿದ್ದ ಮಹಾವಿಷ್ಣುವನ್ನು ಕಂಡನು. ಅವನನ್ನು ನೋಡಿದೊಡನೆ ಇವನಿಗೆ ಕೋಪದಿಂದ ಕಣ್ಣುಗಳು ಕೆಂಪೇರಿದುವು. ಆ ವಿಷ್ಣುವನ್ನು ಹುಂಕಾರದಿಂದ ಹೆದರಿ

ಸುತ್ತ, ವಿವಿಧಾಯುಧಗಳನ್ನು ಹಿಡಿದ ತನ್ನ ನೂರುತೋಳುಗಳನ್ನೂ ಮೇಲಕ್ಕೆತ್ತಿಕೊಂಡು ಮುಂದೆ ಬಂದು, ಎಲ್ಲಾ ತೋಳುಗಳಿಂದ ಏಕಕಾಲದಲ್ಲಿ ವಿಷ್ಣುವಿನ ಎದೆಯಮೇಲೆ ಅಪ್ಪಳಿಸಿದನು. ಇದರಂತೆಯೇ ಮಯನೇ ಮೊದಲಾದ ದಾನವರೂ ಕೂಡ, ತಮ್ಮತಮ್ಮ ಆಯುಧಗಳೊಡನೆ ವಿಷ್ಣುವನ್ನಿದಿರಿಸಿ ಹೊಡೆಯಲಾರಂಭಿಸಿದರು. ಆದರೇನು? ಈ ದೈತ್ಯರ ಪ್ರಹಾರದಿಂದ ವಿಷ್ಣುವು ಸ್ವಲ್ಪಮಾತ್ರವೂ ಕದಲದೆ, ಪರ್ವತದಂತೆ ನಿಶ್ಚಲನಾಗಿದ್ದನು. ಆಗ ಕಾಲನೇಮಿಯು ಮತ್ತಷ್ಟು ಕೋಪದಿಂದ ದೊಡ್ಡದೊಂದು ಗದೆಯನ್ನೆತ್ತಿ ವಿಷ್ಣುವನ್ನೂ, ಅವನ ವಾಹನವಾಗಿದ್ದ ಗರುಡನನ್ನೂ ವೇಗದಿಂದ ಅಪ್ಪಳಿಸಿದನು. ಈ ಪ್ರಹಾರದಿಂದ ಗರುಡನು ಬಹಳವಾಗಿ ನೊಂದುದನ್ನು ನೋಡಿ ಶ್ರೀವಿಷ್ಣುವು ಒಡನೆಯೇ ತನ್ನ ಚಕ್ರವನ್ನೆತ್ತಿ ಆ ಕಾಲನೇಮಿಯ ನೂರು ತೋಳುಗಳನ್ನೂ, ನೂರು ತಲೆಗಳನ್ನೂ ಕತ್ತರಿಸಿಬಿಟ್ಟನು. ಅಲ್ಲಿದ್ದ ಇತರ ದೈತ್ಯರನ್ನೂ ಸಂಹರಿಸಿದನು. ದೇವತೆಗಳನ್ನೂ, ಋಷಿಗಳನ್ನೂ ಅವರವರ ಸ್ಥಾನದಲ್ಲಿ ನೆಲೆಗೊಳಿಸಿದನು. ಹೀಗೆ ಭಗವಂತನು ದೇವತೆಗಳನ್ನು ರಕ್ಷಿಸಿ, ಬ್ರಹ್ಮನೊಡಗೂಡಿ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಮಹರ್ಷಿಗಳಿಂದ ಸ್ತುತಿಸಲ್ಪಡುತ್ತ ಅಲ್ಲಿಂದ ತನಗೆ ನಿತ್ಯನಿವಾಸಸ್ಥಾನವಾಗಿಯೂ ಎಲ್ಲಕ್ಕಿಂತಲೂ ಮೇಲಾಗಿಯೂ ಇರುವ ದಿವ್ಯವೈಕುಂಠವನ್ನು ಸೇರಿ, ಅಲ್ಲಿ ಸಹಸ್ರಶೀರ್ಷನಾಗಿ ಯೋಗನಿದ್ರೆಗೆ ಆರಂಭಿಸಿದನು. ಅವ್ಯಯನೂ, ಆದಿದೇವನೂ ಆದ ಆ ಮಹಾವಿಷ್ಣುವು, ಜಗತ್ತನ್ನೆಲ್ಲ ಮಾಯೆಯಿಂದ ಮರೆಸತಕ್ಕ ತನ್ನ ಯೋಗನಿದ್ರೆಯನ್ನು ಹಿಡಿದು ನಿದ್ರೆಯಿಂದ ಮೈಮರೆತಂತೆ ಸುಖವಾಗಿ ಮಲಗಿದ್ದನು. ಹೀಗೆ ಆ ಮಹಾತ್ಮನು ಶಯನಿಸಿದಮೇಲೆ ಮನುಷ್ಯರ ಲೆಕ್ಕದಲ್ಲಿ ಮೂವತ್ತಾರುಲಕ್ಷ ವರ್ಷಗಳು ಕಳೆದುಹೋದುವು. ಇಷ್ಟರಲ್ಲಿ ಕೃತ ತ್ರೇತಾಯುಗಗಳೆರಡೂ ಕಳೆದು, ದ್ವಾಪರ ಯುಗವು ಮುಗಿಯುತ್ತ ಬರುವಷ್ಟರಲ್ಲಿ, ಆ ಭಗವಂತನು ತನ್ನ ಯೋಗನಿದ್ರೆಯಿಂದ ಎಚ್ಚರಗೊಂಡನು. ಹೀಗೆ ಎಚ್ಚರಗೊಂಡಮೇಲೆ, ಬ್ರಹ್ಮಾದಿದೇವತೆಗಳಿಂದಲೂ, ಮಹರ್ಷಿಗಳಿಂದಲೂ ಸ್ತುತಿಸಲ್ಪಡುತ್ತ, ತಿರುಗಿ ದೇವಕಾರ್ಯಾರ್ಥವಾಗಿ ದೇವತೆಗಳ ಸಭೆಗೆ ಬಂದನು. ಮೇರುಪರ್ವತದ ಶಿಖರದಲ್ಲಿ ದಿವ್ಯಕಾಂತಿಯಿಂದ ಜ್ವಲಿಸುವಂತಿರುವ ಆ ಸಭೆಗೆ ಸಮಸ್ತ ದೇವತೆ

ಗಳೂ ಬ್ರಹ್ಮನನ್ನು ಮುಂದಿಟ್ಟುಕೊಂಡು ಬಂದುಸೇರಿದರು. ಅವರೆಲ್ಲರೂ ಆ ಸಭೆಯಲ್ಲಿ ಕುಳಿತಮೇಲೆ, ಸ್ವಲ್ಪಹೊತ್ತು ಅದು ನಿಶ್ಯಬ್ದವಾಗಿದ್ದಿತು. ಇಷ್ಟರಲ್ಲಿಯೇ ಭೂದೇವಿಯು, ಬಹಳ ವ್ಯಸನದಿಂದ ಕುಗ್ಗಿದಕಂಠದೊಡನೆ ಅಲ್ಲಿದ್ದ ದೇವತೆಗಳನ್ನು ಕುರಿತು ಹೀಗೆಂದು ಹೇಳುವಳು. "ಎಲೈ ದೇವಶ್ರೇಷ್ಠರೇ! ಬಲಾಢ್ಯರಾದ ಕ್ಷತ್ರಿಯರ ಸೈನ್ಯಗಳಿಂದ ನನಗೆ ಭಾರವು ಹೆಚ್ಚಾಗುತ್ತಿದೆ. ನಾನು ಬಹಳ ಕಷ್ಟದಿಂದ ಜೀವಿಸುತ್ತಿರುವೆನು. ಒಂದೊಂದು ನಗರದಲ್ಲಿಯೂ ಅಲ್ಲಲ್ಲಿನ ರಾಜರು ದಿನದಿನಕ್ಕೆ ಸೈನ್ಯಗಳನ್ನು ವೃದ್ಧಿಗೊಳಿಸುತ್ತಿರುವರು. ಕೋಟಿಕೋಟಿ ಸಂಖ್ಯೆಯಿಂದ ಅವರ ಸೈನ್ಯಗಳು ಹೆಚ್ಚುತ್ತಿವೆ. ದೇಶದೇಶದಲ್ಲಿಯೂ ಸಾವಿರಾರುಸಂಖ್ಯೆಯ ಮನೆಗಳುಳ್ಳ ಗ್ರಾಮಗಳೂ ಪುರಗಳೂ ಹೆಚ್ಚುತ್ತಿವೆ. ಹೀಗೆ ಅಸಂಖ್ಯಾತ ಸೇನೆಗಳಿಂದಲೂ, ಗ್ರಾಮಗಳಿಂದಲೂ, ನಗರಗಳಿಂದಲೂ, ಜನಸಮೂಹದಿಂದಲೂ ನನಗೆ ಮೇಲೆಮೇಲೆ ಭಾರವು ಹೆಚ್ಚುತ್ತಿದೆ. ನನಗೆ ಆ ಭಾರವನ್ನು ತಡೆಯಲು ಶಕ್ತಿಯಿಲ್ಲದಿದೆ. ಅಲ್ಲದೆ ಭೂಮಿಯಮೇಲಿನ ಜನಗಳಿಗೆ ದುರಾತ್ಮರಾದ ದೈತ್ಯರ ಬಾಧೆಯೂ ಹೆಚ್ಚುತ್ತಿದೆ. ಈ ನನ್ನ ಕಷ್ಟವನ್ನು ಪರಿಹರಿಸುವುದಕ್ಕೆ ನೀವೆಲ್ಲರೂ ಉಪಾಯವನ್ನು ಯೋಚಿಸಬೇಕು" ಎಂದಳು. ಆಗ ಶ್ರೀಮನ್ನಾರಾಯಣನು ಭೂಮಿಯ ಪ್ರಾರ್ಥನೆಯನ್ನು ಕೇಳಿ ಕನಿಕರಗೊಂಡು, ಆಗಲೇ ಅಲ್ಲಿದ್ದ ದೇವತೆಗಳಿಗೆಲ್ಲ ಭೂಮಿಯಲ್ಲಿ ಅವತರಿಸಬೇಕೆಂದು ನಿಯಮಿಸಿ, ತಾನೂ ಭೂಮಿಯಲ್ಲಿ ಮನುಷ್ಯನಾಗಿ ಅವತರಿಸುವುದಕ್ಕೆ ಸಂಕಲ್ಪಿಸಿದನು.

ಇದು ಐವತ್ತೊಂದನೆಯ ಅಧ್ಯಾಯವು.



ವಿಷ್ಣುವು ಕೃಷ್ಣರೂಪದಿಂದ ಅವತರಿಸಿದುದು. ಇಂದ್ರಾದಿ ದೇವತೆಗಳು ಶಿಶುರೂಪದಿಂದಿದ್ದ ಕೃಷ್ಣನನ್ನು ಸ್ತುತಿಸಿ, ತಮ್ಮ ಲೋಕಕ್ಕೆ ಹೋದುದು. ಕೃಷ್ಣನು ನಡೆಸಿದ ಶಕಟಾಸುರವಧೆ, ಯಮಳಾರ್ಜುನಭಂಜನ, ಬೃಂದಾವನ ವಿಹಾರ, ಮುಂತಾದ ಲೀಲೆಗಳು.

ಓ ಧರ್ಮರಾಜಾ! ಭಗವಂತನಾದ ವಿಷ್ಣುವು ಕೃಷ್ಣಾವತಾರದಲ್ಲಿ ನಡೆಸಿದ ಚರಿತ್ರಗಳನ್ನೂ, ಕಾರ್ಯಗಳನ್ನೂ ವಿವರಿಸುವೆನು ಕೇಳು. ಆ ವಾಸುದೇವನ ಮಹಿಮೆಯು ಅಪಾರವಾದುದು! ಆ ಮಹಾತ್ಮನ ಕಾರ್ಯಗಳೆಲ್ಲವೂ ದೇವತೆಗಳ ಮತ್ತು ಮನುಷ್ಯರ ಹಿತಕ್ಕಾಗಿಯೇ ನಡೆದುವು. ಸರ್ವಾಂತರಾತ್ಮನೂ, ಸಮಸ್ತಲೋಕಪ್ರಭುವೂ, ಸರ್ವಸಮರ್ಥನೂ ಆದ ಆ ಮಹಾವಿಷ್ಣುವು, ತನಗೆ ವೈಕುಂಠದಲ್ಲಿ ಬೇಸರವು ಹುಟ್ಟಿದಾಗ, ತನ್ನ ಲೀಲೆಯಿಂದ ಭೂಮಿಯಲ್ಲಿ ಇಂತಹ ಅವತಾರಗಳನ್ನು ಎತ್ತುವನು. ಈ ಅವತಾರಗಳಲ್ಲಿ ಲೋಕಹಿತಕ್ಕೂ, ದುಷ್ಟರಾದ ದೈತ್ಯರ ವಿನಾಶಕ್ಕೂ, ಬೇಕಾದ ಕಾರ್ಯಗಳನ್ನು ಮಾಡುವನು. ಇದೇ ಉದ್ದೇಶದಿಂದ ಆಗ ಭೂಮಿಯಲ್ಲಿ ಅವತರಿಸಬೇಕೆಂದು ಬಯಸಿದ ಆ ವಿಷ್ಣುವು, ತನ್ನ ಸಹಾಯಕ್ಕಾಗಿ, ದೇವತೆಗಳನ್ನು ಆಯಾ ಅಂಶಗಳಿಂದ ಅವತರಿಸುವಂತೆ ಪ್ರೇರಿಸಿದನು. ಇದಕ್ಕಾಗಿ ಆ ಭಗವಂತನು, ಮರುತ್ತುಗಳು, ವಸುಗಳು, ಸೂರ್ಯಚಂದ್ರರು, ಗಂಧರ್ವರು, ಅಪ್ಸರಸ್ಸುಗಳು, ರುದ್ರನು, ಆದಿತ್ಯರು, ಅಶ್ವಿನೀದೇವತೆಗಳು ಮೊದಲಾದವರೆಲ್ಲರನ್ನೂ ಕರೆಸಿ, 'ನೀವೆಲ್ಲರೂ ಭೂಲೋಕದಲ್ಲಿ ಹುಟ್ಟಬೇಕು' ಎಂದು ನಿಯಮಿಸಿದನು. ಅದರಂತೆಯೇ ತಿರ್ಯಕ್ಕುಗಳು ಮೊದಲಾದ ಸಕಲಜಂಗಮಪ್ರಾಣಿಗಳನ್ನೆಲ್ಲ ಆಯಾ ದೇವತೆಗಳೊಡನೆ ಭೂಮಿಯಲ್ಲಿ ನಾನಾರೂಪದಿಂದ ಜನಿಸಬೇಕೆಂದು ಸಂಕಲ್ಪಿಸಿ, ತನ್ನ ಕಾರ್ಯಕ್ಕಾಗಿ ಅವುಗಳನ್ನೂ ಸೃಷ್ಟಿಸಿದನು. ಆಮೇಲೆ ತನ್ನನ್ನು ತಾನೇ ಹಲವು ರೂಪಗಳನ್ನಾಗಿ ಮಾಡಿಕೊಂಡು, ಲೀಲಾರ್ಥವಾಗಿ ಗೊಲ್ಲನಂತೆ ಕಾಣಿಸುತ್ತಾ, ಪುರುಷೋತ್ತಮನಾದ ಅವನು ದನಗಳನ್ನು ಮೇಯಿಸುವವನಾದನು. ಅವನಿಗೆ ಈ ಜನ್ಮವು ಕರ್ಮಸಂಬಂಧವಾಗಿ ಬಂದುದಲ್ಲ. ತನ್ನ ಇಚ್ಛೆ

ಯಿಂದ ತಾನೇ ಕೈಕೊಂಡುದು. ಆ ಕೃಷ್ಣನು ಅವತರಿಸಿದ ಕಾಲದಲ್ಲಿ ಸಂತೋಷದಿಂದ ಸಮುದ್ರಗಳು ಉಕ್ಕಿದುವು. ಬೆಟ್ಟಗಳು ಅಲುಗಿದುವು. ಅಗ್ನಿಯು ಹೊಗೆಯಿಲ್ಲದೆ ಉರಿಯುತಿತ್ತು. ಗಾಳಿಯು ಸುಖಸ್ಪರ್ಶವಾಗಿ ಬೀಸುತಿತ್ತು. ವಾತಾವರಣದಲ್ಲಿ ಧೂಳೆಲ್ಲವೂ ಅಡಗಿ ಸ್ವಚ್ಛವಾಯಿತು. ಗ್ರಹನಕ್ಷತ್ರಗಳಿಗೆಲ್ಲ ಒಂದು ಹೊಸವಿಧವಾದ ಪ್ರಕಾಶವುಂಟಾಯಿತು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ದೇವತೆಗಳು ಪುಷ್ಪವರ್ಷವನ್ನು ಕರೆದರು. ಮಹರ್ಷಿಗಳು ಸಂತೋಷಗೊಂಡು ಮಂಗಳಶ್ಲೋಕಗಳಿಂದ ಅವನನ್ನು ಸ್ತೋತ್ರಮಾಡಿದರು. ನಾರದಾದಿ ಮಹರ್ಷಿಗಳೆಲ್ಲ ಸಂತೋಷದಿಂದ ಸ್ತುತಿಮಾಡುವುದನ್ನು ಕಂಡು ಗಂಧರ್ವರು ಗಾನಮಾಡತೊಡಗಿದರು. ಅಪ್ಸರಸ್ಸುಗಳು ನರ್ತಿಸಿದರು. ಆಗ ಸಹಸ್ರಾಕ್ಷನಾದ ದೇವೇಂದ್ರನು ಕೃಷ್ಣನು ಅವತರಿಸಿದ ಸ್ಥಳಕ್ಕೆ ಬಂದು, ಅಲ್ಲಿದ್ದ ಮಹರ್ಷಿಗಳನ್ನೆಲ್ಲ ಪೂಜಿಸಿ, “ ಓ ಮಹಾತ್ಮ ! ಲೋಕಕರ್ತನಾದ ಈ ಭಗವಂತನು ಲೋಕಹಿತಕ್ಕಾಗಿ ಮಾಡಬೇಕಾದ ಕಾರ್ಯಗಳನ್ನು ಮಾಡಿ, ಆಮೇಲೆ ತಿರುಗಿ ತನ್ನ ಲೋಕಕ್ಕೆ ತೆರಳುವನು ” ಎಂದು ಹೇಳಿ, ಆ ಕೃಷ್ಣನನ್ನು ಸ್ತುತಿಸಿ, ಆ ಮಹರ್ಷಿಗಳೊಡನೆ ಹಿಂತಿರುಗಿ ಹೊರಟುಹೋದನು. ಕೃಷ್ಣನು ಅಲ್ಲಿ ಬಂದಿದ್ದ ದೇವತೆಗಳೆಲ್ಲರಿಗೂ ತನ್ನ ನಿಜಸ್ವರೂಪವನ್ನು ತೋರಿಸಿ ಅನುಮತಿಯನ್ನು ಕೊಟ್ಟು ಕಳುಹಿಸಿದಮೇಲೆ, ತನ್ನ ಪರಸ್ವರೂಪವನ್ನು ಮರೆಸಿಕೊಂಡು, ಸಾಮಾನ್ಯಬಾಲನಂತೆ ನಟಿಸುತ್ತ, ಅನೇಕ ವರ್ಷಗಳ ವರೆಗೆ ನಂದಗೋಪನ ಮನೆಯಲ್ಲಿ ಇರುತಿದ್ದನು. ಹೀಗಿರುವಾಗ ಒಮ್ಮೆ ನಂದಪತ್ನಿಯಾದ ಯಶೋದೆಯು, ಒಂದು ಬಂಡಿಯ ಕೆಳಗೆ ಮಲಗಿದ್ದ ಆ ಶಿಶುವನ್ನು ಹಾಗೆಯೇ ಬಿಟ್ಟು ಯಮುನಾನದಿಗೆ ಹೋದಳು. ಆಗ ಕೃಷ್ಣನು ಶಿಶುಲೀಲೆಯಿಂದ ಕೈಕಾಲುಗಳನ್ನಾಡಿಸುತ್ತ, ಇಂಪಾದ ಧ್ವನಿಯಿಂದ ಅಳುತ್ತ, ಕಾಲನ್ನೊದರುವಾಗ, ಅವನ ಕಾಲಿನ ಹೆಬ್ಬೆರಳು, ಪಕ್ಕದಲ್ಲಿದ್ದ ಬಂಡಿಗೆ ತಗುಲಿ ಆ ಬಂಡಿಯು ಪುಡಿಪುಡಿಯಾಯಿತು. ಕೃಷ್ಣನು ಹೀಗೆ ತನ್ನ ಒಂದೇಕಾಲಿಂದ ಶಕಟವನ್ನು (ಬಂಡಿ) ಮುರಿದು ಕೆಡಹಿ, ಹಾಲಿಗಾಗಿ ಅಳುವವನಂತೆ ಮೈಯನ್ನೊದರಿ ಅಳುವುದಕ್ಕಾರಂಭಿಸಿದನು. ಆ ಶಿಶುವಿನ ಕಾಲಿನ ಒದೆತದಿಂದ ಆ ಬಂಡಿಯ ಗುಂಬ, ಮೇ

ಲಿನ ಗೂಡು, ಗೂಡಿನ ಚಾಪೆ, ಇವೆಲ್ಲ ಪುಡಿಪುಡಿಯಾಗಿ ಬಿದ್ದಿರುವು ದನ್ನು ನೋಡಿ ಜನರೆಲ್ಲರೂ ಆಶ್ಚರ್ಯದಿಂದ ಬೆರಗಾದರು. ಅಸಾಧಾರಣ ಶಕ್ತಿಯುಳ್ಳ ಆ ಶಿಶುವು ಕಂಸನ ಕಡೆಯವನಾದ ಶಕಟಾಸುರನೆಂಬವನನ್ನು ತಾನು ಮಲಗಿದ್ದಹಾಗೆಯೇ ಕೊಂದು ಕೆಡಹಿದ ಈ ಆಶ್ಚರ್ಯವನ್ನು ಶೂರಸೇನದೇಶದ ಜನರೆಲ್ಲರೂ ಪ್ರತ್ಯಕ್ಷವಾಗಿ ಕಂಡರು. ಇದಾದಮೇಲೆ ದೊಡ್ಡದೇಹವುಳ್ಳ ಪೂತನಿಯೆಂಬ ರಾಕ್ಷಸಿಯೊಬ್ಬಳು ವಿಷಪೂರಿತವಾದ ಸ್ತನದಿಂದ ಕೃಷ್ಣನಿಗೆ ಮೊಲೆಯೂಡಿಸಬೇಕೆಂದು ಬಂದಳು. ದೊಡ್ಡ ಸ್ತನಗಳುಳ್ಳ ಅವಳನ್ನೂ ಇವನು ಹಾಲುಕುಡಿಯುವ ವ್ಯಾಜದಿಂದ ಕೊಂದನು. ಆಮೇಲೆ ಒಮ್ಮೆ ಆಕಾಶದಲ್ಲಿ ಚಂದ್ರಸೂರ್ಯರಿಬ್ಬರೂ ಕೂಡಿದಂತೆ ಕೃಷ್ಣಬಲರಾಮರಿಬ್ಬರೂ ಸೇರಿ ವನಸಂಚಾರಕ್ಕಾಗಿ ಹೊರಟರು. ಮಹಾಸರ್ಪದಂತೆ ತೋಳುಗಳುಳ್ಳ ಅವರಿಬ್ಬರೂ ಅಲ್ಲಲ್ಲಿ ಯಥೇಚ್ಛವಾಗಿ ಸುಳಿದಾಡುತ್ತ, ಮೈಯೆಲ್ಲ ಧೂಳು ತುಂಬಿ, ಮಕ್ಕಳಾಟಿಕೆಗಳನ್ನಾಡುವಾಗ ಕೆಲವು ಕಡೆ ನಡೆದುಹೋಗುವರು! ಕೆಲವು ಕಡೆ ಅಂಬೆಗಾಲಿನಿಂದ ಹೋಗುವರು! ಆಗಾಗ ಮೊಸರು ಕಡೆಯುತಿದ್ದ ಕಡೆಗಳಿಗೆ ಹೋಗಿ ಗಡಿಗೆಯ ಮೊಸರನ್ನು ಕುಡಿದುಬಿಡುವರು. ಒಮ್ಮೊಮ್ಮೆ ಕೃಷ್ಣನು ಗೋಪಿಯರ ಮನೆಯೊಳಗೆ ಹೊಕ್ಕು, ಅಲ್ಲ ವಿಶೇಷವಾಗಿ ಬೆಣ್ಣೆಯನ್ನು ಕದ್ದು ತಿನ್ನುವನು. ಹೀಗೆ ಒಮ್ಮೆ ಬೆಣ್ಣೆಯನ್ನು ಕದ್ದು ತಿನ್ನುತ್ತಿರುವಾಗ, ಗೋಪಿಯರು ಅವನನ್ನು ಹಿಡಿದು ಒಂದು ಒರಳಿಗೆ ಕಟ್ಟಿಹಾಕಿದರು. ಈ ಕೃಷ್ಣನಾದರೋ, ಸಣ್ಣ ಶಿಶುವಾಗಿದ್ದರೂ ಆ ಒರಳುಕಲ್ಲನ್ನು ತನ್ನೊಡನೆ ಎಳೆದುಕೊಂಡು ಹೋಗುತ್ತ, ಜತೆಯಾಗಿ ಬೆಳೆದಿದ್ದ ಎರಡು ಮತ್ತಿಮರಗಳ ನಡುವೆ ಹೋದನು. ಎರಡು ಮರಗಳ ನಡುವೆ ಸಿಕ್ಕಿಕೊಂಡ ಆ ಒರಳುಕಲ್ಲನ್ನು ಆ ಶಿಶುವು ಝಾಡಿಸಿ ಎಳೆದೊಡನೆ ಆ ಮರಗಳೆರಡೂ ಬುಡಸಹಿತವಾಗಿ ಮುರಿದುಬಿದ್ದುವು. ಧರ್ಮಪುತ್ರಾ! ಅದೊಂದು ಆಶ್ಚರ್ಯಕರವಾದ ಸಂಗತಿಯಾಯಿತು. (ಆ ಮರಗಳೆರಡೂ, ಇಬ್ಬರು ಗಂಧರ್ವರಾಗಿ ಹಾರಿಹೋದರು). ಆಮೇಲೆ ಆ ರಾಮಕೃಷ್ಣರಿಬ್ಬರೂ ಗೋಕುಲದಲ್ಲಿಯೇ ತಮ್ಮ ಶೈಶವವನ್ನು ಕಳೆದರು. ಅವರಿಗೆ ಏಳು ವಯಸ್ಸಾಯಿತು. ಅವರಲ್ಲಿ ಒಬ್ಬನು ನೀಲವಸ್ತ್ರವನ್ನುಟ್ಟವನು. ಮತ್ತೊಬ್ಬನು ಹೊಂಬಣ್ಣದ ಬಟ್ಟೆ

ಯುಟ್ಟವನು. ಒಬ್ಬನು ಹೊಂಬಣ್ಣದ ಗಂಧವನ್ನು ಲೇಪಿಸಿರುವನು. ಮತ್ತೊಬ್ಬನು ಬಿಳೀಗಂಧವನ್ನು ಲೇಪಿಸಿರುವನು. ಇಬ್ಬರೂ ತಲೆಯಲ್ಲಿ ಕಾಕಪಕ್ಷಗಳೆಂಬ ಶಿಖೆಗಳನ್ನು (ಜುಲ್ಪಿಗಳನ್ನು) ಬಿಟ್ಟುಕೊಂಡಿರುವರು. ಇಬ್ಬರೂ ಅಲ್ಲಲ್ಲಿ ಎಲೆಗಳನ್ನು ಕಿತ್ತುಕೊಂಡು, ಅದರಿಂದ ವಿಧವಿಧವಾದ ವಾದ್ಯಗಳನ್ನು ಬಾರಿಸುತ್ತ ದನಗಳನ್ನು ಕಾಯುವರು. ತಲೆಯಲ್ಲಿ ಮೂರು ಶಿಖೆಗಳಿಂದ ಅವರಿಬ್ಬರೂ ಮೂರು ಹೆಡೆಯ ಹಾವುಗಳಂತೆ ಕಾಣುವರು! ಇಬ್ಬರಿಗೂ ಕಿವಿಯಮೇಲೆ ನವಿಲು ಗರಿ! ತಲೆಯಲ್ಲಿ ಚಿಗುರೆಲೆಗಳು! ಎದೆಯಲ್ಲಿ ವನಮಾಲಿಕೆ! ಈ ಅಲಂಕಾರಗಳಿಂದ ಸಾಲವೃಕ್ಷದ ಕಂದುಗಳಂತೆ ಕಾಣುತ್ತಿರುವರು. ಕಮಲಗಳನ್ನು ತಲೆಯಲ್ಲಿ ಸಿಕ್ಕಿಸಿಕೊಂಡು, ದಾರಗಳಿಂದ ಯಜ್ಞೋಪವೀತಗಳನ್ನು ಮಾಡಿ, ಒಂದು ಕೈಯಲ್ಲಿ ಕಲ್ಲಿಯನ್ನೂ ಮತ್ತೊಂದು ಕೈಯಲ್ಲಿ ಸೋರೆಬುರುಡೆಯನ್ನೂ ಹಿಡಿದು, ಗೊಲ್ಲರ ವೇಷಕ್ಕೆ ತಕ್ಕಂತೆ ಕೊಳಲನ್ನು ಬಾರಿಸುತ್ತ, ಆ ಕಾಡಿನಲ್ಲಿ ಒಂದೊಂದು ವೇಳೆ ಆಟವಾಡುವುದು, ಒಂದೊಂದು ವೇಳೆ ವಿನೋದದಿಂದ ಕುಳಿತು ಮಾತಾಡುವುದು, ಮತ್ತೊಂದು ವೇಳೆ ಮರದೆಲೆಗಳನ್ನು ಹಾಸಿ ಮಲಗಿಕೊಂಡು ಸುಖನಿದ್ರೆಯನ್ನು ಮಾಡುವುದು, ಹೀಗೆ ಕಾಲವನ್ನು ಕಳೆಯುತ್ತ ತಮ್ಮ ದಿವ್ಯಸೌಂದರ್ಯದಿಂದ ಆ ವನಕ್ಕೆಲ್ಲ ಅಲಂಕಾರಭೂತರಾಗಿದ್ದರು. ಆಮೇಲೆ ಒಮ್ಮೆ ಆ ವಸುದೇವಪುತ್ರರಿಬ್ಬರೂ, ಬೃಂದಾವನಕ್ಕೆ ಹೋಗಿ, ಅಲ್ಲಿ ದನಗಳನ್ನು ಮೇಯಿಸುತ್ತ ವಿನೋದದಿಂದಿದ್ದರು.

ಇದು ಐವತ್ತೆರಡನೆಯ ಅಧ್ಯಾಯವು.



## ಕಾಳಿಯಮರ್ದನ, ಗೋವರ್ಧನೋದ್ಧರಣ, ಕಂಸವಧ ಮುಂತಾದ ವೃತ್ತಾಂತಗಳು.

ಓ ಧರ್ಮರಾಜಾ! ಕೇಳು! ಒಮ್ಮೆ ಕೃಷ್ಣನು ತನ್ನಣ್ಣನಾದ ಬಲರಾಮನಿಲ್ಲದೆ ತಾನೊಬ್ಬನೇ ಕಾಡಿನಲ್ಲಿ ದನಗಳನ್ನು ಮೇಯಿಸುತಿದ್ದನು. ಆಗ ಆ ಕೃಷ್ಣನ ದಿವ್ಯಸೌಂದರ್ಯವನ್ನು ಕೇಳಬೇಕೆ? ಅಂದವಾದ ಮು

ಖದ ಸೊಬಗು! ತಲೆಯಲ್ಲಿ ಮೂರೆಳೆಯ ಶಿಖೆ! ಶ್ಯಾಮಲವರ್ಣವಾದ ದೇಹಕಾಂತಿ! ಕಮಲದಂತೆ ಕಣ್ಣುಗಳು. ಚಂದ್ರನಲ್ಲಿರುವ ಕಪ್ಪುರೇಖೆಯಂತೆ ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆ. ಕತ್ತಿನಲ್ಲಿ ಜನಿವಾರದ ನೂಲೆಳೆಗಳು. ನಡುವಿನಲ್ಲಿ ಪೀತಾಂಬರವೆಂಬ ಹೊಂಬಣ್ಣದ ಬಟ್ಟೆ. ಮೈಮೇಲೆ ಪೂಸಿದ ಬಿಳೀಗಂಧದ ಕೆಸರು. ಕಪ್ಪಾಗಿ ಬಾಗಿದ ಮುಂಗುರುಳು. ಮಂದಮಾರುತದಿಂದ ಅಲುಗುತ್ತಿರುವ ತಲೆಯಲ್ಲಿ ಸಿಕ್ಕಿಸಿದ ನವಿಲುಗರಿ! ಇಂತಹ ರೂಪದೊಡನೆ ಕೃಷ್ಣನು ಕಾಡಿನಲ್ಲಿ ದನಗಳನ್ನು ಮೇಯಿಸುತ್ತಿರುವಾಗ ಒಮ್ಮೆ ಹಾಡುವನು! ಒಮ್ಮೆ ಆಡುವನು! ಮತ್ತೊಮ್ಮೆ ಕುಣಿಯುವನು! ಇನ್ನೊಮ್ಮೆ ನಗುವನು! ದನಗಳ ಬೇಸರವನ್ನಾರಿಸಿ, ಸಂತೋಷಗೊಳಿಸುವುದಕ್ಕಾಗಿ ಆಗಾಗ ಕೊಳಲನ್ನು ಬಾರಿಸುವನು. ಈ ರೀತಿಯಾಗಿ ಕಾಲವನ್ನು ಕಳೆಯುತಿದ್ದನು. ಒಮ್ಮೆ ವರ್ಷಾಕಾಲದಲ್ಲಿ ಕೃಷ್ಣನು ರಮ್ಯವಾದ ವನಪ್ರದೇಶಗಳಲ್ಲಿ ಸುತ್ತುತ್ತ, ಒಂದು ತೋಪಿನಲ್ಲಿ ಸಂತೋಷದಿಂದ ಆಡುತಿದ್ದನು. ಅಲ್ಲಿ ತನ್ನ ಗೋವುಗಳನ್ನು ಮೇಯಿಸಿಕೊಂಡು ಸುತ್ತಿಬರುವಾಗ, ಭಾಂಡೀರಕವೆಂಬ ಒಂದು ಆಲದ ಮರವನ್ನು ನೋಡಿ, ಅದರ ನೆರಳಿನಲ್ಲಿ ವಿಶ್ರಾಂತಿಗಾಗಿ ಕುಳಿತನು. ತನಗೆ ಸಮಾನವಯಸ್ಕರಾದ ಬೇರೆ ಕೆಲವು ಗೊಲ್ಲರ ಮಕ್ಕಳೊಡನೆ ಸೇರಿ ಹಗಲೆಲ್ಲ ಆಟವಾಡುತಿದ್ದನು. ಆಗ ಕೆಲವು ಬಾಲಕರು ಅವನಿಗೆ ಒಳ್ಳೇ ಆಟದ ಸಾಮಾನುಗಳನ್ನು ತಂದುಕೊಟ್ಟು ಸಂತೋಷಗೊಳಿಸುತ್ತಿರುವರು. ಕೆಲವರು ಅವನಮುಂದೆ ಸಂತೋಷದಿಂದ ಹಾಡುವರು. ಬೇರೆಕೆಲವರು ಆ ಗೋಪಾಲಕೃಷ್ಣನನ್ನೇ ಕುರಿತು ಹಾಡುಗಳನ್ನು ಹಾಡುವರು. ಇವರು ಹಾಡುವಾಗ ಕೃಷ್ಣನು ಹಸುರೆಲೆಗಳಿಂದ ವಿಚಿತ್ರವಾದ ವಾದ್ಯಗಳನ್ನು ನುಡಿಸುವನು. ಕೆಲವುವೇಳೆ ಅವರ ಹಾಡುಗಳನ್ನನುಸರಿಸಿ ಕೊಳಲೂದುವನು. ಮತ್ತೆ ಕೆಲವುವೇಳೆ ಸೋರೆಕಾಯಿಯ ವೀಣೆಯನ್ನು ನುಡಿಸುವನು. ಹೀಗೆ ವಿಧವಿಧವಾಗಿ ಆಟವನ್ನಾಡುತಿದ್ದ ಕೃಷ್ಣನು, ಆ ಬಾಲ್ಯದಲ್ಲಿ ಕೂಡ ಲೋಕಹಿತಕ್ಕಾಗಿ ಎಷ್ಟೋ ಅದ್ಭುತಕಾರ್ಯಗಳನ್ನು ನಡೆಸಿರುವನು. ಎಲ್ಲರೂ ನೋಡುತಿದ್ದಹಾಗೆಯೇ ಕೃಷ್ಣನು ತಾನು ಕುಳಿತಿದ್ದ ಮರವನ್ನೇರಿ, ಸಮೀಪದಲ್ಲಿದ್ದ ಮಡುವಿಗೆ ಹಾರಿ, ಅಲ್ಲಿದ್ದ ಒಂದು ದೊಡ್ಡ ಹಾವಿನ ಹೆಡೆ

ಯಮೇಲೆ ಕುಣಿದಾಡಿದನು. ಆಮೇಲೆ ಜನಗಳಿಗೆಲ್ಲ ಭಯವನ್ನುಂಟು ಮಾಡುತಿದ್ದ ಕಾಳೀಯನೆಂಬ ಆ ಸರ್ಪವನ್ನು ನಿಗ್ರಹಿಸಿದನು. ಹೀಗೆಯೇ ಕೃಷ್ಣನು ಬಲರಾಮನೊಡಗೂಡಿ ಆಟವಾಡುತ್ತ, ಎಷ್ಟೋ ಮಂದಿ ರಾಕ್ಷಸ ರನ್ನು ಕೊಂದನು. ಒಮ್ಮೆ ಬಲರಾಮನು ತಾಳೆಯಮರದ ಕಾಡಿನಲ್ಲಿ ಕತ್ತೆ ಯರೂಪದಿಂದ ಬಂದ ಧೇನುಕನೆಂಬ ರಾಕ್ಷಸನನ್ನು ಬಡಿದು ಕೆಡಹಿದನು. ಒಮ್ಮೆ ರಾಮಕೃಷ್ಣರಿಬ್ಬರೂ ದೊಡ್ಡ ಮಂದೆಯನ್ನು ಅಟ್ಟಿಕೊಂಡುಹೋ ಗಿ, ಕಾಡಿನಲ್ಲಿ ಮೇಯಿಸುತ್ತಿರುವಾಗ ಸಂತೋಷದಿಂದ ಆ ವನಗಳನ್ನೆಲ್ಲ ಸುತ್ತಿ ನೋಡುತಿದ್ದರು. ಆಗ ಒಮ್ಮೊಮ್ಮೆ ಅಟ್ಟಹಾಸದಿಂದ ಕೂಗುವರು. ಅಲ್ಲಿದ್ದ ಮರಗಳನ್ನೆಲ್ಲ ಹುಡುಕುತ್ತಿರುವರು. ಆಗಾಗ ಹಸುಗಳನ್ನು ಹೆಸ ರುಹಿಡಿದು ಕರೆಯುತ್ತಿರುವರು. ಆಗಾಗ ಲೋಕದಲ್ಲಿ ವಾಡಿಕೆಯಾದ ಆಟ ಗಳನ್ನಾಡುವರು. ಹೀಗೆ ಸಮಸ್ತದೇವತೆಗಳಿಂದಲೂ ಪೂಜಿತರಾದ ಅವ ರಿಬ್ಬರೂ, ಮನುಷ್ಯಸ್ವಭಾವವನ್ನು ಹಿಡಿದು, ಮನುಷ್ಯಜಾತಿಗೂ, ಮನು ಷ್ಯಗುಣಗಳಿಗೂ ತಕ್ಕ ಆಟವನ್ನಾಡುತ್ತ, ಗೊಲ್ಲರ ಹುಡುಗರೊಡನೆ ಕಲೆತು ಕಾಡುಗಳಲ್ಲಿ ವಿಹರಿಸುತಿದ್ದರು. ಹೀಗಿರುವಾಗ ಒಮ್ಮೆ ಕೃಷ್ಣನು ಗೋಪಬಾಲಕರಿಂದ ನಡೆಸಲ್ಪಟ್ಟ ಗಿರಿಯಜ್ಞವೆಂಬ ಗೋವರ್ಧನಪೂಜೆ ಯಲ್ಲಿ ತಾನೇ ದೇವತಾರೂಪದಿಂದ ಅವರು ತಂದ ಪಾಯಸಾನ್ನವನ್ನೆಲ್ಲ ಭುಜಿಸಿದನು. ಗೊಲ್ಲರೆಲ್ಲರೂ ಆ ರೂಪದಲ್ಲಿದ್ದ ಕೃಷ್ಣನನ್ನು ಅತಿಭಕ್ತಿ ಯಿಂದ ಪೂಜಿಸಿದರು. ಆಗ ಅವನು ತನ್ನ ದಿವ್ಯರೂಪವನ್ನು ತೋರಿಸಿ, ದೇ ವತೆಗಳಿಂದಲೂ ಪೂಜಿಸಲ್ಪಟ್ಟನು. ಇನ್ನೂ ಶಿಶುವಾಗಿದ್ದ ಈ ಕೃಷ್ಣನು, ಆ ಸಂದರ್ಭದಲ್ಲಿ ಮಳೆಯಲ್ಲಿ ಸಿಕ್ಕಿಬಿದ್ದ ಗೋವುಗಳನ್ನು ಕಾಪಾಡುವುದಕ್ಕಾಗಿ ಆ ಗೋವರ್ಧನಪರ್ವತವನ್ನು ಕೈಯಿಂದೆತ್ತಿ, ಏಳು ದಿನಗಳವರೆಗೆ ಅದ ನ್ನೇ ಕೊಡೆಯಾಗಿ ಹಿಡಿದಿದ್ದನು. ಅಂತಹ ದುಷ್ಕರವಾದ ಕಾರ್ಯವನ್ನು ಕೇವಲ ಲೀಲಾಮಾತ್ರದಿಂದ ನಡೆಸಿದ ಆ ಕೃಷ್ಣನ ಮಹಿಮೆಯು ಲೋಕಾ ಶ್ಚರ್ಯಕರವಾಯಿತು. ಆಗ ದೇವರಾಜನಾದ ಇಂದ್ರನು ಭೂಮಿಗೆ ಬಂದು, ಬಾಲನಾದ ಕೃಷ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿ, ಕೈಮು ಗಿದು "ಗೋವಿಂದಾ!" ಎಂದು ಕೂಗಿ, ಅವನನ್ನು ಪ್ರೀತಿಯಿಂದಾಲಿಂಗಿ ಸಿ, ಅದೇ ಬಿರುದಿನಲ್ಲಿ ಅವನಿಗೆ ಪಟ್ಟಾಭಿಷೇಕಮಾಡಿ, ತನ್ನ ಲೋಕಕ್ಕೆ

ಹೋದನು. ಆಮೇಲೆ ಮತ್ತೊಮ್ಮೆ ಕೃಷ್ಣನು, ಎತ್ತಿನರೂಪದಿಂದ ಬಂದ ಅರಿಷ್ಟನೆಂಬ ರಾಕ್ಷಸನನ್ನು ಕೊಂದು, ಗೋವುಗಳಿಗೆ ಹಿತವನ್ನುಂಟು ಮಾಡಿದನು. ಇನ್ನೊಮ್ಮೆ ಕೃಷ್ಣನು ಕುದುರೆಯರೂಪದಿಂದ ಬಂದ ಕೇಶಿಯೆಂಬ ರಾಕ್ಷಸನನ್ನು ಕೊಂದನು. ಹತ್ತುಸಾವಿರ ಆನೆಗಳ ಬಲವುಳ್ಳ ಆ ಕುದುರೆಯು ಕೃಷ್ಣನಿದ್ದ ಕಾಡಿಗೆ ಬಂದಾಗ, ಕೃಷ್ಣನು ಕಮಲದಂತೆ ಕೋಮಲವಾದ ತನ್ನ ಕೈಯನ್ನೇ ವಜ್ರಾಯುಧಸಮಾನವನ್ನಾಗಿ ಮಾಡಿ ಅವನನ್ನು ಗುದ್ದಿ ಕೊಂದನು. ಆಮೇಲೆ ಕಂಸನ ಕಡೆಯ ಜಟ್ಟಿಯಾಗಿ ಬಂದ, ಚಾಣೂರನೆಂಬ ರಾಕ್ಷಸನನ್ನು ಸಂಹರಿಸಿದನು. ದೊಡ್ಡ ಸೇನಾಬಲವುಳ್ಳ ಸುನಾಮನೆಂಬವನನ್ನು ತನ್ನ ಬಾಹುಬಲದಿಂದಲೇ ಸಂಹರಿಸಿದನು. ಬಲರಾಮನು ಕಂಸನ ಸಭೆಯಲ್ಲಿ ಮುಷ್ಟಿಕನೆಂಬ ಮತ್ತೊಬ್ಬ ಜಟ್ಟಿಯನ್ನು ಕೊಂದನು. ಆಮೇಲೆ, ಕೃಷ್ಣನು ಎಲ್ಲರೂ ನೋಡುತ್ತಿರುವಹಾಗೆಯೇ ಕಂಸನನ್ನೂ, ಅವನ ಕಡೆಯ ಮಂತ್ರಿಗಳನ್ನೂ ಕೊಂದು, ಆ ಕಂಸನ ಸೆರೆಯಲ್ಲಿದ್ದ ಅವನ ತಂದೆಯಾದ ಉಗ್ರಸೇನನಿಗೆ ರಾಜ್ಯಾಭಿಷೇಕವನ್ನು ಮಾಡಿ, ಆಮೇಲೆ ತನ್ನ ತಂದೆತಾಯಿಗಳನ್ನು ಕಂಡು ನಮಸ್ಕರಿಸಿದನು. ಓ ಧರ್ಮರಾಜಾ! ಈ ಶ್ರೀಕೃಷ್ಣನೇ ಇಂತಹ ಅಸಾಧ್ಯಕಾರ್ಯಗಳನ್ನೆಲ್ಲ ಮಾಡಿರುವನು.

ಇದು ಐವತ್ತುಮೂರನೆಯ ಅಧ್ಯಾಯವು.

---

ರಾಮಕೃಷ್ಣರ ಗುರುಕುಲವಾಸವು. ಸಾಂದೀಪನಿಯೆಂಬ ತಮ್ಮ ಗುರುವಿಗೆ ಅವರು ಗುರುದಕ್ಷಿಣಾರೂಪವಾಗಿ ಶಿಶುವನ್ನು ಬದುಕಿಸಿತಂದುದು. ಕಂಸ ಜರಾಸಂಧರ ಪರಾಕ್ರಮಾದಿ ವರ್ಣನೆಗಳು.

ಓ ಧರ್ಮಪುತ್ರಾ! ಆಮೇಲೆ ರಾಮಕೃಷ್ಣರಿಬ್ಬರೂ, ಸಾಂದೀಪನಿಯೆಂಬ ಆಚಾರ್ಯನಲ್ಲಿ ಸೇರಿದರು. ಧರ್ಮಜ್ಞರೂ, ಧರ್ಮನಿಷ್ಠರೂ ಆದ ಆ ಬಾಲಕರು, ಅವಂತೀದೇಶದಲ್ಲಿದ್ದ ಆ ಆಚಾರ್ಯನ ಬಳಿ ಒಳ್ಳೇ ಕಠಿನವಾದ ಬ್ರಹ್ಮಚರ್ಯವನ್ನು ಹಿಡಿದು, ಗುರುಶುಶ್ರೂಷೆಯನ್ನು ಮಾಡುತ್ತ,

ಅರುವತ್ತುನಾಲ್ಕು ದಿನಗಳಲ್ಲಿ ಅಂಗಗಳೊಡಗೂಡಿದ ಎಲ್ಲಾ ವೇದಗಳನ್ನೂ ಕಲಿತರು. ಮತ್ತು ಬರೆವಣಿಗೆ, ಲೆಕ್ಕ, ಸಂಗೀತ, ವೈದ್ಯ, ಗಜಶಿಕ್ಷೆ, (ಆನೆಯ ಸವಾರಿ) ಅಶ್ವಶಿಕ್ಷೆ (ಕುದುರೆ ಸವಾರಿ) ಇವನ್ನೆಲ್ಲ ಹನ್ನೆರಡು ದಿನಗಳಲ್ಲಿಯೇ ಕಲಿತುಬಿಟ್ಟರು. ಆಮೇಲೆ ಅವರು ತಿರುಗಿ ಕೆಲವು ದಿನಗಳಮೇಲೆ ಆ ಸಾಂದೀಪನಿಯಲ್ಲಿ ಧನುರ್ವಿದ್ಯೆಯನ್ನು ಕಲಿಯುವುದಕ್ಕೆ ಆರಂಭಿಸಿದರು. ಆ ಅವಂತಿದೇಶದಲ್ಲಿದ್ದಂತೆಯೇ ಐವತ್ತು ದಿನಗಳಲ್ಲಿ ಹತ್ತು ಅಂಗಗಳಿಂದ ಕೂಡಿದ ಧನುರ್ವೇದವನ್ನೆಲ್ಲ ಮನಸ್ಸಿನಲ್ಲಿ ಅಚ್ಚೊತ್ತಿದಹಾಗೆ ಚೆನ್ನಾಗಿ ಕಲಿತರು. ಇವೆಲ್ಲವೂ ಆದಮೇಲೆ ಬ್ರಾಹ್ಮಣೋತ್ತಮನಾದ ಸಾಂದೀಪನಿಯು, ಕೃತಕೃತ್ಯರಾದ ಆ ಕುಮಾರರನ್ನು ಕಳುಹಿಸಿಕೊಡುವ ಸಮಯಕ್ಕೆ ಸರಿಯಾಗಿ, ಆ ಗುರುವಿನ ಮಗುವನ್ನು, ಸಮುದ್ರದಲ್ಲಿದ್ದ ಯಾವುದೋ ಒಂದು ಮಹಾಮತ್ಸ್ಯವು ಎಳೆದುಕೊಂಡು ಹೋಯಿತು. ಆಗ ಗುರುವು ಮೀನು ನುಂಗಿದ ತನ್ನ ಮಗನನ್ನು ಬದುಕಿಸಿ, ಅದನ್ನೇ ತನಗೆ ಗುರುದಕ್ಷಿಣೆಯಾಗಿ ಕೊಡಬೇಕೆಂದು ಕೇಳಿ ಆ ಕೃಷ್ಣನನ್ನು ಕೇಳಿಕೊಂಡನು. ಪುತ್ರವ್ಯಸನದಿಂದ ಸಂಕಟಪಡುತಿದ್ದ ಆ ಗುರುವನ್ನು ನೋಡಿ ಕೃಷ್ಣನು, ಎಂತವರಿಗೂ ಸಾಧ್ಯವಲ್ಲದ ಆ ಕಾರ್ಯವನ್ನು ನಡೆಸುವುದಾಗಿ ಪ್ರತಿಜ್ಞೆಮಾಡಿದನು. ರಾಮಕೃಷ್ಣರಿಬ್ಬರೂ ಸಮುದ್ರದಲ್ಲಿ ತಮ್ಮ ಗುರುಪುತ್ರನನ್ನು ಮತ್ಸ್ಯರೂಪದಿಂದ ಬಂದು ಎಳೆದುಕೊಂಡು ಹೋದ ಅಸುರನನ್ನು ವಧಿಸಿ, ಬಹುಕಾಲಕ್ಕೆ ಮೊದಲೇ ಮೃತಿಹೊಂದಿದ್ದ ಆ ಶಿಶುವನ್ನು ಬದುಕಿಸಿದರು. ಕೃಷ್ಣಾನುಗ್ರಹದಿಂದ ಆ ಮೃತಪುತ್ರನು ತಿರುಗಿ ಶರೀರದೊಡನೆ ಬಂದು ಸೇರಿದನು. ಬೇರೊಬ್ಬರಿಗೆ ಮಾಡುವುದಕ್ಕಾಗಲಿ, ಮನಸ್ಸಿನಿಂದ ಚಿಂತಿಸುವುದಕ್ಕಾಗಲಿ ಸಾಧ್ಯವಲ್ಲದ ಈ ಅದ್ಭುತಕಾರ್ಯವು ಕೃಷ್ಣನಿಂದ ನಡೆದುದನ್ನು ನೋಡಿ ಲೋಕವೆಲ್ಲವೂ ಆಶ್ಚರ್ಯಗೊಂಡಿತು. ಆಮೇಲೆ ರಾಮಕೃಷ್ಣರು ತಮ್ಮ ಗುರುವಿಗೆ ಮೇಲಾದ ವಸ್ತ್ರಗಳನ್ನೂ, ಅಪಾರಧನವನ್ನೂ, ಗೋವುಗಳನ್ನೂ, ಕುದುರೆಗಳನ್ನೂ ದಕ್ಷಿಣೆಯಾಗಿ ಕೊಟ್ಟರು. ಕೃಷ್ಣನು ಗದೆ, ಕತ್ತಿ, ಪರಿಘ, ಮುಂತಾದ ಯುದ್ಧಗಳಲ್ಲಿಯೂ, ಎಲ್ಲಾ ಅಸ್ತ್ರವಿದ್ಯೆಗಳಲ್ಲಿಯೂ ಎಲ್ಲರಿಗಿಂತಲೂ ಮೇಲಾಗಿ ಖ್ಯಾತಿಹೊಂದಿದನು. ಓ ಧರ್ಮರಾಜಾ! ಸರ್ವ ರತ್ನ

ಗಳಿಂದ ಅಲಂಕೃತವಾಗಿ ಸೂರ್ಯತೇಜಸ್ಸುಳ್ಳ ಮಹೇಂದ್ರನ ರಥವನ್ನು ಏರಿ ಕುಳ್ಳಿರಬೇಕೆಂದರೆ, ಆ ನಾರಾಯಣನುಹೊರತು ಬೇರೆ ಯಾವನಿಗೆ ಸಾಧ್ಯವು? ಇಂದ್ರನಿಗೆ ಅಸಮಾನ ಸಾರಥಿಯೂ, ಮಿತ್ರನೂ ಆದ ಮಾತಲಿಯು ಆ ಪುರುಷೋತ್ತಮನಿಗಲ್ಲದೆ ಬೇರೆ ಯಾವನಿಗೆ ತಾನೇ ಸಾರಥಿಯಾಗಿ ರಥವನ್ನೋಡಿಸುವನು? ಈ ಮಹಿಮೆಗಳನ್ನೆಲ್ಲ ಕೃಷ್ಣನಲ್ಲಿ ನಾವು ಕಂಡೆವು.

ಯುಧಿಷ್ಠಿರಾ! ಭೋಜರಾಜನ (ಉಗ್ರಸೇನನ) ಮಗನಾದ ಕಂಸನು ಅಸ್ತ್ರವಿದ್ಯೆಯಲ್ಲಿಯೂ, ದೇಹಬಲದಲ್ಲಿಯೂ ಶೌರ್ಯದಲ್ಲಿಯೂ ಕಾರ್ತವೀರ್ಯಾರ್ಜುನನಿಗೆ ಸಮಾನನೆನಿಸಿದವನು. ಗರುಡನನ್ನು ಕಂಡ ಸರ್ಪಗಳಂತೆ ಬೇರೆ ಎಲ್ಲಾ ರಾಜರೂ ಕಂಸನಿಗೆ ಹೆದರಿ ನಡುಗುತಿದ್ದರು. ಆ ಕಂಸನ ಕೈಗೆಳಗೆ ಕತ್ತಿ, ಬಿಲ್ಲು, ಈಟಿ, ಮುಂತಾದುವುಗಳಿಂದ ಚಿತ್ರಯುದ್ಧವನ್ನು ಮಾಡತಕ್ಕ ಕಾಲಾಳುಗಳು ಕೋಟಿಮಂದಿಯಿದ್ದರು. ಸುವರ್ಣಧ್ವಜದಿಂದಲೂ, ಸುವರ್ಣರಥಗಳಿಂದಲೂ ಕೂಡಿದ ಎಂಭತ್ತು ಮಂದಿ ರಥಿಕರು ಅವನಲ್ಲಿದ್ದರು. ಇವರು ಎಂತಹ ಯುದ್ಧದಲ್ಲಿಯೂ ಹಿಂಜರಿಯದವರು. ಅವನಲ್ಲಿದ್ದ ಗಜಸೈನ್ಯವೂ ಈ ವಿಧವಾದುದೇ. ಮುತ್ತುಗದ ಹೂವಿನಂತೆ ಕೆಂಪುಬಣ್ಣವುಳ್ಳ ಹತ್ತುಸಾವಿರ ಕುದುರೆಗಳು ಅವನಲ್ಲಿದ್ದುವು. ಈ ಕುದುರೆಯ ವೀರರೆಲ್ಲ ಚಿತ್ರವಿಚಿತ್ರವಾಗಿ ಯುದ್ಧಮಾಡುವ ಚಾತುರ್ಯವುಳ್ಳವರು. ಇದಲ್ಲದೆ, ಆ ಕಂಸನಿಗೆ ಸಹೋದರನಾದ ಸುನಾಮನೆಂಬವನಲ್ಲಿಯೂ, ಎಂತವರಿಗೂ ದುರ್ಜಯವಾದ ದೊಡ್ಡ ಕುದುರೆಯ ಸೈನ್ಯವಿದ್ದಿತು. ಅರುವತ್ತು ಸಾವಿರಸಂಖ್ಯೆಯುಳ್ಳ ಆ ಕುದುರೆಯ ಸೈನ್ಯಕ್ಕೆ ಮಿಶ್ರಕೆಯೆಂದು ಹೆಸರು. ಅಂತಹ ದೊಡ್ಡ ಸೈನ್ಯದೊಡನೆ ಸುನಾಮನು ಕಂಸನಿಗೆ ನಾನಾಕಡೆಗಳಲ್ಲಿಯೂ ಕಾವಲಾಗಿದ್ದನು. ಆ ಕಂಸನೊಡನೆ ಯುದ್ಧಕ್ಕೆ ನಿಂತು, ಅದರಿಂದ ತಪ್ಪಿಬರುವುದೆಂದರೆ ಒಂದು ಮಹಾನದಿಯನ್ನು ದಾಟಿಬರುವುದಕ್ಕೆ ಹೋಲಿಸಬಹುದು. ಕಂಸನ ಕೋಪವೇ ಅದರ ವೇಗವು! ಅವನ ಸೈನ್ಯದಲ್ಲಿರುವ ಧ್ವಜಗಳೇ ದ್ವೀಪವೃಕ್ಷಗಳು! ಮದದಾನೆಗಳೇ ಪ್ರವಾಹದಲ್ಲಿರುವ ಮೊಸಳೆಗಳು! ಆಯುಧಗಳೇ ನೊರೆಗಳು!

ಕುದುರೆಯು ರಾಹುತರ ದಾಳಿಯೇ ಮಹಾಪ್ರವಾಹವು! ಗದೆಗಳೂ, ಪರಿಘಗಳೂ ಆ ನದಿಯಲ್ಲಿರುವ ಮತ್ಸ್ಯಗಳು. ಬಣ್ಣಬಣ್ಣದ ಯುದ್ಧಕವಚಗಳೇ ಪಾಚಿಗಳು! ರಥಗಳೂ, ಗಜಗಳೂ ಸುಳಿಗಳು! ರಕ್ತವೇ ಕೆಸರು! ಬಿಲ್ಲುಗಳೇ ಅಲೆಗಳು! ರಥಾಶ್ವಗಳೇ ಕಲಗಿದ ಮಡುಗಳು. ಯುದ್ಧವೀರರ ಗರ್ಜನಗಳೇ ಪ್ರವಾಹಧ್ವನಿಗಳು. ಇಂತಹ ಕಂಸಸೇನೆಯೆಂಬ ಮಹಾನದಿಯನ್ನು ದಾಟಿ, ಆ ಕಂಸನನ್ನು ವಧಿಸಬೇಕೆಂದರೆ, ಸಾಕ್ಷಾನ್ನಾರಾಯಣನಿಗೆಹೊರತು ಬೇರೆ ಯಾರಿಗೆ ಸಾಧ್ಯವು? ಈ ಕೃಷ್ಣನು ಇಂದ್ರನ ರಥವನ್ನೇರಿ ಗಾಳಿಯು ಮೇಘಗಳನ್ನು ಹೇಗೋ ಹಾಗೆ ಆ ಸೈನ್ಯಗಳನ್ನೆಲ್ಲ ತೂರಿಬಿಟ್ಟನು. ಆಮೇಲೆ ಸಭೆಯಲ್ಲಿದ್ದ ಕಂಸನನ್ನೂ, ಅವನ ಮಂತ್ರಿಗಳನ್ನೂ ಅಲ್ಲಿಯೇ ಕೊಂದು ಕೆಡಹಿದನು. ಆಮೇಲೆ ತನ್ನ ಮಾತೆಯರಾದ ದೇವಕಿ, ಯಶೋದೆ, ರೋಹಿಣಿ, ಈ ಮೂವರಿಗೂ ನಮಸ್ಕರಿಸಿ ಬಂದು, ಉಗ್ರಸೇನನಿಗೆ ರಾಜ್ಯಾಭಿಷೇಕವನ್ನು ಮಾಡಿ, ಯಾದವರಿಂದ ಸತ್ಕೃತನಾದನು. ಆಮೇಲೆ ಅನೇಕರಾಜರನ್ನು ಕಟ್ಟಿಕೊಂಡು ತನ್ನಮೇಲೆ ಯುದ್ಧಕ್ಕೆ ಬಂದ ಜರಾಸಂಧನನ್ನು ಸರಸ್ವತೀನದಿಯ ತೀರದಲ್ಲಿ ಜಯಿಸಿ ಅವನನ್ನೋಡಿಸಿದನು.

ಇದು ಐವತ್ತುನಾಲ್ಕನೆಯ ಅಧ್ಯಾಯವು.



ಕೃಷ್ಣನು ಮಧುರೆಯನ್ನು ಬಿಟ್ಟು ದ್ವಾರಕೆಗೆ ಹೋದುದು.
ಅಲ್ಲಿ ನರಕಾಸುರನ ಬಾಧೆಯನ್ನು ತಡೆಯಲಾರದೆ ಬಂದು
ಮೊರೆಯಿಟ್ಟ ಇಂದ್ರನ ಪ್ರಾರ್ಥನೆಯಮೇಲೆ ಗರುಡಾ
ರೂಢನಾಗಿ ಪ್ರಾಗ್ಜ್ಯೋತಿಷಕ್ಕೆ ಬಂದು ನರಕನನ್ನು
ಕೊಂದು ಅವನಲ್ಲಿದ್ದ ಅದಿತಿಯ ಕುಂಡಲಗ
ಳನ್ನು ತಂದುದು.

ಧರ್ಮರಾಜಾ! ಕೇಳು! ಆಮೇಲೆ ಭಗವಂತನಾದ ಕೃಷ್ಣನು ಶೂರಸೇನನಗರವನ್ನು (ಮಧುರೆಯನ್ನು) ಬಿಟ್ಟು ದ್ವಾರಕೆಗೆ ಹೋದನು. ಅಲ್ಲಿ

ಮಹಾತ್ಮನಾದ ಆ ಕೃಷ್ಣನು, ನರಕಾಸುರನಿಂದ ತನಗೆ ಯೋಗ್ಯವಾದ ವಾಹನಗಳನ್ನೂ, ಬೆಲೆಯುಳ್ಳ ರತ್ನಗಳನ್ನೂ ಪಡೆದನು. ಅನೇಕದೈತ್ಯರೂ, ದಾನವರೂ ಆಗ ಅದಕ್ಕೆ ವಿಘ್ನವನ್ನು ಮಾಡಿದರು. ವರಬಲದಿಂದ ಕೊಬ್ಬಿದ ಆ ಅಸುರರನ್ನೆಲ್ಲ ಕೃಷ್ಣನು ಸಂಹರಿಸಿದನು. ಆಗ ನರಕಾಸುರನೂ ಅವನಲ್ಲಿ ವಿರೋಧವನ್ನು ಬೆಳೆಸಿಕೊಂಡನು. ಆ ನರಕಾಸುರನು ದೇವಮಾತೆಯಾದ ಅದಿತಿಯ ಕುಂಡಲವು ತನಗೆ ಬೇಕೆಂದು ಅವಳನ್ನು ಬಹಳವಾಗಿ ಪೀಡಿಸಿದನು. ಆಗ ನರಕಾಸುರನು ಮಾಡಿದಷ್ಟು ಕ್ರೂರಕಾರ್ಯವನ್ನು ಹಿಂದೆ ಯಾವಾಗಲೂ ಅಸುರರೆಲ್ಲಾ ಸೇರಿಯೂ ನಡೆಸಿರಲಿಲ್ಲ. ಆ ನರಕನು ಭೂದೇವಿಯ ಮಗನು. ಪ್ರಾಗ್ಜ್ಯೋತಿಷವೆಂಬುದು ಅವನ ರಾಜಧಾನಿ. ಯುದ್ಧದ ಕೆಚ್ಚುಳ್ಳ ನಾಲ್ಕುಮಂದಿ ರಾಕ್ಷಸರು ಅವನ ದೇಶದ ನಾಲ್ಕು ಎಲ್ಲೆಗಳಿಗೂ ಕಾವಲಿರುತ್ತಿದ್ದರು. ಅವರನ್ನು ಕಂಡರೆ ದೇವತೆಗಳಾದರೂ ಭಯದಿಂದ ನಡುಗುವರು. ಆ ನಾಲ್ವರಿಗೂ ಕ್ರಮವಾಗಿ ಹಯಗ್ರೀವ, ನಿಕುಂಭ, ಪಂಚಜನ, ಮುರಾಸುರರೆಂದು ಹೆಸರು. ಅವರಲ್ಲಿ ಮುರನೆಂಬವನಿಗೆ ಸಾವಿರಮಂದಿ ಮಕ್ಕಳು. ಅವರೆಲ್ಲರೂ ಮಹಾಬಲಾಢ್ಯರು. ಆ ಮುರಾಸುರನೋ ವರಬಲದಿಂದ ಕೊಬ್ಬಿದವನು. ಈ ನಾಲ್ವರೂ ಭೂಮಿಯಿಂದ ಆಕಾಶದವರೆಗೆ ಎಲ್ಲಿಯೂ, ಯಾರಿಗೂ ಪ್ರವೇಶವಿಲ್ಲದಂತೆ ತಡೆಗಟ್ಟಿದ್ದರು. ಇವರಲ್ಲಿ ಒಬ್ಬೊಬ್ಬನಿಗೂ ಭಯಂಕರಾಕಾರವುಳ್ಳ ದೊಡ್ಡ ರಾಕ್ಷಸಸೇನೆಯಿದ್ದಿತು. ಓ ಧರ್ಮಪುತ್ರಾ! ಆ ನರಕಾಸುರನನ್ನು ಕೊಲ್ಲುವ ಮುಖ್ಯೋದ್ದೇಶದಿಂದಲೇ ಶಂಖಚಕ್ರಗದಾಧರನಾದ ಶ್ರೀಮನ್ನಾರಾಯಣನು ಯದುವಂಶದಲ್ಲಿ ದೇವಕಿಯ ಮಗನಾಗಿ ಹುಟ್ಟಿದನೆಂದು ತಿಳಿ. ಪುರುಷೋತ್ತಮನಾದ ಆ ಕೃಷ್ಣನಿಗೆ ದ್ವಾರಕಾಪುರಿಯೇ ಮುಖ್ಯವಾಸಸ್ಥಳವೆಂಬುದನ್ನು ನೀನೂ ಬಲ್ಲೆಯಷ್ಟೆ! ಆ ದ್ವಾರಕೆಯು ಇಂದ್ರನ ಅಮರಾವತಿಗಿಂತಲೂ, ಕುಬೇರನ ವೈರಾಜವೆಂಬ ಪಟ್ಟಣಕ್ಕಿಂತಲೂ ಅತಿಶಯವಾದುದು. ಅದರಲ್ಲಿ ಯೋಜನವಿಸ್ತಾರವುಳ್ಳ ಸುಧರ್ಮೆಯೆಂಬುದೊಂದು ಸಭೆಯುಂಟು. ವೃಷ್ಣಿಗಳು, ಅಂಧಕರು, ಮೊದಲಾದ ಯಾದವರೆಲ್ಲರೂ, ರಾಮಕೃಷ್ಣರನ್ನು ಮುಂದಿಟ್ಟುಕೊಂಡು, ಆ ಸಭಾಸ್ಥಾನದಲ್ಲಿದ್ದುಕೊಂಡು, ಲೌಕಿಕವಾದ ವ್ಯವಹಾರವನ್ನೂ, ಪ್ರಜಾಪಾಲನವನ್ನೂ ನಡೆಸುತ್ತಿರುವರು.

ಒಮ್ಮೆ ಆ ಸಭೆಯಲ್ಲಿ ಎಲ್ಲರೂ ಕುಳಿತಿರುವಾಗ, ಒಳ್ಳೇ ಸುಗಂಧವುಳ್ಳ ಗಾಳಿಯು ಬೀಸತೊಡಗಿತು. ಆಕಾಶದಿಂದ ಪುಷ್ಪವರ್ಷವು ಸುರಿಯಿತು. ಅದೇ ಸಮಯದಲ್ಲಿ ಸಹಸ್ರಸೂರ್ಯರಿಗೆ ಸಮಾನವಾಗಿ ಅತ್ಯಾಶ್ಚರ್ಯಕರವಾದ ಒಂದು ದಿವ್ಯತೇಜಸ್ಸು ಆಕಾಶದಲ್ಲಿ ಕಾಣಿಸಿತು. ಸ್ವಲ್ಪ ಹೊತ್ತು ಆಕಾಶದಲ್ಲಿ ತೋರಿ, ಅಲ್ಲಿಂದ ಕೆಳಕ್ಕಿಳಿದು ಭೂಮಿಯನ್ನು ಮುಟ್ಟಿತು. ಆ ತೇಜೋರಾಶಿಯ ಮಧ್ಯದಲ್ಲಿ, ಬಿಳುಪಾದ ಆನೆಯನ್ನೇರಿ ಕುಳಿತು ಸುತ್ತಲೂ ಅನೇಕ ದೇವಗಣಗಳಿಂದ ಪರಿವೃತನಾಗಿದ್ದ ದೇವೇಂದ್ರನು ಕಾಣಿಸಿದನು. ಆಗ ಬಲರಾಮಕೃಷ್ಣರೂ, ರಾಜನಾದ ಆಹುಕನೂ, ವೃಷ್ಣಿಗಳೂ, ಅಂಧಕರೂ, ಇವರೆಲ್ಲರೂ ಥಟ್ಟನೆ ಇದಿರೆದ್ದು ದೇವೇಂದ್ರನಿಗೆ ನಮಸ್ಕರಿಸಿದರು. ಆಗ ಇಂದ್ರನೂ ಕೂಡ ಐರಾವತದಿಂದಿಳಿದು ಮೊದಲು ಕೃಷ್ಣನನ್ನು ಆಲಿಂಗಿಸಿಕೊಂಡನು. ಆಮೇಲೆ ಬಲರಾಮನನ್ನೂ, ರಾಜನಾದ ಆಹುಕನನ್ನೂ, ವಸುದೇವನನ್ನೂ, ಉದ್ಧವನನ್ನೂ ವಿಕದ್ರುವನ್ನೂ ಕ್ರಮವಾಗಿ ಆಲಿಂಗಿಸಿಕೊಂಡನು. ಆಮೇಲೆ ಪ್ರದ್ಯುಮ್ನ, ಸಾಂಬ, ನಿಶಠ, ಅನಿರುದ್ಧ, ಸಾತ್ಯಕಿ, ಗದ, ಸಾರಣ, ಅಕ್ರೂರ, ಭಾನು, ಝಿಲ್ಲಿ, ವಿಡೂರಥ, ಕೃತವರ್ಮ, ಮಹಾರಥ, ಮಹಾಬಲ, ಚಾರುದೇಷ್ಣನೇ ಮುಂತಾದ ಯಾದವರನ್ನೂ, ವೃಷ್ಣಿಗಳಲ್ಲಿಯೂ, ಅಂಧಕರಲ್ಲಿಯೂ ಪ್ರಮುಖರಾದವರನ್ನೂ ಯಥೋಚಿತವಾಗಿ ಗೌರವಿಸಿ ವಿಚಾರಿಸಿದನು. ಆಮೇಲೆ ತಾನೂ ಯಥೋಚಿತವಾದ ಸತ್ಕಾರವನ್ನು ಪಡೆದನು. ಇವೆಲ್ಲವೂ ನಡೆದಮೇಲೆ ಇಂದ್ರನು ಕೃಷ್ಣನನ್ನು ನೋಡಿ "ಓ ಪುರುಷಶ್ರೇಷ್ಠಾ! ನರಕಾಸುರನನ್ನು ಕೊಂದು ತನ್ನ ಕುಂಡಲವನ್ನು ತರುವಂತೆ ಅದಿತಿಯು ನಿನಗೆ ಹೇಳಿಕಳುಹಿಸಿರುವಳು" ಎಂದನು. ಆಗ ಕೃಷ್ಣನು, ತಾನು ಶೀಘ್ರದಲ್ಲಿಯೇ ನರಕನನ್ನು ಕೊಂದು ಕುಂಡಲಗಳನ್ನು ತರುವುದಾಗಿ ದೇವೇಂದ್ರನಿಗೆ ಹೇಳಿಕಳುಹಿಸಿ, ಆಮೇಲೆ ಬಲರಾಮನನ್ನು ಕರೆಸಿಕೊಂಡು, ಪ್ರದ್ಯುಮ್ನ, ಅನಿರುದ್ಧ, ಸಾಂಬಾದಿ ವೀರರಿಗೆಲ್ಲ ಈ ವಿಚಾರವನ್ನು ತಿಳಿಸಿ, ಒಡನೆಯೇ ಗರುಡನನ್ನೇರಿ ಶಂಖಚಕ್ರ ಗದಾಖಡ್ಗಗಳನ್ನು ಧರಿಸಿ ಹೊರಟುಬಿಟ್ಟನು. ಕೃಷ್ಣನ ಈ ಪ್ರಯತ್ನಕ್ಕೆ ಸಂತೋಷಿಸಿ, ಇಂದ್ರಾದಿ ದೇವತೆಗಳೆಲ್ಲರೂ ಅವನನ್ನು ಸ್ತೋತ್ರಮಾಡುತ್ತ ಅವನ ಹಿಂದೆಯೇ ಹೊರಟರು. ಕೃಷ್ಣನು ನರಕಾ

ಸುರನ ಕಡೆಯ ದಾನವರನ್ನೂ, ರಾಕ್ಷಸರನ್ನೂ ಕೊಂದು, ಆಮೇಲೆ ಮು ರಾಸುರನಿದ್ದ ಕಡೆಗೆ ಹೋದನು. ಅಲ್ಲಿ ಮುರನ ಸುತ್ತಲೂ ಹರಡಿದ್ದ ಆರುಸಾವಿರ ಬಲೆಗಳನ್ನೂ (ಮುರಪಾಶಗಳನ್ನೂ), ಅವುಗಳ ಅಂಚಿನಲ್ಲಿ ತೀಕ್ಷ್ಣವಾದ ಕತ್ತಿಗಳು ನಾಟಿರುವುದನ್ನೂ ಕಂಡನು. ಆದರೇನು? ಆ ಪಾಶಗಳನ್ನೆಲ್ಲ ಕೃಷ್ಣನು ತನ್ನ ಅಸ್ತ್ರಗಳಿಂದ ಕತ್ತರಿಸಿ, ಮುರನನ್ನೂ, ಅವನ ಸಾವಿರಮಂದಿ ಮಕ್ಕಳನ್ನೂ ಕೊಂದನು. ಆಮೇಲೆ ಅನೇಕ ಪರ್ವತಗಳನ್ನು ದಾಟಿ ನಿಶುಂಭನನ್ನಿದಿರಿಸಿ ಅವನನ್ನೂ ಕೊಂದನು. ಆಮೇಲೆ ಹಯಗ್ರೀವನೆಂಬ ರಾಕ್ಷಸನನ್ನು ಕೊಂದನು. ಧರ್ಮಪುತ್ರಾ! ಆ ಹಯಗ್ರೀವನು ಎಲ್ಲಾ ದೇವತೆಗಳನ್ನೂ ಜಯಿಸಿದವನು. ತಾನು ಒಂಟಿಯಾಗಿಯೇ ಸಾವಿರಮಂದಿಯನ್ನು ಇದಿರಿಸಬಲ್ಲವನು. ಅಂತವನನ್ನು ಕೊಂದಮೇಲೆ ಯಾವಾಗಲೂ ತುಂಬಿ ಹರಿಯುತ್ತಿರುವ ಲೋಹಿತಗಂಗೆಯೆಂಬ ನದಿಯ ನಡುವೆ ವಿರೂಪಾಕ್ಷನೆಂಬ ಅಸುರನನ್ನು ಕೊಂದನು. ಇವರೆಲ್ಲರನ್ನೂ ತೀರಿಸಿದಮೇಲೆ ಕಾಂತಿಯಿಂದ ಜ್ವಲಿಸುವಂತಿರುವ ಪ್ರಾಗ್ಜ್ಯೋತಿಷಕ್ಕೆ ಬಂದನು. ಅಲ್ಲಿ ನರಕನೊಡನೆ ಪ್ರಬಲಯುದ್ಧವು ನಡೆಯಿತು. ಕುಂಡಲಗಳಿಗಾಗಿ ಇಬ್ಬರೂ ಬಹಳ ಹಠದಿಂದ ಹೋರಾಡಿದರು. ಕೊನೆಗೆ ಬಲಾಢ್ಯನಾದ ಕೃಷ್ಣನು ನರಕಾಸುರನೊಡನೆ ಸ್ವಲ್ಪ ಹೊತ್ತು ಹೆಣಗಾಡಿದೊಡನೆ, ಅವನು ಒಂದು ಚಕ್ರಾಯುಧವನ್ನು ಎತ್ತಿದುದನ್ನು ನೋಡಿ ತನ್ನ ಚಕ್ರದಿಂದ ಅವನ ತಲೆಯನ್ನು ಕಡಿದುಬಿಟ್ಟನು. ವಜ್ರಾಹತವಾದ ವೃತ್ರಶಿರಸ್ಸಿನಂತೆ ನರಕಾಸುರನ ತಲೆಯು ತುಂಡಾಗಿ ಭೂಮಿಯಮೇಲೆ ಬಿದ್ದಿತು. ಆಗ ಭೂದೇವಿಯು ತನ್ನ ಮಗನಾದ ನರಕಾಸುರನ ಮರಣಕ್ಕಾಗಿ ದುಃಖಿಸುತ್ತ, ಆ ನರಕಾಸುರನು ತಂದಿದ್ದ ಅದಿತಿಯ ಕುಂಡಲಗಳನ್ನು ತಾನೇ ತಂದು ಕೃಷ್ಣನ ಕೈಗೊಪ್ಪಿಸಿ “ದೇವಾ! ಈ ನರಕನು ನಿನ್ನಿಂದ ಜನಿಸಿದವನು. ಈಗ ನಿನ್ನ ಕೈಯಿಂದಲೇ ಅವನನ್ನು ಕೊಂದೆ. ನಿನ್ನ ಇಷ್ಟವಿದ್ದಂತೆ ವಿಹರಿಸು. ಆದರೆ ಅವನ ಸಂತತಿಯನ್ನಾದರೂ ನೀನು ಕಾಪಾಡು” ಎಂದಳು. ಆಗ ಕೃಷ್ಣನು ಅವಳನ್ನು ಕುರಿತು ‘ದೇವೀ! ನರಕಾಸುರನು ನನ್ನ ಮಗನಾದರೂ ಲೋಕಕಂಟಕನಾಗಿ ವರ್ತಿಸುತ್ತಿದ್ದವನು. ಮಹಾತ್ಮರಾದ ದೇವತೆಗಳಿಗೂ, ಮಹರ್ಷಿಗಳಿಗೂ ಭಯವನ್ನುಂಟು

ಮಾಡುತ್ತ ಬ್ರಾಹ್ಮಣದ್ವೇಷಿಯಾಗಿ, ಸಮಸ್ತ ಲೋಕದ ನಿಂದೆಗೊಳಗಾಗಿದ್ದನು. ಅಲ್ಲದೆ ಈ ನಿನ್ನ ಮಗನು ಲೋಕಪೂಜ್ಯಳಾದ ಅದಿತಿದೇವಿಯನ್ನು ಪೀಡಿಸಿ, ಅವಳ ಕುಂಡಲಗಳನ್ನು ಕಿತ್ತು ತಂದನು. ಆದುದರಿಂದ ಆವನು ವಧಾರ್ಹನೇ! ಕಾಂತಾಮಣೀ! ನಿನ್ನ ಮಗನ ಮರಣಕ್ಕಾಗಿ ನೀನು ಚಿಂತಿಸಬೇಡ. ನಿನ್ನ ಮಹಿಮೆಯಿಂದ ಅವನಿಗೆ ಉತ್ತಮಗತಿಯುಂಟಾಗುವುದು. ಎಲೆ ದೇವಿ! ನಿನ್ನಮೇಲಿನ ಭಾರವನ್ನಿಳಿಸುವುದಕ್ಕಾಗಿಯೇ ನಾನು ಈ ಕಾರ್ಯವನ್ನು ಮಾಡಿದೆನೆಂದು ತಿಳಿ. ಇನ್ನು ನೀನು ಸುಖವಾಗಿ ಹೋಗಿ ಬಾ" ಎಂದನು.

ಇದು ಐವತ್ತೈದನೆಯ ಅಧ್ಯಾಯವು.

---

{ ಕೃಷ್ಣನು ಸ್ವರ್ಗಕ್ಕೆ ಹೋಗಿ ಅದಿತಿಗೆ ಕುಂಡಲಗಳನ್ನೊಪ್ಪಿಸಿ, ಬಲರಾಮ ಸತ್ಯಭಾಮೆಯರೊಡನೆ ಅಲ್ಲಿಂದ ಹಿಂತಿರುಗಿದುದು. }

ಧರ್ಮರಾಜಾ! ಆ ಕೃಷ್ಣನು ತನ್ನ ಪುತ್ರನಾದ ನರಕಾಸುರನನ್ನು ಕೊಲ್ಲುವಾಗ, ಸತ್ಯಭಾಮೆಯೂ ಅವನಿಗೆ ಸಹಾಯಕಳಾಗಿದ್ದಳು. ನರಕನನ್ನು ಕೊಂದಮೇಲೆ ಕೃಷ್ಣನು ಎಲ್ಲಾ ದಿಕ್ಪಾಲಕರೊಡನೆ ನರಕಾಸುರನ ಅರಮನೆಗೆ ಹೋಗಿ ಅಲ್ಲಿನ ಅಪಾರಸಂಪತ್ಸಮೃದ್ಧಿಯನ್ನೆಲ್ಲ ನೋಡಿದನು. ಅಲ್ಲಿ ಅಕ್ಷಯವಾದ ಧನರಾಶಿಯು ತುಂಬಿರುವುದು. ಮುತ್ತು, ಹವಳ, ಕೆಂಪು, ವೈಡೂರ್ಯ ಮುಂತಾದ ವಿವಿಧರತ್ನಗಳೂ, ಸ್ಫಟಿಕಮಣಿಗಳೂ, ಸಣ್ಣ ದೊಡ್ಡ ಸೂರ್ಯಕಾಂತರತ್ನಗಳೂ ಥಳಥಳಿಸುತ್ತಿರುವುವು. ಜಾಂಬೂನದ ಮತ್ತು ಶಾತಕುಂಭವೆಂಬ ಸುವರ್ಣಭೇದಗಳು ಅಗ್ನಿಯಂತೆಯೂ, ಚಂದ್ರನಂತೆಯೂ ಹೊಳೆಯುತ್ತಿರುವುವು. ಆವನ ರಾಣಿವಾಸವು ಬಿಳುಪು ಮತ್ತು ಬಂಗಾರದ ಬಣ್ಣದ ಚಿತ್ರಕಾರ್ಯಗಳಿಂದ ರಮ್ಯವಾಗಿ ಅಲ್ಲಿಯೂ ಅಪರಿಮಿತವಾದ ರತ್ನರಾಶಿಯು ತುಂಬಿರುವುದು. ಧನಪತಿಯಾದ ಕುಬೇರನ ಮನೆಯಲ್ಲಿಯಾಗಲಿ, ಇಂದ್ರನ ಅರಮನೆಯಲ್ಲಿಯಾಗಲಿ ಹಿಂದೆ ಯಾವಾಗಲೂ ಅಷ್ಟು ಧನರಾಶಿಯನ್ನು ಯಾರೂ ನೋಡಿದುದಿಲ್ಲ. ಈ ಐಶ್ವರ್ಯಸಮೃ

ದ್ಧಿಯನ್ನೆಲ್ಲ ನೋಡಿ ಬಂದಮೇಲೆ ಅದಿತಿಯ ರತ್ನಕುಂಡಲಗಳೊಡನೆ ಸುಖಾಸೀನನಾಗಿ ಕುಳಿತಿದ್ದ ಕೃಷ್ಣನನ್ನು ನೋಡಿ ದೇವೇಂದ್ರನು “ ಓ ಜನಾರ್ದನಾ! ಸುವರ್ಣಧ್ವಜಗಳಿಂದಲೂ, ಚಿನ್ನದ ಹೊರಜೆಗಳಿಂದಲೂ, ಅಂಕುಶಗಳಿಂದಲೂ ಕೂಡಿ, ಮಹಾಬಲಾಢ್ಯಗಳೂ, ಭಯಂಕರರೂಪಗಳೂ, ಆದ ಇಪ್ಪತ್ತುಸಾವಿರ ಆನೆಗಳು ಈ ನಗರದಲ್ಲಿರುವುವು. ಅವೆಲ್ಲ ಬಿಳೀ ಪತಾಕೆಗಳಿಂದಲೂ, ವಿವಿಧ ವಸ್ತ್ರಗಳಿಂದಲೂ, ಹವಳಗಳಿಂದ ಚಿತ್ರಿಸಲ್ಪಟ್ಟ ಜೀನುಗಳಿಂದಲೂ ಅಲಂಕೃತವಾಗಿರುವುವು. ಆ ಆನೆಗಳ ಸಂಖ್ಯೆಗೆ ಎರಡಷ್ಟು ಹೆಣ್ಣಾನೆಗಳು ಇಲ್ಲಿರುವುವು. ಉತ್ತಮದೇಶದಲ್ಲಿ ಹುಟ್ಟಿದ ಒಳ್ಳೇ ಜಾತಿಯ ಕುದುರೆಗಳು ಎಂಟುಲಕ್ಷದವರೆಗೆ ಇರುವುವು. ಇವೆಲ್ಲ ನಿನ್ನ ಪರಾಕ್ರಮದಿಂದ ಲಭಿಸಿದುದರಿಂದ, ನ್ಯಾಯವಾಗಿ ನಿನಗೇ ಸೇರತಕ್ಕುದು. ನಿನಗೆ ಇಷ್ಟವಿದ್ದರೆ, ಇಲ್ಲಿನ ಧನರಾಶಿಗಳನ್ನೆಲ್ಲ ಒಳ್ಳೇ ಪಳಗಿದ ಎತ್ತುಗಳ ಮೇಲೆ ಹೊರಿಸಿ, ನಿನ್ನ ದ್ವಾರಕಾಪುರಿಗೆ ಸೇರಿಸಿಬಿಡುವೆನು. ನಿನ್ನ ಇಷ್ಟವೇನೆಂಬುದನ್ನು ತಿಳಿಸು ” ಎಂದನು.

ಓ ಧರ್ಮಪುತ್ರಾ! ದೇವ ದಾನವ ಗಂಧರ್ವರ ವಶದಲ್ಲಿದ್ದ ಎಲ್ಲಾ ಸುವರ್ಣಗಳೂ, ರತ್ನಗಳೂ ಆ ನರಕನ ನಗರದಲ್ಲಿ ಸೇರಿಹೋಗಿದ್ದುವು. ಇಂದ್ರನು ಆ ನರಕಾಸುರನಲ್ಲಿದ್ದ ಮಣಿಪರ್ವತವನ್ನೂ, ಗರುಡನಮೇಲೇರಿಸಿಕೊಂಡು ಕೃಷ್ಣನೊಡನೆ ಅಲ್ಲಿಂದ ಹಿಂತಿರುಗಲು ಸಿದ್ಧನಾದನು. ಮಣಿಪರ್ವತವೆಂಬ ಆ ಗುಡ್ಡದಮೇಲೆ, ಸುವರ್ಣದ ಮೇಲ್ಕಟ್ಟುಗಳುಳ್ಳ ಮಹಾಮಂದಿರಗಳು ಪರ್ವತದಮೇಲೆ ಬಂದು ಕೂಡಿದ ವಿವಿಧವರ್ಣದ ಮೇಘಗಳ ಸಾಲಿನಂತೆ ಕಾಣುವುವು. ಆ ಮಂದಿರಗಳೆಲ್ಲ ರತ್ನಸೋಪಾನಗಳಿಂದ ರಮ್ಯವಾಗಿರುವುವು. ನರಕಾಸುರನಿಂದ ಸೆರೆಹಿಡಿದು ತರಲ್ಪಟ್ಟ ದೇವಗಂಧರ್ವಕನ್ಯೆಯರನೇಕರು ಆ ಮಂದಿರದಲ್ಲಿಯೇ ಕೂಡಿಡಲ್ಪಟ್ಟಿದ್ದರು. ಅವರೆಲ್ಲರೂ ತಮಗೆ ಬಂದ ಕಷ್ಟಕ್ಕಾಗಿ ವ್ಯಸನಗೊಂಡು, ತಲೆಯನ್ನು ಒಂದೇ ಜಡೆಯಾಗಿ ಬಿಟ್ಟು, ಕಾಷಾಯವನ್ನುಟ್ಟು, ಜಿತೇಂದ್ರಿಯರಾಗಿ ಕಠಿನತಪಸ್ಸನ್ನು ಹಿಡಿದಿದ್ದವರು. ಆ ಕನ್ಯೆಯರೆಲ್ಲರೂ ಅಲ್ಲಿಂದಲೇ ಕೃಷ್ಣನನ್ನು ಕಂಡು, ಗುಂಪಾಗಿ ಬಂದು ಕೂಡಿದರು. ಶ್ರೀಕೃಷ್ಣ

ನನ್ನು ಕಂಡೊಡನೆ ಅವರಿಗೆ ತಮ್ಮ ಕಠಿನ ತಪಸ್ಸಿನಿಂದುಂಟಾದ ಕಷ್ಟಗಳೆಲ್ಲ ಮರೆತಂತಾಯಿತು. ಒಳ್ಳೇ ದುಕೂಲಗಳನ್ನೂ, ಪಟ್ಟೆಮಡಿಗಳನ್ನೂ ಧರಿಸಿದ ಆ ಸ್ತ್ರೀಯರೆಲ್ಲ ಸೇರಿ ಕೃಷ್ಣನಿಗಿದಿರಾಗಿ ಕೈಮುಗಿದು ಪ್ರಾರ್ಥಿಸುವರು. "ಹೇ ಪುರುಷೋತ್ತಮಾ! ಹಿಂದೊಮ್ಮೆ ನಾರದಮುನಿಯು ಹೇಳಿಹೋದ ವಾಕ್ಯವು ಈಗ ಫಲಿಸುವಂತಿದೆ. ದೇವತೆಗಳ ಕಾರ್ಯಕ್ಕಾಗಿ ನೀನು ಇಲ್ಲಿಗೆ ಬರುವೆಯೆಂದೂ, ಭೂಪುತ್ರನಾದ ನರಕಾಸುರನನ್ನೂ, ಅವನ ಕಡೆಯವರಾದ ನಿಶುಂಭ, ಮುರ, ಹಯಗ್ರೀವ, ಪಂಚಜನರೆಂಬ ಅಸುರರನ್ನೂ, ಅವರ ಸೇನೆಗಳನ್ನೂ ವಧಿಸಿ, ಅಪಾರಧನವನ್ನು ಪಡೆಯುವೆಯೆಂದೂ, ಅದೇ ಸಂದರ್ಭದಲ್ಲಿ ನಮ್ಮನ್ನು ಸೆರೆಯಿಂದ ಬಿಡಿಸುವೆಯೆಂದೂ ಆ ನಾರದನು ಹೇಳಿದ್ದನು. ಆ ಮಹರ್ಷಿಯು ಹಾಗೆ ಹೇಳಿಹೋದುದು ಮೊದಲು, ನಾವು ಎಡೆಬಿಡದೆ ನಿನ್ನನ್ನೇ ಧ್ಯಾನಿಸುತ್ತ ಕಠಿನ ತಪಸ್ಸನ್ನು ಮಾಡುತ್ತಿರುವೆವು. ನಮಗೆ ಈ ದುಷ್ಕಾಲವು ಯಾವಾಗ ತಪ್ಪುವುದೋ, ಯಾವಾಗ ಶ್ರೀಪತಿಯಾದ ನಿನ್ನನ್ನು ನೋಡುವೆವೋ ಎಂದು ತವಕಿಸುತ್ತ, ಘೋರರಾಕ್ಷಸರ ಕಾವಲಿನಲ್ಲಿ ಸಿಕ್ಕಿಬಿದ್ದು, ಈ ವ್ರತವನ್ನು ನಡೆಸುತ್ತಿರುವೆವು ನಾವು ಹೀಗೆ ಚಿಂತಿಸುತ್ತಿರುವಾಗ ಮತ್ತೊಮ್ಮೆ ವಾಯುದೇವನೂ ಬಂದು, ನಾರದನಮಾತಿಂತೆ ಶೀಘ್ರದಲ್ಲಿಯೇ ನಡೆಯುವುದಾಗಿ ನಮಗೆ ತಿಳಿಸಿಹೋದನು. ಆ ಮಾತುಗಳೆಲ್ಲವೂ ಈಗ ಫಲಿಸಿದಂತಿದೆ" ಎಂದರು.

ಓ ಧರ್ಮರಾಜಾ! ಆಗ ವೃಷಭದಂತೆ ಧೀರದೃಷ್ಟಿಯುಳ್ಳ ಕೃಷ್ಣನು, ಗೋವುಗಳ ನಡುವೆ ಇರುವ ಮಹಾವೃಷಭದಂತೆ ಆ ದೇವಗಂಧರ್ವಸ್ತ್ರೀಯರ ಮುಂದೆ ನಿಂತಿರುವುದನ್ನು ದೇವತೆಗಳೂ, ಗಂಧರ್ವರೂ ನೋಡಿದರು. ಚಂದ್ರನಿಗೆಣೆಯಾದ ಆ ಶ್ರೀಕೃಷ್ಣನ ಮುಖವನ್ನು ನೋಡಿದಹಾಗೆಲ್ಲ, ಆ ಕನ್ಯೆಯರ ಕಣ್ಣುಗಳು ಉಲ್ಲಾಸದಿಂದರಳಿ, ಅವರ ಮನಸ್ಸಿನ ಉತ್ಸಾಹವು ಉಕ್ಕಿಬರುತ್ತಿತ್ತು. ತಿರುಗಿ ಅವರು ಮಹಾತ್ಮನೂ, ಭಗವಂತನೂ ಆದ ಕೃಷ್ಣನನ್ನು ಕುರಿತು "ಓ ಸತ್ಯವ್ರತಾ! ನಾರದಮಹರ್ಷಿಯೂ, ವಾಯುವೂ ನಮಗೆ ಈ ಭವಿಷ್ಯವನ್ನು ಹೇಳಿದಾಗಲೇ "ನರಕಾಸುರನು ಹತನಾದಮೇಲೆ ಕೃಷ್ಣನೇ ನಿಮಗೆ ಪತಿಯಾಗುವ"ನೆಂದೂ ಹೇಳಿದ್ದರು.

ಮಹಾತ್ಮನಾದ ನಾರದನ ಮಾತು ಸತ್ಯವಾಗುವುದಾದರೆ, ನೀನೇ ನಮಗೆ ಪತಿಯಾಗಬೇಕು. ಮೊದಲು ನಮ್ಮ ಕಿವಿಗೆ ಬಿದ್ದ ಪ್ರಿಯವನ್ನು ಈಗ ಕಣ್ಣಿನಿಂದ ಅನುಭವಿಸುವಂತಾದುದೇ ನಮ್ಮ ಮಹಾಭಾಗ್ಯವು. ಮಹಾತ್ಮನಾದ ನಿನ್ನ ದರ್ಶನದಿಂದ ನಾವು ಕೃತಾರ್ಥರಾದೆವು" ಎಂದರು.

ಆಗ ಕೃಷ್ಣನು ತನ್ನನ್ನು ಮೋಹಿಸಿ ಮನ್ಮಥಾಕ್ರಾಂತೆಯರಾದ ಆ ಕನ್ಯೆಯರನ್ನು ನೋಡಿ "ಎಲೈ ವಿಶಾಲಾಕ್ಷಿಯರೇ! ನಿಮ್ಮ ಕೋರಿಕೆಯಂತೆಯೇ ನಡೆಯುವುದು" ಎಂದು ಹೇಳಿ, ಅವರನ್ನೆಲ್ಲ ಕರೆಸಿಕೊಂಡನು.

ಆನೆ, ಹುಲಿ, ಕಪಿ, ಜಿಂಕೆ, ಕಾಡುಹಂದಿ, ಹಾವು, ಪಕ್ಷಿ ಮೊದಲಾದ ವನಜಂತುಗಳಿಂದಲೂ, ಕಲ್ಲುಬಂಡೆಗಳು, ನೆಲಮಾಳಿಗೆಗಳು, ಶಿಖರಗಳು, ಚಿತ್ರವಿಚಿತ್ರಗಳಾದ ನವಿಲುಗಳು, ದೊಡ್ಡ ಕಮರಿಗಳು, ಇವುಗಳಿಂದಲೂ ಕೂಡಿದ ಆ ಮಣಿಪರ್ವತವನ್ನೆಲ್ಲ ಎಲ್ಲರೂ ನೋಡುತ್ತಿದ್ದ ಹಾಗೆಯೇ ಭಿನ್ನಭಿನ್ನವಾಗಿ ಒಡೆದು, ಅಲ್ಲಿದ್ದ ರತ್ನರಾಶಿಗಳನ್ನೂ, ಸ್ತ್ರೀಯರನ್ನೂ ಗರುಡನ ಮೇಲೆ ಏರಿಸಿಕೊಂಡನು. ಆಮೇಲೆ ಲೋಕಾತಿಶಯವಾದ ಬಲವುಳ್ಳ ಗರುಡನು, ರಾಮಕೃಷ್ಣರನ್ನೂ, ಇಂದ್ರನನ್ನೂ, ಇನ್ನೂ ತನ್ನ ಮೇಲೆ ಹೊರಿಸಿದ್ದ ಸಮಸ್ತ ಭಾರಗಳನ್ನೂ ಹೊತ್ತುಕೊಂಡು, ರೆಕ್ಕೆಗಳನ್ನು ಬಿಚ್ಚಿ ಮೇಲೆ ಹಾರಲಾರಂಭಿಸಿದನು. ಆಗ ಆ ಗರುಡನು ತನ್ನ ರೆಕ್ಕೆಯ ವೇಗದಿಂದ ಪರ್ವತಶಿಖರಗಳನ್ನು ಮುರಿಯುತ್ತ, ದೊಡ್ಡದೊಡ್ಡ ಮರಗಳನ್ನು ಹಾರಿಸುತ್ತ, ದಿಕ್ಕುಗಳೆಲ್ಲ ಮೊಳಗುವ ಮಹಾಧ್ವನಿಯೊಡನೆ ಹೊರಟು, ವೈಶ್ವಾನರಮಾರ್ಗವೆಂಬ ನಕ್ಷತ್ರವೀಥಿಯಿಂದ ಹೊರಟು, ಮಹಾ ಮೇಘಗಳನ್ನೆಲ್ಲ ತನ್ನೊಡನೆ ಆಕರ್ಷಿಸುತ್ತ ಹೋಗುತಿದ್ದನು. ಗ್ರಹನಕ್ಷತ್ರಗಳ, ಸಪ್ತರ್ಷಿಮಂಡಲದ ಮತ್ತು ಅಶ್ವಿನೀದೇವತೆಗಳ ತೇಜಸ್ಸನ್ನೆಲ್ಲ ತನ್ನ ತೇಜಸ್ಸಿನಿಂದ ಮರೆಸುವಂತೆ ಪ್ರಕಾಶಿಸುತ್ತ, ಮುಂದೆ ಹೋಗಿ ಪವಿತ್ರವಾದ ದೇವಲೋಕವನ್ನು ಸೇರಿದನು. ಅಲ್ಲಿ ಹೋದೊಡನೆ, ಕೃಷ್ಣನು ಇಂದ್ರನ ಅರಮನೆಯಲ್ಲಿ ಬಲರಾಮನೊಡನೆ ಗರುಡನ ಬೆನ್ನಿನಿಂದ ಕೆಳಗಿಳಿದು ಅದಿತಿಯ ಪಾದಗಳನ್ನು ಹಿಡಿದು ವಂದನಮಾಡಿದನು. ಅಲ್ಲಿದ್ದ ಸಮಸ್ತ ದೇವತೆಗಳಿಂದಲೂ, ಬ್ರಹ್ಮನು, ದಕ್ಷನು ಮೊದಲಾದ ಸೃಷ್ಟಿಕರ್ತರಿಂದಲೂ ಪೂಜಿಸಲ್ಪಡು

ತ್ತ, ತಾನು ತಂದ ದಿವ್ಯಕುಂಡಲಗಳನ್ನೂ, ಉತ್ತಮರತ್ನಗಳನ್ನೂ ಅದಿತಿಯ ಕೈಗೆ ಒಪ್ಪಿಸಿದನು. ಆಗ ಅದಿತಿಯು ರಾಮಕೃಷ್ಣರಿಬ್ಬರನ್ನೂ ಪ್ರೀತಿಯಿಂದಾದರಿಸಿ ಆಶೀರ್ವದಿಸಿದಳು. ಇಂದ್ರಪತ್ನಿಯಾದ ಶಚಿಯು, ಕೃಷ್ಣಪತ್ನಿಯಾದ ಸತ್ಯಭಾಮೆಯನ್ನು ಕೈಹಿಡಿದು ಕರೆದುಕೊಂಡು ಹೋಗಿ ಅದಿತಿಗೆ ತೋರಿಸಿದಳು. ಆಗ ಅದಿತಿಯು ಸತ್ಯಭಾಮೆಯನ್ನು ನೋಡಿ ಕೃಷ್ಣನಿಗೆ ಪ್ರಿಯವನ್ನುಂಟುಮಾಡುವ ಉದ್ದೇಶದಿಂದ "ಓ ಕಾಂತಾಮಣೀ! ನಿನ್ನ ಪತಿಯಾದ ಶ್ರೀಕೃಷ್ಣನು ಭೂಮಿಯಲ್ಲಿರುವವರೆಗೆ ನಿನಗೆ ಮುಪ್ಪೇ ಬಾರದಿರಲಿ! ಸುಗಂಧವತಿಯಾಗಿ ನೀನು ಚಿರಕಾಲದವರೆಗೆ ಈ ಶ್ರೀಕೃಷ್ಣನನ್ನು ಸಂತೋಷಗೊಳಿಸುತ್ತಿರು" ಎಂದು ವರವನ್ನು ಕೊಟ್ಟಳು. ಆಮೇಲೆ ಸತ್ಯಭಾಮೆಯು ಇಂದ್ರಪತ್ನಿಯಾದ ಶಚಿಯ ಅನುಮತಿಯನ್ನು ಪಡೆದು ಕೃಷ್ಣನಿದ್ದಲ್ಲಿಗೆ ಬಂದಳು. ಕೃಷ್ಣನು ಸಮಸ್ತ ದೇವತೆಗಳಿಂದಲೂ ಸತ್ಕೃತನಾಗಿ, ಅಲ್ಲಿಂದ ಹಿಂತಿರುಗಿ ದ್ವಾರಕೆಗೆ ಬಂದನು. ಅವನು ಅಲ್ಲಿಂದ ಹಿಂತಿರುಗುವಾಗ, ಅವನನ್ನು ಬಿಟ್ಟಿರಲಾರದೆ ಅನೇಕ ದೇವರ್ಷಿಗಳು ಅವನನ್ನು ಹಿಂಬಾಲಿಸಿ ಬರುತ್ತಿದ್ದರು. ಬಹುದೂರಮಾರ್ಗವನ್ನು ಕೂಡ ಕೃಷ್ಣನು ಶೀಘ್ರದಲ್ಲಿ ದಾಟಿ ದ್ವಾರಕಾಪುರಿಯ ಕೋಟೆಯ ಬಾಗಿಲಿಗೆ ಬಂದು ಮುಟ್ಟಿದನು.

ಇದು ಐವತ್ತಾರನೆಯ ಅಧ್ಯಾಯವು.



ದ್ವಾರಕಾನಗರದ ಮತ್ತು ಕೃಷ್ಣನ ಅಂತಃಪುರದ ವರ್ಣನವು.
ಕೃಷ್ಣನ ಗೃಹೋದ್ಯಾನಗಳಲ್ಲಿರುವ ವಿವಿಧ ವೃಕ್ಷಗಳ ವರ್ಣನೆ.

ಓ ಧರ್ಮರಾಜಾ! ಕೃಷ್ಣನು ಇಂದ್ರನೊಡನೆ ಹೊರಟು, ಆ ದ್ವಾರಕಾನಗರಿಯ ಸೊಬಗನ್ನೂ, ಅದರಲ್ಲಿದ್ದ ಸಮಸ್ತ ಪದಾರ್ಥಸಮೃದ್ಧಿಯನ್ನೂ ನೋಡುತ್ತ, ಮುಂದೆ ಹೋದನು. ಆ ನಗರದ ಅಲಂಕಾರಗಳನ್ನು ಕೇಳಬೇಕೆ? ಎಲ್ಲಿ ನೋಡಿದರೂ ಪುಷ್ಪಗಳಿಂದ ತುಂಬಿದ ರಮಣೀಯ

ಗಳಾದ ತೋಟಗಳು! ಅಲ್ಲಲ್ಲಿ ಕಿಕ್ಕಿರಿಸಿ ತುಂಬಿದ ನಾನಾಜಾತಿಯ ಜನಗಳು! ಪಟ್ಟಣದ ಯಾವ ಕಡೆಯಲ್ಲಿ ನೋಡಿದರೂ, ಸೂರ್ಯನಂತೆಯೂ, ಚಂದ್ರನಂತೆಯೂ, ಮೇರುಶಿಖರಗಳಂತೆಯೂ ಪ್ರಕಾಶಿಸುವ ಉನ್ನತವಾದ ಮಂದಿರಗಳು. ಇಂತಹ ಮಂದಿರಗಳಿಂದ ರಮ್ಯವಾದ ಆ ನಗರದ ಸುತ್ತಿನ ಕಂದಕವು, ಗಂಗಾ ಸಿಂಧುನದಿಗಳಿಗೆ ಸಾಟಿಯಾಗಿ, ತಾವರೆಹೂಗಳಿಂದಲೂ, ಹಂಸಕಾರಂಡವಾದಿ ಜಲಪಕ್ಷಿಗಳಿಂದಲೂ ಅತಿ ರಮಣೀಯವಾಗಿರುವುದು. ಆ ಪಟ್ಟಣದ ಸುತ್ತಿನ ಕೋಟೆಯು ಸೂರ್ಯನಂತೆ ಥಳಥಳಿಸುತ್ತ ಆಕಾಶವನ್ನೆತ್ತಿ ಹಿಡಿದಂತಿರುವುದು. ಇಂತಹ ಕೋಟೆಯಿಂದ ಪರಿವೃತವಾದ ಆ ನಗರವು ಮೇಘಾವೃತವಾದ ಆಕಾಶದಂತೆ ಕಾಣುವುದು. ಅದು ದೇವಶಿಲ್ಪಿಯಾದ ಸಾಕ್ಷಾದ್ವಿಶ್ವಕರ್ಮನ ಪ್ರತ್ಯೇಕ ಶಿಲ್ಪಚಾತುರ್ಯದಿಂದ ನಿರ್ಮಿಸಲ್ಪಟ್ಟಿರುವುದು. ಅಲ್ಲಿನ ವಿಹಾರವನಗಳೆಲ್ಲ ನಂದನವನಕ್ಕೂ, ಮಿಶ್ರಕವೆಂಬ ದೇವೋದ್ಯಾನಕ್ಕೂ ಸಮಾನವಾದುವು. ಅಲ್ಲಿನ ಸುವರ್ಣಮಂದಿರಗಳಲ್ಲಿ ಯಾವಾಗಲೂ ಕಿವಿಗಿಂಪಾದ ಸಂಗೀತಧ್ವನಿಯು ಜನಗಳನ್ನು ಹರ್ಷಗೊಳಿಸುತ್ತಿರುವುದು. ಆ ಮಂದಿರಗಳೆಲ್ಲವೂ ಸುವರ್ಣಸೋಪಾನಗಳಿಂದ ಮನೋಹರವಾಗಿರುವುವು. ಶ್ರೀಕೃಷ್ಣನೊಡನೆ ಅಲ್ಲಿಗೆ ಬಂದ ದೇವೇಂದ್ರನೂ ಕೂಡ ಅಲ್ಲಿನ ಯಾದವರ ದಿವ್ಯಮಂದಿರಗಳನ್ನು ನೋಡಿ ವಿಸ್ಮಿತನಾದನು. ಅವು ಮೇಲೆತ್ತಿ ಕಟ್ಟಿದ ಮಹೋನ್ನತಧ್ವಜಗಳಿಂದ ಹಾರುವ ವಿಮಾನಗಳಂತೆಯೂ, ಸುವರ್ಣಚಿತ್ರಿತಗಳಾದುದರಿಂದ ಮೇರುಶಿಖರಗಳಂತೆಯೂ ಕಾಣುವುವು. ಆ ಮಂದಿರಗಳೆಲ್ಲವೂ ಸುಧಾಧವಳಿತಗಳಾದ ಬಿಳೀ ಶಿಖರಗಳಿಂದಲೂ, ಸುವರ್ಣಮಯವಾದ ಅಲಂಕಾರಗಳಿಂದಲೂ, ಪರ್ವತಶಿಖರದಂತಿರುವ ಮೇಲುಪ್ಪರಿಗೆಗಳಿಂದಲೂ ಕೂಡಿರುವುವು. ಸಮಸ್ತರತ್ನಗಳೂ ಅದರಲ್ಲಿ ಥಳಥಳಿಸುತ್ತಿರುವುವು. ಆ ಮಂದಿರಗಳಮೇಲೆ ಹರ್ಮ್ಯಗಳೆಂಬ ವಿಶಾಲವಾದ ಮೇಲ್ಮಹಡಿಗಳು! ಅರ್ಧಚಂದ್ರಾಕಾರವಾದ ಕಟ್ಟಡಗಳು! ನಿರ್ಯೂಗವೆಂಬ ಭುವನೇಶ್ವರಿಗಳು! ಗೂಡಿನಂತಿರುವ ಪಂಜರಗಳು! ಯಂತ್ರಶಾಲೆಗಳು, ಮಂತ್ರಶಾಲೆಗಳು! ಇವುಗಳಿಂದ ಚಿತ್ರವಿಚಿತ್ರಗಳಾಗಿ ವಿವಿಧ ಧಾತುಗಳಿಂದ ಕೂಡಿದ ಬೆಟ್ಟಗಳಂತಿರುವುವು. ಅಲ್ಲಲ್ಲಿ ಆ ಮಂದಿರಗಳಿಗೆ ರತ್ನಖಚಿತ

ಗಳಾದ ನೆಲಗಟ್ಟುಗಳು! ಅಲ್ಲಲ್ಲಿ ಸುಣ್ಣದ ಗಚ್ಚುಹಾಕಿದ ಅಂಗಳಗಳು! ಚಿನ್ನದ ಬಾಗಿಲು ವಾಡಗಳು, ವೈಡೂರ್ಯದ ಅಗುಳಿಗಳು, ಎಲ್ಲಾ ಕಾಲ ಗಳಲ್ಲಿಯೂ ಸುಖಸ್ಪರ್ಶವನ್ನು ಕೊಡುವಂತೆ ಮಾಡಿರುವ ಗಾಳಿಯ ಮಾ ರ್ಗಗಳು, ಬೆಲೆಯುಳ್ಳ ಅನೇಕಸಾಮಗ್ರಿಗಳು, ರಮ್ಯವಾದ ಸಾನುಗೃಹ ಗಳಿಂದಲೂ ವಿಚಿತ್ರ ಶಿಖರಗಳಿಂದಲೂ ಶೋಭಿಸುವ ಪರ್ವತಗಳಂತೆ ಕಾಣುವ ಪ್ರಾಸಾದಗಳು, ಪಂಚವರ್ಣದ ಪುಷ್ಪವೃಷ್ಟಿಗಳಿಂದ ರಮ್ಯವಾದ ಅಂಗಳಗಳು! ಮೇಘಧ್ವನಿಯಂತಿರುವ ಜನಘೋಷಗಳು! ಇವುಗಳಿಂದ ಆ ನಗರವು ಕುಬೇರನ ಭೋಗವತೀನಗರಕ್ಕೆ ಸಮಾನವಾಗಿದ್ದಿತು. ಮತ್ತು ಅದು ಕೃಷ್ಣನ ಬಿಳಿಧ್ವಜವೆಂಬ ಐರಾವತದಿಂದಲೂ, ಯಾದವರ ಆಯು ಧಗಳೆಂಬ ಇಂದ್ರಧನುಸ್ಸಿನಿಂದಲೂ, ಯಾದವವೀರರೆಂಬ ಮಿಂಚುಗಳಿಂದ ಲೂ, ದೇವೇಂದ್ರಕೃಷ್ಣರೆಂಬ ಮೇಘದೇವತೆಗಳಿಂದಲೂ, ಮಹಾಮಂದಿರ ಗಳೆಂಬ ಮೇಘಗಳಿಂದಲೂ ಕೂಡಿ, ಆ ದ್ವಾರಕಾವತಿಯು ಮೇಘಾವೃತ ವಾದ ಆಕಾಶದಂತೆ ಕಾಣಿಸಿತು. ಈ ನಗರದ ಅಂದವನ್ನು ನೋಡುತ್ತ ಮುಂದೆ ಹೋದಾಗ, ಅಲ್ಲಿ ದೇವೇಂದ್ರನಿಗೆ ಶ್ರೀಕೃಷ್ಣನ ದಿವ್ಯಭವನವು ಕಾಣಿಸಿತು. ಅದು ಉದ್ದದಲ್ಲಿಯೂ, ಅಗಲದಲ್ಲಿಯೂ ನಾಲ್ಕುಯೋಜನ ವಿಸ್ತಾರವುಳ್ಳುದಾಗಿ, ಸರ್ವಸಂಪತ್ತುಗಳಿಂದ ತುಂಬಿ, ಮಹೋನ್ನತವಾದ ಮೇಲುಮನೆಗಳಿಂದ ಕೂಡಿರುವುದು. ಅದರ ಸುತ್ತಲೂ ಅಲ್ಲಲ್ಲಿ ಕ್ರೀಡಾ ಪರ್ವತಗಳು ನಿರ್ಮಿಸಲ್ಪಟ್ಟಿರುವುವು. ಆ ದಿವ್ಯಭವನವನ್ನು ಇಂದ್ರಾಜ್ಞೆ ಯಿಂದ ವಿಶ್ವಕರ್ಮನು ತನ್ನ ಕೈಯಿಂದಲೇ ನಿರ್ಮಿಸಿದನು. ಆ ಕೃಷ್ಣನ ಮಂದಿರಕ್ಕೆ ಸೇರಿದಂತೆ ರುಕ್ಮಿಣಿಗಾಗಿ ಮಹೋನ್ನತವಾದ ಮತ್ತೊಂದು ಭವನವು ವಿಶ್ವಕರ್ಮನಿಂದಲೇ ನಿರ್ಮಿಸಲ್ಪಟ್ಟಿರುವುದು. ಪ್ರತಿದಿನವೂ ಸು ಧಾಧವಳಿತವಾಗಿ, ವಿಚಿತ್ರ ರತ್ನದ ಸೋಪಾನಗಳುಳ್ಳ ಆ ಮಂದಿರವು ಉ ಷ್ಣಸಂಪರ್ಕವೇ ಇಲ್ಲದೆ ಯಾವಾಗಲೂ ತಂಪಾಗಿರುವುದರಿಂದ ಅದಕ್ಕೆ "ಶೀತವರ್ಾ" ಎಂದು ಹೆಸರು. ಮೇಘಗಳಿಂದ ಮರೆಸಲ್ಪಡದ ಸೂರ್ಯನಂತೆ ಪ್ರಕಾಶಿಸುವ ಪತಾಕೆಗಳಿಂದ ಅಲಂಕೃತವಾಗಿರುವುದು. ಅದರಮೇಲೆ ಹದಿನಾಲ್ಕು ದೊಡ್ಡ ಧ್ವಜಗಳು ಶೋಭಿಸುತ್ತಿರುವುವು. ಪ್ರಧಾನವಾದ ಸ್ಥಳ ಗಳಲ್ಲಿ ಪ್ರತ್ಯೇಕವಾಗಿ ತಿಳಿಯುವಂತೆ ಆ ಮಂದಿರವು ಕಟ್ಟಲ್ಪಟ್ಟಿರುವುದು.

ಅದೇ ಸ್ಥಳದಲ್ಲಿ ವಿವಿಧ ರತ್ನಕಾಂತಿಗಳಿಂದ ಆಕಾಶವನ್ನೆಲ್ಲ ಬೆಳಗುವಂತಿರುವ, ಮತ್ತು ವಿವಿಧಾಲಂಕಾರಶೋಭಿತವಾದ ಜಾಂಬವತಿಯ ವಾಸಭವನವು ಎಲ್ಲಾ ಕಟ್ಟಡಗಳಿಗಿಂತಲೂ ಅತಿಶಯಿಸಿ ಕಾಣುತ್ತಿರುವುದು. ಈ ಎರಡು ಗೃಹಗಳ ನಡುವೆ (ಸತ್ಯಭಾಮೆ ಮತ್ತು ಜಾಂಬವತಿ ಇವರ ಮನೆಗಳ ನಡುವೆ) ಕೈಲಾಸಶಿಖರದಂತೆ ಬಿಳುಪಾಗಿ, ಉರಿಯುವ ಬೆಂಕಿಯಂತಿರುವ ಸುವರ್ಣಕಲಶಗಳಿಂದ ಶೋಭಿತವಾಗಿ, **'ಮೇರು'**ವೆಂದು ಹೆಸರುಗೊಂಡ ಒಂದು ಗೃಹವು ಸಮುದ್ರದಂತೆ ವಿಶಾಲವಾಗಿ ಕಾಣುತ್ತಿರುವುದು. ಕೃಷ್ಣನು ಗಾಂಧಾರರಾಜನ ಮಗಳಾದ ಸುಕೇಶಿಯನ್ನು ಅಲ್ಲಿಟ್ಟಿರುವನು. ಅದೂ ವಿಶ್ವಕರ್ಮನಿಂದಲೇ ನಿರ್ಮಿತವಾದುದು. ಮತ್ತೊಂದು ಕಡೆಯಲ್ಲಿ ತಾವರೆಹೂವಿನಂತೆ ಕಾಂತಿಯುಳ್ಳ ಮಹೋನ್ನತವಾದ ಮತ್ತೊಂದು ಮಂದಿರವುಂಟು. ಅದು ಸುಪ್ರಭೆಯೆಂಬವಳ ಮನೆ. ಆ ಮಂದಿರಕ್ಕೆ **'ಪದ್ಮಕೂಟ'**ವೆಂದು ಹೆಸರು. ಮತ್ತೊಂದು ಕಡೆಯಲ್ಲಿ **'ಸೂರ್ಯಪ್ರಭ'**ವೆಂಬ ಮತ್ತೊಂದು ಪ್ರಾಸಾದವಿರುವುದು. ಅದನ್ನು ಕೃಷ್ಣನು ಲಕ್ಷಣೆಯೆಂಬ ತನ್ನ ಪತ್ನಿಗೆ ಕೊಟ್ಟಿರುವನು. ಮತ್ತೊಂದು ಕಡೆಯಲ್ಲಿ ವೈಡೂರ್ಯದ ಮತ್ತು ಪಚ್ಚೆಯ ಕಲ್ಲುಗಳ ಕಾಂತಿಯಿಂದ ಶೋಭಿತವಾಗಿ, ಬಿಳೀ ಗವಾಕ್ಷಗಳಿಂದ ರಮ್ಯವಾದ **'ಹರಿ'**ಯೆಂದು ಹೆಸರುಗೊಂಡ ಮತ್ತೊಂದು ಭವನವಿರುವುದು. ಅದು ಬೇರೆ ಎಲ್ಲಾ ಮನೆಗಳಿಗೂ ಒಂದು ಭೂಷಣದಂತಿದ್ದು, ಸುಮಿತ್ರವಿಜಯೆಯೆಂಬ ಕೃಷ್ಣನ ಪತ್ನಿಗೆ ವಾಸಸ್ಥಾನವಾಗಿರುವುದು. ಅದನ್ನು ದೇವತೆಗಳೂ, ಋಷಿಗಳೂ ನಮಸ್ಕರಿಸಿ ಹೋಗುತ್ತಿರುವರು. ಅಲ್ಲಿ ಮತ್ತೊಂದು ಕಡೆ **'ಕೇತುಮಾರ್ಗ'** ಎಂದು ಪ್ರಸಿದ್ಧವಾದ ಮತ್ತೊಂದು ಭವನವುಂಟು. ಅದರಲ್ಲಿಯೂ ಕೃಷ್ಣನ ಪತ್ನಿಯೊಬ್ಬಳು ವಾಸವಾಗಿರುವಳು. ಸಮರ್ಥರಾದ ಅನೇಕ ಶಿಲ್ಪಿಗಳು ಸೇರಿ ಅದನ್ನು ಕಟ್ಟಿರುವರು ಮತ್ತೊಂದು ಕಡೆ **ವಿರಜಸ್ಸೆಂಬ** ಹೆಸರುಳ್ಳ ಮನೆಯೊಂದುಂಟು. ಅದು ಸ್ವಲ್ಪವಾದರೂ ಕೊಳೆಯಿಲ್ಲದೆ, ಸದಾ ನಿರ್ಮಲವಾಗಿರುವುದರಿಂದ ಅದಕ್ಕೆ ಆ ಹೆಸರು ಬಂದಿತು. ಮಹಾತ್ಮನಾದ ಶ್ರೀಕೃಷ್ಣನನ್ನು ನೋಡುವುದಕ್ಕಾಗಿ ಬಂದವರು ನಿರೀಕ್ಷಿಸುವುದಕ್ಕಾಗಿ ಆ ಗೃಹವು ಏರ್ಪಟ್ಟಿರುವುದು. ಅದಕ್ಕೆ **'ಉಪಸ್ಥಾನಗೃಹ'**ವೆಂದು ಹೆಸರು. ಆ ನಗರಗಳಲ್ಲಿರುವ ಮನೆಗಳಲ್ಲಿ, ಎಲ್ಲಕ್ಕಿಂತಲೂ ಅದೇ ಪ್ರಧಾನ

ವಾಗಿ ಕಾಣುತ್ತಿರುವುದು. ಅದೂ ತ್ವಷ್ಟೃವಿನಿಂದ (ವಿಶ್ವಕರ್ಮನಿಂದ) ನಿರ್ಮಿತವಾದುದು. ಅದಕ್ಕೆ ಒಂದು ಯೋಜನವಿಸ್ತಾರವಾದ ಪ್ರಾಕಾರ ವುಂಟು. ಅದು ಸರ್ವರತ್ನಮಯವಾಗಿರುವುದು. ಈ ಮನೆಗಳ ಮೇಲೆಲ್ಲ ಸುವರ್ಣದಂಡವುಳ್ಳ ಪತಾಕೆಗಳು ತೂಗಾಡುತ್ತಿರುವುವು. ಆ ಉನ್ನತ ಪ ತಾಕೆಗಳೇ ಕೃಷ್ಣನ ಮನೆಯ ದಾರಿಯನ್ನು ಜನರಿಗೆ ಕೈನೀಡಿ ತೋರಿಸು ವಂತಿರುವುವು. ಆ ದ್ವಾರಕೆಯಲ್ಲಿರುವ ಎಲ್ಲಾ ಮನೆಗಳ ಬಾಗಿಲುಗಳಲ್ಲಿ ಯೂ ಘಂಟೆಗಳ ಸಾಲುಗಳು ಕಟ್ಟಲ್ಪಟ್ಟಿರುವುದು. ಈ ಗೃಹನಿರ್ಮಾಣ ಕ್ಕಾಗಿ ಕೃಷ್ಣನು, ಅರುವತ್ತು ತಾಳೆಯಮರದಷ್ಟು ಎತ್ತರವೂ, ಅರ್ಧ ಯೋಜನ ವಿಸ್ತೀರ್ಣವೂ, ಯಾವಾಗಲೂ ಕಿನ್ನರರ ಗಾನಧ್ವನಿಯಿಂದ ಕೂಡಿದುದೂ, ಲೋಕಪ್ರಸಿದ್ಧವಾದ ಇಂದ್ರದ್ಯುಮ್ನವೆಂಬ ದೊಡ್ಡ ಸರೋ ವರವುಳ್ಳುದೂ ಆದ ಹಂಸಕೂಟವೆಂಬ ಶಿಖರವನ್ನೂ, ಮತ್ತು ಸೂರ್ಯ ನ ಮಾರ್ಗವನ್ನು ಮರೆಸತಕ್ಕುದೂ, ಸುವರ್ಣಮಯವೂ ಆದ ಮೇರು ಶಿಖರವನ್ನೂ, ಎಲ್ಲರೂ ನೋಡುತ್ತಿರುವಹಾಗೆಯೇ ತನ್ನ ಮಹಾದ್ಭುತಶಕ್ತಿ ಯಿಂದ ಕಿತ್ತುಕೊಂಡು, ತನ್ನ ನಿವಾಸಸ್ಥಳಕ್ಕೆ ತಂದು, ವೈಜಯಂತವೆಂಬ ಇಂದ್ರಗೃಹಕ್ಕೆ ಸಮಾನವಾದ ದಿವ್ಯಭವನವೊಂದನ್ನು ಕಟ್ಟಿಸಿದನು. ಅಲ್ಲ ದೆ ಯಾದವಸಿಂಹನಾದ ಈ ಕೃಷ್ಣನು, ಮಹೇಂದ್ರನ ಉದ್ಯಾನದಲ್ಲಿದ್ದ ಪಾರಿಜಾತಪುಷ್ಪವನ್ನು ತಂದು ತನ್ನ ತೋಟದಲ್ಲಿ ನಾಟಿಸಿರುವನು. ಸಾವಿ ರಾರುಮೊಳಗಳ ಎತ್ತರವುಳ್ಳ ಸುವರ್ಣಮಯವಾದ ಮೇಲುಮನೆಗಳಿಂದೊ ಪ್ಪುವ ಆ ದಿವ್ಯಭವನದಲ್ಲಿ ಕೃಷ್ಣನು ಎಷ್ಟೋ ಜಾತಿಯ ಮರಗಳನ್ನೆಲ್ಲ ಬೆಳೆಸಿರುವನು. ಗೃಹದ ಸುತ್ತಲೂ ತಾವರೆಗಳಿಂದಲೂ, ನೈದಿಲೆಗಳಿಂ ದಲೂ, ಕೆಂಪು ಸೌಗಂಧಿಕ ಪುಷ್ಪಗಳಿಂದಲೂ ತುಂಬಿ, ಸ್ವಚ್ಛ ಜಲವುಳ್ಳ ಎಷ್ಟೋ ಕೆರೆಗಳೂ, ಕೊಳಗಳೂ ನಿರ್ಮಿಸಲ್ಪಟ್ಟಿರುವುವು. ಮುತ್ತು ರತ್ನ ಗಳೇ ಅವುಗಳ ತೀರದ ಮರಳಾಗಿರುವುವು. ಆ ಕೊಳದ ಸುತ್ತಲೂ ಅಂದವಾದ ಮರದ ತೋಪುಗಳಿದ್ದು, ಆ ತೋಪುಗಳಲ್ಲಿ ತಾಳೆ, ಓಲೆ, ಅಶ್ವ ಕರ್ಣ, ಶತಶಾಖೆಗಳುಳ್ಳ ಆಲದ ಮರ, ಭಲ್ಲಾತಕ, ಬೇಲ, ಇಂದ್ರವೃಕ್ಷ, ಸಂಪಗೆ, ಖಾದಿರ, ಮೃತಕ ಮುಂತಾದ ನಾನಾಜಾತಿಯ ಮರಗಳು ಸುತ್ತಿ ಬೆಳೆದಿರುವುವು. ಓ ಧರ್ಮಪುತ್ರಾ! ಹಿಮಾಲಯದಲ್ಲಿಯೂ, ಇಂದ್ರನ

ನಂದನವನದಲ್ಲಿಯೂ ಬೆಳೆಯುವ ಅಪೂರ್ವವೃಕ್ಷಗಳನ್ನೆಲ್ಲ ತರಿಸಿ ಕೃಷ್ಣನು ಆ ತೋಟಗಳಲ್ಲಿ ಬೆಳೆಸಿರುವನು. ಅಲ್ಲಿನ ಮರಗಳು ಎಲ್ಲಾ ಋತುಗಳ ಫಲಪುಷ್ಪಗಳನ್ನೂ ಸದಾಕಾಲವೂ ಬಿಡುತ್ತಿರುವುವು. ಆ ವೃಕ್ಷಗಳಲ್ಲಿ ಕೆಲವು ರತ್ನದಂತೆಯೂ, ಕೆಲವು ಭಂಗಾರದಂತೆಯೂ, ಮತ್ತು ಕೆಂಪು, ಬಿಳುಪು, ಕಪ್ಪು ಮುಂತಾದ ವಿವಿಧ ವರ್ಣಗಳಿಂದಲೂ ಶೋಭಿಸುವ ಹೂಗಳೂ, ಕಾಯಿಗಳೂ, ಹಣ್ಣುಗಳೂ ತುಂಬಿರುವುವು. ಮತ್ತು ಅಲ್ಲಿ ಸಹಸ್ರಪತ್ರಗಳುಳ್ಳ ಕಮಲಗಳೂ, ಮಂದಾರ, ಅಶೋಕ, ಕರ್ಣಿಕಾರ, ತಿಲಕ, ನಾಗಮಲ್ಲಿಗೆ, ಗೋರಂಟೆ, ನಾಗಪುಷ್ಪ, ಸಂಪಗೆ, ತೃಣಪುಲ್ಲಿಕೆ, ಏಳೆಲೆಬಾಳೆ, ಕಡವು, ನಿಂಬ, ತಾಳೆ, ನಾಗಕೇಸರ, ಹಿಂತಾಲ, ಕಲಕಾಟಿಕ, ಪ್ರಲಂಬ, ಪಗಡೆ, ದಾಳಿಂಬೆ, ಪಿಂಡಿಕೆ, ನೆಲ್ಲಿ, ಖರ್ಜೂರ, ನೇರಳೆ, ಮಾವು, ಹಲಸು, ಸಿಂಜೆ, ತಿಲತಿಂದುಕ, ಅಮ್ರಾತಕ, ಕರ್ಣಿಕೆ, ಕ್ಷೀರಿಕೆ, ತೆಂಗು, ಇಂಗಳ, ಬಾಳೆ, ಪಾದರಿ, ಮುಂತಾದ ವೃಕ್ಷಗಳೂ, ತಾವರೆ ನೈದಿಲೆಗಳಿಂದ ತುಂಬಿದ ಬಾವಿಗಳೂ, ಆಸುಗೆ, ಬಂಧುಜೀವಕ, ಪ್ರಿಯಂಗು, ಹೊನ್ನೆ, ಉತ್ಕ್ರೋಚ, ಮುಂತಾದ ಗಿಡಗಳೂ, ಮರಗಳೂ ವಿಶೇಷವಾಗಿರುವುವು. ಒಂದೊಂದು ಬಾವಿಯ, ಮತ್ತು ಕೊಳದ ಸುತ್ತಲೂ, ಮೇಲೆ ಹೇಳಿದ ಒಂದೊಂದು ಜಾತಿಯ ಮರಗಳೂ ಬೆಳೆಸಲ್ಪಟ್ಟಿರುವುವು. ಅಲ್ಲಿನ ತೋಟಗಳಲ್ಲಿ ಪ್ರಿಯಂಗು, ಎಲಚಿ, ಯವ, ಸ್ಯಂದನ, ಶಚಿ, ಚಂದನ, ಬೇಲ, ಮುತ್ತುಗ, ಅರಳಿ, ಅತ್ತಿ, ಬಿಲ್ವ, ಪಾರಿಭದ್ರಕ, ಚಿರಬಿಲ್ವಕ, ಭೌಮ, ಖಂಜರ, ಅಶ್ವವೃಕ್ಷ, ಸರ್ಜಕ, ಅಡಕೆ, ಎಲೆಬಳ್ಳಿಗಳು, ವಿಧವಿಧವಾದ ಬಿದಿರುಮೆಳೆಗಳು, ಇವೆಲ್ಲವೂ ಸಮೃದ್ಧವಾಗಿರುವುವು. ಧರ್ಮಪುತ್ರಾ! ಇಂದ್ರನ ತೋಟದಲ್ಲಿಯೂ, ಚೈತ್ರರಥವೆಂಬ ಕುಬೇರನ ತೋಟದಲ್ಲಿಯೂ ಯಾವ ಯಾವ ಬಗೆಯ ವೃಕ್ಷಜಾತಿಗಳುಂಟೋ, ಅವೆಲ್ಲವನ್ನೂ ಕೃಷ್ಣನು ತನ್ನ ತೋಟದಲ್ಲಿ ಬೆಳೆಸಿರುವನು. ಮತ್ತು ಆ ಕೃಷ್ಣನ ಗೃಹೋದ್ಯಾನಗಳಲ್ಲಿ ಕೆಂಪು, ಹಳದಿ, ಮತ್ತು ಇಂದ್ರನೀಲದ ಬಣ್ಣಗಳುಳ್ಳ ರತ್ನರಾಶಿಗಳೇ ಮರಳುದಿಣ್ಣೆಗಳಂತಿರುವ ಮಹಾನದಿಗಳು ಪ್ರವಹಿಸುವುವು. ಅಲ್ಲಿ ಅನೇಕಕ್ರೀಡಾಪರ್ವತಗಳಿದ್ದು, ಅದರಲ್ಲಿ ಮದಿಸಿದ ಕೋಗಿಲೆಗಳೂ, ನವಿಲುಗಳೂ ಶಬ್ದಿಸುತ್ತಿರುವುವು. ಅಲ್ಲಿ ಆನೆಯ ಹಿಂಡುಗಳೂ, ಉತ್ತಮಜಾತಿಯ ಹಸು

ಗಳೂ, ಎಮ್ಮೆಗಳೂ ಸಂಚರಿಸುತ್ತಿರುವುವು. ಅಲ್ಲಿ ಎಲ್ಲಾ ಜಾತಿಯ ಮೃಗ ಪಕ್ಷಿಗಳಿಗೂ ವಾಸಸ್ಥಾನಗಳು ಕಲ್ಪಿಸಲ್ಪಟ್ಟಿರುವುವು. ಓ ಧರ್ಮಪುತ್ರಾ! ನಾನೂರು ಮೊಳಗಳ ಉದ್ದವುಳ್ಳುದಾಗಿ, ಅಮೃತದಂತೆ ಬಣ್ಣವುಳ್ಳ ಒಂದು ದೊಡ್ಡ ಬೆಟ್ಟವೇ ಆ ಮನೆಯ ಸುತ್ತಿನ ಪ್ರಾಕಾರರೂಪವಾಗಿ ವಿಶ್ವಕರ್ಮ ನಿಂದ ನಿರ್ಮಿಸಲ್ಪಟ್ಟಿರುವುದು. ಇದುವರೆಗೆ ಹೇಳಿದ ಕೆರೆ, ಕೊಳ, ಕಾಡು, ತೋಟಗಳು, ಕ್ರೀಡಾಪರ್ವತಗಳು, ವಿಹಾರೋದ್ಯಾನಗಳು, ನದಿಗಳು, ಎಲ್ಲವೂ ಆ ಪರ್ವತಪ್ರಾಕಾರದಿಂದ ಆವರಿಸಲ್ಪಟ್ಟಿರುವುವು.

ಇದು ಐವತ್ತೇಳನೆಯ ಅಧ್ಯಾಯವು.

---

ವಸುದೇವಾದಿ ಬಂಧುಗಳೆಲ್ಲರೂ ಕೃಷ್ಣನನ್ನು ನೋಡುವುದ ಕ್ಕಾಗಿ ಬಂದುದು. ಕೃಷ್ಣನು ತಾನು ತಂದ ರತ್ನಗಳನ್ನು ಬಂಧುಗಳಿಗೆ ಹಂಚಿಕೊಟ್ಟುದು. ಇಂದ್ರನು ಶ್ರೀಕೃ ಷ್ಣನ ಮಹಿಮೆಯನ್ನು ಅವರೆಲ್ಲರ ಮುಂದೆ ಪ್ರಶಂಸೆಮಾಡಿ, ತನ್ನ ಲೋಕಕ್ಕೆ ಹಿಂತಿರು ಗಿದುದು.

ಓ ಧರ್ಮಪುತ್ರಾ! ಹೀಗೆ ಕೃಷ್ಣನೂ, ಬಲರಾಮನೂ, ದೇವೇಂದ್ರ ನೂ, ಈ ಮೂವರೂ ಆ ದ್ವಾರಕಾನಗರದ ಅಂದವನ್ನು ನೋಡುತ್ತ ಬಂ ದರು. ಅವನ್ನೆಲ್ಲ ನೋಡಿದಮೇಲೆ, ಕೃಷ್ಣನು ಗರುಡನಮೇಲೆ ಕುಳಿತಿದ್ದ ಹಾಗೆಯೇ ಪಾಂಚಜನ್ಯವೆಂಬ ಶಂಖವನ್ನು ಧ್ವನಿಮಾಡಿದನು. ಶತ್ರು ಭಯಂಕರವಾದ ಆ ಶಂಖಧ್ವನಿಯಿಂದ ಸಮುದ್ರವೆಲ್ಲವೂ ಕಲಗಿದಂತಾಗಿ, ಆಶ್ಚರ್ಯಕರವಾದ ಪ್ರತಿಧ್ವನಿಯನ್ನು ಕೊಟ್ಟಿತು. ಈ ಪಾಂಚಜನ್ಯ ಧ್ವನಿಯನ್ನು ಕೇಳಿದೊಡನೆ ಕುಕುರರು, ಅಂಧಕರು, ಮುಂತಾಗಿ ದ್ವಾರ ಕಾವಾಸಿಗಳೆಲ್ಲರೂ, ಕೃಷ್ಣನು ಬಂದುದನ್ನು ತಿಳಿದು, ಸಂತೋಷದಿಂದ ಕೃಷ್ಣನನ್ನು ಇದಿರುಗೊಳ್ಳುವುದಕ್ಕಾಗಿ, ವೀಣೆ, ವೇಣು, ಶಂಖ ಮೊದ ಲಾದ ಮಂಗಳವಾದ್ಯಗಳೊಡನೆ ವಸುದೇವನನ್ನು ಮುಂದಿಟ್ಟುಕೊಂಡು ಹೊರಟರು.

ದೇವಕಿಯೂ, ರೋಹಿಣಿಯೂ, ಮತ್ತು ಇತರ ಅಂತಃಪುರಸ್ತ್ರೀಯ ರೆಲ್ಲರೂ ಅತಿಸಂಭ್ರಮದಿಂದ ತಮ್ಮತಮ್ಮ ಮನೆಗಳಲ್ಲಿ ಕೃಷ್ಣನನ್ನು ಕರೆದು ಸತ್ಕರಿಸುವುದಕ್ಕಾಗಿ ಬೇಕಾದ ಸಂಭಾರಗಳನ್ನು ಸಿದ್ಧಪಡಿಸುತ್ತ ಸಡಗರದಿಂದ ಓಡಾಡುತಿದ್ದರು. ಈ ಸ್ತ್ರೀಯರೆಲ್ಲರೂ ಅಲ್ಲಲ್ಲಿ ಗುಂಪು ಕೂಡಿ, ತಮ್ಮೊಳಗೆ ಒಬ್ಬರಿಗೊಬ್ಬರು "ಬ್ರಹ್ಮದ್ವೇಷಿಗಳೆಲ್ಲರೂ ಹತರಾದ ರು. ಅಂಧಕರೂ, ವೃಷ್ಣಿಗಳೂ, ಜಯಶೀಲರಾದರು" ಎಂದು ಕೃಷ್ಣನ ಮಹಿಮೆಯನ್ನು ಕೊಂಡಾಡುತಿದ್ದರು. ಕೃಷ್ಣನು ಇವರ ಕೊಂಡಾಟಗಳ ನ್ನೆಲ್ಲ ಕೇಳುತ್ತ, ನರಕಾಸುರನ ಸೆರೆಯಿಂದ ತಪ್ಪಿ ಬಂದ ಎಲ್ಲಾ ಸ್ತ್ರೀಯ ರೊಡನೆ ಗೃಹದ್ವಾರಕ್ಕೆ ಬಂದು ಗರುಡನಿಂದಿಳಿದನು. ಗರುಡನಮೇಲೆ ಹೊರಿಸಿತಂದ ಮಣಿಪರ್ವತವನ್ನು ತಕ್ಕ ಸ್ಥಳದಲ್ಲಿ ನೆಲೆಗೊಳಿಸಿದನು. ತಾನು ತಂದ ಧನಗಳನ್ನೂ, ರತ್ನಗಳನ್ನೂ, ಸಭಾಮಂದಿರದಲ್ಲಿರಿಸಿದನು. ಅವನಿಗೆ ಮನಸ್ಸಿನಲ್ಲಿ ತಂದೆಯನ್ನು ನೋಡುವ ಆತುರವು ಬಹಳವಾಗಿ ದ್ದರೂ, ನ್ಯಾಯರೀತಿಯಿಂದ ಮೊದಲು ತನ್ನ ಗುರುವೂ, ಬ್ರಾಹ್ಮಣ ನೂ ಆದ ಸಾಂದೀಪನಿಯನ್ನು ನಮಸ್ಕರಿಸುವುದಕ್ಕಾಗಿ, ಬಲರಾಮನೊ ಡನೆ ಅವನ ಬಳಿಗೆ ಹೋಗಿ, ಅವನ ಪಾದಗಳನ್ನು ಹಿಡಿದು ನಮಸ್ಕ ರಿಸಿ ಬಂದು, ಆಮೇಲೆ ತನ್ನ ತಂದೆಗೆ ನಮಸ್ಕರಿಸಿದನು. ಕೃಷ್ಣನನ್ನು ಕಂಡೊಡನೆ ವಸುದೇವನಿಗೆ ಸಂತೋಷದಿಂದ ಕಣ್ಣಿನಲ್ಲಿ ಆನಂದಬಾ ಷ್ಪವು ತುಳುಕಿತು. ವಸುದೇವನೂ ಮತ್ತು ಸಾಂದೀಪನಿಯೂ ಪ್ರೇಮ ಪೂರ್ವಕವಾಗಿ ರಾಮಕೃಷ್ಣರ ತಲೆಯನ್ನು ಆಘ್ರಾಣಿಸಿದರು. ಆಮೇಲೆ ಕೃಷ್ಣನು ಯಾದವರೆಲ್ಲರನ್ನೂ ಅವರವರ ವಯಸ್ಸಿಗೂ, ಗೌರವಕ್ಕೂ ತಕ್ಕಂತೆ ಕ್ರಮವಾಗಿ ಕಂಡುಬಂದನು. ಆಮೇಲೆ ಅವರಲ್ಲಿ ಒಬ್ಬೊಬ್ಬರ ನ್ನೂ ಹೆಸರುಹಿಡಿದು ಕರೆಯುತ್ತ, ತಾನು ತಂದಿದ್ದ ಧನಗಳನ್ನೂ, ರತ್ನಗ ಳನ್ನೂ ಅವರೆಲ್ಲರಿಗೂ ಹಂಚಿಕೊಟ್ಟನು. ಆಗ ಕೃಷ್ಣಸಚಿವರಾದ ಅನೇಕ ಯಾದವಶ್ರೇಷ್ಠರಿಂದ ತುಂಬಿದ ಆ ಸಭೆಯು, ಸಿಂಹಗಳು ವಾಸಮಾಡುವ ಪರ್ವತಗುಹೆಯಂತೆ ಕಾಣಿಸುತಿತ್ತು. ಹೀಗೆ ಆ ಸಭೆಯಲ್ಲಿ ಎಲ್ಲರೂ ನೆರೆ ದಿದ್ದಾಗ, ದೇವೇಂದ್ರನು ಅಲ್ಲಿದ್ದ ಎಲ್ಲಾ ವೃಷ್ಣ್ಯಂಧಕರನ್ನೂ, ರಾಜನಾದ ಆಹುಕನನ್ನೂ ನೋಡಿ ಮಧುರವಾಕ್ಯದಿಂದ "ಎಲೈ ಯದುವೀರರೇ!

ಮಹಾತ್ಮನಾದ ಈ ನಿಮ್ಮ ಕೃಷ್ಣನು ಮನುಷ್ಯಲೋಕದಲ್ಲಿ ವಸುದೇವ ಪುತ್ರನಾಗಿ ಏಕೆ ಹುಟ್ಟಿದನೋ, ಅವನು ಯಾವಯಾವ ಕಾರ್ಯಗಳನ್ನು ನಡೆಸಿದನೋ ಅವನ್ನೆಲ್ಲ ಸಂಗ್ರಹಿಸಿ ಹೇಳುವೆನು ಕೇಳಿರಿ! ದುಷ್ಟನಿಗ್ರಾಹಕ ನಾದ ಈ ಕೃಷ್ಣನು ಲಕ್ಷಾಧಿಕದೈತ್ಯರನ್ನು ಕೊಂದು, ಪಾತಾಳದೊಳಗೆ ಪ್ರವೇಶಿಸಿ, ಅಲ್ಲಿ ಪೂರ್ವದೇವತೆಗಳೆನಿಸಿದ ಪ್ರಹ್ಲಾದ, ಬಲಿ, ಶಂಬರನೇ ಮೊದಲಾದ ದೈತ್ಯರಾಜರಿಂದಲೂ ದುರ್ಲಭವಾದ ಧನರಾಶಿಯನ್ನು ತಂದು ನಿಮಗೆ ಕೊಟ್ಟಿರುವನು. ಮತ್ತು ಇವನು ಮುರಪಾಶಗಳನ್ನು ಹರಿದು, ಮುರನನ್ನೂ, ಪಂಚಜನನೆಂಬ ದೈತ್ಯನನ್ನೂ ನಿಗ್ರಹಿಸಿದನು. ಆಮೇಲೆ ಶಿಲಾವಪ್ರಗಳೆಂಬ ಪರ್ವತಪ್ರಾಕಾರಗಳನ್ನು ದಾಟಿಹೋಗಿ, ನಿಕುಂಭನ ನ್ನೂ, ಅವನ ಸೈನ್ಯಗಳನ್ನೂ ಕೊಂದನು. ಮಹಾಪರಾಕ್ರಮಿಯೆನಿಸಿದ ಹ ಯಗ್ರೀವನೂ ಇವನಿಂದ ಹತನಾದನು. ಆಮೇಲೆ ನರಕಾಸುರನನ್ನು ಯುದ್ಧದಲ್ಲಿ ಸಂಹರಿಸಿ, ಅವನಲ್ಲಿದ್ದ ಅದಿತಿಯ ಕುಂಡಲಗಳನ್ನು ತಂದು ಅದಿತಿಗೆ ಕೊಟ್ಟುಬಂದನು. ಮುಂದೆ ಇವನು ಬಾಣಾಸುರನನ್ನು ಕೊಲ್ಲಬೇಕಾಗಿದೆ. ಆಗ ತಿರುಗಿ ಆದಿತ್ಯರೂ, ದೇವತೆಗಳೂ, ಸಾಧ್ಯರೂ ನ ನ್ನೊಡನೆ ಈ ಕೃಷ್ಣನಲ್ಲಿಗೆ ಬರುವ ಸಂಭವವಿದೆ ನಾನು ಹೋಗಿಬರುವೆನು'' ಎಂದು ಹೇಳಿ, ಪ್ರಯಾಣಕ್ಕಾಗಿ ಯಾದವರೆಲ್ಲರ ಅನುಮತಿಯನ್ನು ಕೇಳಿ ಕೊಂಡನು. ವಸುದೇವನನ್ನೂ, ರಾಮಕೃಷ್ಣರನ್ನೂ ಪ್ರೀತಿಯಿಂದಾಲಿಂ ಗಿಸಿದನು. ಆಮೇಲೆ, ಪ್ರದ್ಯುಮ್ನ, ಸಾಂಬ, ಅನಿರುದ್ಧ, ಸಾರಣ, ಬಭ್ರು, ಝಲ್ಲಿ, ಗದ, ಭಾನು, ಚಾರುದೇಷ್ಣ, ಅಕ್ರೂರ, ಸಾತ್ಯಕಿ ಮೊದ ಲಾದವರನ್ನೆಲ್ಲ ವಿಚಾರಿಸಿ, ಅವರಿಂದಲೂ ಅನುಮತಿಯನ್ನು ಪಡೆದುಕೊಂಡ ನು. ಆಮೇಲೆ ರಾಜನಾದ ಆಹುಕನನ್ನು ಸ್ನೇಹದಿಂದಾಲಿಂಗಿಸಿಕೊಂಡ ನು. ಹೀಗೆ ಎಲ್ಲಾ ಯಾದವರ ಅನುಮತಿಯನ್ನೂ ಪಡೆದು, ಮತ್ತೊ ಮ್ಮೆ ಕೃಷ್ಣನಿಗೆ ಹೇಳಿಬಂದು, ತನ್ನ ಪರಿವಾರಗಳೊಡನೆ ಶ್ವೇತಪರ್ವತ ದಂತಿದ್ದ ಐರಾವತವನ್ನೇರಿದನು. ಆ ಐರಾವತದ ವೈಭವವನ್ನು ಕೇಳ ಬೇಕೆ? ಅದು ಜಗತ್ತನ್ನೆಲ್ಲ ಮೊಳಗಿಸುವಂತೆ ಆಗಾಗ ಘೀಂಕಾರಧ್ವನಿಯ ನ್ನು ಮಾಡುವುದು. ಮೈಮೇಲೆ ಕಟ್ಟಿದ ಚಿನ್ನದ ಹೊರಜಿಗಳು! ಕೊಂಬು ಗಳಲ್ಲಿ ಚಿನ್ನದ ಕಟ್ಟುಗಳು! ಬೆನ್ನಿನಮೇಲೆ ಉತ್ತಮವಾದ ಚಿತ್ರಕಂ

ಬಳದ ಕೌದಿ! ಮೈಮೇಲೆ ನವರತ್ನಾಭರಣಗಳು! ಮಳೆಯಂತೆ ಸುರಿಯುತ್ತಿರುವ ಮದಧಾರೆ! ಕಂಠದಲ್ಲಿ ನಾನಾತರದ ಸುವರ್ಣಮಾಲಿಕೆಗಳು! ಇಂತಹ ದಿವ್ಯಾಲಂಕಾರಶೋಭಿತವಾಗಿ, ದಿಗ್ಗಜಗಳಲ್ಲಿ ಪ್ರಧಾನವೆನಿಸಿದ ಆ ಮಹಾಗಜವನ್ನೇರಿ ಕುಳಿತ ದೇವೇಂದ್ರನು, ಮಂದರಶಿಖರದಲ್ಲಿ ಪ್ರಕಾಶಿಸುವ ಸೂರ್ಯನಂತೆ ಬೆಳಗುತ್ತಿದ್ದನು. ಆಮೇಲೆ ದೇವೇಂದ್ರನು ವಜ್ರಖಚಿತವಾದ ಅಂಕುಶವನ್ನು ತಾನೇ ಕೈಯಲ್ಲಿ ಹಿಡಿದು, ಅಗ್ನಿಯನ್ನೂ ತನ್ನೊಡನೆ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಪ್ರಯಾಣಹೊರಟನು. ಕುಬೇರನು, ವರುಣನು, ನವಗ್ರಹಗಳು, ಸಪ್ತಮರುತ್ತುಗಳು, ಮುಂತಾದ ದೇವತೆಗಳೆಲ್ಲ, ಹೆಣ್ಣಾನೆಗಳು, ಗಂಡಾನೆಗಳು, ವಿಮಾನಗಳು ಮೊದಲಾದ ಬೇರೆಬೇರೆ ವಾಹನಗಳನ್ನೇರಿ ಇಂದ್ರನ ಹಿಂದೆ ಹೊರಟರು. ಆ ಇಂದ್ರನು ವಾಯುಮಾರ್ಗಗಳನ್ನು ದಾಟಿ, ವೈಶ್ವಾನರವೆಂಬ ಆಕಾಶಮಾರ್ಗದ ಮಧ್ಯರೇಖೆಯ ಮಾರ್ಗವಾಗಿ ಸೂರ್ಯಮಂಡಲವನ್ನು ಸೇರಿ, ಅಲ್ಲಿಂದ ಹಾಗೆಯೇ ಕಣ್ಮರೆಯಾದನು.

ಇದು ಐವತ್ತೆಂಟನೆಯ ಅಧ್ಯಾಯವು.



## ಕೃಷ್ಣನು ತನ್ನ ತಾಯಿಯರನ್ನೂ, ಪತ್ನಿಯರನ್ನೂ ಕಂಡುಬಂದುದು.

ಧರ್ಮರಾಜಾ! ಇಷ್ಟರಲ್ಲಿ ಎಲ್ಲಾ ಯಾದವಕಾಂತೆಯರೂ, ರಾಜನಾದ ಆಹುಕನ ಪತ್ನಿಯರೂ, ನಂದಪತ್ನಿಯಾದ ಯಶೋದೆಯೂ, ಬಲರಾಮನ ಪತ್ನಿಯಾದ ರೇವತಿಯೂ, ರುಕ್ಮಿಣಿ, ಸತ್ಯಭಾಮೆ, ಜಾಂಬವತಿ, ಗಾಂಧಾರಿ, ಶಿಂಶುಮೆ, ವಿಶೋಕೆ, ಲಕ್ಷಣೆ, ಸುಮಿತ್ರೆ, ಕೇತುಮತಿ ಮೊದ ಕೃಷ್ಣನ ಅಂತಃಪುರಸ್ತ್ರೀಯರೂ, ಮಹಾತ್ಮನಾದ ಕೃಷ್ಣನ ವೈಭವವನ್ನು ನೋಡುವ ಮಹೋತ್ಸಾಹದಿಂದ ಮಂಗಳದ್ರವ್ಯಗಳನ್ನು ತಟ್ಟೆಯಲ್ಲಿಟ್ಟುಕೊಂಡು, ದೇವಕಿಯನ್ನೂ, ರೋಹಿಣಿಯನ್ನೂ ಮುಂದಿಟ್ಟುಕೊಂಡು, ಸಭೆಗೆ ಬಂದು ಅಲ್ಲಿ, ಬಲರಾಮನೊಡನೆ ಕುಳಿತಿದ್ದ ಕೃಷ್ಣನನ್ನು ಕಂಡರು.

ರಾಮಕೃಷ್ಣರಿಬ್ಬರೂ ತಮ್ಮ ಮಾತೆಯರನ್ನು ಕಂಡೊಡನೆ ಥಟ್ಟನೆ ಇದಿರೆದ್ದು ಬಂದು, ಮೊದಲು ರೋಹಿಣಿಗೂ, ಆಮೇಲೆ ದೇವಕಿಗೂ ನಮಸ್ಕರಿಸಿದರು. ಆಗ ದೇವಕಿಯು ಆ ರಾಮಕೃಷ್ಣರನ್ನು ಪ್ರೀತಿಯಿಂದಾದರಿಸುತ್ತ, ಸೂರ್ಯವರುಣರೊಡನೆ ಸೇರಿ ನಿಂತಿರುವ ದೇವಮಾತೆಯಾದ ಅದಿತಿದೇವಿಯಂತೆ ಶೋಭಿಸುತ್ತಿದ್ದಳು. ಇಷ್ಟರಲ್ಲಿ ದೇಹಲಾವಣ್ಯದಿಂದ ಜ್ವಲಿಸುವಂತಿರುವ ದೇವಕಿಯ ಕುಮಾರಿಯೂ ಅಲ್ಲಿಗೆ ಬಂದಳು. ಈ ಕನ್ಯೆಗೆ ಏಕಾನಂಗೆಯೆಂದು ಹೆಸರು. ಇವಳಿಗೆ ತನ್ನ ಇಷ್ಟಬಂದ ರೂಪವನ್ನು ತಾಳುವ ಶಕ್ತಿಯುಂಟು. ಅವಳು ಯಾವಾಗಲೂ ಕನ್ಯಾವಸ್ಥೆಯಲ್ಲಿಯೇ ಇರತಕ್ಕವಳು. ಧರ್ಮಪುತ್ರಾ! ಆ ಕನ್ಯೆಯ ದೆಸೆಯಿಂದಲೇ ಕೃಷ್ಣನು ಕಂಸನನ್ನೂ, ಅವನ ಕಡೆಯವರನ್ನೂ ಸಂಹರಿಸಿದನೆಂದು ತಿಳಿ! ಬಲರಾಮನು ಮೊದಲು ಆ ತನ್ನ ತಂಗಿಯನ್ನು ಪ್ರೇಮದಿಂದಾಲಿಂಗಿಸಿ, ತಲೆಯನ್ನಾಘ್ರಾಣಿಸಿ, ಅವಳ ಎಡಗೈಯನ್ನು ಹಿಡಿದುಕೊಂಡನು. ಆಮೇಲೆ ಕೃಷ್ಣನು ಪ್ರೇಮದಿಂದ ಬಂದು ಅವಳ ಬಲಗೈಯನ್ನು ಹಿಡಿದನು. ಸುವರ್ಣಕಮಲದಂತಿರುವ ಕೈಗಳಿಂದ ಲಕ್ಷ್ಮೀದೇವಿಗೆಣೆಯಾದ ಆ ಕೃಷ್ಣನ ಸಹೋದರಿಯನ್ನು, ಆ ಸಭೆಯಲ್ಲಿದ್ದ ಯಾದವರೆಲ್ಲರೂ ಆಶ್ಚರ್ಯದಿಂದ ನೋಡುತಿದ್ದರು. ಆಮೇಲೆ ಅಲ್ಲಿಗೆ ಬಂದಿದ್ದ ಯಾದವಸ್ತ್ರೀಯರೆಲ್ಲರೂ ರಾಮಕೃಷ್ಣರಮೇಲೆ, ಹೂಗಳನ್ನೂ, ಅರಳುಗಳನ್ನೂ, ಅಕ್ಷತೆಗಳನ್ನೂ, ತುಪ್ಪವನ್ನೂ ಚೆಲ್ಲಿದರು. ಹುಡುಗರು, ಮುದುಕರು ಮೊದಲಾಗಿ ಎಲ್ಲಾ ಯಾದವರೂ, ತಮ್ಮತಮ್ಮ ಸಮಸ್ತ ಬಂಧುಮಿತ್ರರೊಡನೆ ಬಂದು ಕೃಷ್ಣನ ಬಳಿಯಲ್ಲಿ ಕುಳಿತರು. ಆಮೇಲೆ ಪುರುಷೋತ್ತಮನಾದ ಕೃಷ್ಣನು, ಪುರಜನರನ್ನೆಲ್ಲ ಪ್ರಿಯವಾಕ್ಯಗಳಿಂದ ಸಂತೋಷಗೊಳಿಸುತ್ತ, ಅವರ ಸತ್ಕಾರಗಳನ್ನು ತಾನೂ ಸ್ವೀಕರಿಸುತ್ತ, ಅಲ್ಲಿಂದ ಹೊರಟು ತನ್ನ ಗೃಹಕ್ಕೆ, ಬಂದು ರುಕ್ಮಿಣೀದೇವಿಯೊಡನೆ ಸುಖಸಲ್ಲಾಪದಿಂದಿರುತಿದ್ದನು ಆಮೇಲೆ ಕ್ರಮವಾಗಿ ಸತ್ಯಭಾಮೆ, ಜಾಂಬವತಿ ಮುಂತಾದ ಎಲ್ಲಾ ಪತ್ನಿಯರ ಮನೆಗೂ ಹೋಗಿ ಅವರನ್ನೆಲ್ಲ ಸಂತೋಷಗೊಳಿಸಿ, ಆಮೇಲೆ ತಿರುಗಿ ರುಕ್ಮಿಣಿಯ ಗೃಹಕ್ಕೆ ಬಂದು ಸೇರಿದನು. ಅಪ್ಪ ಯುಧಿಷ್ಠಿರಾ! ಇವೆಲ್ಲ ಕೃಷ್ಣನ ಮಹಾವೈಭವಗಳು. ಇಂತಹ ದುಷ್ಟನಿಗ್ರಹ ಕಾರ್ಯಗಳಿಗಾಗಿಯೇ

ಭಗವಂತನಾದ ನಾರಾಯಣನು ಕೃಷ್ಣರೂಪದಿಂದ ಮನುಷ್ಯರಲ್ಲಿ ಜನಿಸಿದನು.

ಇದು ಐವತ್ತೊಂಭತ್ತನೆಯ ಅಧ್ಯಾಯವು.



## ಕೃಷ್ಣನು ಬಾಣಾಸುರನನ್ನು ಕೊಂದುದು.

ಧರ್ಮರಾಜಾ! ಹೀಗೆ ಕೃಷ್ಣನು ದ್ವಾರಕಾಪುರದಲ್ಲಿ ತನ್ನ ಅಂತಃಪುರ ಸ್ತ್ರೀಯರೊಡನೆ ಸುಖವಾಗಿ ಇರುತಿದ್ದನು. ಆಮೇಲೆ ಒಮ್ಮೆ ಅವನು ತನ್ನ ಮೊಮ್ಮಗನಾದ ಅನಿರುದ್ಧನ ಮತ್ತು ದೇವತೆಗಳ ಕ್ಷೇಮಕ್ಕಾಗಿ ಇಂದ್ರಾದಿದೇವತೆಗಳಿಗೂ ಅಸಾಧ್ಯವಾದ ಒಂದು ಕಾರ್ಯವನ್ನು ನಡೆಸಬೇಕಾಯಿತು. ಬಾಣಾಸುರನೆಂಬ ದೈತ್ಯರಾಜನಿದ್ದನು. ಅವನು ಬಲಿಚಕ್ರವರ್ತಿಯ ಹಿರಿಯ ಮಗನು. ಮಹಾಬಲಾಢ್ಯನು. ಅವನು ಅನೇಕ ವರ್ಷಗಳವರೆಗೆ ವೃಢಮನಸ್ಸಿನಿಂದ ಕಠಿನತಪಸ್ಸನ್ನು ಮಾಡಿ, ಶಿವನನ್ನು ಆರಾಧಿಸಿದನು. ರುದ್ರನು ಅವನಿಗೆ ಎಂತವರಿಗೂ ದುರ್ಲಭವಾದ ಅನೇಕವರಗಳನ್ನು ಕೊಟ್ಟನು. ಈ ವರಬಲದಿಂದ ಕೊಬ್ಬಿ ಆ ಬಾಣಾಸುರನು ಯಾರನ್ನೂ ಲಕ್ಷ್ಯಮಾಡದೆ ಶೋಣಿತಪುರಿಯಲ್ಲಿ ರಾಜ್ಯಪರಿಪಾಲನಮಾಡುತ್ತಿದ್ದನು. ಅವನಿಗೆ ಸಾವಿರ ತೋಳುಗಳು. ಅವನು ಇಂದ್ರಾದಿದೇವತೆಗಳನ್ನೆಲ್ಲ ಜಯಿಸಿ ಕುಬೇರನಂತೆ ಶ್ರೀಮಂತನಾಗಿ ಅನೇಕವರ್ಷಗಳವರೆಗೆ ದೊಡ್ಡರಾಜ್ಯವನ್ನಾಳುತಿದ್ದನು. ಆ ಬಾಣನಿಗೆ ಉಷೆಯೆಂಬ ಮಗಳಿದ್ದಳು. ಪ್ರದ್ಯುಮ್ನನ ಮಗನಾದ ಅನಿರುದ್ಧನೆಂಬವನು ಏನೋ ಒಂದು ಉಪಾಯದಿಂದ ಆ ಉಷೆಯೊಡನೆ ರಹಸ್ಯವಾಗಿ ಸರಸವಾಡುತಿದ್ದನು. ಅನಿರುದ್ಧನು ತನ್ನ ಮಗಳೊಡನೆ ರಹಸ್ಯವಾಗಿ ವಾಸಿಸುತ್ತಿರುವುದನ್ನು ಬಾಣನು ತಿಳಿದು, ಅವನನ್ನು ಹಿಡಿದು ತನ್ನ ಸೆರೆಮನೆಯಲ್ಲಿ ಬಂಧಿಸಿಟ್ಟನು. ಬಾಲ್ಯದಿಂದಲೂ ಸುಖದಲ್ಲಿಯೇ ಬೆಳೆದ ಆ ಅನಿರುದ್ಧನು, ಬಾಣಾಸುರನ ಸೆರೆಯಲ್ಲಿ ಸಿಕ್ಕಿ, ಅವನಿಂದ ಅನೇಕ ವಿಧದಲ್ಲಿ ಹಿಂಸಿಸಲ್ಪಡುತ್ತ ವ್ಯಸನದಿಂದ ಕೊರಗುತಿದ್ದನು. ಈ ಸಮಯ

ದಲ್ಲಿ ನಾರದಮಹರ್ಷಿಯು ದ್ವಾರಕೆಗೆ ಹೋಗಿ ಕೃಷ್ಣನನ್ನು ಕಂಡು "ಕೃಷ್ಣಾ! ಕೃಷ್ಣಾ! ಓ ಮಹಾಬಾಹೂ! ನಿನ್ನ ಮೊಮ್ಮಗನಾದ ಅನಿರುದ್ಧನು ಬಾಣಾಸುರನ ಸೆರೆಯಲ್ಲಿ ಸಿಕ್ಕಿಬಿದ್ದು ಸಂಕಟಕ್ಕೊಳಗಾಗಿರುವನು. ಬಾಣಾಸುರನು ಅವನನ್ನು ಬಹಳವಾಗಿ ಬಾಧಿಸುತ್ತಿರುವನು" ಎಂದನು. ನಾರದನು ಹೀಗೆಂದು ಹೇಳಿ ತಿರುಗಿ ಬಾಣಾಸುರನ ಪಟ್ಟಣಕ್ಕೆ ಹೋದನು. ನಾರದನ ಮಾತನ್ನು ಕೇಳಿದಕೂಡಲೆ ಕೃಷ್ಣನು ಬಲರಾಮನನ್ನೂ, ಮಹಾಬಲಾಢ್ಯನಾದ ಪ್ರದ್ಯುಮ್ನನನ್ನೂ ಕರೆದುಕೊಂಡು, ಅವರೊಡನೆ ಗರುಡನನ್ನೇರಿ ವೇಗದಿಂದ ಶೋಣಿತಪುರಕ್ಕೆ ಬಂದನು. ಆ ನಗರಕ್ಕೆ ಸುತ್ತಲೂ ತಾಮ್ರದ ಕೋಟೆಗಳು! ಅಲ್ಲಲ್ಲಿ ಸುವರ್ಣಪ್ರಾಸಾದಗಳು! ಇಂತಹ ಶೋಭಾತಿಯುವುಳ್ಳ ಆ ನಗರದ ಸೊಬಗನ್ನು ನೋಡಿ, ಆ ಮೂವರೂ ಆಶ್ಚರ್ಯಭರಿತರಾದರು. ಇದಲ್ಲದೆ, ಆ ಬಾಣಾಸುರನ ಪಟ್ಟಣದ ನಾಲ್ಕು ಬಾಗಿಲುಗಳಲ್ಲಿಯೂ ನಾಲ್ಕುಮಂದಿ ದೇವತೆಗಳೇ ದ್ವಾರಪಾಲಕರಂತೆ ಕಾವಲಿರುತಿದ್ದರು. ಒಂದು ಬಾಗಿಲಲ್ಲಿ ಮಹೇಶ್ವರನು, ಇನ್ನೊಂದರಲ್ಲಿ ಷಣ್ಮುಖನು, ಮತ್ತೊಂದರಲ್ಲಿ ಭದ್ರಕಾಳಿ, ಬೇರೊಂದು ಬಾಗಿಲಲ್ಲಿ ವಿನಾಯಕನು. ಹೀಗೆ ನಾಲ್ಕುಮಂದಿಯೂ ನಾಲ್ಕು ಬಾಗಿಲಲ್ಲಿ ಕಾವಲಾಗಿರುತಿದ್ದರು. ಕೃಷ್ಣನು ತನ್ನ ಬಲದಿಂದ ಆ ದ್ವಾರಪಾಲಕರಲ್ಲಿ ಮೂವರನ್ನು ಜಯಿಸಿ, ಕೊನೆಗೆ ಶಿವನಿಂದ ರಕ್ಷಿತವಾದ ಉತ್ತರದ್ವಾರಕ್ಕೆ ಬಂದನು. ಶಂಖ ಚಕ್ರ ಗದಾಖಡ್ಗಗಳನ್ನು ಧರಿಸಿದವನೂ, ಮಹಾತೇಜಸ್ವಿಯೂ ಆದ ಕೃಷ್ಣನು, ಆ ಬಾಗಿಲಲ್ಲಿ ಶೂಲಪಾಣಿಯಾದ ಮಹೇಶ್ವರನು, ಪಿನಾಕವೆಂಬ ತನ್ನ ಮಹಾಧನುಸ್ಸನ್ನು ಹಿಡಿದು, ಬಾಣಾಸುರನ ಕ್ಷೇಮಕ್ಕಾಗಿ ದ್ವಾರಪಾಲಕನಂತೆ ಕಾದಿರುವುದನ್ನು ಕಂಡನು. ಬಾಯಿತೆರೆದುಕೊಂಡು ಬರುವ ಯಮನಂತೆ ಕೃಷ್ಣನು ಕೋಪದಿಂದ ತನ್ನ ಕಡೆಗೆ ಬರುವುದನ್ನು ಕಂಡು ಶಂಕರನು ಯುದ್ಧಸನ್ನದ್ಧನಾದನು. ವಾಸುದೇವ ಮಹೇಶ್ವರಿಬ್ಬರಿಗೂ ದೊಡ್ಡ ಯುದ್ಧವು ನಡೆಯಿತು. ಅವರಿಬ್ಬರ ಯುದ್ಧವು ನೋಡುವವರಿಗೆ ರೋಮಾಂಚವನ್ನು ಹುಟ್ಟಿಸುವಂತೆ ಅತಿಭಯಂಕರವಾಯಿತು. ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟದಿಂದ ತೀಕ್ಷ್ಣಬಾಣಗಳನ್ನು ಬಿಟ್ಟು ಒಬ್ಬರನ್ನೊಬ್ಬರು ಭೇದಿಸುತಿದ್ದರು. ಇಬ್ಬರೂ ಕೋಪ

ದಿಂದ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದರು. ಹೀಗೆ ಮುಹೂರ್ತಕಾಲದವರೆಗೆ ಯುದ್ಧಮಾಡಿದಮೇಲೆ, ಕೊನೆಗೆ ಕೃಷ್ಣನು, ಅಲ್ಲಿ ಕಾವಲಿದ್ದ ರುದ್ರನನ್ನೂ, ಅವನ ಅನುಚರರನ್ನೂ ಜಯಿಸಿ, ಪುರದೊಳಗೆ ಪ್ರವೇಶಮಾಡಿದನು. ಅಲ್ಲಿ ಬಾಣಾಸುರನನ್ನಿದಿರಿಸಿ, ಅವನೊಡನೆ ಘೋರಯುದ್ಧವನ್ನು ನಡೆಸಿದನು. ಬಾಣಾಸುರನೂ ಕೋಪದಿಂದ ಅನೇಕ ಶಸ್ತ್ರಾಸ್ತ್ರಗಳನ್ನು ಕೃಷ್ಣನಮೇಲೆ ಪ್ರಯೋಗಿಸಿದನು. ಅವನು ತನ್ನ ಸಾವಿರ ತೋಳುಗಳಿಂದಲೂ ಮೇಲೆಮೇಲೆ ಎಡೆಬಿಡದೆ ಬಾಣಗಳನ್ನು ತೆಗೆದು ಕೃಷ್ಣನಮೇಲೆ ವರ್ಷಿಸುತ್ತಿದ್ದನು. ಆದರೇನು? ಕೃಷ್ಣನು ಆ ಬಾಣಾಸುರನು ಪ್ರಯೋಗಿಸಿದ ಎಲ್ಲಾ ಶಸ್ತ್ರಾಸ್ತ್ರಗಳನ್ನೂ ತನ್ನ ಬಾಣಗಳಿಂದ ಕತ್ತರಿಸಿದುದಲ್ಲದೆ, ಕೊನೆಗೆ ಸಮಸ್ತ ಶಸ್ತ್ರಾಸ್ತ್ರಗಳಿಗೂ ಮೇಲೆನಿಸಿದ ತನ್ನ ಚಕ್ರಾಯುಧವನ್ನು ಪ್ರಯೋಗಿಸಿ, ಆ ಬಾಣಾಸುರನ ಸಾವಿರತೋಳುಗಳನ್ನೂ ಕಡಿದುಬಿಟ್ಟನು. ಒಡನೆಯೇ ಬಾಣಾಸುರನು ಅದರಿಂದ ಬಹಳವಾಗಿ ನೊಂದು ಕೊಂಬೆಗಳನ್ನು ಕಡಿದ ಮಹಾವೃಕ್ಷದಂತೆ ತೋಳುಗಳಿಲ್ಲದ ಬರೀ ಶರೀರದೊಡನೆ ಕೆಳಗೆ ಬಿದ್ದನು. ಹೀಗೆ ಕೃಷ್ಣನು ಬಾಣಾಸುರನನ್ನು ಕೆಡಹಿದಮೇಲೆ, ಒಡನೆಯೇ ಸೆರೆಮನೆಗೆ ಹೋಗಿ, ಅಲ್ಲಿದ್ದ ಅನಿರುದ್ಧನನ್ನೂ, ಅವನ ಪತ್ನಿಯಾದ ಉಷೆಯನ್ನೂ (ಬಾಣಾಸುರನ ಮಗಳು) ಸೆರೆಯಿಂದ ಬಿಡಿಸಿ ಕರೆತಂದನು. ಆಮೇಲೆ ಕೃಷ್ಣನು ಬಾಣನ ಅರಮನೆಯಲ್ಲಿದ್ದ ಅಸಂಖ್ಯಾತಗಳಾದ ರತ್ನಗಳನ್ನೂ, ಗೋಧನಗಳೇ ಮೊದಲಾದ ಅವನ ಸರ್ವಸ್ವವನ್ನೂ ಸಾಗಿಸಿಕೊಂಡು ಬಂದನು. ಆ ಧನರಾಶಿಯನ್ನೆಲ್ಲ ಗರುಡನ ಮೇಲೇರಿಸಿಕೊಂಡು, ಬಲರಾಮ ಪ್ರದ್ಯುಮ್ನರನ್ನೂ, ಅನಿರುದ್ಧನನ್ನೂ, ಅವನ ಪತ್ನಿಯಾದ ಉಷೆಯನ್ನೂ, ಇವರೆಲ್ಲರ ಭೃತ್ಯರನ್ನೂ ಕರೆದುಕೊಂಡು, ಉದಯಗಿರಿಯನ್ನೇರಿದ ಸೂರ್ಯನಂತೆ ಗರುಡಾರೂಢನಾಗಿ, ದಿವ್ಯಕಾಂತಿಯಿಂದ ಬೆಳಗುತ್ತ ಸಂತೋಷದಿಂದ ದ್ವಾರಕೆಗೆ ಹಿಂತಿರುಗಿದನು.

ಇದು ಅರುವತ್ತನೆಯ ಅಧ್ಯಾಯವು.



ಕೃಷ್ಣನು ಲೋಕಕ್ಷೇಮಕ್ಕಾಗಿ ಹಿಂದೆ ನಡೆಸಿದ ಮತ್ತು ಮುಂದೆ ನಡೆಸಬಹುದಾದ ಕಾರ್ಯಗಳನ್ನೆಲ್ಲ ಸಂಗ್ರಹಿಸಿ ಭೀಷ್ಮನು ಧರ್ಮರಾಜನಿಗೆ ಹೇಳಿದುದು.

ಓ ಧರ್ಮಪುತ್ರಾ! ಕೃಷ್ಣನು ನರಕಾಸುರನ ದ್ವಾರಪಾಲಕರನ್ನು ಕೊಂದನು. ನಿಶುಂಭ ನರಕರನ್ನು ಕೊಂದು, ಪ್ರಾಗ್ಜ್ಯೋತಿಷಪುರವನ್ನೂ, ಅದರ ಮಾರ್ಗವನ್ನೂ ನಿಷ್ಕಂಟಕವಾಗಿ ಮಾಡಿದನು. ಕೃಷ್ಣನ ಚಾಪ ಧ್ವನಿ, ಪಾಂಚಜನ್ಯವೆಂಬ ಅವನ ಶಂಖದ ಧ್ವನಿ, ಇವುಗಳಿಂದಲೇ ರಾಜರೆಲ್ಲರೂ ನಡುಗುತ್ತಿದ್ದರು. ಮೇಘದಂತೆ ಕಪ್ಪುಬಣ್ಣವುಳ್ಳ ದಕ್ಷಿಣದೇಶದ ಅನೇಕಸೈನಿಕರಿಂದ ರಕ್ಷಿತನಾದ ರುಕ್ಮಿಯನ್ನು ಕೃಷ್ಣನು ತನ್ನ ಪರಾಕ್ರಮದಿಂದ ನಡುಗಿಸಿಬಿಟ್ಟನು. ಮಹಾ ಮೇಘದಂತಿರುವ ತನ್ನ ದಿವ್ಯರಥದಮೇಲೆ ಭೋಜಪುತ್ರಿಯಾದ ರುಕ್ಮಿಣಿಯನ್ನು (ರುಕ್ಮಿಯ ತಂಗಿ) ಏರಿಸಿಕೊಂಡು ಅವಳ ಕೋರಿಕೆಯಂತೆ ತನ್ನ ಭಾರ್ಯೆಯನ್ನಾಗಿ ಮಾಡಿಕೊಂಡನು. ಆಗ ತನ್ನನ್ನು ಇದಿರಿಸಿಬಂದ ಜಾರೂಥ್ಯನೆಂಬ ರಾಜನನ್ನೂ, ಕೋಪಗೊಂಡ ಶಿಶುಪಾಲನನ್ನೂ ಹೊಡೆದೋಡಿಸಿದನು. (ಜಾರೂಥ್ಯವೆಂಬ ಒಂದು ಯಾಗದಲ್ಲಿ ತನ್ನನ್ನಿದಿರಿಸಿದ ಶಿಶುಪಾಲನನ್ನು ಜಯಿಸಿದನು.) ಹಾಗೆಯೇ ಈ ಕೃಷ್ಣನು ದಂತವಕ್ರನು, ಸುಧನ್ವನು, ಇಂದ್ರದ್ಯುಮ್ನನು, ಕಾಲಯವನನು, ಕಶೇರುಕನು, ಸೌಭರಾಜನಾದ ಸಾಲ್ವನು, ಇವರನ್ನೆಲ್ಲ ಯುದ್ಧದಲ್ಲಿ ಕೊಂದನು. ಪುರುಷೋತ್ತಮನಾದ ಈ ಪುಂಡರೀಕಾಕ್ಷನು, ತನ್ನ ಚಕ್ರಾಯುಧದಿಂದ ಸಹಸ್ರ ಪರ್ವತಗಳನ್ನು ಭೇದಿಸಿ, ದ್ಯುಮತ್ಸೇನನನ್ನು ನಿಗ್ರಹಿಸಿದನು. ಮತ್ತು ಇವನು ಮಹೇಂದ್ರಪರ್ವತಶಿಖರದಲ್ಲಿ ಎವೆ ಹಾರುವಷ್ಟರಲ್ಲಿಯೇ ಎಷ್ಟೋ ದೂರಕ್ಕೆಹಾರಿಹೋಗತಕ್ಕ ಮೈಂದದ್ವಿವಿದರೆಂಬ ವಾನರರಿಬ್ಬರನ್ನೂ ಹಿಡಿದು ಕಟ್ಟಿದನು. ದ್ವಾರಕಾಪುರದಲ್ಲಿ ಅಗ್ನಿ ಸೂರ್ಯರಿಗೆ ಸಮಾನತೇಜಸ್ಸುಳ್ಳ ಮಹಾಭೋಜನನ್ನು ಕೊಂದನು. ಅಕ್ಷಪ್ರವೆಂಬ ಪಟ್ಟಣದಲ್ಲಿ ತನ್ನನ್ನು ಪರಿಹಾಸಮಾಡುತ್ತಿದ್ದ ಗೋಪತಿ ಮತ್ತು ಕಾಲಕೇತುವೆಂಬ ಇಬ್ಬರು ರಾಜರನ್ನು ಅವರ ದೇಶದಲ್ಲಿಯೇ ವಧಿಸಿದನು. ವಾರಣಾಸಿಯೆಂಬ ಕಾಶಿಯನ್ನು ದಹಿಸಿದನು. ಮತ್ತು ಪಾಂಡ್ಯ, ಪೌಂಡ್ರ, ಮಾತ್ಸಕ, ಕಳಿಂಗ, ಅಂಗರಾಜರೆಂಬ ಐದುಮಂದಿಯೂ ಒ

ಟ್ಟಾಗಿ ತನ್ನನ್ನಿದಿರಿಸಿದಾಗ, ಅವರನ್ನೆಲ್ಲ ಏಕಕಾಲದಲ್ಲಿ ಕೊಂದನು. ಇವನು ಏಕರಥನಾಗಿಯೇ ಒಮ್ಮೆ ನೂರುಮಂದಿ ಕ್ಷತ್ರಿಯರನ್ನು ವಧಿಸಿ, ಗಾಂಧಾರದೇಶದ ರಾಜಕನ್ಯೆಯನ್ನು ತನ್ನ ಭಾರ್ಯೆಯನ್ನಾಗಿ ಪರಿಗ್ರಹಿಸಿದನು. ಈ ಮಹಾತ್ಮನು ಕುಂತಿಯ ಕಣ್ಣಮುಂದೆಯೇ ವಿನೋದಾರ್ಥವಾಗಿ ಅರ್ಜುನನನ್ನು ಸೋಲಿಸಿದನು. ಒಮ್ಮೆ ತನ್ನಮೇಲೆ ಒಟ್ಟಾಗಿ ಯುದ್ಧಕ್ಕೆ ಬಂದ ಅಶ್ವತ್ಥಾಮ, ಕೃಪ, ಕರ್ಣ, ದುರ್ಯೋಧನಾದಿಗಳನ್ನೆಲ್ಲ ಜಯಿಸಿದನು. ಮತ್ತೊಮ್ಮೆ ಬಭ್ರುವೆಂಬ ಯಾದವನ ಅಭೀಷ್ಟವನ್ನು ನೆರವೇರಿಸುವುದಕ್ಕಾಗಿ ವೇಣುದಾರಿಯೆಂಬ ರಾಜನು ವರಿಸಬೇಕೆಂದಿದ್ದ ತರುಣಿಯನ್ನು ಅವನಿಂದ ಬಲಾತ್ಕರಿಸಿ ಸೆಳೆತಂದನು. ಆ ಸಂದರ್ಭದಲ್ಲಿ ಚತುರಂಗ ಸೈನ್ಯಸಮೃದ್ಧವಾಗಿದ್ದ ವೇಣುದಾರಿಯ ರಾಜ್ಯವನ್ನು ತನ್ನ ವಶಪಡಿಸಿಕೊಂಡನು. ತಪಸ್ಸಿನಲ್ಲಿಯೂ, ವೀರ್ಯದಲ್ಲಿಯೂ, ಬಲದಲ್ಲಿಯೂ ಅಸಮಾನನಾಗಿ, ದೇವತೆಗಳನ್ನೂ, ಅವರ ಸೈನ್ಯಗಳನ್ನೂ ನಡುಗಿಸುತ್ತ, ಇಂದ್ರಾದಿ ದೇವತೆಗಳು ಗದೆ, ಬಾಣ, ವಜ್ರಾಯುಧ, ಮುಂತಾದ ವಿವಿಧಾಯುಧಗಳಿಂದ ಹೊಡೆದರೂ ಸಾಯದ ಬಾಣಾಸುರನನ್ನು ಶ್ರೀಕೃಷ್ಣನು ಯುದ್ಧದಲ್ಲಿ ಇದಿರಿಸಿ, ಅವನ ಸಹಸ್ರ ಬಾಹುಗಳನ್ನೂ ಕತ್ತರಿಸಿ, ಅವನನ್ನು ಜೀವವಿದ್ದಂತೆಯೇ ಬಿಟ್ಟುಬಿಟ್ಟನು. ಮತ್ತು ಮಹಾಬಾಹುವಾದ ಈ ಕೃಷ್ಣನು ಕಂಸನನ್ನು ಕೊಂದನು. ತಪಸ್ಸಿನಿಂದಲೂ, ವೀರ್ಯದಿಂದಲೂ, ಬಲಪರಾಕ್ರಮಗಳಿಂದಲೂ ಎಣೆಯಿಲ್ಲದ ಕೈಟಭಾಸುರನನ್ನೂ, ಅವನ ಕಡೆಯ ರಾಕ್ಷಸರನೇಕರನ್ನೂ ಕೊಂದನು. ಮತ್ತು ಇವನು ಜಂಭ, ಐರಾವತ, ವಿರೂಪ, ಶಂಬರಾದಿಗಳನ್ನೆಲ್ಲ ಸಂಹರಿಸಿದನು. ಒಮ್ಮೆ ನಾಗನಗರವಾದ ಭೋಗವತಿಗೆ ಹೋಗಿ, ವಾಸುಕಿಯನ್ನು ಜಯಿಸಿ, ರುಕ್ಮಿಣಿಯ ಮಗನಾದ ಪ್ರದ್ಯುಮ್ನನನ್ನು ಅಲ್ಲಿಂದ ಬಿಡಿಸಿ ತಂದನು. ಇವನು ಬಾಲ್ಯದಲ್ಲಿಯೇ ಬಲರಾಮಸಹಿತನಾಗಿ ಇನ್ನೂ ಎಷ್ಟೋ ಅದ್ಭುತಕಾರ್ಯಗಳನ್ನು ನಡೆಸಿರುವನು. ದೈತ್ಯರಿಗೆ ಭಯವನ್ನೂ, ದೇವತೆಗಳಿಗೆ ಅಭಯವನ್ನೂ ಕೊಡತಕ್ಕ ಈ ಮಹಾತ್ಮನೇ ಸಮಸ್ತ ಲೋಕಕ್ಕೂ ಪ್ರಭು. ಹೀಗೆಯೇ ಇವನು ಇನ್ನು ಮುಂದೆಯೂ ದುಷ್ಟರನ್ನಡಗಿಸಿ ದೇವತೆಗಳಿಗೆ ಕ್ಷೇಮವನ್ನುಂಟುಮಾಡಿ, ಆಮೇಲೆ ತನ್ನ ನಿಜಲೋಕವಾದ ವೈಕುಂಠಕ್ಕೆ ತೆರಳುವನು. ಓ ಧರ್ಮ

ಪುತ್ರಾ! ಈ ಕೃಷ್ಣನು ಸಮಸ್ತ ಭೋಗಸಂಪನ್ನವಾಗಿಯೂ, ಪವಿತ್ರವಾಗಿಯೂ, ಸೂರ್ಯನಂತೆ ಕಾಂತಿವಿಶಿಷ್ಟವಾಗಿಯೂ ಇರುವ ದ್ವಾರಕಾನಗರಿಯನ್ನು ತಾನಿದ್ದವರೆಗೆ ಅನುಭವಿಸಿ, ಆಮೇಲೆ ಅದನ್ನು ಸಮುದ್ರದಲ್ಲಿ ಮುಳುಗಿಸಿ ಹೋಗುವನು. ಆ ದ್ವಾರಕಾನಗರಿಯಲ್ಲಿ ಕೃಷ್ಣನು ಹೊರತು ದೇವ ದಾನವ ಮಾನವರಲ್ಲಿ ಬೇರೆ ಯಾವನೂ ಇದುವರೆಗೆ ಇದ್ದುದಿಲ್ಲ! ಮುಂದೆ ಇರುವವನೂ ಇಲ್ಲ! ಕೃಷ್ಣನು ಈ ಲೋಕವನ್ನು ಬಿಡುವಾಗ ವೃಷ್ಣ್ಯಂಧಕರು ಮೊದಲಾದವರೆಲ್ಲರೂ ಮೃತಿಹೊಂದಿ ಸ್ವರ್ಗಕ್ಕೆ ಹೋಗುವರು. ಶ್ರೀಮನ್ನಾರಾಯಣನು ಹೀಗೆ ಯಾದವರನ್ನು ಮೊದಲು ಕೊನೆಮುಟ್ಟಿಸಿ, ಆಮೇಲೆ ತಾನು ತನ್ನ ನಿಜಸ್ಥಾನಕ್ಕೆ ಹೋಗುವನು. ಆ ಭಗವಂತನು ಅಪ್ರಮೇಯವಾದ ಮಹಿಮೆಯುಳ್ಳವನು. ಯಾರಿಂದಲೂ ಅಡಗಿಸಲಾರದವನು. ತನ್ನ ಇಚ್ಛೆಯಂತೆ ಎಲ್ಲವನ್ನೂ ನಡೆಸತಕ್ಕವನು. ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವವನು. ಅಂತಹ ಈ ಪರಮಾತ್ಮನು, ಬಾಲಕರು ಬೊಂಬೆಗಳನ್ನಿಟ್ಟುಕೊಂಡು ಆಟವಾಡುವಂತೆ, ತನ್ನ ವಿನೋದಕ್ಕಾಗಿ ಸೃಷ್ಟ್ಯಾದಿಕಾರ್ಯಗಳನ್ನು ನಡೆಸುತ್ತ, ತಾನೂ ಈ ಲೋಕಗಳಲ್ಲಿ ಬೇರೆಬೇರೆ ಅವತಾರಗಳಿಂದ ವಿಹರಿಸುವನು. ಪ್ರಭುವಾದ ಶ್ರೀಕೃಷ್ಣನಿಗೆ ಮನುಷ್ಯರಂತೆ ಗರ್ಭವಾಸವಿಲ್ಲ. ಮತ್ತೊಬ್ಬರ ಗರ್ಭದಲ್ಲಿ ಬೆಳೆಯುವವನಲ್ಲ. ತನಗೆತಾನೇ ಹುಟ್ಟಿದವನು. ತನ್ನ ದಿವ್ಯಶಕ್ತಿಯಿಂದಲೇ ಎಲ್ಲರಿಗೂ ಹಿತವನ್ನುಂಟುಮಾಡುವನು. ನೀರಿನ ಗುಳ್ಳೆಗಳು ನೀರಿನಲ್ಲಿಯೇ ಹುಟ್ಟಿ ಅಲ್ಲಿಯೇ ಲಯಿಸುವಂತೆ, ಚರಾಚರಾತ್ಮಕವಾದ ಸಮಸ್ತಪ್ರಪಂಚವೂ ಇವನಲ್ಲಿಯೇ ಹುಟ್ಟಿ ಇವನಲ್ಲಿಯೇ ಲಯಿಸುವುವು. ಪ್ರಪಂಚವೆಲ್ಲವೂ ತಾನೇಆಗಿ, ಪ್ರಪಂಚಕ್ಕಿಂತಲೂ ತಾನು ಮೇಲೆನಿಸಿಕೊಂಡಿರುವನು. ಅವನಿಗಿಂತಲೂ ಮೇಲೆನಿಸಿದುದಾವುದೂ ಇಲ್ಲ" ಎಂದನು.

ಇದು ಅರುವತ್ತೊಂದನೆಯ ಅಧ್ಯಾಯವು.



ಭೀಷ್ಮನು ತನ್ನ ಮಾತುಗಳನ್ನು ಮುಗಿಸಿದಮೇಲೆ, ಸಹದೇವನು ಕೃಷ್ಣಪೂಜೆಯನ್ನು ಸಹಿಸದ ರಾಜರನ್ನು ಅಲ್ಲಿಯೇ ಕೊಲ್ಲುವುದಾಗಿ ಪ್ರತಿಜ್ಞೆಮಾಡಿದುದು. ರಾಜರೆಲ್ಲ ಯುದ್ಧಕ್ಕಿದಿರಾದುದು.

ಜನಮೇಜಯರಾಜಾ! ಭೀಷ್ಮನು ಇಷ್ಟು ಮಾತುಗಳನ್ನು ಹೇಳಿ ಸುಮ್ಮನಾದನು. ಆಮೇಲೆ ಸಹದೇವನು ಆ ಸಭೆಯನ್ನು ನೋಡಿ ಅರ್ಥವತ್ತಾದ ವಾಕ್ಯದಿಂದ ಹೀಗೆಂದು ಹೇಳುವನು. "ಎಲೈ ರಾಜರೆ! ಅಪ್ರಮೇಯಪ್ರಭಾವವುಳ್ಳ ಈ ಕೃಷ್ಣನಿಗೆ ಈಗ ನ್ಯಾನೇನೋ ಅಗ್ರಪೂಜೆಯನ್ನು ನಡೆಸುವುದು ನಿಜವು! ಇದನ್ನು ನೋಡಿ ಇಲ್ಲಿ ಯಾರು ಸಹಿಸದೆ ಅಸೂಯೆಪಡುವರೋ, ಅವರ ತಲೆಯಮೇಲೆ, ಇದೋ! ಈ ನನ್ನ ಕಾಲನ್ನಿಡುವೆನು. ಇಲ್ಲಿ ಧೈರ್ಯವಿದ್ದವರು ನನ್ನ ಮಾತಿಗೆ ಉತ್ತರವನ್ನು ಕೊಡಲಿ! ನನ್ನ ಮಾತಿಗೆ ಪ್ರತಿಮಾತಾಡತಕ್ಕವನು ಈಗಲೇ ನನ್ನ ಕೈಯಿಂದ ಸಾಯುವುದೂ ನಿಶ್ಚಯವು!! ಇದಕ್ಕೆ ಸಂದೇಹವಿಲ್ಲ. ಇಲ್ಲಿ ವಿವೇಕವುಳ್ಳ ರಾಜರಾರಾದರೂ ಇರುವುದಾದರೆ, ಅವರು ಇಲ್ಲಿ ಆಚಾರ್ಯನೂ, ತಂದೆಯೂ, ಲೋಕಪೂಜಿತನೂ, ಯಾವಾಗಲೂ ಎಲ್ಲಾ ಪೂಜೆಗಳಿಗೂ, ಕಾಣಿಕೆಗಳಿಗೂ ಅರ್ಹನೂ ಆದ ಈ ಶ್ರೀಕೃಷ್ಣನಿಗೆ ನಾನು ಮಾಡುವ ಪೂಜೆಯನ್ನು ಆ ಮೋದಿಸಲಿ!" ಎಂದನು. ವಿವೇಕಿಗಳೂ, ಬಲಾಢ್ಯರೂ, ಮಾನಿಷ್ಠರೂ ಆದ ಅನೇಕರಾಜರು ನೆರೆದಿದ್ದ ಆ ಮಹಾಸಭೆಯಲ್ಲಿ ಸಹದೇವನು, ತನ್ನ ಕಾಲನ್ನೆತ್ತಿ ತೋರಿಸಿದಾಗಲೂ, ಅವರಲ್ಲ ಯಾವನೊಬ್ಬನೂ, ಯಾವಮಾತನ್ನೂ ಆಡಲಾರದೆ ಹೋದನು. ಸಭೆಯೆಲ್ಲವೂ ಕೇವಲಮೌನದಿಂದ ಸ್ತಬ್ಧವಾಗಿದ್ದಿತು. ಇಷ್ಟರಲ್ಲಿ ಸಹದೇವನ ಶಿರಸ್ಸಿನಮೇಲೆ ಪುಷ್ಪವೃಷ್ಟಿಯು ಸುರಿಯಿತು. "ಸಹದೇವಾ! ಸರಿ! ಸರಿ! ಭಲೆ! ಶಹಬಾಸ್!" ಎಂಬ ಅಶರೀರವಾಣಿಯು ಆಕಾಶದಿಂದ ಕೇಳಿಸಿತು. ಇಷ್ಟರಲ್ಲಿಯೇ ಭೂತಭವಿಷ್ಯತ್ತುಗಳನ್ನು ತಿಳಿದವನೂ, ಸಮುಸ್ತಸಂಶಯಗಳನ್ನೂ ನೀಗಿಸತಕ್ಕವನೂ ಸಮಸ್ತ ಲೋಕವೃತ್ತಾಂತಗಳನ್ನೂ ಬಲ್ಲವನೂ ಆದ ನಾರದನು, ಆ ಸಭಾಮಧ್ಯದಲ್ಲಿ ಎದ್ದುನಿಂತು, ತನ್ನ ಕೃಷ್ಣಾಜಿನವನ್ನೊದರುತ್ತ, ಆ ಸಭೆಯವರನ್ನು ನೋಡಿ, ಸಮಸ್ತಭೂತಗಳೂ ಕೇಳುವಂತೆ ಸ್ಪಷ್ಟಧ್ವನಿಯಿಂದ

“ಎಲೈ ಸದಸ್ಯರೇ! ಪುಂಡರೀಕಾಕ್ಷನಾದ ಈ ಶ್ರೀಕೃಷ್ಣನನ್ನು ಪೂಜಿಸಲು ಯಾವನು ಹಿಂಜರಿಯುವನೋ, ಅಂತಹ ಮನುಷ್ಯನು ಜೀವನ್ಮೃತನೆಂದೇ ತಿಳಿಯಿರಿ! ಅಂತವನು ಸಂಭಾಷಣೆಗೂ ಯೋಗ್ಯನಲ್ಲ” ಎಂದು ಹೇಳಿ ಸುಮ್ಮನಾದನು. ಓ ಜನಮೇಜಯರಾಜಾ! ಸಹದೇವನು ತಾನು ಹೇಳಿದಂತೆ ಕೃಷ್ಣನಿಗೆ ಮೊದಲು ಪೂಜೆಯನ್ನು ನಡೆಸಿಬಿಟ್ಟನು. ಅಲ್ಲಿ ನೆರೆದಿದ್ದ ಬ್ರಾಹ್ಮಣ ಕ್ಷತ್ರಿಯರೆಲ್ಲರ ಯೋಗ್ಯತಾತಾರತಮ್ಯವನ್ನು ಅವನು ಚೆನ್ನಾಗಿ ಬಲ್ಲವನಾದುದರಿಂದ, ಪೂಜಿಸಬೇಕಾದವರನ್ನೆಲ್ಲ ಕ್ರಮವಾಗಿ ಪೂಜಿಸಿ, ಆ ಕಾರ್ಯವನ್ನು ಮುಗಿಸಿಬಿಟ್ಟನು. ಇದನ್ನೆಲ್ಲ ನೋಡಿ ಶಿಶುಪಾಲನಿಗೆ ಸಹಿಸದಂತಾಯಿತು. ಅದರಲ್ಲಿಯೂ ಮುಖ್ಯವಾಗಿ ಕೃಷ್ಣನಿಗೆ ನಡೆದ ಅಗ್ರಪೂಜೆಯು ಅವನ ಹೃದಯವನ್ನು ದಹಿಸುತ್ತಿತ್ತು. ಆಗ ಅವನು ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ, ಅಲ್ಲಿದ್ದ ರಾಜರನ್ನು ನೋಡಿ “ಎಲೈ ರಾಜರೆ! ಈಗಲೇ ನಾವು ಈ ವೃಷ್ಣಿಗಳನ್ನೂ, ಪಾಂಡವರನ್ನೂ ತೀರಿಸಿಬಿಡಬೇಕು. ಇವರೆಲ್ಲರೂ ಸೇರಿ ಬಂದರೂ, ನಾವು ಹೆದರದೆ ಯುದ್ಧಕ್ಕೆ ನಿಲ್ಲಬೇಕು. ನಾನೇ ಸೇನಾಪತಿಯಾಗುವೆನು. ನಿಮಗೆ ಹೇಗೆ ಯುಕ್ತವೆಂದು ತೋರುವುದೋ ಹೇಳಿರಿ” ಎಂದನು. ಹೀಗೆ ಶಿಶುಪಾಲನು ಅಲ್ಲಿದ್ದ ರಾಜರನ್ನೆಲ್ಲ ರೇಗಿಸಿ, ಅವರೊಡನೆ ಸೇರಿಕೊಂಡು ಧರ್ಮರಾಜನ ಯಾಗವನ್ನು ಕೆಡಿಸುವುದಕ್ಕೆ ಆಲೋಚಿಸಿದನು. ಆಗ ಅಲ್ಲಿಗೆ ಬಂದಿದ್ದ ಶಿಶುಪಾಲನ ಕಡೆಯ ರಾಜರೆಲ್ಲರಿಗೂ ಅವನ ಮಾತು ಸಮ್ಮತವಾಯಿತು. ಅವರಿಗೂ ಕೋಪದಿಂದ ಮುಖವು ಬಣ್ಣಗೆಟ್ಟಿತು. ಧರ್ಮರಾಜನಿಗೆ ಯಾಗಾಂತದಲ್ಲಿ ನಡೆಯಬೇಕಾದ ಅಭಿಷೇಕವೂ, ಕೃಷ್ಣನಿಗೆ ಪೂಜೆಯೂ ನಡೆಯದಂತೆ ಮಾಡಬೇಕೆಂದು ಅವರು ತಮ್ಮೊಳಗೆ ತಾವು ಮಾತಾಡಿಕೊಳ್ಳುತ್ತಿದ್ದರು. ತಾವೇ ಬಲಶಾಲಿಗಳೆಂಬ ನಂಬಿಕೆಯಿಂದಲೂ, ತಮಗೆ ಆ ಸಭೆಯಲ್ಲಿ ಅಗ್ರಮರ್ಯಾದೆಯು ನಡೆಯಲಿಲ್ಲವೆಂಬ ಸಂಕಟದಿಂದಲೂ, ಆ ರಾಜರೆಲ್ಲರೂ ಕೋಪದಿಂದ ಮೈಮರೆತು, ಒಬ್ಬರಿಗೊಬ್ಬರು ಗುಣುಗುಟ್ಟುತ್ತಿದ್ದರು. ಅವರಿಗೆ ಹಿತೈಷಿಗಳಾದ ಮಿತ್ರರನೇಕರು ಅವರನ್ನು ಬೇಡವೆಂದು ತಡೆಯುತಿದ್ದರೂ ಕೇಳಲಿಲ್ಲ. ಸಿಂಹವು ಬಾಯಲ್ಲಿ ಕಚ್ಚಿ ತಿನ್ನುತ್ತಿರುವ ಮಾಂಸವನ್ನು, ಅದರ ಬಾಯಿಂದ ತಪ್ಪಿಸಿದಾಗ ಅದು ಹೇಗೆ ಕೋಪದಿಂದ ಗರ್ಜಿಸುವುದೋ, ಅದ

ರಂತೆ ಅವರು ಅತ್ಯಾಕ್ರೋಶದಿಂದ ಕುದಿಯುತ್ತಿದ್ದರು. ಅಪಾರವಾದ ಆ ಕ್ಷತ್ರಿಯಸಮೂಹವೆಂಬ ಸಮುದ್ರವು, ಯುದ್ಧಸನ್ನದ್ಧವಾಗಿ ತನ್ನಮೇಲೆ ಬೀಳುವುದಕ್ಕೆ ಸಿದ್ಧವಾಗಿರುವುದನ್ನು ಕೃಷ್ಣನೂ ತಿಳಿದುಕೊಂಡನು.

ಇದು ಅರುವತ್ತೆರಡನೆಯ ಅಧ್ಯಾಯವು.

**ಇಲ್ಲಿಗೆ ಅರ್ಘಾಹರಣಪರ್ವವು ಮುಗಿದುದು.**



# ಶಿಶುಪಾಲವಧಪರ್ವವು.



(ರಾಜರು ಯುದ್ಧಸನ್ನದ್ಧರಾಗಿರುವುದನ್ನು ನೋಡಿ ಭಯಪಟ್ಟ ಧರ್ಮರಾಜನಿಗೆ ಭೀಷ್ಮನು ಧೈರ್ಯವನ್ನು ಹೇಳಿ ಸಮಾಧಾನಗೊಳಿಸಿದುದು.)

ಓ ಜನಮೇಜಯರಾಜಾ! ಆಗ ಅಲ್ಲಿ ನೆರೆದಿದ್ದ ರಾಜಸಮೂಹವೆಲ್ಲ, ಪ್ರಳಯಮಾರುತದಿಂದ ಕ್ಷೋಭಹೊಂದಿ ಭಯಂಕರವಾಗಿ ಉಕ್ಕಿ ಬರುವ ಮಹಾಸಮುದ್ರದಂತೆ ಕೋಪದಿಂದ ಮೇಲೆದ್ದಿತು. ಹೀಗೆ ರಾಜರೆಲ್ಲರೂ ತನ್ನಮೇಲೆ ಕೋಪಗೊಂಡು, ಏಕಕಾಲದಲ್ಲಿ ಮೇಲೆದ್ದುದನ್ನು ಕಂಡು ಧರ್ಮರಾಜನಿಗೆ ಮನಸ್ಸಿನಲ್ಲಿ ಭೀತಿ ಹುಟ್ಟಿತು. ಆ ಭಯದಿಂದ ಧರ್ಮರಾಜನು ತಾತನೂ, ವೃದ್ಧನೂ, ಬುದ್ಧಿವಂತರಲ್ಲಿ ಶ್ರೇಷ್ಠನೂ ಆದ ಭೀಷ್ಮನನ್ನು ನೋಡಿ, ಇಂದ್ರನು ಬೃಹಸ್ಪತಿಯ ಆಲೋಚನೆಯನ್ನು ಕೇಳುವಂತೆ, ಅವನನ್ನು ಹೀಗೆಂದು ಪ್ರಶ್ನೆಮಾಡುವನು. "ತಾತಾ! ಕ್ಷತ್ರಿಯಸಮೂಹವೆಂಬ ಈ ಮಹಾಸಮುದ್ರವು ಕೋಪದಿಂದ ನಮ್ಮಮೇಲೆ ಬೀಳುವಂತಿದೆ. ಈಗ ಮಾಡುವುದೇನು? ನಮ್ಮ ಯಜ್ಞಕ್ಕೂ ವಿಘ್ನವು ಬರಬಾರದು. ಪ್ರಜೆಗಳಿಗೂ ಹಾನಿಯಾಗಬಾರದು. ಅದಕ್ಕನುಕೂಲವಾಗಿ ಹೇಗೆ ವರ್ತಿಸಬೇಕೋ ಆ ಮಾರ್ಗವನ್ನು ತಿಳಿಸು" ಎಂದನು. ಧರ್ಮಜ್ಞನಾದ ಧರ್ಮರಾಜನು ಹೇಳಿದ ಈ ಮಾ

ತನ್ನು ಕೇಳಿ ಭೀಷ್ಮನು "ಕೌರವಶ್ರೇಷ್ಠಾ! ನೀನೇಕೆ ಹೆದರುವೆ? ನಾಯಿಗಳು ಸಿಂಹವನ್ನು ಕೊಲ್ಲಬೇಕೆಂದರೆ ಸಾಧ್ಯವೇ! ಈ ವಿಷಯದಲ್ಲಿ ನಾನು ನೀತಿಯುಕ್ತವಾದ ಮತ್ತು ಶುಭಕರವಾದ ಮಾರ್ಗವೇನೆಂಬುದನ್ನು, ಮೊದಲೇ ಯೋಚಿಸಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿರುವೆನು. (ನಾವು ಕೃಷ್ಣನನ್ನು ನಂಬಿ ಸುಮ್ಮನಿರುವುದೊಂದೇ ಉಪಾಯವು.) ಸಿಂಹವು ನಿದ್ರೆಯಲ್ಲಿ ಮಲಗಿರುವಾಗ, ನಾಯಿಗಳು ಅದನ್ನು ಸುತ್ತಿಮುತ್ತಿ ಬಗುಳಿದರೇನಾಯಿತು? ಈ ಕೃಷ್ಣನು ಉದಾಸೀನನಾಗಿರುವವರೆಗೆಮಾತ್ರವೇ ಈ ರಾಜರ ಆರ್ಭಟಗಳು! ಸಿಂಹವು ಎಚ್ಚರಗೊಂಡು ಕಣ್ಣು ತೆರೆದೊಡನೆ ನಾಯಿಗಳು ಓಡಿಹೋಗುವಂತೆ, ಈ ಕೃಷ್ಣನು ಸ್ವಲ್ಪಮಟ್ಟಿಗೆ ಎಚ್ಚರಗೊಂಡರೆ, ಇವರೆಲ್ಲರೂ ಪಲಾಯನಮಾಡಬೇಕಾದುದೇ! ಸಿಂಹವು ಮಲಗಿರುವವರೆಗೆ ನಾಯಿಗಳು ಬೇಕಾದಹಾಗೆ ಬಗುಳಲಿ! ಈ ಕೃಷ್ಣನು ಸಿಂಹಕ್ಕೆ ಸಮಾನನೆಂಬುದು ನಿನಗೂ ತಿಳಿದುದೇ! ಆದರೂ, ಈಗ ನಾವು ಕೃಷ್ಣನನ್ನು ಪ್ರಾರ್ಥಿಸಿ ಹುರಿಗೊಳಿಸಬೇಕಾದುದು ನಮ್ಮ ಕರ್ತವ್ಯವು. ಅಲ್ಪಬುದ್ಧಿಯುಳ್ಳ ಈ ಶಿಶುಪಾಲನು, ಕೃಷ್ಣನು ನಿದ್ರಿಸುತ್ತಿರುವನೆಂದು ತಿಳಿದು, ಈ ರಾಜರೆಲ್ಲರನ್ನೂ ಹುರಿಗೊಳಿಸಿ, ತಾನು ಕ್ಷುದ್ರಮೃಗದಂತಿದ್ದು, ನಾಯಿಗಳಂತಿರುವ ಇತರ ಕ್ಷತ್ರಿಯರನ್ನು ಸಿಂಹಗಳಂತೆ ಮಾಡಿ ಮುಂದೆ ಬಿಟ್ಟಿರುವನು. ಅವರೆಲ್ಲರನ್ನೂ ಏಕಕಾಲದಲ್ಲಿ ಯಮಪುರಿಗೆ ಕಳುಹಿಸುವುದಕ್ಕಾಗಿಯೇ ಈ ಶಿಶುಪಾಲನ ಪ್ರಯತ್ನವು. ಓ ಧರ್ಮಪುತ್ರಾ! ಇದರ ಮರ್ಮವೇ ಬೇರೆ! ಈ ಶಿಶುಪಾಲನಲ್ಲಿರುವ ಶಕ್ತಿಯನ್ನು ಕೃಷ್ಣನು ಎಳೆದುಕೊಳ್ಳುವ ಕಾಲವು ಬಂದುಬಿಟ್ಟಿತು. ಧೀಮಂತನಾದ ನೀನು ಇದಕ್ಕಾಗಿ ಎದೆಗುಂದಬಾರದು! ನಿನಗೆ ಶುಭವಾಗಲಿ! ಈ ಚೇದಿರಾಜನಿಗೂ, ಮತ್ತು ಇತರರಾಜರಿಗೂ ವಿನಾಶಕಾಲವು ಸಮೀಪಿಸಿರುವುದರಿಂದಲೇ ಅವರ ಬುದ್ಧಿಯು ಹೀಗೆ ವಿಪರೀತವಾಗಿ ಪರಿಣಮಿಸಿದೆ. ಈ ಭಗವಂತನು ಯಾರನ್ನು ತೀರಿಸಿಬಿಡಬೇಕೆಂದು ಸಂಕಲ್ಪಿಸುವನೋ, ಅಂತವರಿಗೆ ಈ ಶಿಶುಪಾಲನಂತೆಯೇ ಮೊದಲು ಬುದ್ಧಿಯು ಕೆಡುವುದು ಸಹಜವು. ಯುಧಿಷ್ಠಿರಾ! ಸ್ವೇದಜಗಳೇ ಮೊದಲಾದ ನಾಲ್ಕು ಬಗೆಯ ಪ್ರಾಣಿಗಳ ಉತ್ಪತ್ತಿ ವಿನಾಶಗಳಿಗೆಲ್ಲ ಈ ಕೃಷ್ಣನೇ ಆಶ್ರಯಭೂತನೆಂದು ತಿಳಿ" ಎಂದನು.

ಓ ಜನಮೇಜಯರಾಜಾ! ಭೀಷ್ಮನ ನಿಂದಾವಾಕ್ಯಗಳನ್ನು ಕೇಳಿ, ಶಿಶುಪಾಲನ ಕೋಪಕ್ಕೆ ಮೇರೆಯಿಲ್ಲದಂತಾಯಿತು. ಕ್ರೂರವಾಕ್ಯಗಳಿಂದ ಶಿಶುಪಾಲನು ಭೀಷ್ಮನನ್ನು ನಿಂದಿಸತೊಡಗಿದನು.

ಇದು ಅರುವತ್ತುಮೂರನೆಯ ಅಧ್ಯಾಯವು.



## ಶಿಶುಪಾಲನು ಭೀಷ್ಮನನ್ನೂ, ಕೃಷ್ಣನನ್ನೂ ನಿಂದಿಸಿದುದು.

ಆಗ ಶಿಶುಪಾಲನು ಭೀಷ್ಮನನ್ನು ನೋಡಿ, "ಓ ಭೀಷ್ಮಾ! ಮುದುಕನಾದ ನಿನಗೆ ಹೀಗೆ ಬುದ್ಧಿಕೆಟ್ಟುಹೋಗುವುದೇನೂ ಆಶ್ಚರ್ಯವಲ್ಲ. ಕುರುಕುಲಕ್ಕೇ ಒಂದು ಕಳಂಕವಾಗಿ ಹುಟ್ಟಿದ ನಿನಗೆ ಇಷ್ಟು ವಯಸ್ಸಾಗಿಯೂ ನಾಚಿಕೆಯಿಲ್ಲವೆ? ಏನೇನೋ ಬೆದರಿಕೆಯ ಮಾತುಗಳಿಂದ ಈ ರಾಜರನ್ನೆಲ್ಲ ಹೆದರಿಸುತ್ತಿರುವೆ! ಗಂಡೂ ಅಲ್ಲದೆ, ಹೆಣ್ಣೂ ಅಲ್ಲದೆ, ಮೂರನೆಯ ನಪುಂಸಕತ್ವದಲ್ಲಿರುವ ನೀನು, ಧರ್ಮಾಧರ್ಮವಿಚಾರವಿಲ್ಲದೆ ಮಾತಾಡುವುದು ಸಹಜವೇ! ಆಹಾ! ಕೌರವಕುಲಕ್ಕೆಲ್ಲ ನೀನು ಪ್ರಧಾನನೆಂದು ಹೇಳಿಸಿಕೊಳ್ಳುವೆ! ನಿನ್ನನ್ನು ಮುಂದಿಟ್ಟುಕೊಂಡು ನಡೆಯುವ ಈ ಕೌರವರ ಸ್ಥಿತಿಯು, ಕುರುಡನನ್ನು ಹಿಂಬಾಲಿಸಿಹೋಗುವ ಕುರುಡನಿಗೂ, ಹಡಗಿನ ಹಿಂದೆ ತಗಲುಹಾಕಿದ ಬೇರೊಂದು ಹಡಗಿಗೂ ಸಮಾನವಾಗಿದೆ. ಗಾಂಗೇಯಾ! ಈ ಕೃಷ್ಣನು ಹೆಂಗುಸನ್ನು ಕೊಂದನೆಂದು ನೀನು ಹೊಗಳುತ್ತಿರುವುದು ನಮ್ಮ ಮನಸ್ಸಿಗೆ ವ್ಯಥೆಯನ್ನುಂಟುಮಾಡುತ್ತಿದೆ. ಸ್ತ್ರೀಹತ್ಯೆಯನ್ನು ಹೊಗಳುವ ನಿನ್ನ ನಾಲಗೆಯು ನೂರುಭಾಗವಾಗಿ ಸೀಳಿಹೋಗಬಾರದೇಕೆ? ಕೇವಲ ಅಲ್ಪಜನರಿಗೂ ನಿಂದಾರ್ಹನಾದ ಗೊಲ್ಲನನ್ನು, ವಯಸ್ಸಿನಲ್ಲಿಯೂ, ಜ್ಞಾನದಲ್ಲಿಯೂ ವೃದ್ಧನೆನಿಸಿಕೊಂಡ ನೀನು ಹೊಗಳುತ್ತಿರುವೆ. ಭೀಷ್ಮಾ! ಇವನು ಬಾಲ್ಯದಲ್ಲಿ ಒಂದು ಬಡಹಕ್ಕಿಯನ್ನು ಹಿಡಿದು ಕೊಂದಮಾತ್ರಕ್ಕೆ ನಿನಗೆ ಅದೊಂದಾಶ್ಚರ್ಯವೇ? ಯುದ್ಧಕ್ರಮವನ್ನೇ ತಿಳಿಯದ ಒಂದು ಕುದುರೆಯನ್ನೂ, ಒಂದು ಎತ್ತನ್ನೂ ಹಿಡಿದು ಕೊಲ್ಲುವುದು ಅತಿಶಯವೆ? ಅಚೇತನವಾದ ಬಂಡಿಯ ಮರವನ್ನು ಕಾಲಿಂದ ಮುರಿದಮಾತ್ರಕ್ಕೆ ಅದರಿಂದ ಆಶ್ಚರ್ಯವೇನಿದೆ? ಒಂದು ಸಣ್ಣ ಎಕ್ಕದ ಗಿಡದಂತಿರುವ ಎರಡು



ಪುಟ ೨೫೧. ಸಹದೇವನು ಕೃಷ್ಣನಿಗೆ ಮಾಡಿದ ಅಗ್ರಪೂಜೆಯನ್ನು ನೋಡಿ ಸಹಿಸದೆ ಶಿಶುಪಾಲನು
ಕೃಷ್ಣನನ್ನು ನಿಂದಿಸಿದುದು.

ಗಿಡಗಳನ್ನು ಮುರಿದುದು, ಒಂದು ಹಾವನ್ನು ಹಿಡಿದು ಮೆಟ್ಟಿದುದು, ಇವೆಲ್ಲ ನಿನಗೆ ಆಶ್ಚರ್ಯಕಾರ್ಯಗಳಾಗಿವೆಯೋ? ಹುತ್ತದಂತಿರುವ ಒಂದು ಬೆಟ್ಟವನ್ನು ಏಳುದಿನಗಳವರೆಗೆ ಇವನು ಕೈಯಲ್ಲಿ ಎತ್ತಿಹಿಡಿದನೆಂದು ಹೇಳಿದೆ! ಅದರಲ್ಲಿ ತಾನೇ ಆಶ್ಚರ್ಯವೇನಿದೆ? ಇವನು ಬೆಟ್ಟವನ್ನೇರಿ ಆಡುತಿದ್ದಾಗ ಅಪರಿಮಿತವಾಗಿ ಅನ್ನವನ್ನು ತಿಂದುದಾಗಿ ಇವನನ್ನು ನೀನು ಸ್ತೋತ್ರ ಮಾಡುವೆ? ಇತರರಿಗೆ ಇದು ವಿಸ್ಮಯುವನ್ನುಂಟುಮಾಡಿದರೂ ನನಗೇನೂ ಅದೊಂದು ಆಶ್ಚರ್ಯವಾಗಿ ತೋರಲಿಲ್ಲ. ಇವನು ಯಾವನ ಅನ್ನವನ್ನು ತಿಂದನೋ ಆ ಕಂಸನನ್ನೇ ಕೊಂದನೆಂಬುದುಮಾತ್ರ ನನಗೆ ಆಶ್ಚರ್ಯವನ್ನುಂಟುಮಾಡುತ್ತದೆ. ಓ ಭೀಷ್ಮಾ! ಕೌರವಾಧಮಾ! ಧರ್ಮವನ್ನೇ ತಿಳಿಯದ ನಿನಗೇನೂ, ಈಗ ನಾನು ಹೇಳತಕ್ಕ ಧರ್ಮಗಳನ್ನು ಹಿಂದೆ ದೊಡ್ಡವರಾರೂ ಹೇಳಿಲ್ಲವೆಂದು ತೋರುತ್ತಿದೆ. ಹೆಂಗಸರ ಮೇಲೆಯೂ, ಗೋವುಗಳಮೇಲೆಯೂ, ಬ್ರಾಹ್ಮಣರಮೇಲೆಯೂ, ತನಗೆ ಅನ್ನವನ್ನಿಕ್ಕಿ ಸಾಕಿದವನಮೇಲೆಯೂ, ತನ್ನ ಮರೆಹೊಕ್ಕವನಮೇಲೆಯೂ ಆಯುಧವನ್ನೆತ್ತಬಾರದೆಂದು ಧರ್ಮಾತ್ಮರಾದ ಸತ್ಪುರುಷರು ಹೇಳುವರು. ಆ ಧರ್ಮಗಳೊಂದನ್ನೂ ನೀನು ಕೇಳಿಲ್ಲವೇನು? ಒಂದುವೇಳೆ ಕೇಳಿದ್ದರೂ ಅದು ನಿನ್ನಲ್ಲಿ ವ್ಯರ್ಥವಾಗಿರಬೇಕು. ಓ ಗಾಂಗೇಯಾ! ಈ ಕೃಷ್ಣನನ್ನು ನೀನು ಜ್ಞಾನವೃದ್ಧನೆಂದೂ, ಗುಣವೃದ್ಧನೆಂದೂ, ಎಲ್ಲರಿಗೂ ಮೇಲಾದವನೆಂದೂ ನಾನಾವಿಧದಿಂದ ಹೊಗಳಿ, ಅರಿಯದವರ ಮುಂದೆ ಹೇಗೋ ಹಾಗೆ ನನ್ನಮುಂದೆ ಇವನನ್ನು ಸೋತ್ರಮಾಡುತ್ತಿರುವೆ. ಗೋಹತ್ಯೆ ಮಾಡಿದವನೂ, ಸ್ತ್ರೀಹತ್ಯೆಮಾಡಿದವನೂ, ಪೂಜ್ಯನೆಂಬುದು ಈಗ ನಿನ್ನ ಬಾಯಿಂದ ಸಿದ್ಧಾಂತವಾಯಿತು. ಭೀಷ್ಮಾ! ಇಂತಹ ಘೋರಕೃತ್ಯವನ್ನು ಮಾಡಿದವನು ಹೇಗೆತಾನೇ ಲೋಕದಲ್ಲಿ ಸ್ತೋತ್ರಾರ್ಹನಾಗುವನು? ಈ ಕೃಷ್ಣನನ್ನು ನಿರ್ದೇಶಿಸಿ ನೀನು, ಇವನೇ ಲೋಕಪ್ರಭುವೆಂದೂ, ಬುದ್ಧಿವಂತರೊಳಗೆ ಇವನೇ ಶ್ರೇಷ್ಠನೆಂದೂ ಹೊಗಳುತ್ತಿರುವೆ. ಅವನೂ ನಿನ್ನ ಮಾತನ್ನೆಲ್ಲ ನಿಜವೆಂದೇ ತಿಳಿದು ಹಿಗ್ಗುತ್ತಿರುವನು. ಇವೆಲ್ಲವೂ ಬರೀ ಸುಳ್ಳು! ಈ ಕೃಷ್ಣನು ನಿಜವಾಗಿ ತನ್ನ ಯೋಗ್ಯತೆಯನ್ನು ತಿಳಿದವನಾಗಿದ್ದರೆ, ಅವನು ಎಂದಿಗೂ ಈ ಪೂಜೆಗಳನ್ನೂ, ನಿನ್ನ ಸ್ತೋತ್ರಗಳ

ನ್ನೂ ಅಂಗೀಕರಿಸಿರಲಾರನು. ಹೀಗಿರುವಾಗ ನೀನಾಗಿ ಹೀಗೇಕೆ ಮೇಲೆ ಬಿದ್ದು ಹೋಗಿ ಅವನನ್ನು ಇಷ್ಟು ದೂರಕ್ಕೇರಿಸುವೆ? ಒಬ್ಬನು ಒಂದು ಗಾಥೆಯನ್ನು (ನೀತಿಯನ್ನು) ಎಷ್ಟೋಸಾರಿ ಬಾಯಿಂದ ಹಾಡಿದರೂ, ಆ ನೀತಿಯು ಅವನನ್ನು ಅದೇ ಕಟ್ಟುಪಾಡಿನಲ್ಲಿ ಇಟ್ಟಿರಲಾರದು. ಉಪದೇಶ ಮಾಡುವವನು ಆ ಉಪದೇಶದಂತೆ ತಾನು ನಡೆಯಲಾರನು. *ಕುಳಿಂಗ ಪಕ್ಷಿಗಳಂತೆ ಪ್ರಾಣಿಗಳು ತಮ್ಮ ಸ್ವಭಾವದಲ್ಲಿಯೇ ಹೋಗುತ್ತಿರುವುವು. ಭೀಷ್ಮಾ! ಅದೇರೀತಿಯಾಗಿ ನಿನ್ನ ಸ್ವಭಾವವೂ ಕೇವಲ ನೀಚವಾದುದು. ಇದರಲ್ಲಿ ಸಂದೇಹವೇ ಇಲ್ಲ. ಓ ಗಾಂಗೇಯಾ! ನೀನು ಸದಾ ಓಡುವ ಸ್ವಭಾವವುಳ್ಳ ನದಿಯ ಮಗನಲ್ಲವೆ? ನಿನಗೂ ಮನಸ್ಸು ಸ್ಥಿರವಿಲ್ಲದೆ ಈ ಚಂಚಲಬುದ್ಧಿಯಿರುವುದು ಸಹಜವೇ! ನಿನ್ನ ಸಹವಾಸದಿಂದಲೇ ಪಾಂಡವರಿಗೂ ಬುದ್ಧಿಯು ಕೆಟ್ಟುಹೋಗಿದೆ. ಈ ಕೃಷ್ಣನನ್ನು ಪರಮ ಪೂಜ್ಯನೆಂದೂ, ನಿನ್ನನ್ನು ಉಪದೇಶಕನೆಂದೂ ಭಾವಿಸಿರುವ ಈ ಪಾಂಡವರ ಸ್ವಭಾವವು, ನಿನ್ನ ಸ್ವಭಾವಕ್ಕಿಂತಲೂ ಇನ್ನೂ ಹೀನವೇ ಆಗಿರಬೇಕು. ಧರ್ಮವನ್ನು ತಿಳಿಯದೆ ಸಜ್ಜನರ ಮಾರ್ಗದಿಂದಲೂ ತಪ್ಪಿ ನಡೆಯುವ ನೀನು ಹೇಗೆತಾನೇ ಧಾರ್ಮಿಕನಾಗುವೆ? ಕುಲಕ್ಕೆಲ್ಲ ತಾನೇ ಮೇಲೆನಿಸಿ, ಧರ್ಮಜ್ಞನೆಂದು ಹೇಳಿಸಿಕೊಳ್ಳುವ ಯಾವನು ತಾನೇ ನಿನ್ನಂತೆ ಇಂತಹ ಧರ್ಮವಿರುದ್ಧವಾದ ಮಾರ್ಗದಲ್ಲಿ ಪ್ರವರ್ತಿಸುವನು? ಭೀಷ್ಮಾ! ಪ್ರಾಜ್ಞನೆಂದು ತಿಳಿದುಕೊಂಡಿರುವ ನೀನು ನಿಜವಾಗಿ ಧರ್ಮವನ್ನು ತಿಳಿದವನಾಗಿದ್ದರೆ, ನಿನಗೆ ಸ್ವಲ್ಪಮಟ್ಟಿಗಾದರೂ ವಿವೇಕವಿದ್ದರೆ, ಮತ್ತೊಬ್ಬನಲ್ಲಿ ಅನುರಕ್ತಳಾದ ಕನ್ಯೆಯನ್ನು (ಅಂಬೆಯನ್ನು) ಕದ್ದು ತರುತ್ತಿದ್ದೆಯಾ? ಗಾಂಗೇಯಾ! ನಿನಗೆ ಶುಭವಾಗಲಿ! ನಾನು ಹೇಳಿದೆನೆಂದು ಕೋಪಿಸಬೇಡ! ನಿನಗಿಂತಲೂ ನಿನ್ನ ಸಹೋದರನಾದ ವಿಚಿತ್ರವೀರ್ಯನೇ ಸ್ವಲ್ಪ ವಿವೇಕಿಯೆಂದು ಹೇಳಬಹುದು. ಅವನು ದೊಡ್ಡವರ ನಡತೆಯನ್ನು ಮೀರ

---

* ಇದೊಂದು ಜಾತಿಯ ಪಕ್ಷಿ. ಇದು ಯಾವಾಗಲೂ "ಮಾ ಸಾಹಸಂ, ಮಾ ಸಾಹಸಂ" (ಸಾಹಸಮಾಡಬಾರದು) ಎಂದೇ ಕೂಗುತ್ತಿದ್ದರೂ, ಸಿಂಹದ ಹಲ್ಲುಗಳ ನಡುವೆ ಸಿಕ್ಕಿಕೊಂಡಿರುವ ಮಾಂಸದ ತುಂಡನ್ನು ತೆಗೆದು ತಿನ್ನುವುದಕ್ಕಾಗಿ ಅದರ ಬಾಯಿಗೆ ತನ್ನ ಕೊಕ್ಕನ್ನು ನೀಡಿ ತಾನೇ ಸಾಹಸವನ್ನು ಮಾಡುವುದು

ಲಾರದೆ ನೀನು ಬಲಾತ್ಕರಿಸಿ ತಂದ ಕನ್ಯೆಯನ್ನು ವರಿಸದೆ ನಿರಾಕರಿಸಿದನು. ನಾನೇ ಮಹಾಪ್ರಾಜ್ಞನೆಂದು ನೀನು ತಿಳಿದಿರುವೆ! ಸಜ್ಜನರ ದಾರಿಯಲ್ಲಿ ಯೇ ವರ್ತಿಸುತ್ತಿರುವುದಾಗಿಯೂ ಬಾಯಿಂದಾಡುತ್ತಿರುವೆ. ನೀನು ಜೀವಿಸುತ್ತಿರುವಾಗ, ನಿನ್ನ ಕಣ್ಣೆದಿರಾಗಿಯೇ ನಿನ್ನ ಸಹೋದರನಾದ ಆ ವಿಚಿತ್ರವೀರ್ಯನ ಪತ್ನಿಯರಲ್ಲಿ ಬೇರೊಬ್ಬನಿಂದಲ್ಲವೇ ಸಂತತಿಯಾ ಯಿತು? ಹೀಗಿರುವಾಗ ನಿನ್ನಲ್ಲಿ ಯಾವ ಧರ್ಮವಿದೆ? ಈ ನಿನ್ನ ಬ್ರಹ್ಮ ಚರ್ಯವ್ರತವೆಲ್ಲವೂ ಸುಳ್ಳು! ಬುದ್ಧಿಯಿಲ್ಲದೆಯೋ, ಅಥವಾ ಪುರುಷತ್ವ ವಿಲ್ಲದೆಯೋ ನೀನು ಈ ಸುಳ್ಳುವ್ರತವನ್ನು ನಟಿಸುತ್ತಿರುವೆ. ಇದರಲ್ಲಿ ಸಂದೇಹವಿಲ್ಲ. ನೀನು ಧರ್ಮಜ್ಞನೆಂದು ಹೆಸರುಗೊಂಡವನಲ್ಲವೆ? ನನ ಗಾದರೋ ಯಾವ ವಿಷಯದಲ್ಲಿಯೂ ನಿನ್ನಲ್ಲಿ ಮೇಲ್ಮೆಯೇನೂ ಕಂಡು ಬರುವುದಿಲ್ಲ. ನೀನು ಹಿರಿಯರನ್ನು ಸೇವಿಸಿದವನಲ್ಲ. ಆದುದರಿಂದಲೇ ನೀನು ಇಂತಹ ಸುಳ್ಳುಧರ್ಮಗಳನ್ನೆಲ್ಲ ಈ ಸಭೆಯಲ್ಲಿ ಉದ್ಘೋಷಿ ಸಿದೆ. ಓ ಬ್ರಹ್ಮಚಾರೀ! ಲೋಕದಲ್ಲಿ ಎಷ್ಟೋ ಬಗೆಯ ವ್ರತಗಳೂ, ಉಪವಾಸಗಳೂ, ದಾನಾದಿಕರ್ಮಗಳೂ, ವೇದಾಧ್ಯಯನಗಳೂ, ಬಹು ದಕ್ಷಿಣೆಯುಳ್ಳ ಯಾಗಗಳೂ ಇದ್ದರೂ, ಇವೆಲ್ಲ ಪುತ್ರಸಂತಾನವೆಂಬ ಪುಣ್ಯದ ಕಲಾಮಾತ್ರಕ್ಕೂ ಸಾಟಿಯಾಗಲಾರವು. ಅಲ್ಲದೆ ಮೇಲೆ ಹೇಳಿದ ಅನೇಕ ವ್ರತೋಪವಾಸಾದಿಗಳು ಸಂತಾನವಿಲ್ಲದವನಿಗೆ ನಿಷ್ಪ್ರಯೋಜಕಗಳೆಂದೇ ಶಾಸ್ತ್ರನಿರ್ಣಯವು. ನೀನಾದರೋ ಸಂತಾನವಿಲ್ಲದವನು. ನಿನಗೆ ವಯ ಸ್ಸೂ ಕಳೆದುಹೋಗಿ ಮುದುಕನಾಗಿರುವೆ. ಇಂತಹ ನೀನು ಇತರರಿಗೆ ಸುಳ್ಳುಧರ್ಮಗಳನ್ನುಪದೇಶಿಸುತ್ತಿರುವೆ. ಇದರಿಂದ ನೀನು ಮಿಥ್ಯಾಧರ್ಮ ವನ್ನುಪದೇಶಿಸಿದ ಹಂಸದಂತೆ, ನಿನ್ನ ಕಡೆಯ ಪರಿವಾರದವರಿಂದಲೇ ವಧಿಸ ಲ್ಪಡುವುದು ನಿಶ್ಚಯವು. ಗಾಂಗೇಯಾ! ಪೂರ್ವದಲ್ಲಿ ಜ್ಞಾನಿಗಳಾದವ ರಿಂದ ನಾನು ಕೇಳಿದ ಒಂದು ಸಣ್ಣ ಕಥೆಯನ್ನು ನಿನಗೆ ಹೇಳುವೆನು ಕೇಳು

ಪೂರ್ವದಲ್ಲಿ ಒಂದು ವೃದ್ಧಹಂಸವು ಸಮುದ್ರತೀರದಲ್ಲಿ ವಾಸಮಾಡು ತಿದ್ದಿತು. ಅದು ಇತರಪಕ್ಷಿಗಳಿಗೆಲ್ಲ ಧರ್ಮವನ್ನುಪದೇಶಿಸುತ್ತ ತಾನುಮಾತ್ರ

ಆದಕ್ಕೆ ವಿರುದ್ಧವಾಗಿಯೇ ನಡೆಯುತಿದ್ದಿತು. ಅದು ಇತರಪಕ್ಷಿಗಳ ನ್ನು ಕಂಡಾಗಲೆಲ್ಲ "ಧರ್ಮವನ್ನು ನಡೆಸಿರಿ! ಅಧರ್ಮಕ್ಕೆ ಹೋಗಬೇಡಿ ರಿ" ಎಂದೇ ಉಪದೇಶಿಸುತಿತ್ತು. ಪಕ್ಷಿಗಳೆಲ್ಲವೂ ಆ ಉಪದೇಶವನ್ನು ಅಕ್ಕರೆಯಿಂದ ಕೇಳುತ್ತ, ಆ ಹಂಸದ ಧರ್ಮಬುದ್ಧಿಗೆ ಮೆಚ್ಚಿ ಅದನ್ನು ಕೊಂಡಾಡುತಿದ್ದುವು. ಒಮ್ಮೆ ಆ ಪಕ್ಷಿಗಳು ಆ ಹಂಸದಸುತ್ತಲೂ ಸು ತ್ತಿಕೊಂಡು, "ಓ ಹಂಸಶ್ರೇಷ್ಠಾ! ಪಕ್ಷಿಗಳಾದ ನಮ್ಮ ಧರ್ಮವನ್ನೆಲ್ಲ ಸಂಗ್ರಹಿಸಿ ನಮಗೆ ತಿಳಿಸಬೇಕು. ನಮ್ಮ ಧರ್ಮಗಳಲ್ಲಿ ಮೇಲಾದ ಧರ್ಮ ವಾವುದು?" ಎಂದು ಕೇಳಿದುವು. ಅದಕ್ಕಾ ಹಂಸವು "ಓ ಪಕ್ಷಿಗಳಿರಾ! ಇತರಪ್ರಾಣಿಗಳನ್ನು ಹಿಂಸೆಮಾಡದಿರುವುದೇ ಧರ್ಮವು. ಪ್ರಾಣಿಹಿಂಸೆಯೇ ಅಧರ್ಮವು. ಧರ್ಮಾಧರ್ಮಗಳ ಸಂಗ್ರಹವಿಷ್ಟೇ!" ಎಂದು ನೀವು ತಿಳಿ ಯಿರಿ" ಎಂದಿತು. ಧರ್ಮಶ್ರದ್ಧೆಯುಳ್ಳ ಆ ಪಕ್ಷಿಗಳು ವೃದ್ಧಹಂಸವು ಹೇಳಿದ ಆ ಮಾತುಗಳನ್ನು ಕೇಳಿ ಸಂತೋಷಗೊಂಡು ತಿರುಗಿ "ಅಯ್ಯಾ ವೃದ್ಧಹಂಸವೆ! ಧರ್ಮದಲ್ಲಿಯೇ ನಿತ್ಯನಿರತವಾದ ಪಕ್ಷಿಯು ಹೊಂದುವ ಗತಿಯಾವುದು? ಅದನ್ನು ಯಥಾವತ್ತಾಗಿ ನಮಗೆ ತಿಳಿಸು" ಎಂದು ಕೇ ಳಿದುವು. ಅದಕ್ಕಾ ಹಂಸವು "ಎಲೈ ಪಕ್ಷಿಗಳಿರಾ! ನೀವು ಇನ್ನೂ ಬಾ ಲರು. ನಿಮಗೆ ಧರ್ಮಸೂಕ್ಷ್ಮಗಳೊಂದೂ ಅಷ್ಟಾಗಿ ತಿಳಿಯಲಾರದು. ಯಾ ವನು ಈ ಲೋಕದಲ್ಲಿ ನಿಷ್ಕಲ್ಮಷವಾದ ಒಳ್ಳೇ ಹೃದಯದಿಂದ ಧರ್ಮವನ್ನು ನಡೆಸುವನೋ, ಅವನು ದೇಹಾಂತದಲ್ಲಿ ಸ್ವರ್ಗವನ್ನು ಹೊಂದುವನು. ನಾನೂ ಕೂಡ ಈಗ ಅದೇ ವಿಧವಾಗಿ ಧರ್ಮದಲ್ಲಿ ನಡೆಯುತಿದ್ದು, ನನ್ನ ಕಾಲಾನಂತರದಲ್ಲಿ ಈ ದೇಹವನ್ನು ಬಿಟ್ಟಮೇಲೆ ಸ್ವರ್ಗವನ್ನು ಸೇರಿ ಸುಖಿಸುವೆನು. ಇದೇ ಧರ್ಮದ ಗತಿ" ಎಂದು ಹೇಳಿತು. ಪಕ್ಷಿಗಳೂ ಆ ಧರ್ಮೋಪದೇಶವನ್ನು ಅಕ್ಕರೆಯಿಂದ ಕೇಳುತಿದ್ದುವು. ಓ ಭೀಷ್ಮಾ! ಆಮೇಲೆ ಸಮುದ್ರದೊಳಗಿನ ಜಲಪಕ್ಷಿಗಳೆಲ್ಲ, ತಮಗೆ ಧರ್ಮೋಪದೇಶಕ ನಾದ ಆ ಹಂಸಕ್ಕೆ ಆಗಾಗ ಭಕ್ಷ್ಯಗಳನ್ನು ತಂದುಕೊಟ್ಟು ಉಪಚರಿಸುತಿ ದ್ದುವು. ಪಕ್ಷಿಗಳಿಗೆಲ್ಲ ಆ ಹಂಸದಲ್ಲಿ ಗುರುಭಾವವೂ, ವಿಶ್ವಾಸವೂ ದಿನ ದಿನಕ್ಕೆ ಹೆಚ್ಚುತ್ತ ಬಂದುದರಿಂದ, ಅವು ತಮ್ಮ ಮೊಟ್ಟೆಗಳನ್ನೆಲ್ಲ ಆ ಹಂಸ ದ ಬಳಿಯಲ್ಲಿಟ್ಟು, ಸಮುದ್ರಜಲದಲ್ಲಿ ವಿನೋದದಿಂದ ಆಟವಾಡುತ್ತ

ಅಲ್ಲಲ್ಲಿ ಸಂಚರಿಸುತಿದ್ದುವು. ಸ್ವಪ್ರಯೋಜನದಲ್ಲಿಯೇ ಎಚ್ಚರಗೊಂಡು, ಸಮಯನಿರೀಕ್ಷಣೆಯಲ್ಲಿದ್ದ ಪಾಪಿಯಾದ ಆ ಮುದಿಹಂಸವು, ಪಕ್ಷಿಗಳು ನೈತಿಳಿಯದೆ ಆಟವಾಡುತಿದ್ದ ಸಮಯದಲ್ಲಿ, ಇವುಗಳ ಮೊಟ್ಟೆಗಳನ್ನೆಲ್ಲ ತಿನ್ನುತ್ತ ಬಂದಿತು. ಆಮೇಲೆ ಸ್ವಲ್ಪಕಾಲಕ್ಕೆ, ಬುದ್ಧಿಶಾಲಿಯಾದ ಒಂದು ಪಕ್ಷಿಯು ತಾವು ಬಿಟ್ಟುಹೋದ ಮೊಟ್ಟೆಗಳು ದಿನದಿನಕ್ಕೆ ಕಡಿಮೆಯಾಗುತ್ತಿರುವುದನ್ನು ತಿಳಿದುಕೊಂಡಿತು. ಅದಕ್ಕೆ ಹಂಸದಮೇಲೆ ಶಂಕೆಯುಂಟಾಯಿತು. ಕ್ರಮಕ್ರಮವಾಗಿ ಆ ಮುದಿ ಹಂಸವು ತಮ್ಮನ್ನು ವಂಚಿಸಿದ ರೀತಿಯೂ ಅದಕ್ಕೆ ಚೆನ್ನಾಗಿ ತಿಳಿದುಹೋಯಿತು. ಆ ಹಂಸದ ಪಾಪಕೃತ್ಯಕ್ಕಾಗಿ ದುಃಖಿಸುತ್ತ ಇತರ ಪಕ್ಷಿಗಳಿಗೆಲ್ಲ ಈ ಸಂಗತಿಯನ್ನು ತಿಳಿಸಿತು. ಆಮೇಲೆ ಆ ಪಕ್ಷಿಗಳು ಕೂಡ, ಆ ಹಂಸದ ಪಾಪಕೃತ್ಯವನ್ನು ತಾವೂ ಕಣ್ಣಾರೆ ಕಂಡು, ಎಲ್ಲವೂ ಒಟ್ಟಾಗಿ ಸೇರಿ ಆ ಪಾಪಿ ಹಂಸವನ್ನು ಆಗಲೇ ಕೊಂದುಬಿಟ್ಟುವು. ಭೀಷ್ಮಾ! ಇಲ್ಲಿಸೇರಿರುವ ರಾಜರಿಂದ ನಿನಗೂ ಆ ಹಂಸದ ಗತಿಯೇ ಆಗುವುದೆಂದು ತಿಳಿ. ಆ ಹಂಸದಂತೆ ಕಪಟವೃತ್ತಿಯುಳ್ಳ ನಿನ್ನನ್ನು ಈ ರಾಜರು ಕೊಲ್ಲದೆ ಬಿಡಲಾರರು. ಪುರಾಣವಿಶಾರದರಾದ ಜನರು ಇದೇ ಹಂಸವೃತ್ತಾಂತದಲ್ಲಿ ಹೇಳಿದ ಸಣ್ಣ ಗಾಥೆಯೊಂದುಂಟು. “ಓ ಪಕ್ಷೀ! ಕೆಟ್ಟಮನಸ್ಸುಳ್ಳ ನೀನು ಮನಶ್ಶುದ್ಧಿಗೆ ವಿರುದ್ಧವಾದ ಮಾತುಗಳನ್ನೇ ಆಡುತ್ತಿರುವೆ. ನಂಬಿದ ಪಕ್ಷಿಗಳ ಮೊಟ್ಟೆಗಳನ್ನು ತಿನ್ನುವ ಈ ಪಾಪಕಾರ್ಯವು ನಿನ್ನ ಮಾತಿಗೆ ಕೇವಲವಿಪರೀತವಾದುದು” ಎಂಬುದೇ ಆ ಗಾಥೆಯ ಅರ್ಥವು.

ಇದು ಅರುವತ್ತುನಾಲ್ಕನೆಯ ಅಧ್ಯಾಯವು.

---

{ ಭೀಮನು ಕೃಷ್ಣನ ನಿಂದೆಯನ್ನು ಕೇಳಿ ಸಹಿಸಲಾರದೆ, ಶಿಶುಪಾಲನನ್ನು ಆಗಲೇ ಕೊಂದುಬಿಡುವೆನೆಂದು ಮೇಲೆದ್ದುದು. ಭೀಷ್ಮನು ಅವನನ್ನು ತಡೆದು ಸಮಾಧಾನಪಡಿಸಿದುದು. }

ಭೀಷ್ಮಾ! ಈ ಕೃಷ್ಣನನ್ನು ಇಲ್ಲದ ಸ್ತೋತ್ರಗಳಿಂದ ಮೇಲೇರಿಸುತ್ತಿರುವೆ. ಇವನು ದಾಸನೆಂದು ತಿಳಿದಲ್ಲವೇ ಮಹಾಬಲಾಢ್ಯನಾದ ಜರಾಸಂ

ಧನು ಇವನೊಡನೆ ಯುದ್ಧ ಮಾಡಲು ಇಷ್ಟಪಡದೆ ಹೋದನು. ಆ ಜರಾಸಂಧನನ್ನೇ ನಾನು ಮಾನ್ಯನೆಂದೆಣಿಸುವೆನು. ಅದೇ ಜರಾಸಂಧನನ್ನು ಕೊಲ್ಲುವುದಕ್ಕಾಗಿ ಈ ಕೃಷ್ಣನೂ, ಭೀಮಾರ್ಜುನರೂ ನಡೆಸಿದ ತಂತ್ರವನ್ನು ಲೋಕದಲ್ಲಿ ಯಾವನು ತಾನೇ ನ್ಯಾಯವೆಂದು ಹೇಳುವನು? ವಂಚನೆಯಿಂದ ತಾನು ಬ್ರಾಹ್ಮಣನೆಂದು ಹೇಳಿಕೊಳ್ಳುತ್ತ, ಈ ಕೃಷ್ಣನು ಬಾಗಿಲಿಲ್ಲದ ಕಡೆಯಿಂದ ಆ ಜರಾಸಂಧನ ಮನೆಯೊಳಗೆ ಕಳ್ಳತನದಿಂದ ಪ್ರವೇಶಿಸಿದಾಗಲೇ, ಜರಾಸಂಧನ ಪರಾಕ್ರಮಕ್ಕೆ ಇವನು ಹೆದರಿದನೆಂಬುದು ಚೆನ್ನಾಗಿ ಸ್ಪಷ್ಟವಾಗುವುದಿಲ್ಲವೆ? ಜರಾಸಂಧನು ಬ್ರಾಹ್ಮಣಪ್ರಿಯನಾದುದರಿಂದ ದುರಾತ್ಮನಾದ ಈತನನ್ನು ಬ್ರಾಹ್ಮಣನೆಂದು ಭ್ರಮಿಸಿ, ಮೊದಲು ಪಾದ್ಯಾದಿಪೂಜೆಗಳನ್ನು ಕಳುಹಿಸಿಕೊಟ್ಟನು. ಅಲ್ಲದೆ, ವಂಚಕರಾದ ಈ ಭೀಮಾರ್ಜುನ ಕೃಷ್ಣರು ಮೂವರನ್ನೂ ತನ್ನ ಮನೆಯಲ್ಲಿ ಭೋಜನಕ್ಕಾಗಿಯೂ ಆಹ್ವಾನಮಾಡಿದನು. ಈ ಕೃಷ್ಣನೋ, ಅವಕ್ಕೆಲ್ಲ ವಿರುದ್ಧವಾಗಿ ಆ ಜರಾಸಂಧನನ್ನು ವಂಚಿಸಿಬಿಟ್ಟನು. ಭೀಷ್ಮಾ! ನೀನು ಹೇಳುವಂತೆ ನಿಜವಾಗಿ ಈ ಕೃಷ್ಣನೇ ಈ ಲೋಕವನ್ನು ಸೃಷ್ಟಿಸುವವನಾಗಿದ್ದರೆ, ತನ್ನನ್ನು ತಾನೇ ಏಕೆ ಬ್ರಾಹ್ಮಣನನ್ನಾಗಿ ಮಾಡಿಕೊಳ್ಳಬಾರದಾಗಿತ್ತು? ಕಪಟ ಬ್ರಾಹ್ಮಣವೇಷವನ್ನು ತಾಳಿ ಜರಾಸಂಧನಲ್ಲಿಗೆ ಹೋಗಬೇಕಾದ ಕಾರಣವೇನಿದ್ದಿತು? ಇವೆಲ್ಲಕ್ಕಿಂತಲೂ ನನಗೆ ಆಶ್ಚರ್ಯವೆನಿಸುವುದೇನೆಂದರೆ, ನಿನ್ನಿಂದ ಕೆಟ್ಟ ದಾರಿಗೆ ಎಳೆಯಲ್ಪಡುತ್ತಿರುವ ಈ ಪಾಂಡವರೂ ಕೂಡ, ಅದನ್ನೇ ಸರಿಯೆಂದು ಮೆಚ್ಚುತ್ತಿರುವರಲ್ಲವೆ? ಅಥವಾ ಅದಕ್ಕೂ ನಾನು ಆಶ್ಚರ್ಯಪಡಬೇಕಾಗಿಲ್ಲ! ಪುರುಷತ್ವವಿಲ್ಲದೆ ಹೆಂಗಸಿನಂತಿರುವವನೂ, ವಯಸ್ಸು ಕಳೆದ ಮುದುಕನೂ ಆದ ನೀನು ಅವರಿಗೆ ಎಲ್ಲಾ ವಿಷಯಗಳಲ್ಲಿಯೂ ಮಾರ್ಗದರ್ಶಕನಾಗಿರುವಾಗ, ಅವರ ಬುದ್ಧಿಯು ಕೆಡುವುದರಲ್ಲಿ ಆಶ್ಚರ್ಯವೇನಿದೆ?'' ಎಂದನು.

ಓ ಜನಮೇಜಯರಾಜಾ! ಅತಿ ಕ್ರೂರವಾದ ಈ ಶಿಶುಪಾಲನ ಮಾತನ್ನು ಕೇಳಿ ಭೀಮನಿಗೆ ದುಸ್ಸಹವಾದ ಆಕ್ರೋಶವುಂಟಾಯಿತು. ಸಹಜವಾಗಿಯೇ ಕಮಲವರ್ಣವುಳ್ಳ ಮತ್ತು ವಿಶಾಲವಾದ ಅವನ ಕಣ್ಣುಗಳು

ಕೋಪದಿಂದ ಮತ್ತಷ್ಟು ಕೆಂಪೇರಿದುವು. ಅವನ ಹಣೆಯಲ್ಲಿ ಭಯಂಕರಗಳಾದ ಮೂರೆಳೆಯ ಭ್ರುಕುಟಿಗಳು ಮೇಲೆದ್ದುವು. ತ್ರಿಕೂಟಪರ್ವತದ ಮೇಲೆ ಮೂರು ಶಾಖೆಯಾಗಿ ಹರಿಯುತ್ತಿರುವ ಗಂಗಾನದಿಯಂತೆ ಅವನ ಹಣೆಯಲ್ಲಿರುವ ಹುಬ್ಬುಗಂಟುಗಳನ್ನೂ, ಅವನು ಕೋಪದಿಂದ ಹಲ್ಲುಕಡಿಯುವುದನ್ನೂ ನೋಡಿ, ಆ ಸಭೆಯಲ್ಲಿದ್ದ ಸಮಸ್ತರಾಜರೂ ನಡುಗಿದರು. ಪ್ರಳಯಕಾಲದಲ್ಲಿ ಲೋಕವನ್ನೆಲ್ಲ ನುಂಗುವುದಕ್ಕಾಗಿ ಬರುವ ಕಾಲಾಂಕನಂತೆ, ಭೀಮನು ವೇಗದಿಂದ ಶಿಶುಪಾಲನಮೇಲೆ ಬೀಳುವುದಕ್ಕೆ ಹೋದನು. ಇದನ್ನು ಕಂಡು ಮಹಾಬಾಹುವಾದ ಭೀಷ್ಮನು ಥಟ್ಟನೆಬಂದು ಪರಮಶಿವನು ಕೋಪಗೊಂಡ ಷಣ್ಮುಖನನ್ನು ತಡೆಯುವಂತೆ ಅವನನ್ನು ಹಿಡಿದು ನಿಲ್ಲಿಸಿದನು. ಗುರುವಾಗಿಯೂ, ವೃದ್ಧನಾಗಿಯೂ ಇರುವ ಭೀಷ್ಮನು ಅನೇಕವಿಧದಲ್ಲಿ ಸಮಾಧಾನಹೇಳಿ ತಡೆದಮೇಲೆ, ಭೀಮನ ಕೋಪವು ಸ್ವಲ್ಪಮಟ್ಟಿಗೆ ಶಾಂತವಾಯಿತು. ಆಗ ಭೀಮನು, ಸಮುದ್ರವು ತನ್ನ ವೇಲೆಯನ್ನು ಮೀರಿಹೋಗದಂತೆ, ತಾತನಾದ ಭೀಷ್ಮನ ಮಾತನ್ನು ಮೀರಿಹೋಗಲಾರದೆ ಅಲ್ಲಿಯೇ ನಿಂತುಬಿಟ್ಟನು. ಭೀಮನು ಶಿಶುಪಾಲನನ್ನು ಕಂಡಹಾಗೆಲ್ಲ ಕೋಪಪರವಶನಾಗಿ ಮೇಲೆಮೇಲೆ ಕೋಪದಿಂದ ರೇಗ ಗರ್ಜಿಸುತ್ತಿದ್ದರೂ, ಶಿಶುಪಾಲನು ಅಲ್ಪಮೃಗವನ್ನು ಕಂಡ ಸಿಂಹದಂತೆ ಆ ಭೀಮನ ಕೋಪವನ್ನು ಲಕ್ಷ್ಯಮಾಡದೆಯೇ ನಿಂತಿದ್ದನು. ಅಲ್ಲದೆ, ಭೀಮನ ಆ ಕೋಪಾವೇಶಕ್ಕೆ ನಕ್ಕು ಭೀಷ್ಮನನ್ನು ಕುರಿತು “ ಓ ಗಾಂಗೇಯಾ ! ಅವನನ್ನು ನೀನೇಕೆ ತಡೆಯುವೆ ? ಬಿಟ್ಟುಬಿಡು. ಬೆಂಕಿಯಲ್ಲಿ ಬೀಳುವ ಪತಂಗದಂತೆ ನನ್ನ ಕೈಯಲ್ಲಿ ಸಾಯುವುದಕ್ಕೆ ಸಿದ್ಧನಾಗಿರುವ ಅವನನ್ನೇಕೆ ತಡೆಯುವೆ ? ನನ್ನ ವೀರ್ಯಾಗ್ನಿಯಿಂದ ಈಗಲೇ ಅವನು ದಗ್ಧನಾಗುವುದನ್ನು ಈ ರಾಜರೆಲ್ಲರೂ ನೋಡಲಿ ” ಎಂದನು. ಆಗ ವಾಕ್ಯವಿಶಾರದನಾದ ಭೀಷ್ಮನು ಭೀಮನನ್ನು ನೋಡಿ “ ಭೀಮಸೇನಾ ! ಅದೋ ಶಿಶುಪಾಲನು ನಿನ್ನನ್ನು ಯುದ್ಧಕ್ಕೆ ಕರೆಯುತ್ತಿರುವನು. ಇದುವರೆಗೆ ಎಲ್ಲಿಯೂ ಪರಾಜಯವೆಂಬುದನ್ನೇ ಕಾಣದ ನಿನ್ನನ್ನು ಇವನು ತಾನಾಗಿಯೇ ಈಗ ಯುದ್ಧಕ್ಕೆ ಕರೆಯುತ್ತಿರುವುದು ಇವನ

ಸ್ವಬುದ್ಧಿಯಲ್ಲ. ಶ್ರೀಕೃಷ್ಣನ ಸಂಕಲ್ಪದಿಂದಲೇ ವಿನಾಶಕಾಲಕ್ಕಾಗಿ ಇವನಿಗೆ ಈ ವಿಪರೀತಬುದ್ಧಿಯು ಹುಟ್ಟಿದೆ.

ಇದು ಅರುವತ್ತೈದನೆಯ ಅಧ್ಯಾಯವು.

---

{ ಭೀಷ್ಮನು ಶಿಶುಪಾಲನ ಜನ್ಮವೃತ್ತಾಂತವನ್ನು ಭೀಮನಿಗೆ ತಿಳಿಸಿ, ತಾನು ಅವನನ್ನು ತಡೆಯುವುದಕ್ಕೆ ಕಾರಣವನ್ನು ಹೇಳಿದುದು. }

ಓ ಭೀಮಸೇನಾ! ಈ ಚೇದಿರಾಜನು ಹುಟ್ಟುವಾಗ ಮೂರು ಕಣ್ಣುಗಳಿಂದಲೂ, ನಾಲ್ಕು ಭುಜಗಳಿಂದಲೂ ಹುಟ್ಟಿದನು. ಹುಟ್ಟಿದೊಡನೆ ಕತ್ತೆಯ ಕೂಗಿನಂತೆ ಗಟ್ಟಿಯಾಗಿ ಅರಚಿಕೊಂಡನು. ಈ ವಿಲಕ್ಷಣವಾದ ಶಿಶುವನ್ನು ನೋಡಿ ಇವನ ತಾಯಿತಂದೆಯರೂ, ಬಂಧುಗಳೂ ಇದೇನೆಂದು ಭಯದಿಂದ ತತ್ತಳಿಸುತ್ತಿದ್ದರು. ಇವನ ವಿಕಾರರೂಪವನ್ನು ನೋಡಿ ಇವನನ್ನು ಶಿಶುವಾಗಿದ್ದಾಗಲೇ ತೊರೆದುಬಡಬೇಕೆಂದು ಇವನ ತಂದೆತಾಯಿಗಳು ಯೋಚಿಸುತಿದ್ದರು. ಈ ವಿಲಕ್ಷಣಶಿಶುವನ್ನು ನೋಡುವುದಕ್ಕಾಗಿ ರಾಜನೂ, ರಾಜಭಾರ್ಯೆಯರೂ, ಮಂತ್ರಿಗಳೂ, ಪುರೋಹಿತರೂ ಬಂದು ಸೇರಿದರು. ಎಲ್ಲರೂ ಮುಂದೇನುಮಾಡಬೇಕೆಂದು ತೋರದೆ, ಚಿಂತೆಯಿಂದ ಮನಸ್ಸು ಕಲಗಿರುವಾಗ, ಆಕಾಶದಿಂದ ಅಶರೀರವಾಣಿಯೊಂದು ಕೇಳಿಸಿತು. ಆ ಆಕಾಶವಾಣಿಯು ರಾಜನನ್ನು ಸಂಬೋಧಿಸಿ "ಓ ಚೇದಿರಾಜಾ! ಈ ನಿನ್ನ ಪುತ್ರನು ಒಳ್ಳೇ ಶ್ರೀಮಂತನಾಗಿಯೂ, ಬಲಾಢ್ಯನಾಗಿಯೂ ಪ್ರಸಿದ್ಧಿಹೊಂದುವನು. ಇವನನ್ನು ನೋಡಿ ನೀನು ಭಯಪಡಬೇಕಾದುದಿಲ್ಲ. ನಿನ್ನ ಚಿಂತೆಯನ್ನು ಬಿಟ್ಟು ಶಿಶುವನ್ನು ಕಾಪಾಡು. ಈ ಶಿಶುವನ್ನು ನೀನು ತೊರೆದರೂ ಇದು ಈಗಲೇ ಸಾಯಲಾರದು. ನೀನಾಗಲಿ, ಬೇರೊಬ್ಬರಾಗಲಿ, ಇದನ್ನು ಕೊಲ್ಲಲು ಸಾಧ್ಯವಿಲ್ಲ. ಈ ಶಿಶುವಿಗೆ ಇದು ಮರಣಕಾಲವೂ ಅಲ್ಲ. ಮುಂದೆ ಇವನನ್ನು ತನ್ನ ಆಯುಧದಿಂದ ಕೊಲ್ಲತಕ್ಕವನೊಬ್ಬನು ಆಗಲೇ ಹುಟ್ಟಿರುವನು" ಎಂದಿತು. ಇಷ್ಟು ಮಾತನ್ನು ಹೇಳಿ ಆ ಭೂತವು ಹಾಗೆಯೇ ಅಂತರ್ಧಾನಹೊಂದಿತು. ರಾಜ

ನು ಮೊದಲಾದವರೆಲ್ಲರೂ ಆ ಮಾತನ್ನು ಕೇಳಿ ಆಶ್ಚರ್ಯಪಡುತಿದ್ದರು. ಶಿಶುಪಾಲನ ತಾಯಿಯೋ ಹೆತ್ತಮಗುವಿನಲ್ಲಿ ತನಗಿದ್ದ ಕನಿಕರದಿಂದ ಬಿಡುವುದಕ್ಕೂ ಎತ್ತಿಕೊಳ್ಳುವುದಕ್ಕೂ ಇಷ್ಟವಿಲ್ಲದೆ, ಆ ಮಗುವನ್ನು ಕೊಲ್ಲುವವನು ಯಾವನೆಂದೂ ತಿಳಿಯದೆ ಕಳವಳಿಸುತ್ತ "ಅಯ್ಯೋ! ನನ್ನ ಮಗುವಿನ ವಿಷಯವಾಗಿ ಈ ಮಾತುಗಳನ್ನು ಹೇಳಿದವರಾರೋ ತಿಳಿಯಲಿಲ್ಲವಲ್ಲ. ಆ ಮಹಾತ್ಮನಿಗೆ ನಾನು ಕೈಮುಗಿದು ನಮಸ್ಕರಿಸುವೆನು. ಅವನು ದೇವತೆಯಾಗಿರಲಿ, ಮನುಷ್ಯನಾಗಿರಲಿ, ಬೇರೆ ಯಾವನೇ ಆಗಿರಲಿ, ಮತ್ತೊಮ್ಮೆ ಬಂದು ಈ ಶಿಶುವಿನ ವಿಷಯವಾಗಿ ನನಗೆ ಇನ್ನೂ ವಿವರವಾಗಿ ತಿಳಿಸಬಾರದೆ? ಮುಖ್ಯವಾಗಿ ಈ ಶಿಶುವಿಗೆ ಮೃತ್ಯು ವಾವನೆಂಬುದನ್ನು ತಿಳಿಯಬೇಕೆಂದಿರುವೆನು" ಎಂದು ಕೈಮುಗಿದು ಪ್ರಾರ್ಥಿಸಿದಳು. ಆಗ ಅದೃಶ್ಯವಾಗಿದ್ದ ಭೂತವು ತಿರುಗಿ "ಈ ಮಗುವನ್ನು ಯಾವನು ತೊಡೆಯಲ್ಲಿ ಎತ್ತಿಕೊಂಡೊಡನೆ, ಇದಕ್ಕಿರುವ ಹೆಚ್ಚಾದ ಎರಡು ಭುಜಗಳು, ಐದು ಹೆಡೆಯುಳ್ಳ ಹಾವಿನಂತೆ ಅವನ ಶರೀರದಿಂದ ಬಿದ್ದುಹೋಗುವುವೋ, ಮತ್ತು ಈ ಶಿಶುವು ಯಾವನನ್ನು ಕಂಡೊಡನೆ ಇದರ ಹಣೆಯಲ್ಲಿರುವ ಮೂರನೆಯ ಕಣ್ಣು ಆ ಹಣೆಯಲ್ಲಿಯೇ ಅಡಗಿ ಅದೃಶ್ಯವಾಗುವುದೋ, ಅವನೇ ಈ ಪುತ್ರನಿಗೆ ಮೃತ್ಯುವಾಗುವನು" ಎಂದಿತು.

ಓ ಜನಮೇಜಯರಾಜಾ! ಆ ಶಿಶುವಿಗೆ ಮೂರು ಕಣ್ಣುಗಳೂ, ನಾಲ್ಕು ಭುಜಗಳೂ ಇರುವುದನ್ನೂ, ಅಶರೀರವಾಣಿಯು ಹೇಳಿದ ಅದರ ಮರಣವೃತ್ತಾಂತವನ್ನೂ ಕೇಳಿ ಭೂಮಿಯಲ್ಲಿರುವ ರಾಜರೆಲ್ಲರೂ ಆಶ್ಚರ್ಯದಿಂದ ಬಂದು ಆ ಶಿಶುವನ್ನು ನೋಡಿಹೋಗುತಿದ್ದರು. ನೋಡುವುದಕ್ಕಾಗಿ ಬಂದ ರಾಜರನ್ನೆಲ್ಲ ಚೇದಿರಾಜನು ಅವರವರ ಪದವಿಗೆ ತಕ್ಕಂತೆ ಸತ್ಕರಿಸಿ, ಆ ಶಿಶುವನ್ನು ತಂದು ಒಬ್ಬೊಬ್ಬರ ತೊಡೆಯಲ್ಲಿಯೂ ಮಲಗಿಸುತ್ತಿದ್ದನು. ಹೀಗೆ ಸಾವಿರಾರುಮಂದಿ ರಾಜರು ಆ ಶಿಶುವನ್ನೆತ್ತಿಕೊಂಡರೂ ಅಶರೀರವಾಕ್ಕು ಹೇಳಿದಂತೆ ಯಾರಲ್ಲಿಯೂ ನಡೆಯಲಿಲ್ಲ. ಇಷ್ಟರಲ್ಲಿಯೇ ಮಹಾಬಲಾಢ್ಯರಾದ ಬಲರಾಮಕೃಷ್ಣರಿಗೆ ಈ ಶಿಶುಜನನವೃತ್ತಾಂತವು

ತಿಳಿಯಿತು. ಅವರು, ತಮ್ಮ ತಂದೆಯ ಸಹೋದರಿಯಾದ ಯಾದವಿ ಯೆಂಬವಳಿಗೆ ಮಗು ಹುಟ್ಟಿದ ಸಂಗತಿಯನ್ನು ಕೇಳಿದೊಡನೆ, ಅವಳನ್ನು ನೋಡುವುದಕ್ಕಾಗಿ ಚೇದಿಪುರಕ್ಕೆ ಬಂದು, ಕ್ರಮವಾಗಿ ರಾಜನನ್ನೂ ರಾಣಿಯನ್ನೂ ಕಂಡು ನಮಸ್ಕರಿಸಿ, ಅವರ ಕ್ಷೇಮಲಾಭಗಳನ್ನು ವಿಚಾರಿಸಿ ಕುಳಿತುಕೊಂಡರು. ಆಗ ಅತ್ತೆಯಾದ ಯಾದವಿಯು, ರಾಮಕೃಷ್ಣರನ್ನು ಪ್ರೇಮದಿಂದ ಆದರಿಸಿ, ಆ ಶಿಶುವನ್ನು ತಂದು ಅವರ ತೊಡೆಯಲ್ಲಿ ಬಿಟ್ಟಳು. ಕೃಷ್ಣನ ತೊಡೆಯಲ್ಲಿ ಬಿಟ್ಟಕೂಡಲೆ ಆ ಶಿಶುವಿಗೆ ಅಧಿಕವಾಗಿದ್ದ ಎರಡು ತೋಳುಗಳೂ ಬಿದ್ದುಹೋದುವು. ಅದರ ಹಣೆಯಲ್ಲಿದ್ದ ಮೂರನೆಯ ಕಣ್ಣೂ ಅದೃಶ್ಯವಾಯಿತು. ಇದನ್ನು ನೋಡಿ ರಾಜಪತ್ನಿಯು ಭಯದಿಂದಲೂ, ದುಃಖದಿಂದಲೂ ನಡುಗುತ್ತ, ಆ ಕೃಷ್ಣನ ಮುಂದೆ ಕೈಮುಗಿದು "ಕೃಷ್ಣಾ! ಕೃಷ್ಣಾ! ಮಹಾಬಾಹೂ! ಭಯಾರ್ತೆಯಾದ ನನಗೆ ಅಭಯವನ್ನು ಕೊಟ್ಟು ಕಾಪಾಡಬೇಕು. ದುಃಖಿತರ ದುಃಖವನ್ನು ನೀಗಿಸಿ, ಭಯಪಟ್ಟವರಿಗೆ ಅಭಯವನ್ನು ಕೊಡತಕ್ಕ ನೀನು ನನಗೆ ಒಂದು ವರನನ್ನು ಕೊಡಬೇಕು" ಎಂದಳು. ಆಗ ಕೃಷ್ಣನು "ಅಮ್ಮಾ! ಇದೇಕೆ ಹೆದರುತ್ತಿರುವೆ? ಭಯಪಡಬೇಡ! ನನ್ನಿಂದ ನಿನಗೆ ಭಯವೇನಿದೆ? ನನ್ನಿಂದ ನಡೆಯಬೇಕಾದ ಕಾರ್ಯವೇನಿದ್ದರೂ ಹೇಳು. ಅದು ಸಾಧ್ಯವಾಗಿದ್ದರೂ, ಅಸಾಧ್ಯವಾಗಿದ್ದರೂ ನಾನು ನಡೆಸಿಕೊಡುವೆನು. ನಿನಗೆ ಬೇಕಾದ ವರವನ್ನು ಕೇಳು" ಎಂದನು. ಅದಕ್ಕೆ ರಾಜಪತ್ನಿಯು "ಓ ಯದುಕುಲತಿಲಕಾ! ಪ್ರಭೂ! ಈ ನನ್ನ ಮಗುವು ನಿನ್ನ ವಿಷಯದಲ್ಲಿ ಮುಂದೆ ಯಾವ ಅಪರಾಧವನ್ನು ಮಾಡಿದರೂ, ನನಗಾಗಿ ಅದನ್ನು ನೀನು ಮನ್ನಿಸಬೇಕು. ಇದೇ ನಿನ್ನಿಂದ ನನಗೆ ಬೇಕಾದ ವರವು" ಎಂದಳು. ಆಗ ಕೃಷ್ಣನು "ಅಮ್ಮಾ! ನಿನ್ನ ಮಗನು ಕೊಲೆಗೆ ಯೋಗ್ಯವಾದ ಅಪರಾಧಗಳನ್ನು ಮಾಡಿದರೂ, ಇವನ ನೂರು ತಪ್ಪುಗಳನ್ನಾದರೂ ನಾನು ಮನ್ನಿಸುವೆನು. ನೀನು ಹೆದರಬೇಡ" ಎಂದನು.

ಓ ಭೀಮಸೇನಾ! ಈ ಶಿಶುಪಾಲನಿಗೂ ತನಗೆ ಕೃಷ್ಣನೇ ಮೃತ್ಯುವೆಂಬ ಸಂಗತಿಯು ಚೆನ್ನಾಗಿ ತಿಳಿಯುವುದು. ಆದರೂ ಈ ಪಾಪಿಯು

ಹಿಂದೆ ತನ್ನ ತಾಯಿಗೆ ಕೃಷ್ಣನು ಮಾಡಿರುವ ವಾಗ್ದಾನದಿಂದ ಗರ್ವಿತನಾಗಿ, ಬುದ್ಧಿಗೆಟ್ಟು ನಿನ್ನನ್ನು ಹೀಗೆ ಯುದ್ಧಕ್ಕೆ ಕರೆಯುತ್ತಿರುವನು.

ಇದು ಅರುವತ್ತೇಳನೆಯ ಅಧ್ಯಾಯವು.

⸻

{ಶಿಶುಪಾಲನು ಕೋಪದಿಂದ ಭೀಷ್ಮನನ್ನು ನಿರಾಕರಿಸಲು, ಭೀಷ್ಮನು ಶಿಶುಪಾಲನನ್ನೂ ಅವನ ಕಡೆಯ ರಾಜರನ್ನೂ ನಿಂದಿಸಿದುದು.}

ಓ ಭೀಮಸೇನಾ! ಆದುದರಿಂದ ಈ ಶಿಶುಪಾಲನು ಈಗ ನಿನ್ನನ್ನು ಯುದ್ಧಕ್ಕಾಗಿ ಕೆಣಕುವುದು ಲೋಕಕರ್ತನಾದ ಶ್ರೀಕೃಷ್ಣನ ಸಂಕಲ್ಪವೇ ಹೊರತು ಅವನ ಸ್ವಬುದ್ಧಿಯಿಂದಲ್ಲವೆಂದು ತಿಳಿ. ವಿನಾಶಕಾಲಕ್ಕೆ ತಕ್ಕ ವಿಪರೀತಬುದ್ಧಿಯಿಂದ ಇವನು ಮೇಲೆ ಬೀಳುತ್ತಿರುವನು. ಹಾಗಿಲ್ಲದಿದ್ದರೆ, ಈ ಲೋಕದಲ್ಲಿ ನನ್ನನ್ನು ದೂಷಿಸತಕ್ಕ ಇಂತಹ ಕುಲಗೇಡಿಯು, ರಾಜಕುಲದಲ್ಲಿ ಬೇರೆ ಯಾವನು ತಾನೇ ಇರುವನು? ವತ್ಸ ಭೀಮಾ! ಇವನೂ ಭಗವಂತನಾದ ಈ ಶ್ರೀಕೃಷ್ಣನ ತೇಜಸ್ಸಿನ ಒಂದು ಅಂಶವಾಗಿ ಹುಟ್ಟಿರುವನು. ಈಗ ಆ ಅಂಶವನ್ನು ಕೃಷ್ಣನು ಹಿಂದಕ್ಕೆ ಎಳೆದುಕೊಳ್ಳುವ ಕಾಲವು ಸಮೀಪಿಸಿದೆ. ಆದುದರಿಂದಲೇ ಇವನು ಕೊಬ್ಬಿದ ಹುಲಿಯಂತೆ ನೈತಿಳಿಯದೆ ನಮ್ಮನ್ನೆಲ್ಲ ಧಿಕ್ಕರಿಸಿ ಮಾತಾಡುತ್ತಿರುವನು. ಈ ದುರಾತ್ಮನಿಗೆ ಬುದ್ಧಿಯು ಕೆಟ್ಟಿರುವುದರಿಂದ ಯಾರೂ ಲಕ್ಷ್ಯವಿಲ್ಲದಂತಿದೆ" ಎಂದನು.

ಓ ಜನಮೇಜಯರಾಜಾ! ಭೀಷ್ಮನ ಮಾತು ಶಿಶುಪಾಲನಿಗೆ ದುಸ್ಸಹವಾಯಿತು. ಆಗ ಅವನು ಕೋಪಾವೇಶದಿಂದ ಭೀಷ್ಮನನ್ನು ಕುರಿತು "ಓ ಭೀಷ್ಮಾ! ನೀನು ಈ ಕೃಷ್ಣನಲ್ಲಿ ಆರೋಪಿಸಿದ ಅತಿಶಯಗಳೆಲ್ಲವೂ ಅವನಿಗೆ ಶತ್ರುಗಳಾದ ನಮ್ಮಲ್ಲಿಲ್ಲವೆ? ರಾಜರಲ್ಲಿ ಸಂಬಳಕ್ಕಿರುವ ಹೊಗಳುಭಟ್ಟರಂತೆ ನೀನು ಯಾವಾಗಲೂ ಇವನನ್ನೇ ಹೊಗಳುತ್ತಿರುವೆ. ಇತರರನ್ನು ಮುಖಸ್ತುತಿಮಾಡಿ ಬದುಕಬೇಕೆಂಬ ಆಸೆಯು ನಿನಗಿದ್ದರೆ, ಆ

ಕೃಷ್ಣನನ್ನು ಸ್ತುತಿಸುವುದಕ್ಕೆ ಬದಲಾಗಿ ಈ ರಾಜರನ್ನು ಹೊಗಳು! ಇದೋ! ಇಲ್ಲಿ ಬಾಹ್ಲೀಕ ದೇಶಾಧಿಪತಿಯಾದ ವರದನಿರುವನು. ಇವನು ಹುಟ್ಟುವಾಗಲೇ ಭೂಮಿಯನ್ನು ಭೇದಿಸಿದ ಮಹಾಬಲಾಢ್ಯನು. ಇವನನ್ನು ಸ್ತುತಿಸು! ಇದೋ! ಇಲ್ಲಿ ಅಂಗ ವಂಗ ದೇಶಗಳಿಗೆಲ್ಲ ಪ್ರಭುವೆನಿಸಿ, ದೇವೇಂದ್ರನಿಗೆ ಸಮಾನನಾಗಿ, ಮಹಾಧನುರ್ಧಾರಿಯೆನಿಸಿದ ಕರ್ಣನಿರುವನು. ಅವನನ್ನು ಸ್ತುತಿಸು. ಹುಟ್ಟುವಾಗಲೇ ಇವನಿಗೆ ದೈವಾನುಗ್ರಹದಿಂದ ದಿವ್ಯಕುಂಡಲಗಳೂ, ಬಾಲಸೂರ್ಯನಂತೆ ಬೆಳಗುಗುವ ಕವಚವೂ ಜನ್ಮಸಿದ್ಧವಾಗಿವೆ. ಇಂದ್ರಸಮಾನನಾದ ಮತ್ತು ದುರ್ಜಯನಾದ ಜರಾಸಂಧನನ್ನು ಇವನು ಬಾಹುಯುದ್ಧದಲ್ಲಿ ಜಯಿಸಿ ಅವನ ದೇಹವನ್ನು ಹರಿದವನು. ಇವನನ್ನು ಸ್ತುತಿಸು. ಮಹಾರಥರೂ, ಬ್ರಾಹ್ಮಣೋತ್ತಮರೂ ಆದ ದ್ರೋಣಾಶ್ವತ್ಥಾಮರಿಬ್ಬರನ್ನೂ ನೀನು ಬೇಕಾದ ಹಾಗೆ ಹೊಗಳು! ಇವರಿಬ್ಬರೂ ನಿಜವಾಗಿಯೇ ಸ್ತೋತ್ರಾರ್ಹರು. ಬ್ರಾಹ್ಮಣರನ್ನು ಸೋತ್ರಮಾಡಿದರಾದರೂ ನಿನಗೆ ಶ್ರೇಯಸ್ಸುಂಟು. ಈ ತಂದೆ ಮಕ್ಕಳಲ್ಲಿ ಯಾವನೊಬ್ಬನು ಕೋಪಗೊಂಡರೂ, ಚರಚರಾತ್ಮಕವಾದ ಈ ಭೂಮಿಯಲ್ಲಿ ಯಾವುದೂ ಇಲ್ಲದಂತೆ ನಿಶ್ಶೇಷವಾಗಿ ಮಾಡಬಲ್ಲನು. ಯುದ್ಧದಲ್ಲಿ ಇವರಿಗೆ ಸಮಾನನಾಗಿ ಇದಿರಿಸಿ ನಿಲ್ಲತಕ್ಕವನು ಸಮುದ್ರಾಂತವಾದ ಈ ಸಮಸ್ತಭೂಮಿಯಲ್ಲಿಯೇ ಇಲ್ಲವೆಂದು ತಿಳಿ. ಇವರನ್ನು ನೀನೇಕೆ ಹೊಗಳಬಾರದು? ಮತ್ತು ರಾಜನೆನಿಸಿದ ದುರ್ಯೋಧನನಿರುವನು. ಅಸ್ತ್ರಪಾರಂಗತನೂ, ದೃಢಪರಾಕ್ರಮಿಯೂ ಆದ ಜಯದ್ರಥನಿರುವನು! ಕಿಂಪುರುಷರಿಗೆ ಆಚಾರ್ಯನಾದ ದ್ರುಮನಿರುವನು! ಇವರನ್ನೆಲ್ಲ ಬಿಟ್ಟು, ಗೊಲ್ಲನಾದ ಈ ಕೃಷ್ಣನನ್ನು ಲೋಕವೀರನೆಂದು ಕೊಂಡಾಡುತ್ತಿರುವೆಯಲ್ಲಾ! ಭರತಕುಲಕ್ಕೆಲ್ಲ ಆಚಾರ್ಯನೂ, ವಯೋವೃದ್ಧನೂ, ಶರದ್ವತಕುಮಾರನೂ ಆದ ಕೃಪನನ್ನು ಬಿಟ್ಟು, ಈ ಕೃಷ್ಣನನ್ನು ಮಹಾವೀರನೆಂದು ಶ್ಲಾಘಿಸುತ್ತಿರುವೆಯೇಕೆ? ಧನುರ್ಧಾರಿಗಳಿಗೆ ಮೇಲೆನಿಸಿ, ಮಹಾಪರಾಕ್ರಮಿಯಾದ ರುಕ್ಮಿಯಿರುವಾಗ, ಅವನನ್ನು ಬಿಟ್ಟು ಈ ಕೃಷ್ಣನನ್ನು ನೀನೇನೆಂದು ಹೊಗಳುವೆ? ಅಲ್ಲದೆ, ಮಹಾವೀರ್ಯವುಳ್ಳ ಭೀಷ್ಮಕನಿರುವನು! ದಂತವಕ್ತ್ರನಿರುವನು! ಭಗದತ್ತನಿರುವನು! ಹೀಗೆಯೇ ಯೂಪಕೇತು,

ಮಗಧರಾಜನಾದ ಜಯತ್ಸೇನನು, ವಿರಾಟದ್ರುಪದರು, ಶಕುನಿ, ಬೃಹದ್ಬಲನು, ಅವಂತಿರಾಜರಾದ ವಿಂದಾನುವಿಂದರು, ಪಾಂಡ್ಯರಾಜನಾದ ಶ್ವೇತನು, ಮಹಾಭಾಗನಾದ ಶಂಖನು, ಮಹಾಧೀರನಾದ ವೃಷಸೇನನು, ವೀರ್ಯವಂತನಾದ ಏಕಲವ್ಯನು, ಮಹಾರಥನಾದ ಕಾಳಿಂಗನು, ಇವರನ್ನೆಲ್ಲ ಬಿಟ್ಟು ಕೃಷ್ಣನನ್ನು ಮಹಾವೀರನೆಂದು ಸ್ತುತಿಸುತ್ತಿರುವೆಯೇಕೆ? ಭೀಷ್ಮಾ! ಇತರರ ಮುಂದೆ ನಿಂತು ಮುಖಸ್ತುತಿಮಾಡುವುದೇ ನಿನ್ನ ಸ್ವಭಾವವಾಗಿದ್ದ ಪಕ್ಷದಲ್ಲಿ, ಈ ಶಲ್ಯನೇ ಮೊದಲಾದ ರಾಜರನ್ನು ಸ್ತುತಿಸಬಾರದೆ? ಗಾಂಗೇಯಾ! ಪೂರ್ವಕಾಲದಲ್ಲಿ ಧರ್ಮಜ್ಞರಾದ ವೃದ್ಧರು ಹೇಳಿದ ನೀತಿಕಥೆಗಳೊಂದನ್ನೂ ನೀನು ಕೇಳಿಲ್ಲವೆಂದು ತೋರುತ್ತಿದೆ. ಅದಕ್ಕಾಗಿ ಈಗ ನಾನೇನು ಮಾಡಬಲ್ಲೆನು? ಆತ್ಮನಿಂದೆ, ಆತ್ಮಸ್ತುತಿ, ಪರನಿಂದೆ ಅಥವಾ ಪರಸ್ತುತಿ, ಇವು ಸಜ್ಜನರ ಸ್ವಭಾವವಲ್ಲವೆಂಬುದನ್ನು ನೀನು ಕೇಳಿಲ್ಲವೆಂದು ತೋರುತ್ತಿದೆ. ಭೀಷ್ಮಾ! ಈಗ ನೀನು ಬುದ್ಧಿಯಿಲ್ಲದೆ ಮೋಹಗೊಂಡು, ಸ್ತೋತ್ರಾರ್ಹನಲ್ಲದ ಈ ಕೃಷ್ಣನನ್ನು ಸೋತ್ರಮಾಡಿದಮಾತ್ರಕ್ಕೆ ನಿನ್ನ ಮಾತುಗಳನ್ನು ಈ ಸಭೆಯಲ್ಲಿ ಯಾವನು ತಾನೇ ಮೆಚ್ಚುವನು? ಭೀಷ್ಮಾ! ಈ ಕೃಷ್ಣನೇ ಜಗತ್ತನ್ನೆಲ್ಲ ಧರಿಸಿರತಕ್ಕವನೆಂದು ನೀನು ಹೊಗಳಿದೆ. ಕಂಸನ ಕೈಕೆಳಗೆ ದನಕಾಯುತಿದ್ದ ದುರಾತ್ಮನಾದ ಈ ಕೃಷ್ಣನಮೇಲೆ ಈ ಜಗತ್ತನ್ನೆಲ್ಲ ಹೊರಿಸುತ್ತಿರುವ ನಿನ್ನ ಬುದ್ಧಿಗೆ ನಾನೇನು ಹೇಳಲಿ! ಭೀಷ್ಮಾ! ನೀನು ಕುಳಿಂಗಪಕ್ಷಿಗೆ ಸಮಾನನೆಂಬುದನ್ನು ನಾನು ಆಗಲೇ ಹೇಳಿದೆನು. ಆ ಪಕ್ಷಿಯು ಹಿಮಾಲಯದ ಹಿಂದಿನ ಪಾರ್ಶ್ವದಲ್ಲಿರುವುದು. ಅದು ಯಾವಾಗಲೂ ತಾನು ಹೇಳುವುದಕ್ಕೆ ವ್ಯತಿರಿಕ್ತವಾಗಿಯೇ ನಡೆಯುವ ಸ್ವಭಾವವುಳ್ಳುದು. ಅದು "ಮಾ ಸಾಹಸಂ! ಮಾ ಸಾಹಸಂ!" ಎಂದು ಹೇಳುತ್ತ ತಾನೇ ಸಾಹಸಮಾಡುವುದು. ಆ ಬಡಹಕ್ಕಿಯು, ಸಿಂಹದ ಹಲ್ಲುಗಳ ಸಂದುಗಳಲ್ಲಿ ಸಿಕ್ಕಿಕೊಂಡಿರುವ ಮಾಂಸದ ತುಂಡಿನಲ್ಲಿ ಆಸೆಯಿಂದ, ಆ ಸಿಂಹದ ಬಾಯೊಳಗೆ ತಲೆಯನ್ನಿಕ್ಕುವುದು. ಆ ಸಿಂಹವು ಸುಮ್ಮನಿರುವವರೆಗೆ ಅದೂ ಬದುಕಿರುವುದು. ಸಿಂಹಕ್ಕೆ ಕೋಪವುಂಟಾದರೆ, ಅದಕ್ಕೆ ಸಾವು ನಿಶ್ಚಯವೇ! ಭೀಷ್ಮಾ! ನಿನ್ನ ಸ್ಥಿತಿಯೂ ಅದರಂತೆಯೇ ಆಗಿದೆ. ಇಲ್ಲಿನ ರಾಜರು ಉದಾಸೀನರಾಗಿ ಸುಮ್ಮನಿರುವವರೆಗೆ, ನೀನು ಬಾಯಿಗೆ ಬಂದ

ಹಾಗೆ ಹರಟುತ್ತ ಜೀವಿಸಿರಬಹುದು. ಗಾಂಗೇಯಾ! ಲೋಕಕ್ಕೆಲ್ಲ ನಂಬ ಬಾರದ ಕಾರ್ಯವನ್ನು ಮಾಡುವವನು ನಿನ್ನಂತೆ ಯಾವನೂ ಇರಲಾರನು '' ಎಂದನು.

ಈ ಕಠೋರವಾಕ್ಯಗಳನ್ನು ಕೇಳಿ ಭೀಷ್ಮನು, ಆ ಶಿಶುಪಾಲನೂ ಕೇಳುತ್ತಿರುವಹಾಗೆ ಆ ಸಭೆಯಲ್ಲಿ ಹೀಗೆಂದು ಹೇಳುವನು. "ಎಲೈ ಸದಸ್ಯರೇ! ಎಲ್ಲರೂ ಕೇಳಿರಿ! ಈ ರಾಜರು ಸುಮ್ಮನೆ ಬಿಟ್ಟಿರುವುದರಿಂದ ನಾನು ಬದುಕಿರುವೆನಂತೆ? ಈ ರಾಜರನ್ನೆಲ್ಲ ನಾನು ಹುಲ್ಲಿಗಿಂತಲೂ ಕಡೆಯಾಗಿ ಎಣಿಸಿರುವೆನು'' ಎಂದನು. ಭೀಷ್ಮನು ಹೇಳಿದ ಈ ಮಾತನ್ನು ಕೇಳಿ ಅಲ್ಲಿದ್ದ ಅನೇಕರಾಜರಿಗೆ ಸಹಿಸದಂತಾಯಿತು. ಆದರೆ ಕೆಲವರು ಇವನ ಮಾತನ್ನೇ ಅನುಮೋದಿಸಿ ಸಂತೋಷದಿಂದ "ಭಲೆ! ಭಲೆ!'' ಎಂದರು. ಬೇರೆ ಕೆಲವರು ಭೀಷ್ಮನನ್ನು ನಿಂದಿಸಿದರು. ಮಹಾಧನುರ್ಧಾರಿಗಳಾದ ಮತ್ತೆ ಕೆಲವರು ತಮ್ಮೊಳಗೆ ಅನ್ಯೋನ್ಯವಾಗಿ "ಈ ಭೀಷ್ಮನು ಬಹಳ ಕೊಬ್ಬಿರುವನು. ಪಾಪಬುದ್ಧಿಯುಳ್ಳವನು. ಇವನು ವೃದ್ಧನಾಗಿದ್ದರೂ ಕ್ಷಮಾರ್ಹನಲ್ಲ! ಎಲೈ ರಾಜರೇ! ಈಗಲೇ ಈ ದುರಾತ್ಮನನ್ನು ಹಿಡಿದು ಯಾಗಪಶುವಿನಂತೆ ಕಡಿದು ಕೊಲೆಮಾಡಿರಿ! ಇಲ್ಲವೇ ಎಲ್ಲರೂ ಒಂದಾಗಿ ಸೇರಿ, ಇವನನ್ನು ಹಿಡಿದು ಕಟಾಗ್ನಿಯಲ್ಲಿ (ಚಾಪೆಯಲ್ಲಿ ಸುತ್ತಿ ಬೆಂಕಿಹಾಕಿ) ಸುಟ್ಟುಬಿಡಿರಿ'' ಎಂದು ಆರ್ಭಟಿಸುತಿದ್ದರು.

ರಾಜರ ಈ ಕೂಗಾಟಗಳನ್ನೆಲ್ಲ ಕೇಳಿಯೂ ಭೀಷ್ಮನು ಒಳ್ಳೇ ಧೀಮಂತನಾದುದರಿಂದ, ವಿಶೇಷವಾಗಿ ಕೋಪಿಸದೆ, ಆ ರಾಜರನ್ನು ನೋಡಿ, "ಎಲೈ ಕ್ಷತ್ರಿಯರೇ! ಬರೀ ಉತ್ತರಪ್ರತ್ಯುತ್ತರಗಳಿಂದ ಇಲ್ಲಿ ಯಾವುದೂ ತೀರುವಹಾಗಿಲ್ಲ. ನಾನು ಹೇಳುವುದನ್ನು ಗಮನಿಸಿ ಕೇಳಿರಿ! ನನ್ನನ್ನು ಯಾಗಪಶುವಿನಂತೆ ವಧಿಸಿದರೂ ವಧಿಸಿರಿ! ಇಲ್ಲವೇ ನನ್ನ ಮೈಗೆ ಚಾಪೆಯನ್ನು ಸುತ್ತಿ ಬೆಂಕಿಯಲ್ಲಿಯಾದರೂ ದಹಿಸಿರಿ! ಇದೋ! ನನ್ನ ಕಾಲನ್ನು ನಿಮ್ಮ ತಲೆಯಲ್ಲಿಟ್ಟೆನು. ನಾವು ಈ ಕೃಷ್ಣನನ್ನು ಪೂಜಿಸಿದುದಾಯಿತು. ನಮ್ಮಿಂದ ಅಗ್ರಪೂಜೆಯನ್ನು ಪಡೆದ ಕೃಷ್ಣನು, ನಿಮ್ಮೆಲ್ಲರ ಕಣ್ಣೆದಿರಾಗಿ ಕದಲದೆ ಕುಳಿತಿರುವನು. ನಿಮ್ಮಲ್ಲಿ ಸಾಯುವುದಕ್ಕೆ ಸಿದ್ಧರಾದವರು ಯುದ್ಧ

ಕ್ಕಾಗಿ ಕೃಷ್ಣನನ್ನು ಕರೆಯುಬಹುದು. ಶಂಖ ಚಕ್ರ ಗದಾಧಾರಿಯಾದ ಈ ಭಗವಂತನ ಕೈಯಿಂದ ಹತರಾದವರು, ಆ ಪುಣ್ಯಬಲದಿಂದಾದರೂ ಅವನ ಶರೀರದಲ್ಲಿಯೇ ಐಕ್ಯಹೊಂದಲಿ'' ಎಂದನು.

ಇದು ಅರುವತ್ತೇಳನೆಯ ಅಧ್ಯಾಯವು.



ಶಿಶುಪಾಲನು ರಾಜರನ್ನೆಲ್ಲ ಹುರಿಗೊಳಿಸಿ, ಕೃಷ್ಣನನ್ನು ಯುದ್ಧಕ್ಕೆ ಕರೆದುದು. ಕೃಷ್ಣನು ಶಿಶುಪಾಲನು ಮಾಡಿದ ಅಪರಾಧಗಳನ್ನು ತಿಳಿಸಿದುದು. ರಾಜರು ಭಯಪಟ್ಟೋಡಲು ಶಿಶುಪಾಲನೊಬ್ಬನೇ ಯುದ್ಧಕ್ಕಿದಿರಾದುದು.

ಓ ಜನಮೇಜಯರಾಜಾ! ಕೇಳು! ಭೀಷ್ಮನ ಮಾತನ್ನು ಕೇಳಿ ಶಿಶುಪಾಲನು ಕೋಪದಿಂದ ಯುದ್ಧಕ್ಕೆ ನಿಶ್ಚಯಿಸಿ ಕೃಷ್ಣನನ್ನು ಕುರಿತು, "ಓ ಜನಾರ್ದನಾ! ಬಾ! ನನ್ನೊಡನೆ ಯುದ್ಧಕ್ಕೆ ನಿಲ್ಲು! ಪಾಂಡವರೊಡನೆ ಸೇರಿಸಿ ನಿನ್ನನ್ನು ಈಗಲೇ ತೀರಿಸಿಬಿಡುವೆನು. ಈ ರಾಜಸಭೆಯಲ್ಲಿ ರಾಜನಲ್ಲದ ನಿನಗೆ ಅಗ್ರಪೂಜೆಯನ್ನು ಮಾಡಿದ ಈ ಪಾಂಡವರನ್ನೂ, ಅವರ ಪೂಜೆಗೆ ಸಮ್ಮತಿಸಿದ ನಿನ್ನನ್ನೂ, ಇಬ್ಬರನ್ನೂ ಸೇರಿಸಿ ಕೊಲ್ಲಬೇಕಾದುದೇ ನ್ಯಾಯವು. ಇತರರಿಗೆ ದಾಸಭೂತನೂ, ರಾಜಕೂಟಕ್ಕೆ ಸೇರದವನೂ, ಬುದ್ಧಿಹೀನನೂ ಆದ ನಿನ್ನನ್ನು ಇವರು ಬಾಲ್ಯದಿಂದಲೂ ಆದರಿಸುತ್ತಿರುವರು. ಅಯೋಗ್ಯನನ್ನು ಯೋಗ್ಯನನ್ನಾಗಿ ಮಾಡಿ ಪೂಜಿಸತಕ್ಕವರನ್ನೇ ಮೊದಲು ಕೊಲ್ಲಬೇಕು'' ಎಂದು ಹೇಳಿ, ಹುಲಿಯಂತೆ ಗರ್ಜಿಸುತ್ತ, ಎಲ್ಲರೂ ನೋಡುತ್ತಿರುವಹಾಗೆಯೇ ಅಲ್ಲಿದ್ದ ತನ್ನ ಕಡೆಯ ರಾಜರನ್ನೆಲ್ಲ ಯುದ್ಧಕ್ಕೆ ಹುರಿಗೊಳಿಸಿ, ತಾನೂ ಸನ್ನದ್ಧನಾಗಿ ಮುಂದೆ ಬಂದನು. ಮುಖ್ಯವಾಗಿ ಧರ್ಮರಾಜನ ಯಾಗವನ್ನು ಪೂರ್ತಿಯಾಗದಂತೆ ಮಾಡಬೇಕೆಂಬುದಕ್ಕಾಗಿ ಆತುರದಿಂದ ಮುಂದೆ ಹೊರಟನು. ಶಿಶುಪಾಲನ ಈ ಅಟ್ಟಹಾಸವನ್ನು ನೋಡಿ ಕೃಷ್ಣನು, ತನ್ನ ಸಾರಥಿಯಾದ ದಾರುಕನಿಂದ ಸಿದ್ಧಪಡಿಸಲ್ಪಟ್ಟಿದ್ದ ಧ್ವಜಾಲಂಕೃತವಾದ ರಥದ ಬಳಿಗೆ ಬಂದನು.

ಅಲ್ಲಿ ಭೀಷ್ಮನು ಕೃಷ್ಣನ ಕೈಹಿಡಿದು ಅವನನ್ನು ರಥದಮೇಲಕ್ಕೆ ಏರಿಸಿದನು. ಆಗ ಕೃಷ್ಣನು ಪಾಪಸ್ವಭಾವವುಳ್ಳ ಆ ಶಿಶುಪಾಲನಿಂದ ಪ್ರೋತ್ಸಾಹಿಸಲ್ಪಟ್ಟ ರಾಜರಿದ್ದಲ್ಲಿಗೆ ರಥಾರೂಢನಾಗಿ ಬಂದು, ಅವರ ಮುಂದೆ ನಿಂತನು. ಆಗಲೇ ಉದಿಸಿದ ಸೂರ್ಯನಂತೆ ಬರುತ್ತಿರುವ ಪುಂಡರೀಕಾಕ್ಷನಾದ ಆ ಶ್ರೀಕೃಷ್ಣನ ಅದ್ಭುತತೇಜಸ್ಸನ್ನೂ, ಪುಷ್ಪರಥದಲ್ಲಿ ಕುಳಿತು ಬರುವ ಬೇರೊಬ್ಬ ಮನ್ಮಥನಂತೆ ಅವನು ರಥಾರೂಢನಾಗಿ ಬಿಲ್ಲಿನ ನಾಣೇರಿಸುತ್ತ ಬರುವುದನ್ನೂ ನೋಡಿ ಆ ರಾಜರೆಲ್ಲರೂ ವೈಮನಸ್ಯವನ್ನು ಮರೆತು ಬೆರಗಾದರು. ಅವರಿಗೆ ಅವನಲ್ಲಿದ್ದ ಕೋಪದ್ವೇಷಗಳೇ ಮರೆತುಹೋಯಿತು. ಕೃಷ್ಣನನ್ನು ಉಚಿತವಾದ ಗೌರವಭಾವದಿಂದ ಕಂಡರು. ಆಗ ಕೃಷ್ಣನು ಅವರನ್ನೆಲ್ಲ ನೋಡಿ ಮೃದುವಾಕ್ಯದಿಂದ "ಎಲೈ ರಾಜರೆ! ನೀವು ವ್ಯರ್ಥವಾಗಿ ಯುದ್ಧಕ್ಕೆ ಬಂದು ವಿಪತ್ತಿಗೆ ಗುರಿಯಾಗಬೇಡಿರಿ! ಈಗಲೂ ನಿಮ್ಮ ಸೈನ್ಯಗಳನ್ನು ಕರೆದುಕೊಂಡು ನೀವು ಹಿಂತಿರುಗಿ ಹೋಗಿರಿ! ನನ್ನ ಮಾತನ್ನು ಕೇಳಿರಿ! ಈಗ ನನಗೆ ಈ ಶಿಶುಪಾಲನೇ ಮುಖ್ಯವೈರಿಯಾಗಿರುವನು. ಸಾಯುವುದಕ್ಕೆ ಸಿದ್ಧನಾಗಿರುವ ಈ ಶಿಶುಪಾಲನು ನಿಮ್ಮನ್ನೂ ಸಾಯುವುದಕ್ಕಾಗಿ ಎಳೆಯುತ್ತಿರುವನು. ಇವನು ಯಾದವಕನ್ಯೆಯ ಗರ್ಭದಲ್ಲಿ ಹುಟ್ಟಿದವನಾದರೂ, ಯಾದವಕುಲದವರನ್ನೇ ದ್ವೇಷಿಸುತ್ತಿರುವನು. ಈ ಪಾಪಿಯು ನನಗೆ ಅತ್ತೆಯ ಮಗನೆನಿಸಿಕೊಂಡಿದ್ದರೂ, ನಾನು ಪ್ರಾಗ್ಜ್ಯೋತಿಷನಗರಕ್ಕೆ ದಂಡೆತ್ತಿಹೋದುದನ್ನು ತಿಳಿದು, ಆ ಸಮಯದಲ್ಲಿ ನಮ್ಮ ದ್ವಾರಕಾನಗರಿಗೆ ಬೆಂಕಿಯನ್ನಿಟ್ಟನು. ಮತ್ತು ಈ ಘಾತುಕನು, ಹಿಂದೆ ಭೋಜರಾಜನಾದ ಉಗ್ರಸೇನನು ರೈವತಕಪರ್ವತಕ್ಕೆ ಹೋಗಿ ಅಲ್ಲಿ ವಿನೋದಿಸುತ್ತಿದ್ದಾಗ, ಯಾದವರನ್ನೆಲ್ಲ ಹೊಡೆದು, ಅನೇಕರನ್ನು ಬಿಗಿದು ಕಟ್ಟಿ ತನ್ನೂರಿಗೆ ಸೆರೆಹಿಡಿದುಕೊಂಡುಹೋದನು. ಇನ್ನೊಮ್ಮೆ ಕ್ರೂರಬುದ್ಧಿಯುಳ್ಳ ಈ ನೀಚನು, ನನ್ನ ತಂದೆಯು ಅಶ್ವಮೇಧಯಾಗಕ್ಕಾಗಿ ಸೈನ್ಯದೊಡನೆ ಕುದುರೆಯನ್ನು ಬಿಟ್ಟಾಗ, ಆ ಯಾಗವನ್ನು ಕೆಡಿಸಬೇಕೆಂದು ಕುದುರೆಯನ್ನು ಕದ್ದುಬಿಟ್ಟನು. ಮತ್ತೊಮ್ಮೆ ಇವನು ಮಹಾಸಾಧ್ವಿಯಾದ ಬಭ್ರುವೆಂಬ ಯಾದವನ ಪತ್ನಿಯು ಸೌವೀರದೇಶಕ್ಕೆ ಹೋಗುತ್ತಿರುವ ಸಮಯದಲ್ಲಿ, ಅವಳಲ್ಲಿ ಮೋಹಗೊಂಡು, ಬಲಾತ್ಕಾರದಿಂದ ಅವಳನ್ನೆತ್ತಿಕೊಂಡುಹೋದನು.

ಮತ್ತೊಮ್ಮೆ ಇವನು ತನ್ನ ಸೋದರಮಾವನಿಗೇ ಕೇಡನ್ನು ಬಗೆದು, ಮಾಯೆಯಿಂದ ವೇಷವನ್ನು ಮರೆಸಿಕೊಂಡು ಬಂದು, ವಿಶಾಲನ ಮಗಳಾದ ಭದ್ರೆಯೆಂಬವಳನ್ನು ಕರೂಶದೇಶದ ರಾಜನಿಗಾಗಿ ಬಲಾತ್ಕರಿಸಿ ಎಳೆದುಕೊಂಡುಹೋದನು. ಆ ಸಮಯದಲ್ಲಿ ಅವಳ ಕಣ್ಣಮುಂದೆಯೇ ಅವಳಿಗೆ ಇಷ್ಟರಾದ ಕುಕುರರನ್ನೂ, ಅಂಧಕರನ್ನೂ ಕೊಂದು, ಅವಳನ್ನೂ ಸಂಕಟಕ್ಕೆ ಗುರಿಮಾಡಿ, ಅನೇಕ ವೃಷ್ಣಿಪತ್ನಿಯರನ್ನೆಲ್ಲ ಬಹಳವಾಗಿ ಗೋಳಾಡಿಸಿದನು. ಮಹಾಪಾಪಿಯಾದ ಇವನು, ಮೊದಲೇ ನನ್ನ ತಂದೆಯು ವರಿಸಿದ್ದ ವಿಶಾಲರಾಜನ ಮಗಳಾದ ಆ ಭದ್ರೆಯೆಂಬವಳನ್ನು ಕರೂಶರಾಜನಿಗಾಗಿ ಬಲಾತ್ಕಾರದಿಂದ ಎಳೆದುಕೊಂಡುಹೋದನು. ಎಲೈ ರಾಜರೇ! ಇವನು ನನ್ನನ್ನು ಜಯಿಸುವುದಕ್ಕಾಗಿಯೇ ಕರೂಶರಾಜನೊಡನೆ ಸ್ನೇಹವನ್ನು ಬೆಳೆಸಿ ಅಂತಹ ಅಕೃತ್ಯವನ್ನು ಮಾಡಿದನು. ಇವನು ಜರಾಸಂಧನೊಡನೆ ಸೇರಿಕೊಂಡು ನನಗೆ ಎಷ್ಟೋ ಕೆಡಕುಗಳನ್ನು ಮಾಡಿರುವನು. ಇವನು ನನ್ನ ವಿಷಯದಲ್ಲಿ ಮಾಡಿರುವ ಅಪರಾಧಗಳನ್ನು ಎಣಿಸುವುದಕ್ಕೂ ಸಾಧ್ಯವಿಲ್ಲ. ಯಾದವರ ವಿಷಯದಲ್ಲಿಯೂ ಇವನು ಕಪಟವೃತ್ತಿಯಿಂದ ಎಷ್ಟೋ ಕ್ರೂರಕೃತ್ಯಗಳನ್ನು ನಡೆಸಿರುವನು. ಆದರೇನು? ಕೊಲೆಗೆ ಯೋಗ್ಯವಾದ ನೂರು ಅಪರಾಧಗಳನ್ನು ಮಾಡಿದರೂ ಇವನನ್ನು ಕೊಲ್ಲದೆ ಮನ್ನಿಸುವೆನೆಂದು ನಾನು ಇವನ ತಾಯಿಗೆ ಕೈಮುಟ್ಟಿ ಪ್ರತಿಜ್ಞೆಯನ್ನು ಮಾಡಿಕೊಟ್ಟಿದ್ದೆನು. ಆ ಪ್ರತಿಜ್ಞೆಗೆ ಬದ್ಧನಾಗಿ ಇದುವರೆಗೆ ನಾನು ಸುಮ್ಮನಿರಬೇಕಾಯಿತು. ಆದರಿಂದಲೇ ಇದುವರೆಗೆ ಇವನು, ಮರಣದಂಡನೆಗೆ ಯೋಗ್ಯವಾದ ತಪ್ಪುಗಳನ್ನು ನಡೆಸಿದ್ದರೂ ನಾನು ಅವುಗಳನ್ನೆಲ್ಲ ಕ್ಷಮಿಸಿದೆನು. ನಾನು ಮಾತುಕೊಟ್ಟಂತೆ ಇವನ ನೂರು ತಪ್ಪುಗಳನ್ನೂ ಮನ್ನಿಸಿದುದಾಯಿತು. ಇವನನ್ನು ಕೊಲ್ಲುವುದಕ್ಕೆ ಕಾಲವೂ ಸಮಾಪಿಸಿಬಿಟ್ಟಿತು. ಹಿಂದೆ ಮಾಡಿದ ಆ ನೂರು ಅಪರಾಧಗಳ ವಿಚಾರವೂ ಹಾಗಿರಲಿ! ಈಗ ಇವನು ನನಗೆ ಹೇಗೂ ಕ್ಷಮಿಸಬಾರದ ಎರಡು ದೊಡ್ಡ ಅಪರಾಧಗಳನ್ನು ನಡೆಸಿರುವನು. ಇನ್ನು ನಾನು ಇವನನ್ನು ಮನ್ನಿಸಲಾರೆನು. ಯಾಗಕ್ಕೆ ವಿಘ್ನವನ್ನು ಮಾಡುವವನೊಬ್ಬನು, ಪಾಂಡವರಿಗೆ ವಿರೋಧಮಾಡುವವನೊಬ್ಬನು, ಇವರನ್ನುಮಾತ್ರ ನಾನು ಎಂದಿ

ಗೂ ಕ್ಷಮಿಸಲಾರೆನು. ಈಗ ಆ ಎರಡು ಬಗೆಯ ಮಹಾಪರಾಧಗಳಲ್ಲಿಯೂ ಇವನು ತಲೆಯಿಕ್ಕಿರುವಾಗ, ನಾನು ಹೇಗೆತಾನೇ ಸಹಿಸಲಿ? ನನ್ನ ಸೋದರತ್ತೆಯ ಸಂಕಟವನ್ನು ನೋಡಲಾರದೆ ಇದುವರೆಗೂ ನಾನು ಸಹಿಸಿಕೊಂಡೆನು. ಈಗ ನಿಮ್ಮೆಲ್ಲರ ಮುಂದೆ ಇವನನ್ನು ತೀರಿಸಿಬಿಡುವುದಕ್ಕೆ ಅನುಕೂಲಕಾಲವು ಬಂದೊದಗಿತು. ದೈವಾಧೀನದಿಂದ ನೀವೆಲ್ಲರೂ ಇಲ್ಲಿ ಬಂದು ಸೇರುವಂತಾಯಿತು. ರಾಜರಾದ ನಿಮ್ಮೆಲ್ಲರ ಇದಿರಾಗಿಯೇ ಈ ಮಹಾಸಭೆಯಲ್ಲಿ ಇವನು ಹೇಗೆ ಮಿತಿಮೀರಿ ಹೋಗುತ್ತಿರುವನೋ, ಅದು ನಿಮ್ಮೆಲ್ಲರಿಗೂ ಪ್ರತ್ಯಕ್ಷವಾಗಿಯೇ ತಿಳಿಯಿತಲ್ಲವೇ? ನಿಮ್ಮ ಪರೋಕ್ಷದಲ್ಲಿ ಇವನು ನನ್ನ ವಿಷಯದಲ್ಲಿ ಮಾಡಿದ ಅಪರಾಧಗಳು ಹೇಗಿರಬೇಕೋ ಅದನ್ನು ನೀವೇ ಊಹಿಸಿಕೊಳ್ಳಬಹುದು. ನಿಮ್ಮೆಲ್ಲರ ಮುಂದೆ ಇವನು ನನಗೆ ಮಾಡಿದ ತಿರಸ್ಕಾರಗಳನ್ನು ಇನ್ನು ನಾನು ಸಹಿಸಲಾರೆನು. ಇವನು ನನ್ನ ಕೈಯಿಂದ ಸಾಯಬೇಕಾದುದೇ ನಿಶ್ಚಯವು. ಹಿಂದೆ ಈ ನೀಚನು ರುಕ್ಮಿಣಿಯನ್ನೇ ಮೋಹಿಸಿದ್ದನು. ಶೂದ್ರನಿಗೆ ವೇದಾಧ್ಯಯನವು ಹೇಗೋ ಹಾಗೆ ಇವನಿಗೆ ಆ ಕನ್ಯಾರತ್ನವು ಲಭಿಸದೆ ಹೋಯಿತು'' ಎಂದನು.

ಓ ಜನಮೇಜಯರಾಜಾ! ಹೀಗೆ ಶಿಶುಪಾಲನನ್ನು ಕುರಿತು ಕೃಷ್ಣನು ಹೇಳಿದ ದೋಷೋದ್ಘಾಟನಗಳನ್ನು ಕೇಳಿ, ಅಲ್ಲಿದ್ದ ರಾಜರಿಗೆ ಕೃಷ್ಣನ ಮೇಲಿದ್ದ ಕೋಪವೆಲ್ಲ ಅಡಗಿಹೋಯಿತು. ಆ ಕೋಪವೆಲ್ಲ ಶಿಶುಪಾಲನ ಕಡೆಗೆ ತಿರುಗಿತು. ಅವರು ಶಿಶುಪಾಲನನ್ನೇ ನಿಂದಿಸತೊಡಗಿದರು. ಆದರೇನು? ಬಲದ ಕೊಬ್ಬಿನಿಂದ ಶಿಶುಪಾಲನು ಅವರೊಬ್ಬರನ್ನೂ ಲಕ್ಷ್ಯಮಾಡದೆ, ರಥಾರೂಢನಾಗಿ ಬಿಲ್ಲನ್ನೆತ್ತಿ, ಕೃಷ್ಣನಮೇಲೆ ಬಾಣಗಳನ್ನು ಪ್ರಯೋಗಿಸುವುದಕ್ಕೆ ಸಿದ್ಧನಾದನು. ಕೃಷ್ಣನ ಮಾತುಗಳನ್ನೂ, ಶಿಶುಪಾಲನ ಪ್ರಯತ್ನವನ್ನೂ ನೋಡಿ ರಾಜರಿಗೆ ಭೀತಿ ಹುಟ್ಟಿತು. ಒಡನೆಯೇ ಅವರೆಲ್ಲರೂ ಶಿಶುಪಾಲನೊಬ್ಬನನ್ನೇ ರಣರಂಗದಲ್ಲಿ ಬಿಟ್ಟು ಪಲಾಯನ ಮಾಡಿದರು. ಇತ್ತಲಾಗಿ ಶಿಶುಪಾಲನು ತನ್ನ ವಿಷಯವಾಗಿ ಕೃಷ್ಣನು ಹೇಳಿದ ನಿಂದಾವಾಕ್ಯಗಳನ್ನು ಕೇಳಿಯೂ ನಾಚಿಕೆಯಿಲ್ಲದೆ, ಅಟ್ಟಹಾಸದಿಂದ ನಗುತ್ತ ''ಕೃಷ್ಣಾ! ನಿನ್ನ ಪತ್ನಿಯಾದ ರುಕ್ಮಿಣಿಯನ್ನು ನಾನು

ಮೊದಲೇ ಮೋಹಿಸಿದ್ದುದಾಗಿ ಈ ಮಹಾಸಭೆಯಲ್ಲಿ, ಮುಖ್ಯವಾಗಿ ಈ ರಾಜರ ಮುಂದುಗಡೆಯಲ್ಲಿ, ಹೇಳುತ್ತಿರುವ ನಿನಗೆ ನಾಚಿಕೆಯಿಲ್ಲವೆ? ಮೊದಲೇ ಒಬ್ಬನು ಕಾಮಿಸಿದ್ದ ಸ್ತ್ರೀಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡುಹೋಗಿ ಅನುಭವಿಸುತ್ತ, ಅದನ್ನೇ ಒಂದು ಹೆಮ್ಮೆಯನ್ನಾಗಿ ಹೇಳಿಕೊಳ್ಳುವವನು ಲೋಕದಲ್ಲಿ ನೀನಲ್ಲದೆ ಬೇರೆ ಯಾವನುಂಟು? ನೀನು ನನ್ನನ್ನು ದಯೆಯಿಂದ ಮನ್ನಿಸುವುದಾಗಿ ಹೇಳಿದೆ! ನನ್ನನ್ನು ನೀನು ಕ್ಷಮಿಸಿಯಾದರೂ ಕ್ಷಮಿಸು! ನನ್ನಲ್ಲಿ ಕೋಪಿಸಿಯಾದರೂ ಕೋಪಿಸು! ನೀನು ಕೋಪಿಸಿಕೊಂಡರೇನು? ನೀನು ಅನುಗ್ರಹಿಸಿದರೇನು? ನಿನ್ನ ಕೋಪಾನುಗ್ರಹಗಳೆರಡೂ ನನ್ನನ್ನೇನೂ ಮಾಡಲಾರವು" ಎಂದನು. ಓ ಜನಮೇಜಯರಾಜಾ! ಅಲ್ಲಿದ್ದ ರಾಜರೆಲ್ಲರೂ ಕೃಷ್ಣನ ತೇಜಸ್ಸನ್ನು ಕಂಡಮಾತ್ರದಿಂದಲೇ ಹೆಮ್ಮೆಯಡಗಿ, ತಮ್ಮ ಚತುರಂಗಸೈನ್ಯದೊಡನೆ ರಣರಂಗದಿಂದ ಪಲಾಯನಮಾಡುತ್ತಿರುವುದನ್ನು ಶಿಶುಪಾಲನು ನೋಡಿದನು. ಆಗ ತಾನು ಅಸಹಾಯನೆಂಬುದನ್ನು ತಿಳಿದೂ, ಅವನು ವೀರ್ಯದ ಕೊಬ್ಬಿನಿಂದ, ರಥಮಾತ್ರ ಸಹಾಯನಾಗಿ, ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಬೆಂಕಿಯಮೇಲೆ ಬೀಳುವ ಶಲಭದಂತೆ ಕೃಷ್ಣನನ್ನಿದಿರಿಸಿ ಹೋದನು.

ಇದು ಅರುವತ್ತೆಂಟನೆಯ ಅಧ್ಯಾಯವು.



{ ಶಿಶುಪಾಲನು ಯುದ್ಧಕ್ಕೆ ನಿಂತೊಡನೆ ಉತ್ಪಾತಗಳು ಕಾಣಿಸಿದುದು. ನಾರದನು ಅವುಗಳ ಫಲವನ್ನು ಧರ್ಮರಾಜನಿಗೆ ವಿವರಿಸಿದುದು. }

ಓ ಜನಮೇಜಯರಾಜಾ! ಶಿಶುಪಾಲನು ಯುದ್ಧಸನ್ನಾಹದಿಂದ ನಿಂತಿರುವುದನ್ನು ನೋಡಿ ಧರ್ಮರಾಜನು ಆಗ ತನ್ನ ಸಮೀಪದಲ್ಲಿದ್ದ ನಾರದನನ್ನು ಕುರಿತು ಹೀಗೆಂದು ಪ್ರಶ್ನೆಮಾಡುವನು. "ಓ ಮಹರ್ಷೀ! ಮೂರುಲೋಕಗಳಲ್ಲಿಯೂ ನಿನಗೆ ತಿಳಿಯದುದೊಂದಿಲ್ಲ. ಈಗಲಾದರೋ ರಾಜ

ರಿಗೆ ನಾಶಸೂಚಕಗಳಾದ ನಾನಾಬಗೆಯ ಉತ್ಪಾತಗಳೂ, ಅಪಶಕುನಗಳೂ, ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಕಾಣಿಸುತ್ತಿವೆ. ಇವುಗಳ ಫಲವೇನೆಂಬುದನ್ನು ನಿನ್ನಿಂದ ಕೇಳಬೇಕೆಂದಿರುವೆನು'' ಎಂದನು. ಅದಕ್ಕೆ ನಾರದನು "ಓ ಧರ್ಮಪುತ್ರಾ! ಗ್ರಹಗಳ ಗತಿಯು ವಿಚಿತ್ರವಾದುದು. ಗ್ರಹಶಾಸ್ತ್ರಗಳನ್ನು ಬಲ್ಲವರು ಅವುಗಳ ಶಕ್ತಿಯನ್ನೂ, ಅವುಗಳ ಸಂಚಾರಮಾರ್ಗವನ್ನೂ ಮತ್ತು ಅವುಗಳ ಸೇರುವೆ, ಉಚ್ಚಗತಿ, ಆರೋಹಣಾವರೋಹಣಗಳು, ಅವು ಒಂದಕ್ಕೊಂದು ಇದಿರಾಗಿ ಹೋಗುವುದು, ಅವು ನೆಲೆದಪ್ಪಿ ನಡೆಯುವುದು, ಅವು ಕಣ್ಣಿಗೆ ಕಾಣಿಸಬೇಕಾದ ಸ್ಥಳದಲ್ಲಿ ಅಥವಾ ಕಾಲದಲ್ಲಿ ಕಾಣಿಸದಿರುವುದು, ಕಾಣಬಾರದ ಸಂದರ್ಭಗಳಲ್ಲಿ ಕಾಣಿಸುವುದು, ಅವುಗಳ ಹಾನಿ ವೃದ್ಧಿಗಳು, ಅವುಗಳ ವಿಕಾಸ, ಅವುಗಳ ಬಣ್ಣ, ಸ್ಥಾನ, ಅವುಗಳ ಬಲಾಬಲಗಳು, ಅವುಗಳನ್ನೆಲ್ಲ ಚೆನ್ನಾಗಿ ಪರೀಕ್ಷಿಸಿ ಫಲಾಫಲಗಳನ್ನು ತಿಳಿಯುವರು. ದೈವಿಕಗಳಾದ ಉತ್ಪಾತಗಳಲ್ಲಿ ಭೂಮಿಯಲ್ಲಿ ಕಾಣಿಸತಕ್ಕುವು ಮೊದಲೂ, ಆಕಾಶದಲ್ಲಿ ಗೋಚರಿಸತಕ್ಕವುಗಳು ಆಮೇಲೆಯೂ ತಲೆದೋರುವುವು. ಸೂರ್ಯನು ಪಶ್ಚಿಮದಲ್ಲಿರುವಾಗ, ಪದಾರ್ಥಗಳ ನೆರಳು ಅದಕ್ಕಿದಿರಾಗಿ ಪೂರ್ವದ ಕಡೆಗೆ ತಿರುಗದಿದ್ದರೆ, ಅದು ಅಪಜಯಕ್ಕೆ ಸೂಚಕವು. ಗ್ರಾಮಗಳಲ್ಲಿರುವ ಪ್ರಧಾನವೃಕ್ಷಗಳ ನೆರಳು ಬಿಸಿಲಿಲ್ಲದಿದ್ದಾಗಲೂ ಪ್ರತಿಬಿಂಬದಂತೆ ಸ್ಪಷ್ಟವಾಗಿ ಕಾಣಿಸಿದರೆ, ಅದೂ ಒಂದು ಭಯಸೂಚಕವು. ಮತ್ತು ಅಂತಹ ಪ್ರಧಾನವೃಕ್ಷಗಳಲ್ಲಿ ಅಕಾಲದಲ್ಲಿ ಎಲೆಗಳೆಲ್ಲ ಉದುರಿ, ಅಥವಾ ಆಕಸ್ಮಾತ್ತಾಗಿ ಎಲೆ ಚಿಗುರುಗಳೊಂದೂ ಇಲ್ಲದೆ ಒಣಗಿಹೋದರೆ, ಅದೂ ನಾಶವನ್ನು ಸೂಚಿಸುವುದು. ಇದಕ್ಕೆ ವಿರುದ್ಧವಾಗಿ. ಅಂತಹ ಪ್ರಧಾನವೃಕ್ಷಗಳಲ್ಲಿ ಎಲೆ, ಚಿಗುರು ಮುಂತಾದುವೆಲ್ಲ ಚೆನ್ನಾಗಿ ಬೆಳೆದು, ಆ ಮರಗಳು ಹುಲುಸಾಗಿ ವೃದ್ಧಿಹೊಂದಿದಂತೆ ಕಾಣಿಸಿದರೆ, ಆಗ ಅದು ಆ ಗ್ರಾಮದ ಕ್ಷೇಮಕ್ಕೆ ಸೂಚಕವು. ಒಂದು ಹೂವಿನಲ್ಲಿ ಬೇರೊಂದು ಹೂವಾಗಲಿ, ಒಂದು ಹಣ್ಣಿನೊಳಗೆ ಮತ್ತೊಂದು ಹಣ್ಣಾಗಲಿ ಸೇರಿ ಬೆಳೆದಂತೆ ಕಾಣಿಸಿದರೆ, ಅದರಿಂದ ರಾಜನಿಗಾಗಲಿ, ರಾಜಸಮಾನನಿಗಾಗಲಿ ಮರಣವು ನಿಶ್ಚಯವು. ವಸಂತಋತು, ವರ್ಷಋತು, ಹೇಮಂತಋತು, ಶರದೃತುಗಳೆಂಬ ಆಯಾ ಋತುಭೇದಗಳಲ್ಲಿ ಹುಟ್ಟಬೇ

ಕಾದ ಫಲಪುಷ್ಪಗಳು, ಆ ಕಾಲವನ್ನು ಬಿಟ್ಟು ಅಕಾಲದಲ್ಲಿ ಕಾಣಿಸಿದರೆ, ಅದೂ ರಾಜ್ಯಕ್ಕೆ ಕ್ಷೋಭವನ್ನು ಸೂಚಿಸುವುದು. ನದಿಗಳಲ್ಲಿ ಅಕಾಲಪ್ರವಾಹವು ಕಾಣಿಸಿದರೆ ಅದೂ ಮಹಾ ಭಯಕ್ಕೆ ಸೂಚಕವು. ಅರಳಿ ಮುಂತಾದ ಪವಿತ್ರ ವೃಕ್ಷಗಳು ಜನಗಳಿಂದ ಪೂಜಿಸಲ್ಪಟ್ಟಿದ್ದರೂ, ಇಲ್ಲದಿದ್ದರೂ ಇದ್ದಕ್ಕಿದ್ದ ಹಾಗೆ ಬಿರುಗಾಳಿಯಿಂದ, ಅಥವಾ ಬೇರೆ ಕಾರಣಗಳಿಂದ ಮುರಿಯಲ್ಪಟ್ಟರೂ, ಬಗ್ಗಿಸಲ್ಪಟ್ಟರೂ ಅದು ಮುಂದೆ ಬರಬಹುದಾದ ಅಗ್ನಿಭಯಕ್ಕೋ, ವಾಯುಭಯಕ್ಕೋ ಸೂಚಕವು. ಅಥವಾ ಆ ಗ್ರಾಮದಲ್ಲಿ ಪ್ರಧಾನನಾದವನು ಸಾಯುವನು. ದಿಕ್ಕುಗಳು ಉರಿಯುವಂತೆ ಕಾಣಿಸಿದರೆ ಅದು ರಾಜರ ಹಾನಿಗೆ ಸೂಚಕವು. ದೊಡ್ಡದೊಂದು ಮರವನ್ನು ಕಡಿದು ಕೆಡಹುವಾಗ ಅದು ಮಹಾಧ್ವನಿಯೊಡನೆ ಬಿದ್ದರೆ, ಅದರೊಡನೆ ರಾಜ್ಯವೂ ಬಿದ್ದುಹೋಗುವುದೆಂದು ಹೇಳುವರು. ಆದುದರಿಂದ ದೊಡ್ಡ ಮರವನ್ನು ಆ ರೀತಿಯಾಗಿ ಕಡಿದು ಕೆಡಹಬಾರದು. ಹಸಿಯಮರವನ್ನು ಒಬ್ಬನು ಕಡಿಸಿಹಾಕಿದರೆ, ಅವನ್ನು ಕಡಿಸಿದವನು, ಕಡಿದವನು, ಆ ಮರದ ಸ್ವಂತಗಾರನು ಈ ಮೂವರಿಗೂ ಹಾನಿಯುಂಟು. ದೇವತಾವಿಗ್ರಹಗಳನ್ನು ಎತ್ತಿಹಾಕುವುದು, ಮಂಟಪಗಳನ್ನು ಕೆಡಹುವುದು, ಬೆಟ್ಟಗಳು ನಡುಗುವುದು, ಇವೆಲ್ಲ ಜನಗಳ ಹಾನಿಗೆ ಸೂಚಕಗಳು. ರಾತ್ರಿಯಲ್ಲಿ ಇಂದ್ರಧನುಸ್ಸನ್ನು ಕಂಡರೆ ಅದರಿಂದ ಮಹಾಭಯವುಂಟಾಗುವುದು. ಆದರೆ, ಅದನ್ನು ನೋಡಿದವನಿಗೆ ಮಾತ್ರವಲ್ಲದೆ ಇತರರಿಗೇನೂ ಅದರಿಂದ ಹಾನಿಯಿರದು. ರಾತ್ರಿಯಲ್ಲಿ ಇಂದ್ರಧನುಸ್ಸನ್ನು ಕಂಡವನು ಒಡನೆಯೇ ಆ ದೇಶವನ್ನು ಬಿಟ್ಟುಹೋಗಬೇಕು. ಮತ್ತು ದೇವತಾಪ್ರತಿಮೆಗಳು ಇದ್ದಕ್ಕಿದ್ದ ಹಾಗೆ ಆಡುವುದು, ಹಾಡುವುದು, ಕೂಗುವುದು, ನಗುವುದು, ಕಣ್ಣು ಬಿಟ್ಟು ತೆರೆಯುವುದು, ಇಂತಹ ಚೇಷ್ಟೆಗಳೇನಾದರೂ ಅವುಗಳಲ್ಲಿ ಕಂಡರೆ ಆ ದೇಶಕ್ಕೆ ಹಾನಿಯು ನಿಶ್ಚಯವು. ಕಲ್ಲುಗಳು ನೀರನ್ನು ಕಾರಿದರೆ, ಹೀಗೆಯೇ ಬೇರೆ ಯಾವುದಾದರೂ ವಿಪರೀತಗಳು ಕಾಣಿಸಿದರೆ ಅದು ಭಯಸೂಚಕವು. ಆದರಿಂದ ಪ್ರಧಾನಮನುಷ್ಯನಾಗಲಿ, ಸಪರಿವಾರನಾದ ರಾಜನಾಗಲಿ ಮೃತಿ ಹೊಂದುವನು. ದೇಶದಲ್ಲಿ ವ್ಯಾಧಿಗಳುಂಟಾಗುವುವು. ರಾಜ್ಯದಲ್ಲಿ ಕ್ಷೋಭೆಯುಂಟಾಗುವುದು. ದೇವಾಲಯಗಳು, ಅರಮನೆಗಳು, ಬೊಕ್ಕಸ, ಆಯು

ಧಶಾಲೆ, ಇವುಗಳಲ್ಲಿ ಜೇನುಗಳು ಗೂಡನ್ನು ಕಟ್ಟಿದರೆ, ಆ ದೇಶವನ್ನು ಬಲಾಢ್ಯರಾದ ಶತ್ರುಗಳು ನಾಶಮಾಡುವರು. ಇಲ್ಲವೇ ಆ ದೇಶಕ್ಕೆ ಆಕಸ್ಮಿಕಭಯವೇನಾದರೂ ಸಂಭವಿಸುವುದು. ಗಿಡಗಳಿಂದಾಗಲಿ, ಆನೆಯ ದಂತದ ಕೊನೆಯಿಂದಾಗಲಿ, ಎತ್ತಿನ ಕೊಂಬಿನಿಂದಾಗಲಿ ರಕ್ತವು ಜಿನುಗಿದರೆ, ಈ ಮೂರರಿಂದ ಕ್ರಮವಾಗಿ, ದೇಶಕ್ಕೆ ಹಾನಿಯೂ, ರಾಜ್ಯಕ್ಷೋಭವೂ, ಗೋಬ್ರಾಹ್ಮಣರಿಗೆ ನಾಶವೂ ಉಂಟಾಗುವುದೆಂದು ಹೇಳುವರು. ಓ ಯುಧಿಷ್ಠಿರಾ! ರಾಜನ ಛತ್ರವು ಕೆಳಗೆ ಬಿದ್ದುಹೋದರೆ, ಆ ರಾಜನೂ, ಅವನ ರಾಜ್ಯವೂ ಒಡನೆಯೇ ನಾಶಹೊಂದುವುದು. ದೇವಾಲಯಗಳಲ್ಲಿ, ಅರಮನೆಗಳಲ್ಲಿ, ಆನೆಗಳನ್ನು ಕಟ್ಟುವ ಸ್ಥಳಗಳಲ್ಲಿ, ಈ ಮೂರು ಕಡೆಗಳಲ್ಲಿ ಏನಾದರೂ ಆಕಸ್ಮಿಕ ವಿಕಾರಗಳುಂಟಾದರೆ, ಆ ದೇಶಕ್ಕೂ, ಆ ರಾಜನಿಗೂ ಆ ಊರಿಗೂ ಹಾನಿಯುಂಟಾಗುವುದು. ಅಲ್ಲಿ ಅನಾವೃಷ್ಟಿಯೂ, ದುರ್ಭಿಕ್ಷವೂ ಕಾಣಿಸುವುದು. ಮನೆಯೊಳಗಿನ ವಿಗ್ರಹಗಳಿಗೆ ಕೈಮುರಿದುಹೋದರೆ ಅದರಿಂದ ಗೃಹಸ್ಥರಿಗೆ ಹಾನಿಯು. ಆ ವಿಗ್ರಹಗಳ ಆಯುಧವು ಮುರಿದುಬಿದ್ದರೆ ಆ ದೇಶದ ಸೇನಾಪತಿಯು ಮೃತನಾಗುವನು. ಹೊಸದಾಗಿ ತಂದಿಟ್ಟ ದೇವತಾವಿಗ್ರಹವು, ತಂದ ಆರು ತಿಂಗಳೊಳಗಾಗಿ ಇದ್ದಸ್ಥಳದಲ್ಲಿ ಕಾಣದೆಹೋದರೆ, ಆ ನಗರವನ್ನು ರಾಜನು ಒಡನೆಯೇ ಬಿಟ್ಟುಬಿಡಬೇಕು. ಭೂಮಿಯು ಒಡೆದುಹೋದರೂ, ಭೂಮಿಯಿಂದ ಒಂದು ದೊಡ್ಡ ಶಬ್ದವಾದರೂ, ಅದರ ಒಂದು ಭಾಗವು ಆಕಸ್ಮಿಕವಾಗಿ ಮುರಿದುಬಿದ್ದರೂ ರಾಜನು ಸಾಯುವನು. ರಾಷ್ಟ್ರವೂ ನಷ್ಟವಾಗುವುದು. ಏಣೀಪದಗಳು, ನಾಗರಹಾವುಗಳು, ನೀರುಹಾವು, ದೀಪ್ಯಕವೆಂಬೀ ಸರ್ಪಜಾತಿಗಳನ್ನು ಯಾವುದಾದರೂ ಒಂದು ಕಪ್ಪೆಯು ನುಂಗುವುದನ್ನು ಕಂಡರೆ, ಆ ದೇಶದ ರಾಜನಿಗೆ ನಾಶವು. ಅನ್ನಕ್ಕೆ ಬೇರೊಂದನ್ನೂ ಸೇರಿಸದೆಯೂ, ಪಕ್ವಮಾಡದೆಯೂ ಇದ್ದಾಗ, ಇದ್ದಕ್ಕಿದ್ದಹಾಗೆ ಅದು ಉಬ್ಬಿ ಅಧಿಕವಾದರೆ, ಅದರಿಂದ ರಾಜನು ರೋಗಿಷ್ಠನಾಗುವನು. ಕೆಲವುವೇಳೆ ಸಾಯುವನು. ಅಂತಹ ಅನ್ನವನ್ನು ಅವನು ಭುಜಿಸಬಾರದು. ಕೆರೆ ಮೊದಲಾದ ಜಲಾಶಯಗಳಲ್ಲಿ ನೀರು ಹೆಚ್ಚಿ ಉಕ್ಕಿಬಂದರೂ, ವೃಕ್ಷ ಮೊದಲಾದ ಸ್ಥಾವರವರ್ಗಗಳಲ್ಲಿ ನೀರು ಹೊರಟರೂ, ಸ್ತ್ರೀಯರು ಕಾಲಿಲ್ಲದ ಶಿಶುವನ್ನಾಗಲಿ, ಮೂರು ಕಾಲು,

ಮೂರು ತಲೆ, ನಾಲ್ಕು ತೋಳು, ಮುಂತಾಗಿ ವಿಕಾರರೂಪವುಳ್ಳ ಶಿಶುಗಳ ನ್ನಾಗಲಿ ಪ್ರಸವಿಸಿದರೂ, ಆ ದೇಶಕ್ಕೆ ಹಾನಿಯು ನಿಶ್ಚಯವು. ಕುರಿ, ಮೇಕೆ, ಹೆಂಗಸರು, ಗೋವುಗಳು, ಮುಂತಾದ ಯಾವ ಜಾತಿಯಲ್ಲಿಯೇ ಆಗಲಿ, ಸ್ವಭಾವಕ್ಕೆ ವಿರುದ್ಧವಾದ ಸಂತಾನವನ್ನು ಕಾಣುವುದೇ ಹಾನಿಸೂಚಕವು. ನದಿಯು ಹಿಂದುಗಡೆಗೆ ಪ್ರವಹಿಸಿದರೂ, ಇದ್ದಕ್ಕಿದ್ದಹಾಗೆ ನದಿಯು ಕಲಗಿದರೂ, ದಿಕ್ಕುಗಳು ಪ್ರಕಾಶಹೀನವಾದರೂ, ಇವೆಲ್ಲ ಹಾನಿಸೂಚಕಗಳು. ಓ ಧರ್ಮರಾಜಾ! ಭೂವ್ಯಾಕಾಶಗಳಲ್ಲಿ ಹುಟ್ಟತಕ್ಕ ಇಂತಹ ಎಲ್ಲಾ ಉತ್ಪಾತಗಗಳೂ, ಶುಭಶಕುನಗಳೂ ಈ ಕೃಷ್ಣನಿಂದಲೇ ಉಂಟಾಗುವುವೆಂದು ತಿಳಿ. ಚಂದ್ರಸೂರ್ಯರು, ಗ್ರಹನಕ್ಷತ್ರಗಳು, ಅಗ್ನಿ, ವಾಯು, ಭೂಮಿ, ನೀರು, ಮುಂತಾದ ಮಹಾಭೂತಗಳು, ಇವೆಲ್ಲವೂ ಈ ಕೃಷ್ಣನಿಂದಲೇ ಉತ್ಪನ್ನವಾದುವು. ಯಾವ ದೇಶಕ್ಕೆ ಇವನು ಹಾನಿಯನ್ನಾಗಲಿ, ವೃದ್ಧಿಯನ್ನಾಗಲಿ ಉಂಟುಮಾಡಬೇಕೆಂದು ಸಂಕಲ್ಪಿಸುವನೋ, ಅದಕ್ಕೆ ಮುಂದಾಗಿ ಈ ಸೂಚನೆಗಳನ್ನು ಇವನೇ ಕಾಣಿಸುವನು. ಈಗ ಶಿಶುಪಾಲನಿಗೆ ಬಂದಿರುವ ನಾಶವನ್ನು ಈ ಉತ್ಪಾತಗಳಮೂಲಕವಾಗಿ ಇವನೇ ನಮಗೆ ತೋರಿಸುತ್ತಿರುವನು. ಇದೋ! ಭೂಮಿಯು ನಡುಗುತ್ತಿರುವುದು! ಗಾಳಿಯು ಅಮಂಗಳಸೂಚಕವಾಗಿ ಬೀಸುತ್ತಿರುವುದು! ಪರ್ವಕಾಲವಿಲ್ಲದಿದ್ದಾಗ ರಾಹುವು ಚಂದ್ರನನ್ನು ಹಿಡಿಯುತ್ತಿರುವನು! ಸಿಡಿಲಿನೊಡನೆ ಆಕಾಶದಿಂದ ಉಲ್ಕೆ (ಕೊಳ್ಳಿ) ಗಳು ಬೀಳುತ್ತಿರುವುವು. ಗಾಢಾಂಧಕಾರವು ಕವಿಯುತ್ತಿರುವುದು. ಶಿಶುಪಾಲನನ್ನು ಕೊನೆಮುಟ್ಟಿಸುವುದಕ್ಕಾಗಿ ಕೃಷ್ಣನ ಉತ್ಸಾಹವೂ ಹೆಚ್ಚುತ್ತಿರುವುದು" ಎಂದನು. ಜನಮೇಜಯರಾಜಾ! ನಾರದನು ಹೀಗೆಂದು ಹೇಳಿ ಸುಮ್ಮನಾದನು. ಶಿಶುಪಾಲನು ಕೃಷ್ಣನಿಗಿದಿರಾಗಿ ನಿಂತಾಗ ಈ ಮಹೋತ್ಪಾತಗಳನ್ನು ರಾಜರೆಲ್ಲರೂ ನೋಡಿದರು. ನಾಲ್ಕು ದಿಕ್ಕುಗಳಲ್ಲಿಯೂ ನರಿಗಳು ಅಮಂಗಳಧ್ವನಿಯಿಂದ ಊಳಿಟ್ಟುವು. ಪರ್ವತಾರಣ್ಯಗಳೊಡನೆ ಭೂಮಿಯು ನಡುಗಿತು. ಶಿಶುಪಾಲನ ಧ್ವಜದಮೇಲೆ ರಣಹದ್ದುಗಳು ಬಂದು ಕುಳಿತುವು. ಯುದ್ಧಾರಂಭದಲ್ಲಿ ಮಾಂಸಾಹಾರಿಮೃಗಪಕ್ಷಿಗಳೆಲ್ಲ ಉತ್ಸಾಹದಿಂದ ಬಂದು ಭಯಂಕರವಾಗಿ ಕೂಗಿದುವು. ಕೃಷ್ಣನು ಕೋಪಗೊಂಡೊಡನೆ ಇಂತಹ ದುರ್ನಿ

ಮಿತ್ತಗಳು ಆಕಾಶದಲ್ಲಿಯೂ, ಭೂಮಿಯಲ್ಲಿಯೂ ಭಯಂಕರವಾಗಿ ತಲೆದೋರಿದುವು.

ಇದು ಅರುವತ್ತೊಂಭತ್ತನೆಯ ಅಧ್ಯಾಯವು.

## ಶಿಶುಪಾಲ ವಧವು.

ಓ ಜನಮೇಜಯರಾಜಾ! ಆಗ ಶಿಶುಪಾಲನು ತನ್ನ ಮಹಾಧನುಸ್ಸನ್ನು ಟಂಕಾರಮಾಡುತ್ತ ಕೃಷ್ಣನನ್ನಿದಿರಿಸಿ ನಿಂತು "ಕೃಷ್ಣಾ! ಲೋಕದಲ್ಲಿ ನೀನೊಬ್ಬನೇ ಈಗ ನನಗೆ ಶತ್ರು! ನಿನ್ನನ್ನು ಕೊಂದು ಸಾಗರಾಂತವಾದ ಸಮಸ್ತ ಭೂಮಿಯನ್ನೂ ನಿರಾತಂಕವಾಗಿ ಆಳುವೆನು. ನಿನ್ನೊಡನೆ ಕೈಕಲೆತು ಯುದ್ಧಮಾಡಬೇಕೆಂದು ಬಹುಕಾಲದಿಂದ ನಿರೀಕ್ಷಿಸುತಿದ್ದ ನನ್ನ ಕೋರಿಕೆಯು ಈಗ ನನ್ನ ಅದೃಷ್ಟವಶದಿಂದ ಕೈಗೂಡಿ ಬಂದಿದೆ. ಈಗಲೇ ನಿನ್ನನ್ನು ಮೊದಲು ತೀರಿಸಿ, ಆಮೇಲೆ ಈ ಭೀಷ್ಮನನ್ನೂ, ಪಾಂಡವರನ್ನೂ ಕೊಂದುಬಿಡುವೆನು" ಎಂದನು. *ಹೀಗೆಂದು ಹೇಳುತ್ತ ಶಿಶುಪಾಲನು ತೀಕ್ಷ್ಣಧಾರೆಗಳುಳ್ಳ ಮತ್ತು ಸಾಣೆಹಿಡಿದು ಥಳಥಳಿಸುವ ಬಾಣಗಳಿಂದ ಕೃಷ್ಣನನ್ನು ಹೊಡೆದನು. ಸರ್ಪಗಳು ಪರ್ವತದಲ್ಲಿ ಹುಗುವಂತೆ ಶಿಶುಪಾಲನ ಬಿಲ್ಲಿನಿಂದ ಹೊರಟ ಬಾಣಗಳು ಕೃಷ್ಣನ ಮೈಯಲ್ಲಿ ನಾಟಿದುವು. ಶಿಶುಪಾಲನು ಬಾಣಗಳನ್ನು ತೆಗೆಯುವುದಕ್ಕೂ, ಬಿಲ್ಲಿನಲ್ಲಿ ಸೇರಿಸುವುದಕ್ಕೂ, ಪ್ರಯೋಗಿಸುವುದಕ್ಕೂ, ನಡುವೆ ಕಾಲಾವಧಿಯು ಆಕಾಶದಲ್ಲಿ ವಾಯುವಿನ ಗತಿ ಹೇಗೋ ಹಾಗೆ ಯಾರಿಗೂ ತಿಳಿಯಲಾರದೆ ಹೋಯಿತು. ಮೇಘವು ಜಲವರ್ಷದಿಂದ ಪರ್ವತವನ್ನು ಹೇಗೋಹಾಗೆ ಶಿಶುಪಾಲನು ಬಾಣವರ್ಷದಿಂದ ಕೃಷ್ಣನನ್ನು ಮರೆಸಿದನು. ಆಗ ಕೃಷ್ಣನು ತನ್ನ ಶಾರ್ಙ್ಗಧನುಸ್ಸನ್ನು ಸಿದ್ಧಮಾಡಿ, ಅದರಲ್ಲಿ ಬಾಣವನ್ನು ಜೋಡಿಸಿ ಶಿಶುಪಾಲನನ್ನು ಕುರಿತು "ಶಿಶುಪಾಲಾ! ಈ ನನ್ನ ತೀಕ್ಷ್ಣಬಾಣವು ಪರ್ವ

* ಇಲ್ಲಿ ಕಾಣಿಸಿರುವ ಕೃಷ್ಣಶಿಶುಪಾಲರ ಯುದ್ಧವು ಅನೇಕಪ್ರತಿಗಳಲ್ಲಿಲ್ಲ. ಕೃಷ್ಣನು ಒಂದೇ ಸಲಕ್ಕೆ ತನ್ನ ಚಕ್ರಾಯುಧದಿಂದ ಶಿಶುಪಾಲನ ತಲೆಯನ್ನು ಕತ್ತರಿಸಿದುದಾಗಿ ಹೇಳಿದೆ.

ತವನ್ನು ವಜ್ರಾಯುಧವು ಹೇಗೋ ಹಾಗೆ ನಿನ್ನನ್ನು ಭೇದಿಸುವುದು ನೋಡು" ಎಂದು ಹೇಳಿದನು. ಕೃಷ್ಣನು ಹೀಗೆ ಹೇಳುತ್ತಿರುವಾಗಲೇ ಶಿಶುಪಾಲನು ಕೃಷ್ಣನಮೇಲೆ ಅನೇಕ ತೀಕ್ಷ್ಣಬಾಣಗಳನ್ನು ಬಿಡುತ್ತ ಬಂದನು. ಆಮೇಲೆ ಕೃಷ್ಣನೂ ತನ್ನ ಶಾರ್ಙ್ಗಧನುಸ್ಸಿನಿಂದ ನೂರುಸಾವಿರ ಲೆಕ್ಕದಿಂದ ಬಾಣಗಳನ್ನು ಶಿಶುಪಾಲನಮೇಲೆ ಪ್ರಯೋಗಿಸಿದನು. ಕೃಷ್ಣನು ಬಿಟ್ಟ ಬಾಣಗಳನ್ನೆಲ್ಲ ಶಿಶುಪಾಲನು ತನ್ನ ಬಾಣಗಳಿಂದ ತಡೆದು, ಬೇರೆ ಆರು ಬಾಣಗಳನ್ನು ಕೃಷ್ಣನಿಗೆ ಗುರಿಯಿಟ್ಟು ಹೊಡೆದನು. ತಿರುಗಿ ಕೃಷ್ಣನು ಬೇರೊಂದು ಮಹಾಸ್ತ್ರವನ್ನು ಬಿಡಲು, ಶಿಶುಪಾಲನು ಅದನ್ನೂ ತನ್ನ ಅಸ್ತ್ರಗಳಿಂದ ನಿವಾರಿಸಿ, ಆಮೇಲೆ ಒಳ್ಳೇ ತೀವ್ರವಾದ ಲಕ್ಷೋಪಲಕ್ಷ ಬಾಣಗಳಿಂದ ಕೃಷ್ಣನ ಮೈಯನ್ನೆಲ್ಲ ಸುತ್ತಲೂ ಮರೆಸಿಬಿಟ್ಟನು. ಆಮೇಲೆ ಶಿಶುಪಾಲನು ಕೋಪದಿಂದ ಅಟ್ಟಹಾಸಮಾಡಿ ಕೂಗಿಡುತ್ತ, ಕೃಷ್ಣನನ್ನು ಕುರಿತು "ಕೃಷ್ಣಾ! ಈ ನನ್ನ ಬಾಣಗಳು ನಿನ್ನ ದೇಹವನ್ನು ಹೇಗೆ ಭೇದಿಸುವುವೋ ನೋಡು! ಈಗಲೇ ನಾನು ನಿನ್ನನ್ನೂ, ನಿನ್ನ ಪುತ್ರಮಿತ್ರಾದಿಗಳನ್ನೂ, ನಿನಗೆ ಇಷ್ಟರಾದ ಪಾಂಡವರನ್ನೂ ಕೊಂದು, ನನ್ನ ಮಿತ್ರನಾದ ಜರಾಸಂಧನಿಗೂ, ಕಂಸನಿಗೂ, ಕೇಶಿಗೂ, ನರಕನಿಗೂ, ನಾನು ತೀರಿಸಬೇಕಾದ ಸಾಲವನ್ನು ತೀರಿಸುವೆನು" ಎಂದು ಹೇಳಿ, ಕೃಷ್ಣನಿದ್ದ ಸ್ಥಳವೇ ತಿಳಿಯದಂತೆ ಬಾಣಗಳಿಂದ ಅವನನ್ನು ಮರೆಸಿಬಿಟ್ಟನು. ಆಮೇಲೆ ಕೃಷ್ಣನು ತನ್ನ ಅಸ್ತ್ರಗಳಿಂದ ಅದನ್ನು ನಿಗ್ರಹಿಸಿ, ತನ್ನ ಬಾಣಗಳಿಂದ ಶಿಶುಪಾಲನನ್ನು ಮರೆಸಿದನು. ಈ ಕೃಷ್ಣಶಿಶುಪಾಲರು ಒಬ್ಬರನ್ನೊಬ್ಬರು ಬಾಣಗಳಿಂದ ಮರೆಸಿ ಅದೃಶ್ಯರಾಗಿರುವುದನ್ನು ನೋಡಿ, ಸಮಸ್ತಭೂತಗಳೂ "ಭಲೆ! ಶಹಭಾಸ್! ಇಂತಹ ಯುದ್ಧವನ್ನು ನಾವು ಇದುವರೆಗೆ ನೋಡಿರಲಿಲ್ಲ"ವೆಂದು ಶ್ಲಾಘಿಸುತ್ತಿದ್ದುವು. ಆಮೇಲೆ ಇಬ್ಬರೂ ಬಾಣಗಳ ಮರೆಯಿಂದ ತಪ್ಪಿಸಿಕೊಂಡು, ತಿರುಗಿ ಬಾಣಪ್ರಯೋಗಕ್ಕೆ ಆರಂಭಿಸಿದರು. ಶಿಶುಪಾಲನು ಮೂರು ಬಾಣಗಳಿಂದ ಕೃಷ್ಣನನ್ನು ಹೊಡೆದನು. ಕೃಷ್ಣನು ಶಿಶುಪಾಲನಮೇಲೆ ಐದು ಬಾಣಗಳನ್ನು ಬಿಟ್ಟನು. ಒಡನೆಯೇ ಕೃಷ್ಣನು ಏಕಕಾಲದಲ್ಲಿ ಎಪ್ಪತ್ತು ಬಾಣಗಳನ್ನು ಬಿಟ್ಟು ಶಿಶುಪಾಲನನ್ನು ಹೊಡೆದನು. ಆ ಬಾಣಪ್ರಹಾರದಿಂದ

ನೊಂದ ಸುನೀಥನು (ಶಿಶುಪಾಲನು) ತೀವ್ರಬಾಣಗಳಿಂದ ಕೃಷ್ಣನ ಎದೆಗೆ ಗುರಿಯಿಟ್ಟು ಹೊಡೆದುದಲ್ಲದೆ, ಬೇರೆ ಮೂರು ಬಾಣಗಳನ್ನು ಬಿಟ್ಟು, ದೊಡ್ಡದೊಂದು ಸಿಂಹನಾದವನ್ನು ಮಾಡಿದನು. ಇಬ್ಬರಿಗೂ ಮೇಲೆ ಮೇಲೆ ಯುದ್ಧವು ಪ್ರಬಲವಾಯಿತು. ಹುಲಿಗಳು ಉಗುರುಗಳಿಂದಲೂ, ಮದದಾನೆಗಳು ದಂತಗಳಿಂದಲೂ, ಸಿಹ್ಮಗಳು ಕೋರೆಹಲ್ಲುಗಳಿಂದಲೂ, ಕೋಳಿಗಳು ಕಾಲುಗಳಿಂದಲೂ ಹಟದಿಂದ ಹೊಡೆದಾಡುವಂತೆ, ಅವರಿಬ್ಬರೂ ತೀಕ್ಷ್ಣಬಾಣಗಳಿಂದ ಹೊಡೆದಾಡಿದರು. ಒಬ್ಬರಮೇಲೊಬ್ಬರು ಎಡೆಬಿಡದೆ ಬಾಣವರ್ಷವನ್ನು ಕರೆದರು. ಹೀಗೆ ಒಬ್ಬರ ಬಾಣಗಳನ್ನೊಬ್ಬರು ಖಂಡಿಸಿ ಬಾಣಯುದ್ಧವನ್ನು ಮಾಡಿದಮೇಲೆ, ಅಮಾನುಷವೂ, ಭಯಂಕರವೂ ಆದ ಅಸ್ತ್ರಯುದ್ಧವನ್ನಾರಂಭಿಸಿದರು. ಶಿಶುಪಾಲನು ಆಗ್ನೇಯಾಸ್ತ್ರವನ್ನು ಬಿಡಲು ಕೃಷ್ಣನು ವಾರುಣಾಸ್ತ್ರದಿಂದ ಅದನ್ನು ನಿಗ್ರಹಿಸಿದನು. ಶಿಶುಪಾಲನು ಬಿಟ್ಟ ಕುಬೇರಾಸ್ತ್ರವನ್ನು ಕೃಷ್ಣನು ಕುಬೇರಾಸ್ತ್ರದಿಂದಲೂ, ಯಮಾಸ್ತ್ರವನ್ನು ಯಮಾಸ್ತ್ರದಿಂದಲೂ ಅಡಗಿಸುತ್ತ ಬಂದನು. ಹಾಗೆಯೇ ಶಿಶುಪಾಲನು ಬಿಟ್ಟ ಗಂಧರ್ವಾಸ್ತ್ರ, ವಾಮನಾಸ್ತ್ರ, ವಾಯವ್ಯಾಸ್ತ್ರ, ರೌದ್ರಾಸ್ತ್ರ, ಐಂದ್ರಾಸ್ತ್ರ, ವೈಷ್ಣವಾಸ್ತ್ರ ಮೊದಲಾದ ಅಸ್ತ್ರಗಳನ್ನೆಲ್ಲ ಆಯಾ ಅಸ್ತ್ರಗಳಿಂದಲೇ ಕೃಷ್ಣನು ಅಡಗಿಸುತ್ತ ಬಂದನು. ಹೀಗೆ ಅಸ್ತ್ರಗಳಿಂದ ಯುದ್ಧವು ನಡೆಯುತ್ತಿದ್ದ ಹಾಗೆಯೇ, ಶಿಶುಪಾಲನು ಮಾಯೆಯನ್ನವಲಂಬಿಸಿ, ಗದೆಗಳು, ಒನಕೆಗಳು, ಶಕ್ತಿ, ತೋಮರ, ಕೊಡಲಿ, ಮುಸುಂಢಿ ಮೊದಲಾದ ಆಯುಧಗಳನ್ನು ಕೃಷ್ಣನಮೇಲೆ ಕಣ್ಣಿಗೆ ಕಾಣಿಸದಂತೆಯೇ ವರ್ಷಿಸುತ್ತ ಬಂದನು. ಕೃಷ್ಣನು ಅವನ್ನೆಲ್ಲ ಅಸ್ತ್ರಗಳಿಂದ ನಿವಾರಿಸಿದನು. ಶಿಶುಪಾಲನು ಕಠಿನವಾದ ಶಿಲಾವರ್ಷ ಕರೆಯಲು, ವಜ್ರಾಸ್ತ್ರದಿಂದ ಕೃಷ್ಣನು ಅವುಗಳನ್ನು ಧೂಳೆಬ್ಬಿಸಿ . ಶಿಶುಪಾಲನು ಮಾಯೆಯಿಂದ ಸುರಿದ ಜಲವರ್ಷವನ್ನು ಕೃಷ್ಣನು ವಾಯವ್ಯಾಸ್ತ್ರದಿಂದ ತೂರಿಸಿದನು. ಹೀಗೆ ಕೃಷ್ಣನು ಶಿಶುಪಾಲನ ಮಾಯೆಗಳನ್ನೆಲ್ಲ ನಿಗ್ರಹಿಸಿ, ಅವನೊಡನೆ ಸಮಯುದ್ಧವನ್ನು ಮಾಡುತ್ತಿದ್ದನು. ಈ ನಡುವೆ ಶಿಶುಪಾಲನು ಕೃಷ್ಣನನ್ನು ಹೆದರಿಸುತ್ತ "ಈ ನನ್ನ ಬಾಣಗಳು ಈಗಲೇ ಈ ಕೃಷ್ಣನನ್ನು ಕೃಷ್ಣನಲ್ಲದಂತೆ ಮಾಡಲಿ!" ಎಂದು

ಗರ್ವದಿಂದ ಕೂಗುತ್ತ, ಉಗ್ರವಾದ ಬಾಣವರ್ಷವನ್ನು ಕರೆದನು. ಈ ಬಾಣಗಳಿಂದ ಕೃಷ್ಣನ ಮೈಯಲ್ಲಿ ಗಾಯವಾಗಿ, ಮದದಾನೆಯ ಗಂಡ ಸ್ಥಳದಿಂದ ಮದಜಲವು ಜಿನುಗುವಂತೆ, ಸ್ವಲ್ಪ ಹೊತ್ತಿನವರೆಗೆ ರಕ್ತವು ಸುರಿಯಲಾರಂಭಿಸಿತು. ಶಿಶುಪಾಲನ ಬಾಣವರ್ಷದಿಂದ ಕೃಷ್ಣಸಾರಥಿಯೂ, ರಥವೂ, ರಥಾಶ್ವಗಳೂ, ಮುಚ್ಚಿ, ಯಾರಿಗೂ ಕಾಣಿಸದಂತಾದುವು. ಈ ಸ್ಥಿತಿಯನ್ನು ನೋಡಿ ಸಮಸ್ತಭೂತಗಳೂ “ಅಯ್ಯೋ ಇನ್ನೇನು ಗತಿ?” ಎಂದು ಅರಚಿದುವು. ಆಗ ಕೃಷ್ಣನ ಸಾರಥಿಯು ಕೃಷ್ಣನನ್ನು ನೋಡಿ “ಮಾಧವಾ! ಇಂತಹ ಘೋರಯುದ್ಧವನ್ನು ನಾನು ಇದುವರೆಗೆ ನೋಡಿದುದಿಲ್ಲ. ನಿನ್ನ ಪ್ರಭಾವದಿಂದಲೇ ನಾನು ಇಲ್ಲಿ ಇದುವರೆಗೆ ತಡೆದು ನಿಂತಿರುವೆನು. ಹಾಗಿಲ್ಲದಿದ್ದರೆ ನನ್ನ ಪ್ರಾಣಗಳು ನಿಂತಿರಲಾರವು. ಇನ್ನು ತಡೆಯುವುದು ಕಷ್ಟವು. ಆದುದರಿಂದ ಶೀಘ್ರದಲ್ಲಿಯೇ ನೀನು ಈ ಶಿಶುಪಾಲನನ್ನು ಕೊಂದುಬಿಡಬೇಕು. ವಿಳಂಬಮಾಡಬಾರದು” ಎಂದನು. ಅದಕ್ಕಾ ಕೃಷ್ಣನು ದಾರುಕಾ! ಇವನಿಗೆ ಈ ಬಲವಿರಬೇಕಾದುದು ಸಹಜವೇ. ಪೂರ್ವದಲ್ಲಿ ವರಬಲದಿಂದ ಕೊಬ್ಬಿ ದೇವಶತ್ರುವಾಗಿದ್ದ ಹಿರಣ್ಯಕಶಿಪುವೆಂಬ ಅಸುರನಾಗಿದ್ದವನು ಇವನೇ. ಆಮೇಲೆ ಇವನೇ ದಶಕಂಠರಾವಣನಾಗಿ ಹುಟ್ಟಿದನು ಇವನು ತನ್ನ ವರಬಲದಿಂದಲೂ, ವೀರ್ಯದಿಂದಲೂ ನನ್ನನ್ನೂ ಲಕ್ಷ್ಯಮಾಡದೆ ಕೊಬ್ಬಿದ್ದನು. ಅವನ ಒಂದೊಂದು ಜನ್ಮದಲ್ಲಿಯೂ ನಾನೇ ಅವನ ಭಾಗಕ್ಕೆ ಮೃತ್ಯುವಾಗಿರುವೆನು. ಆದುದರಿಂದ ನಾನಿರುವಾಗ ನೀನೇನೂ ಭಯಪಡಬೇಕಾದುದಿಲ್ಲ” ಎಂದು ಹೇಳಿ, ಭಗವಂತನಾದ ಕೃಷ್ಣನು ಪಾಂಚಜನ್ಯವೆಂಬ ತನ್ನ ಶಂಖವನ್ನು ತೆಗೆದು ಒಂದಾವರ್ತಿ ಊದಿದನು. ಆ ಧ್ವನಿಯನ್ನು ಕೇಳಿದಾಗಲೇ ಶಿಶುಪಾಲನಿಗೆ ಒಂದು ವಿಧವಾದ ಬುದ್ಧಿಭ್ರಮವುಂಟಾಯಿತು. ಒಡನೆಯೇ ಕೃಷ್ಣನು ತನ್ನ ಚಕ್ರಾಯುಧವನ್ನೆತ್ತಿ ಅದರಿಂದ ಆ ಸುನೀಥನ (ಶಿಶುಪಾಲನ) ತಲೆಯನ್ನು ಕತ್ತರಿಸಿಬಿಟ್ಟನು. ಶಿಶುಪಾಲನ ದೇಹವು ವಜ್ರಾಹತವಾದ ಪರ್ವತದಂತೆ ಕೆಳಕ್ಕೆ ಬಿದ್ದುಹೋಯಿತು. ಆಗ ಆಕಾಶದಲ್ಲಿ ಸೂರ್ಯೋದಯವಾದಂತೆ, ಶಿಶುಪಾಲನ ದೇಹದಿಂದ ಅದ್ಭುತವಾದ ದೊಡ್ಡ ತೇಜಸ್ಸೊಂದು ಮೇಲಕ್ಕೆದ್ದಿತು. ರಾಜರೆಲ್ಲರೂ ನೋಡುತ್ತಿದ್ದ

ಹಾಗೆಯೇ ಆ ತೇಜಃಪಿಂಡವು ಪುಂಡರೀಕಾಕ್ಷನಾದ ಶ್ರೀಕೃಷ್ಣನ ಪಾದಗಳನ್ನು ಮುಟ್ಟಿ ಕೃಷ್ಣನ ಶರೀರದಲ್ಲಿಯೇ ಪ್ರವೇಶಿಸಿಬಿಟ್ಟಿತು. ಇದನ್ನು ನೋಡಿ ರಾಜರೆಲ್ಲರೂ ಆಶ್ಚರ್ಯದಿಂದ ಬೆರಗಾದರು. ಶಿಶುಪಾಲನ ದೇಹವು ಕೆಳಗೆ ಬಿದ್ದೊಡನೆ, ಆಕಾಶದಿಂದ ಮೇಘವಿಲ್ಲದೆ ಮಳೆಯು ಸುರಿಯಿತು! ಭೂಮಿಯು ನಡುಗಿತು. ಆಕಾಶದಿಂದ ಜ್ವಲಿಸುವ ಸಿಡಿಲು ಭೂಮಿಗೆ ಎರಗಿತು. ಅಲ್ಲಿದ್ದ ರಾಜರೆಲ್ಲರೂ ಭ್ರಾಂತರಾಗಿ, ಬಾಯೆತ್ತದೆ ಕೃಷ್ಣನನ್ನು ನೋಡುತ್ತ ನಿಂತಿದ್ದರು. ಆಗಲೂ ಕೆಲವರು ಕೋಪದಿಂದ ಕೈಹಿಸುಕುತ್ತಿದ್ದರು. ಕೆಲವರು ತುಟಿಗಳನ್ನು ಕಚ್ಚುತ್ತಿದ್ದರು. ಕೆಲವರು ತಮ್ಮೊಳಗೆ ತಾವೇ ಕೃಷ್ಣನನ್ನು ಪ್ರಸಂಶೆಮಾಡುತ್ತಿದ್ದರು. ಕೆಲವರು ತಮ್ಮ ಕೋಪವನ್ನು ಅಡಗಿಸಲಾರದೆ ರೇಗಿಬಿದ್ದರು. ಕೆಲವರು ತಟಸ್ಥರಾದರು. ಆಗ ಮಹರ್ಷಿಗಳೂ, ಬ್ರಾಹ್ಮಣರೂ ಮಹಾಬಲವುಳ್ಳ ಕೆಲವು ಉತ್ತಮರಾಜರೂ, ಕೃಷ್ಣನ ಪರಾಕ್ರಮವನ್ನು ಹೊಗಳುತ್ತ ಕೃಷ್ಣನ ಪಕ್ಕದಲ್ಲಿ ಬಂದು ನಿಂತರು. ಆಕಾಶದಲ್ಲಿ ನೆರೆದಿದ್ದ ದೇವಗಂಧರ್ವರೂ, ನೆಲದಲ್ಲಿ ನೋಡುತ್ತಿದ್ದ ರಾಜರೂ, ಕೃಷ್ಣನಿಗೆ ಅಂಜಲಿಯನ್ನು ಮಾಡಿ ನಮಸ್ಕರಿಸಿದರು. ಓ ಜನಮೇಜಯರಾಜಾ! ಈ ಲೋಕದಲ್ಲಿ ಅಸುರಾಂಶದಿಂದ ಹುಟ್ಟಿ, ಅಲ್ಪಾಯುಷ್ಯವುಳ್ಳ ಕೆಲವು ದುಷ್ಟರಾಜರು ಮಾತ್ರವೇ ಕೃಷ್ಣನನ್ನು ನಿಂದಿಸಿದರು. ಬ್ರಹ್ಮನ ಕಡೆಯವರೂ ಕೃಷ್ಣನಲ್ಲಿ ಮಧ್ಯಸ್ಥರಾಗಿದ್ದವರೂ, ಬ್ರಹ್ಮಋಷಿಗಳೂ, ಸಿದ್ಧ ಗಂಧರ್ವ ಚಾರಣರೂ, ಮಂಗಳಗಾನಗಳಿಂದ ಕೃಷ್ಣನನ್ನು ಸ್ತುತಿಸಿದರು. ಅನೇಕರು ಆ ಕೃಷ್ಣನಲ್ಲಿ ತಮಗಿರುವ ಭಕ್ತಿಯಿಂದ ನೈಮರೆತು ಹಾಡಿ ಕುಣಿಯುತಿದ್ದರು. ಪಾಂಡವರು ಸಂತೋಷದಿಂದ ಕೃಷ್ಣನನ್ನು ಸ್ತುತಿಸುತ್ತ ಅವನ ಬಳಿಗೆ ಬಂದರು. ಆಮೇಲೆ ಧರ್ಮರಾಜನು ತನ್ನ ಸಹೋದರರನ್ನು ಕರೆದು, ಶಿಶುಪಾಲನಿಗೆ ಒಡನೆಯೇ ಸಂಸ್ಕಾರವನ್ನು ನಡೆಸುವಂತೆ ಹೇಳಿದನು. ಅದರಂತೆಯೇ ಭೀಮಾದಿಗಳು ಸಂಸ್ಕಾರವನ್ನು ನಡೆಸಿದರು. ಆಮೇಲೆ ಧರ್ಮರಾಜನು ಕೃಷ್ಣಾಜ್ಞೆಯಿಂದ ಎಲ್ಲಾ ರಾಜರೊಡನೆ ಸೇರಿ, ಶಿಶುಪಾಲನ ಮಗನಿಗೆ ಚೇದಿರಾಜ್ಯದಲ್ಲಿ ಪಟ್ಟವನ್ನು ಕಟ್ಟಿದನು.

ಇದು ಎಪ್ಪತ್ತನೆಯ ಅಧ್ಯಾಯವು.

## ರಾಜಸೂಯಯಾಗದ ವೈಭವಗಳು.

ಓ ಜನಮೇಜಯರಾಜಾ! ಆಮೇಲೆ ಧರ್ಮರಾಜನ ರಾಜಸೂಯ ಯಾಗವು ವಿಘ್ನಗಳೇನೂ ಇಲ್ಲದೆ, ಅಗ್ರಪೂಜೆಯ ವಿಷಯವಾದ ಕಲಹ ಗಳೂ ಇಲ್ಲದೆ ಮುಂದುವರಿಯಲಾರಂಭಿಸಿತು. ಅನೇಕ ಮಹರ್ಷಿಗಳ ಸಮೂಹವು ಕಿಕ್ಕಿರಿಸಿ ನೆರೆದಿದ್ದಿತು. ಆ ಯಜ್ಞವು ಮುಗಿಯುವರಗೆ, ಕೃಷ್ಣನು ಶಂಕ ಚಕ್ರ ಗದಾಧಾರಿಯಾಗಿ, ಅದನ್ನು ಎಚ್ಚರದಿಂದ ರಕ್ಷಿಸು ತಿದ್ದನು. ಆ ಯಜ್ಞವು ನಡೆಯುವ ಕಾಲದಲ್ಲಿ ಅಲ್ಲಲ್ಲಿ ವಾಗ್ಮಿಗಳಾದ ಬ್ರಾಹ್ಮಣರು ಗುಂಪುಕೂಡಿ, ವಿರುದ್ಧಪಕ್ಷಗಳನ್ನು ಜಯಿಸುವ ಹಟ ದಿಂದ ಅನೇಕ ಯುಕ್ತಿಯುಕ್ತಗಳಾದ ತರ್ಕವಾದಗಳನ್ನು ನಡೆಸುತಿದ್ದರು. ಆ ಕಾಲದಲ್ಲಿ ಸಹದೇವನು ಕೃಷ್ಣನಿಗೆ ನಡೆಸಿದ ಪೂಜಾವಿಧಿಗಳೊಡನೆ ಅಲ್ಲಿನ ಯಜ್ಞವಿಧಿಗಳನ್ನೆಲ್ಲ ರಾಜರೆಲ್ಲರೂ ನೋಡಿ ಸಂತೋಷಗೊಂಡರು. ಆ ಯಾಗದಲ್ಲಿ ಬ್ರಾಹ್ಮಣರು ಪುಣ್ಯಕಥೆಗಳನ್ನು ಹೇಳುತ್ತ, ನಾಟಕ ಗಳನ್ನೂ, ನರ್ತನಗಳನ್ನೂ ನೋಡುತ್ತ ಅತ್ಯುತ್ಸಾಹದಿಂದಿದ್ದರು. ಆ ಯಜ್ಞಮಂಟಪಕ್ಕೆ ಕಟ್ಟಿದ ತೋರಣಗಳೆಲ್ಲ ಸುವರ್ಣಮಯವಾದ ತಾಲ ವೃಕ್ಷಗಳಿಂದ ರಚಿತವಾಗಿ ಕಾಂತಿಯಿಂದ ಜ್ವಲಿಸುತ್ತಿದ್ದುವು. ಗ್ರಹ ಗಳಿಂದ ಆಕಾಶವು ಹೇಗೋ ಹಾಗೆ, ಆ ಯಾಗಭೂಮಿಯೆಲ್ಲ ತೋರ ಣಗಳ ಕಾಂತಿಯಿಂದ ಬೆಳಗುತಿದ್ದಿತು. ಹಾಸಿಗೆಗಳು, ಹೊದಿಕೆಗಳು, ಆಸ ನಗಳು, ವಿಹಾರವಸ್ತುಗಳು, ಕೊಡಗಳು, ಹಂಡೆಗಳು, ಕಲಶಗಳು ಮುಂತಾ ದ ಇತರಪಾತ್ರಗಳು, ಇವೆಲ್ಲವೂ ಅಲ್ಲಿ ರತ್ನಮಯವಾಗಿಯೇ ಇದ್ದುವು. ಅಲ್ಲಿ ಬಂದ ರಾಜರಿಗೆ, ಸುವರ್ಣವಲ್ಲದ ವಸ್ತುವೊಂದಾದರೂ ಕಾಣಿಸಲಿಲ್ಲ. ಆ ಬ್ರಾಹ್ಮಣರೆಲ್ಲರೂ ರುಚಿರುಚಿಯಾದ ನಾನಾಬಗೆಯ ಭೋಜನಪದಾರ್ಥ ಗಳಿಂದ ತೃಪ್ತರಾದರು. ಊಟದ ವೈಭವಗಳನ್ನು ಕೊಂಡಾಡುವ ಬ್ರಾಹ್ಮ ಣರ ಧ್ವನಿಯೇ ಎಲ್ಲೆಲ್ಲಿಯೂ ಕೇಳಿಸುತಿದ್ದಿತು. "ಇವರಿಗೆ ಕೊಡಿರಿ! ಅವ ರಿಗೆ ಕೊಡಿರಿ! ಊಟಮಾಡಿರಿ! ಇನ್ನಷ್ಟು ಊಟಮಾಡಿರಿ!" ಎಂಬ ಮಾ ತುಗಳೇ ಅಲ್ಲಿ ಕೇಳಿಸುತಿದ್ದಿತು. ಧರ್ಮರಾಜನ ಕಡೆಯ ಭೃತ್ಯರು ವಿಧವಿಧ ವಾದ ಚಿತ್ರಾನ್ನಗಳು, ಭಕ್ಷ್ಯಗಳು, ರುಚಿರುಚಿಯಾದ ಪಾನೀಯಗಳು, ಇವ

ನ್ನೆಲ್ಲ ತಂದು ತಂದು ಬ್ರಾಹ್ಮಣರಿಗೆ ಕೊಡುತಿದ್ದರು. ಒಂದೊಂದು ದಿನವೂ, ಲಕ್ಷಮಂದಿ ಬ್ರಾಹ್ಮಣರಿಗೆ ಭೋಜನವಾದೊಡನೆ ಅದಕ್ಕೆ ಸೂಚಕವಾಗಿ ಒಂದಾವರ್ತಿ ಶಂಖವನ್ನೂದುವರು. ಆ ಯಾಗದಿನಗಳಲ್ಲಿ ಅಂತಹ ಶಂಖ ಧ್ವನಿಯು ಕ್ಷಣಕ್ಷಣಕ್ಕೂ ಕಿವಿಗೆ ಬೀಳುತಿದ್ದಿತು. ಈ ಶಂಖಧ್ವನಿಯು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತಿದ್ದಿತು. ಅಲ್ಲಿ ಸಮಸ್ತಜನರೂ, ಭೋಜನಾದಿಗಳಿಂದ ತೃಪ್ತರಾಗಿ, ಅಲ್ಲಲ್ಲಿ ಲಕ್ಷಸಂಖ್ಯೆಯಿಂದ ನೆರೆದಿದ್ದರು. ಎಲ್ಲಿ ನೋಡಿದರೂ ಬೆಟ್ಟದಂತಿರುವ ಅನ್ನದ ರಾಶಿಗಳು! ಮೊಸರಿನ ಕಾಲುವೆಗಳು! ತುಪ್ಪದ ಮಡುಗಳು! ಇವುಗಳೇ ಜನಗಳ ಕಣ್ಣಿಗೆ ಕಾಣಿಸುತಿದ್ದುವು. ಅಲ್ಲಿನ ಜನಸಮೂಹವನ್ನು ನೋಡಿದರೆ, ಅನೇಕ ದೇಶಗಳಿಂದ ಕೂಡಿದ ಜಂಬೂದ್ವೀಪವೇ ಮೊತ್ತಕ್ಕೆ ಅಲ್ಲಿ ಬಂದು ನೆರೆದಂತೆ ಕಾಣಿಸಿತು. ಅನೇಕ ದೇಶಾಧಿಪತಿಗಳು ಅಪಾರಧನವನ್ನು ತೆಗೆದುಕೊಂಡು ತಮ್ಮ ಭೃತ್ಯರೊಡನೆ ಬಂದು ಸೇರಿದ್ದರು. ಅಲ್ಲಿಗೆ ಬಂದಿದ್ದ ರಾಜರೆಲ್ಲ ಪುಷ್ಪ ಮಾಲಿಕೆಗಳಿಂದಲೂ, ರತ್ನಕುಂಡಲಗಳಿಂದಲೂ ಅಲಂಕೃತರಾಗಿ, ನೂರು ಸಾವಿರ ಸಂಖ್ಯೆಯ ಬ್ರಾಹ್ಮಣರಿಗೆ ತಮ್ಮ ಕೈಯಿಂದಲೇ ಅನ್ನವನ್ನು ಬಡಿಸುತಿದ್ದರು. ಅಲ್ಲಿಗೆ ಬಂದ ಬ್ರಾಹ್ಮಣರಿಗೆಲ್ಲ ರಾಜಯೋಗ್ಯವಾದ ಭಕ್ಷ್ಯ ಭೋಜ್ಯ ಪಾನೀಯಾದಿಗಳೇ ಬಡಿಸಲ್ಪಡುತಿದ್ದುವು. ನಾನಾ ಕಡೆಯಿಂದ ಬಂದ ಬ್ರಾಹ್ಮಣರು ಆ ಯಾಗದಲ್ಲಿ ತಾವು ಹಿಂದೆ ಯಾವಾಗಲೂ ಕಂಡುಕೇಳಿಲ್ಲದ ತೃಪ್ತಿಯನ್ನು ಹೊಂದಿ ಸಂತೋಷದಿಂದಿದ್ದರು. ಧನಧಾನ್ಯ ಸಮೃದ್ಧವಾಗಿ, ಜನಗಳ ಸಂತೋಷ ಕೋಲಾಹಲಗಳಿಂದ ಕೂಡಿದ್ದ ಆ ಯಜ್ಞಶಾಲೆಯನ್ನು ನೋಡಿ, ಆ ಯಾಗಕ್ಕಾಗಿ ಬಂದ ರಾಜರೆಲ್ಲರಿಗೂ ಅತ್ಯಾಶ್ಚರ್ಯವುಂಟಾಯಿತು. ಆ ಯಾಗದಲ್ಲಿ ಋತ್ವಿಕ್ಕುಗಳೆಲ್ಲರೂ, ಶಾಸ್ತ್ರಕ್ರಮದಿಂದ ಅಗ್ನಿಸ್ಥಾಪನಮಾಡಿ, ಮಂತ್ರ ತಂತ್ರ ಲೋಪವಿಲ್ಲದೆ ಹೋಮವನ್ನು ನಡೆಸಿದರು. ವ್ಯಾಸ ಧೌಮ್ಯರೇ ಮೊದಲಾದ ಹದಿನಾಲ್ಕು ಮಂದಿ ಋತ್ವಿಕ್ಕುಗಳು, ತಮ್ಮ ಕಾರ್ಯಗಳನ್ನು ಶಾಸ್ತ್ರೋಕ್ತವಾಗಿ ಬಹಳ ಶ್ರದ್ಧೆಯಿಂದ ನಡೆಸಿದರು. ಅಲ್ಲಿ ವೇದವೇದಾಂಗಗಳನ್ನು ತಿಳಿಯದವನಾಗಲಿ, ಶಾಸ್ತ್ರಗಳನ್ನು ಕೇಳದವನಾಗಲಿ, ವ್ರತಭ್ರಷ್ಟನಾಗಲಿ, ಪಾಪಾತ್ಮನಾಗಲಿ, ಪರಾಪವಾದಕ್ಕೆ ಗುರಿಯಾಗದವನಾಗಲಿ, ನೈಪುಣ್ಯವಿಲ್ಲದವನಾಗಲಿ, ಒಬ್ಬ

ಬ್ರಾಹ್ಮಣನಾದರೂ ಕಾಣಿಸಲಿಲ್ಲ. ಆ ಯಾಗದಲ್ಲಿ ಲೋಭಿಯೂ, ದರಿದ್ರನೂ, ಹಸಿದವನೂ, ದುಃಖಿತನೂ, ಪ್ರಾಕೃತನೂ ಒಬ್ಬನಾದರೂ ಇರಲಿಲ್ಲ. ಸಹದೇವನು ಧರ್ಮರಾಜನ ಆಜ್ಞೆಯಿಂದ ಭೋಜನಾರ್ಥಿಗಳನ್ನೆಲ್ಲ ಕರೆದುಕರೆದು ಭೋಜನಮಾಡಿಸುತಿದ್ದನು. ಶಾಸ್ತ್ರಜ್ಞರೂ, ಕುಶಲರೂ ಆದ ಋತ್ವಿಕ್ಕುಗಳು ಕಾಲಾತಿಕ್ರಮವಿಲ್ಲದೆ ಎಲ್ಲಾ ಕಾರ್ಯಗಳನ್ನೂ ನಡೆಸುತಿದ್ದರು. ವೇದಶಾಸ್ತ್ರಗಳನ್ನು ಬಲ್ಲ ಬ್ರಾಹ್ಮಣರು ಅಲ್ಲಲ್ಲಿ ಕುಳಿತು, ಶಾಸ್ತ್ರವಾದಗಳನ್ನು ಮಾಡುತ್ತ, ಆ ವಾದಗಳು ಮುಗಿದೊಡನೆ ಎಲ್ಲರೂ ಸಭೆಯಾಗಿ ಬಂದು ಕುಳಿತಿರುವರು. ದೇವತೆಗಳಿಂದಲೂ, ವೇದವಿತ್ತುಗಳಾದ ಬ್ರಾಹ್ಮಣರಿಂದಲೂ, ಮಹರ್ಷಿಗಳಿಂದಲೂ ಕೂಡಿದ ಆ ಯಾಗವೇದಿಕೆಯು ನಕ್ಷತ್ರಗಳಿಂದ ತುಂಬಿದ ಆಕಾಶದಂತೆ ಕಾಣುತಿತ್ತು. ಅಲ್ಲಿಗೆ ಬಂದ ಬ್ರಾಹ್ಮಣರಲ್ಲಿ ತಮ್ಮ ವಿದ್ಯಾನೈಪುಣ್ಯವನ್ನು ತೋರಿಸುವುದಕ್ಕಾಗಿ ಬಂದವರು ಕೆಲವರು! ತರ್ಕವಾದಗಳಿಗಾಗಿ ಬಂದವರು ಕೆಲವರು! ಬೇರೆಯವರ ವಿದ್ಯಾಚಾತುರ್ಯವನ್ನು ನೋಡಬೇಕೆಂದು ಬಂದವರು ಕೆಲವರು! ಯಾಗವೈಭವವನ್ನು ನೋಡುವುದಕ್ಕಾಗಿಯೇ ಬಂದವರು ಕೆಲವರು! ರಾಜನಿಗೆ ಭಯಪಟ್ಟು ಬಂದವರು ಕೆಲವರು! ಹೀಗೆ ಎಷ್ಟೋ ಮಂದಿ ಬ್ರಾಹ್ಮಣರು ಬಂದು ನೆರೆದಿದ್ದರು. ಅಲ್ಲಿ ಯಾಗಮಾಡಿಸುವುದಕ್ಕಾಗಿ ಬಂದ ಬ್ರಾಹ್ಮಣರೆಲ್ಲರೂ, ತಾವೇ ಎಷ್ಟೋ ಯಾಗಗಳನ್ನು ಮಾಡಿ ಅವಭೃಥಸ್ನಾನಗಳನ್ನು ಮುಗಿಸಿದವರು. ಸಹದೇವನು ಯಾಗಮಂದಿರದ ಅಂದಕ್ಕಾಗಿ ರತ್ನಖಚಿತಗಳಾದ ಭಂಗಾರದ ಯೂಪಸ್ತಂಭಗಳನ್ನು ಮಾಡಿಸಿದ್ದನು. ಸುವರ್ಣದ ತಾಲವೃಕ್ಷಗಳಿಂದಲೇ ತೋರಣಗಳು ರಚಿಸಲ್ಪಟ್ಟಿದ್ದುವು. ಆ ತೋರಣಗಳ ಕಾಂತಿಯಿಂದ ಯಾಗಭೂಮಿಯು ಗ್ರಹಗಳಿಂದ ಕೂಡಿದ ಆಕಾಶದಂತೆ ಪ್ರಕಾಶಿಸುತಿತ್ತು. ದಿಗ್ಗಜಗಳಂತೆ ಮಹೋನ್ನತಗಳಾಗಿಯೂ, ಸೂರ್ಯನಂತೆ ಪ್ರಕಾಶಮಾನವಾಗಿಯೂ ಇರುವ ಈ ತೋರಣಗಳು ನಾನಾಕಡೆಯಲ್ಲಿಯೂ ಕಾಣುತ್ತಿದ್ದುವು. ಕಿರೀಟಕುಂಡಲಾದಿಗಳಿಂದ ಅಲಂಕೃತರಾದ ಅನೇಕರಾಜರೂ ಅಲ್ಲಿ ನೆರೆದಿದ್ದರು. ಹೀಗೆ ಸುವರ್ಣತೋರಣಗಳು, ರಾಜರ ಆಭರಣಕಾಂತಿಗಳು, ದೇವಲೋಕದಿಂದ ಬಂದ ದೇವತೆಗಳು, ಯಕ್ಷರು, ನಾಗರು, ವಿದ್ಯಾಧರರು, ಇವರೆಲ್ಲಾ ನೆರೆದಿ

ದ್ದುದರಿಂದ, ಅದು ಎರಡನೆಯ ದೇವಲೋಕದಂತೆಯೇ ಪ್ರಕಾಶಿಸುತಿತ್ತು. ಒಂದು ಕಡೆಯಲ್ಲಿ ನಾಗರೂ, ಮತ್ತೊಂದು ಕಡೆಯಲ್ಲಿ ಕಿಂಪುರುಷರೂ ಇಂಪಾಗಿ ಹಾಡುತ್ತಿರುವರು. ನಾರದನೂ, ತುಂಬುರುವೂ, ವಿಶ್ವಾವಸು ಚಿತ್ರಸೇನರೆಂಬ ಗಂಧರ್ವರೂ ತಮ್ಮ ಗಾನಗಳಿಂದ ಹಾಡಿ ಜನಗಳನ್ನು ಸಂತೋಷಪಡಿಸುತಿದ್ದರು. ಯಾಗಕಾರ್ಯವು ನಡೆಯುದಿದ್ದಾಗ ಅಪ್ಸರಸ್ತ್ರೀಯರು ನರ್ತನಮಾಡುತಿದ್ದರು. ಶಬ್ದಶಾಸ್ತ್ರವನ್ನು ಬಲ್ಲ ವಿದ್ವಾಂಸರು (ವೈಯ್ಯಾಕರಣಿಗಳು) ನಡುನಡುವೆ ಅವಕಾಶವಿದ್ದಾಗ ಇತಿಹಾಸಗಳನ್ನೂ, ಪುರಾಣಗಳನ್ನೂ, ಆಖ್ಯಾನಗಳನ್ನೂ ಪ್ರಸಂಗಮಾಡುತಿದ್ದರು. ಆ ಯಾಗಶಾಲೆಯ ನಾನಾಕಡೆಗಳಲ್ಲಿ ಭೇರಿ, ಮೃದಂಗ, ಮಡ್ಡುಕ, ಗೋಮುಖ, ಕೊಂಬು, ಕಹಳೆ, ವೀಣೆ, ಕೊಳಲು, ಶಂಖ ಮುಂತಾದ ವಾದ್ಯಗಳು, ಸಾವಿರಸಂಖ್ಯೆಯಿಂದ ನುಡಿಸಲ್ಪಡುತಿದ್ದುವು. ಆ ಯಾಗಕಾಲದಲ್ಲಿ ಜಾತಿಭೇದವಿಲ್ಲದೆ, ಭೂಮಿಯಲ್ಲಿರುವ, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಮ್ಲೇಚ್ಛರು, ಪ್ರಥಮ, ಮಧ್ಯಮ, ಚರಮವರ್ಣಕ್ಕೆ ಸೇರಿದ ಸಂಕರಜಾತಿಗಳು, ಹೀಗೆ ನಾನಾದೇಶದಿಂದ ನಾನಾಜಾತಿಯವರು ಬಂದು ನೆರೆದಿದ್ದುದರಿಂದ ಈ ಜಗತ್ತೇ ಯುಧಿಷ್ಠಿರನ ಗೃಹಕ್ಕೆ ಬಂದಂತೆ ಕಾಣುತಿದ್ದಿತು. ಅಲ್ಲಿ ಬಂದವರೆಲ್ಲರೂ ಭೋಜನಾದಿಗಳಿಂದ ತೃಪ್ತರಾದರು. ಭೀಷ್ಮನು, ದ್ರೋಣನು, ದುರ್ಯೋಧನನು ಮೊದಲಾದ ಕೌರವರು, ಯಾದವರು, ಪಾಂಚಾಲರು, ಇವರೆಲ್ಲರೂ ಆ ಯಾಗದಲ್ಲಿ ಕೇವಲದಾಸರಂತೆ ಹೇಳಿದ ಕೆಲಸಗಳನ್ನೆಲ್ಲ ಮಾಡುತಿದ್ದರು. ಓ ಜನಮೇಜಯರಾಜಾ! ಆ ಧರ್ಮರಾಜನ ಯಾಗವು, ಸೋಮನ ಯಾಗದಂತೆ ಅತಿ ವೈಭವದಿಂದ ಜರುಗಿತು. ಧರ್ಮರಾಜನು ಆ ಯಾಗಾಂತ್ಯದಲ್ಲಿ ಬ್ರಾಹ್ಮಣರಿಗೆ, ವಸ್ತ್ರಗಳು, ಕಂಬಳಿಗಳು, ದುಪ್ಪಟಿಗಳು, ಚಿನ್ನದ ನಾಣ್ಯಗಳು, ಚಿನ್ನಬೆಳ್ಳಿಯ ಪಾತ್ರೆಗಳು, ಆಭರಣಗಳು ಇವನ್ನೆಲ್ಲ ಕೊಟ್ಟುದಲ್ಲದೆ, ಆ ರಾಜರು ತನಗೆ ತಂದುಕೊಟ್ಟ ರತ್ನಾದಿಗಳನ್ನೆಲ್ಲ ಅಲ್ಲಿದ್ದ ಬ್ರಾಹ್ಮಣರಿಗೇ ದಾನಮಾಡಿಬಿಟ್ಟನು.

ಇದು ಎಪ್ಪತ್ತೊಂದನೆಯ ಅಧ್ಯಾಯವು.



ಧರ್ಮರಾಜನು ವ್ಯಾಸಾದಿಗಳನ್ನು ಪೂಜಿಸಿದುದು. ಯಾಗಕ್ಕಾಗಿ ಬಂದಿದ್ದ ರಾಜರು ಹಿಂತಿರುಗಿ ಹೋದುದು. ಕೃಷ್ಣನು ದ್ವಾರಕೆಗೆ ಪ್ರಯಾಣಮಾಡಿದುದು.

ಓ ಜನಮೇಜಯರಾಜಾ! ಹೀಗೆ ಧರ್ಮರಾಜನ ಯಜ್ಞವು ಯಾವ ಕರ್ಮಗಳಿಗೂ ಲೋಪವಿಲ್ಲದೆ, ಎಲ್ಲರಿಗೂ ಸಂತೋಷಕರವಾಗಿ, ದೊಡ್ಡ ಮಹೋತ್ಸವದಂತೆ ನಿರಾಯಾಸವಾಗಿ ಭಕ್ಷ್ಯಭೋಜ್ಯಾದಿಗಳ ಸಮೃದ್ಧಿಯೊಡನೆ ಪೂರ್ಣವಾಯಿತು. ಮೊದಲಿಂದ ಕೊನೆಯವರೆಗೂ ಕೃಷ್ಣನು ಅದನ್ನು ರಕ್ಷಿಸುತಿದ್ದನು. ಯಾಗವು ಪೂರ್ಣವಾದಮೇಲೆ ಬ್ರಾಹ್ಮಣರಿಗಾಗಿ ಧರ್ಮರಾಜನು ಎಷ್ಟೋ ಕೋಟಿ ಧನಗಳನ್ನು ದಕ್ಷಿಣೆಯಾಗಿ ಕೊಟ್ಟನು. ಬೇರೆ ಯಾವ ರಾಜನೂ ಅಂತಹ ಯಾಗವನ್ನು ನಡೆಸಲಾರನು. ಯಾಗವನ್ನು ಮಾಡಿಸುವುದಕ್ಕಾಗಿ ಬಂದವರೆಲ್ಲ ತಮಗೆ ಬೇಕಾದಷ್ಟು ಧನಗಳನ್ನು ಪಡೆದು ತೃಪ್ತಿಹೊಂದಿದರು. ಯಾಗಾಂತದಲ್ಲಿ ಧರ್ಮರಾಜನಿಗೆ ಅವಭೃಥಸ್ನಾನವು ನಡೆಯಿತು. ಆಮೇಲೆ ಧರ್ಮರಾಜನು ಅಲ್ಲಿಗೆ ಬಂದಿದ್ದ, ವ್ಯಾಸ, ಧೌಮ್ಯ, ವಸಿಷ್ಠ, ನಾರದ, ಸುಮಂತು, ಜೈಮಿನಿ, ಪೈಲ, ವೈಶಂಪಾಯನ, ಯಾಜ್ಞವಲ್ಕ್ಯ, ಕೌಶಿಕ, ಕಪಿಲ, ಕಪಾಲಾದಿ ಮಹರ್ಷಿಗಳನ್ನೂ, ಪ್ರಧಾನ ಋತ್ವಿಕ್ಕುಗಳನ್ನೂ ಪೂಜಿಸಿ, ಅವರ ಮುಂದೆ ಬದ್ಧಾಂಜಲಿಯಾಗಿ “ ಮಹಾತ್ಮರೇ! ನಿಮ್ಮ ಅನುಗ್ರದಿಂದ ಯಾಗವು ನೆರವೇರಿತು. ಶ್ರೀಕೃಷ್ಣನ ಕೃಪೆಯಿಂದ ನನ್ನ ಕೋರಿಕೆಯು ಕೈಗೂಡಿತು ” ಎಂದನು. ಯಜ್ಞಾಂತದಲ್ಲಿ ಮತ್ತೊಮ್ಮೆ ಧರ್ಮರಾಜನು ದೇವದೇವನಾದ ಶ್ರೀಕೃಷ್ಣನನ್ನೂ, ಬಲರಾಮನನ್ನೂ, ಭೀಷ್ಮನೇ ಮೊದಲಾದ ಕುರುವೃದ್ಧರನ್ನೂ ಪೂಜಿಸಿದನು. ಧರ್ಮರಾಜನಿಗೆ ಅವಭೃಥಸ್ನಾನವಾದಮೇಲೆ, ಯಾಗಕ್ಕಾಗಿ ಬಂದಿದ್ದ ರಾಜರು ಅವನ ಬಳಿಗೆ ಬಂದು “ ಧರ್ಮಜ್ಞಾ! ನಿನಗೆ ಮೇಲೆಮೇಲೆ ಜಯವುಂಟಾಗಲಿ! ಇದು ನಿನ್ನ ಭಾಗ್ಯವು. ನೀನು ಸಮ್ರಾಟ್ಟೆಂಬ ಬಿರುದನ್ನು ಪಡೆದೆ! ನಿನ್ನಿಂದ ಅಜಮೀಢ ವಂಶಕ್ಕೇ ದೊಡ್ಡ ಕೀರ್ತಿಯುಂಟಾಯಿತು. ಈ ಯಾಗದಿಂದ ನಿನಗೆ ದೊಡ್ಡ ಧರ್ಮವೂ ಲಭಿಸಿತು. ನಾವು ನಿನ್ನಿಂದ ಸತ್ಕೃತರಾದೆವು. ನಮ್ಮ ದೇಶಕ್ಕೆ ಹಿಂತಿರುಗಿ ಹೋಗಲು ಅನುಮತಿಸಬೇಕು ” ಎಂದರು. ಆಗ ಧರ್ಮರಾಜನು

ಅವರನ್ನೆಲ್ಲ ಯಥೋಚಿತವಾಗಿ ಸತ್ಕರಿಸಿ, ತನ್ನ ತಮ್ಮಂದಿರನ್ನು ಕರೆದು, “ ಎಲೈ ಸಹೋದರರೇ! ಈ ರಾಜರು ಪ್ರೀತಿಯಿಂದ ನಮ್ಮಲ್ಲಿಗೆ ಬಂದರು. ಈಗ ಇವರು ತಮ್ಮ ತಮ್ಮ ದೇಶಗಳಿಗೆ ಹಿಂತಿರುಗಿ ಪ್ರಯಾಣಮಾಡುವರು. ನೀವು ಅವರನ್ನು ನಮ್ಮ ದೇಶದ ಎಲ್ಲೆಯವರೆಗೆ ಹಿಂಬಾಲಿಸಿ ಹೋಗಿ, ದಾರಿಕಳುಹಿಸಿ ಬನ್ನಿರಿ! ನಿಮಗೆ ಶುಭವಾಗಲಿ” ಎಂದನು. ಅದರಂತೆಯೇ ಭೀಮಾದಿಗಳಲ್ಲಿ ಒಬ್ಬೊಬ್ಬರೂ ಒಬ್ಬೊಬ್ಬ ರಾಜನನ್ನು ದಾರಿಕಳುಹಿಸುವುದಕ್ಕಾಗಿ ಹಿಂಬಾಲಿಸಿ ಹೊರಟರು. ಧೃಷ್ಟದ್ಯುಮ್ನನು ವಿರಾಟನೊಡನೆ ಹೋದನು. ಭೀಮನು ಭೀಷ್ಮ ಧೃತರಾಷ್ಟ್ರರನ್ನೂ, ಸಹದೇವನು ದ್ರೋಣಾಶ್ವತ್ಥಾಮರನ್ನೂ, ನಕುಲನು ಪುತ್ರಸಹಿತನಾದ ಸುಬಲನನ್ನೂ ಹಿಂಬಾಲಿಸಿ ಹೊರಟರು. ಉಪಪಾಂಡವರೂ, ಅಭಿಮನ್ಯುವೂ, ಪಾರ್ವತೇಯರನ್ನೂ, ಇತರ ಕ್ಷತ್ರಿಯರನ್ನೂ ಹಿಂಬಾಲಿಸಿದರು. ಹೀಗೆ ಬ್ರಾಹ್ಮಣರೂ, ರಾಜರೂ ಆ ಯಜ್ಞದಲ್ಲಿ ಪೂಜಿತರಾಗಿ, ಅಲ್ಲಿಂದ ಹಿಂತಿರುಗಿ ಪ್ರಯಾಣಮಾಡಿದಮೇಲೆ, ಇತ್ತಲಾಗಿ ಕೃಷ್ಣನು ಧರ್ಮರಾಜನಲ್ಲಿಗೆ ಬಂದು “ ಧರ್ಮರಾಜಾ! ನಾನೂ ದ್ವಾರಕೆಗೆ ಹೊರಡುವೆನು. ಭಾಗ್ಯವಶದಿಂದ ನೀನು ರಾಜಸೂಯವನ್ನು ಮುಗಿಸಿದುದು ಬಹಳ ಸಂತೋಷವು” ಎಂದನು. ಆಗ ಧರ್ಮರಾಜನು “ ಕೃಷ್ಣಾ! ಇದೆಲ್ಲ ನಿನ್ನ ಅನುಗ್ರಹವಲ್ಲದೆ ನನ್ನಿಂದೇನಾಗುವುದು? ಈ ಭೂಮಿಯೊಳಗಿನ ಕ್ಷತ್ರಿಯರೆಲ್ಲರೂ ನನಗೆ ಕಪ್ಪವನ್ನು ತಂದುಕೊಡುವ ಹಾಗಾದುದೂ ನಿನ್ನ ಅನುಗ್ರಹವೇ! ನಿನ್ನನ್ನು ನಾನು ಹೋಗಿಬಾರೆಂದು ಹೇಳುವುದಕ್ಕೆ ಬಾಯೇ ಬರುವುದಿಲ್ಲ. ನಿನ್ನನ್ನಗಲಿ ನನಗೆ ಯಾವಾಗಲೂ ಮನಸ್ಸಿಗೆ ನೆಮ್ಮದಿಯಿರುವುದಿಲ್ಲ. ಆದರೂ ನೀನು ದ್ವಾರಕಾಪುರಿಗೆ ಪ್ರಯಾಣಮಾಡಬೇಕಾದುದೂ ಅವಶ್ಯವೇ” ಎಂದನು. ಆಮೇಲೆ ಕೃಷ್ಣನು ಧರ್ಮರಾಜನನ್ನು ಸಂಗಡ ಕರೆದುಕೊಂಡು ಕುಂತಿಯ ಬಳಿಗೆ ಬಂದರು. ಅಲ್ಲಿ ಕೃಷ್ಣನು ಅತ್ತೆಯಾದ ಕುಂತಿಗೆ ನಮಸ್ಕರಿಸಿ, “ ಅಮ್ಮಾ! ನಿನ್ನ ಮಗನು ಸಾಮ್ರಾಜ್ಯಪದವಿಯನ್ನು ಹೊಂದಿ ಕೃತಕೃತ್ಯನಾದನು. ಭಾಗ್ಯಸಂಪನ್ನರಾದ ಇಂತಹ ಮಕ್ಕಳನ್ನು ಪಡೆದ ನೀನೂ ಕೃತಾರ್ಥಳಾದೆ! ಇನ್ನು ನನ್ನ ಪ್ರಯಾಣಕ್ಕೆ ಅನುಮತಿಸು. ಹೋಗಿ ಬರುವೆನು” ಎಂದನು. ಆಮೇಲೆ ಕೃಷ್ಣನು

ಅಂತಃಪುರದಲ್ಲಿ ಸುಭದ್ರೆಯನ್ನೂ, ದ್ರೌಪದಿಯನ್ನೂ ನೋಡಿಬಂದು, ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡನು. ಬ್ರಾಹ್ಮಣರು ಸ್ವಸ್ತಿವಾಚನಗಳನ್ನು ನಡೆಸಿದರು. ಇಷ್ಟರಲ್ಲಿಯೇ ದಾರುಕನು ಮಹಾಮೇಘದಂತಿರುವ ಕೃಷ್ಣನ ರಥವನ್ನು ಅಲಂಕರಿಸಿ ಸಿದ್ಧಮಾಡಿ ತಂದನು. ಕೃಷ್ಣನು ಗರುಡಧ್ವಜವುಳ್ಳ ಆ ರಥವನ್ನು ಪ್ರದಕ್ಷಿಣೆಮಾಡಿ ಬಂದು, ಅದನ್ನೇರಿ ದ್ವಾರಕಾನಗರಕ್ಕೆ ಪ್ರಯಾಣಹೊರಟನು. ಧರ್ಮರಾಜನು ತನ್ನ ಸಹೋದರರೊಡನೆ ಕೃಷ್ಣನ ರಥವನ್ನು ಹಿಂಬಾಲಿಸಿ ಕಾಲ್ನಡೆಯಿಂದಲೇ ಹೊರಟನು. ಆಗ ಕೃಷ್ಣನು ರಥವನ್ನು ಸ್ವಲ್ಪ ನಿಲ್ಲಿಸಿ, ಧರ್ಮರಾಜನನ್ನು ನೋಡಿ, "ಕೌರವರಾಜಾ! ನೀನು ಯಾವಾಗಲೂ ಎಚ್ಚರಿಕೆಯಿಂದ ಪ್ರಜೆಗಳನ್ನು ಪಾಲಿಸುತ್ತಿರು. ಪ್ರಾಣಿಗಳಿಗೆ ಮೇಘವೂ, ಪಕ್ಷಿಗಳಿಗೆ ವೃಕ್ಷವೂ, ದೇವತೆಗಳಿಗೆ ಇಂದ್ರನೂ ಆಶ್ರಯವಾಗಿರುವಂತೆ, ನೀನೂ ನಿನ್ನ ಬಂಧುಗಳಿಗೆ ಆಶ್ರಯಭೂತನಾಗಿರು" ಎಂದನು. ಹೀಗೆ ಕೃಷ್ಣ ಯುಧಿಷ್ಠಿರರಿಗೆ ಅನ್ಯೋನ್ಯ ಸಂಭಾಷಣೆಗಳಾದಮೇಲೆ, ಒಬ್ಬರನ್ನೊಬ್ಬರು ಆಲಂಗಿಸಿ ಅನುಮತಿಯನ್ನು ಪಡೆದು, ಅವರವರ ದಾರಿಯನ್ನು ಹಿಡಿದು ಹಿಂತಿರುಗಿದರು.

ಓ ಜನಮೇಜಯರಾಜಾ! ಶ್ರೀಕೃಷ್ಣನು ದ್ವಾರಕೆಗೆ ಹೋದಮೇಲೆ ಇತ್ತಲಾಗಿ ದುರ್ಯೋಧನು ಶಕುನಿ, ಕರ್ಣ, ದುಶ್ಯಾಸನಾದಿಗಳುಕೆಲವರೊಡನೆ ಅಲ್ಲಿಯೇ ನಿಂತಿದ್ದನು. ಬೇಕುಬೇಕಾದ ಪದಾರ್ಥಸಮೃದ್ಧಿಯಿಂದ ತುಂಬಿ, ಮಯನಿರ್ಮಿತವಾದ ಧರ್ಮರಾಜನ ಸಭಾಮಂಟಪದಲ್ಲಿ ಇವರೆಲ್ಲ ಪಾಂಡವರಿಂದ ಸತ್ಕೃತರಾಗಿ, ಅಲ್ಲಿಯೇ ಕೆಲವು ದಿನಗಳವರೆಗೆ ಸುಖವಾಗಿರುತಿದ್ದರು.

ಇದು ಎಪ್ಪತ್ತೆರಡನೆಯ ಅಧ್ಯಾಯವು.

**ಇಲ್ಲಿಗೆ ಶಿಶುಪಾಲವಧಪರ್ವವು ಮುಗಿದುದು.**



# ದ್ಯೂತಪರ್ವವು.

---

ವ್ಯಾಸಮಹರ್ಷಿಯು ಧರ್ಮರಾಜನಿಗೆ ಉತ್ಪಾತದ ಫಲಗಳನ್ನು ತಿಳಿಸಿ ಹಿಂತಿರುಗಿದುದು. ಧರ್ಮರಾಜನ ಪುರಪ್ರವೇಶವು.

ಓ ಜನಮೇಜಯರಾಜಾ! ಭೀಮಾದಿಗಳೆಲ್ಲರೂ, ರಾಜರನ್ನು ದಾರಿ ಕಳುಹಿಸಿ ಹಿಂತಿರುಗಿ ಬಂದಮೇಲೆ, ಐದುಮಂದಿ ಪಾಂಡವರೂ ಒಂದಾಗಿ ಕಲೆತರು. ಧರ್ಮರಾಜನು ತನ್ನ ಸಹೋದರರಿಗೂ, ಮಿತ್ರರಿಗೂ ಅನುಮತಿಯನ್ನು ಕೊಟ್ಟು ಕಳುಹಿಸುವಷ್ಟರಲ್ಲಿ, ವ್ಯಾಸಮಹರ್ಷಿಯು ಶಿಷ್ಯರೊಡನೆ ಆ ಪಾಂಡವರಿಗೆ ಇದಿರಾಗಿ ಬಂದನು. ಒಡನೆಯೇ ಧರ್ಮರಾಜನು ತನ್ನ ಸಹೋದರರೊಡನೆ ಇದಿರೆದ್ದು ಬಂದು, ಪಾದ್ಯವನ್ನೂ, ಆಸನವನ್ನೂ ಕೊಟ್ಟು, ತನ್ನ ಪಿತಾಮಹನಾದ ಆ ವ್ಯಾಸನನ್ನು ಪೂಜಿಸಿದನು. ಆಮೇಲೆ ವ್ಯಾಸಮಹರ್ಷಿಯು ಒಂದು ಸುವರ್ಣಪೀಠದಲ್ಲಿ ಕುಳಿತು, ಧರ್ಮರಾಜನನ್ನೂ ಕುಳಿತುಕೊಳ್ಳುವಂತೆ ಹೇಳಿದನು. ಧರ್ಮರಾಜನು ತನ್ನ ಸಹೋದರರೊಡನೆ ಪಕ್ಕದಲ್ಲಿ ಕುಳಿತನು. ಆಗ ವ್ಯಾಸಮುನಿಯು ಧರ್ಮರಾಜನನ್ನು ನೋಡಿ "ಕೌರವೇಂದ್ರಾ! ದುರ್ಲಭವಾದ ಸಾಮ್ರಾಜ್ಯಪದವಿಯಿಂದ ನೀನು ವರ್ಧಿಸುತ್ತಿರುವೆ. ಇದು ನಿನ್ನ ಭಾಗ್ಯವಿಶೇಷವು. ಕೌರವಕುಲಕ್ಕೇ ನಿನ್ನಿಂದ ಮೇಲ್ಮೆಯುಂಟಾಯಿತು. ನಿನ್ನ ಸತ್ಕಾರಕ್ಕಾಗಿ ಸಂತೋಷಪಟ್ಟೆನು. ನನಗೆ ಅನುಮತಿಯನ್ನು ಕೊಟ್ಟರೆ, ನಾನೂ ಹೋಗಿ ಬರುವೆನು" ಎಂದನು. ಆಗ ಧರ್ಮಪುತ್ರನು ವ್ಯಾಸಮಹರ್ಷಿಯ ಪಾದಗಳನ್ನು ಹಿಡಿದು ವಂದಿಸಿ, "ಮಹಾತ್ಮಾ! ಯಾರಿಗೂ ತೀರಿಸಲಾಗದ ಒಂದು ಸಂದೇಹವು ನನ್ನನ್ನು ಬಾಧಿಸುತ್ತಿದೆ. ಅದನ್ನು ಬಿಡಿಸುವುದಕ್ಕೆ ನೀನು ಹೊರತು ಬೇರೆ ಯಾರೂ ಸಮರ್ಥರಲ್ಲ. ನಾರದಮುನಿಯು, ದಿವ್ಯ, ಭೌಮ, ಆಂತರಿಕ್ಷಗಳೆಂದು ಮೂರು ಬಗೆಯ ಉತ್ಪಾತಗಳನ್ನು ನನಗೆ ತಿಳಿಸಿದನು ಆ ಉತ್ಪಾತಗಳೆಲ್ಲವೂ ಬಹಳ ಭಯಂಕರವಾದ ಕೆಟ್ಟ ಪರಿಣಾಮಗಳನ್ನು ತೋರಿಸತಕ್ಕವುಗಳೆಂಬುದು ನಿಶ್ಚಯವೇ! ಈಗ ಶಿಶುಪಾ

ಲನು ಮೃತನಾದುದರಿಂದ, ಆ ಮಹೋತ್ಪಾತಗಳೆಲ್ಲವೂ ಇಷ್ಟರಲ್ಲಿಯೇ ಅಡಗಿಹೋದುವೆ? ಅಥವಾ ಅವುಗಳ ಫಲವು ಇನ್ನೂ ತೀರಲಿಲ್ಲವೆ? ಎಂಬುದು ನನ್ನ ಸಂದೇಹವು'' ಎಂದನು. ಅದಕ್ಕಾ ವ್ಯಾಸಮಹರ್ಷಿಯು ''ರಾಜಾ! ಆ ಉತ್ಪಾತಫಲಗಳು ಈಗಲೇ ತೀರಲಿಲ್ಲ. ಇನ್ನೂ ಹದಿಮೂರು ಸಂವತ್ಸರಗಳ ವರೆಗೂ, ಆ ದುರ್ನಿಮಿತ್ತಗಳ ಫಲವು ಪ್ರಬಲವಾಗಿರುವುದು. ಈ ಉತ್ಪಾತಗಳು ಚೈದ್ಯನಾಶಕ್ಕಾಗಿ ಮಾತ್ರವಲ್ಲ. ಸಮಸ್ತ ಕ್ಷತ್ರಿಯನಾಶಕ್ಕೇ ಇದು ಸೂಚಕವು. ಕಾಲಕ್ರಮದಿಂದ ನಿನ್ನ ಮೂಲಕವಾಗಿಯೇ ಭೂಮಿಯಲ್ಲಿರುವ ಕ್ಷತ್ರಿಯರೆಲ್ಲರೂ ದುರ್ಯೋಧನನ ದುರತಿಕ್ರಮದಿಂದ ನಾಶಹೊಂದುವರು. ಭೀಮಾರ್ಜುನರ ಬಲವೇ ಅದಕ್ಕೆ ವಿನಾಶಕವು. ರಾಜೇಂದ್ರಾ! ಅಂತಹ ದೊಡ್ಡ ವಿನಾಶವು ಬಂದಾಗ, ನೀನೊಂದು ಕನಸನ್ನು ಕಾಣುವೆ. ಆ ಸ್ವಪ್ನದ ರೀತಿಯನ್ನು ಈಗಲೇ ತಿಳಿಸುವೆನು ಕೇಳು. ವೃಷಭಧ್ವಜನೂ, ನೀಲಕಂಠನೂ, ಪಶುಪತಿಯೂ, ಮಹಾದೇವನೂ ಆದ ರುದ್ರನು, ಕಪಾಲವನ್ನೂ, ಶೂಲವನ್ನೂ, ಪಿನಾಕವೆಂಬ ಧನುಸ್ಸನ್ನೂ ಹಿಡಿದು, ಚರ್ಮಾಂಬರವನ್ನು ಧರಿಸಿ, ಕೈಲಾಸಶಿಖರಕ್ಕೆ ಸಮಾನವಾದ ವೃಷಭವನ್ನೇರಿ, ಯಮನ ದಿಕ್ಕಾದ ದಕ್ಷಿಣದಿಕ್ಕಿನ ಕಡೆಗೆ ಹೋಗುವಂತೆ ನೀನು ಬೆಳಗಿನ ಜಾವದ ಹೊತ್ತಿನಲ್ಲಿ ಸ್ವಪ್ನವನ್ನು ಕಾಣುವೆ. ಆದರೆ ಆ ಭಯಂಕರಸ್ವಪ್ನಕ್ಕಾಗಿ ನೀನು ಎದೆಗುಂದಬಾರದು. ಕಾಲಗತಿಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ನಿನಗೆ ಶುಭವಾಗಲಿ! ಇನ್ನು ನಾನು ಕೈಲಾಸಕ್ಕೆ ಹೋಗುವೆನು. ನೀನು ಇಂದ್ರಿಯಗಳನ್ನಡಗಿಸಿ, ಎಚ್ಚರದಿಂದ ಪ್ರಜೆಗಳನ್ನು ರಕ್ಷಿಸುತ್ತಿರು'' ಎಂದನು. ವ್ಯಾಸಮಹರ್ಷಿಯು ಹೀಗೆಂದು ಹೇಳಿ, ತನ್ನ ಶಿಷ್ಯರೊಡನೆ ಕೈಲಾಸದಕಡೆಗೆ ಹೊರಟುಬಿಟ್ಟನು. ವ್ಯಾಸಮಹರ್ಷಿಯು ಹೇಳಿಹೋದ ಭಯಂಕರವಾದ ಉತ್ಪಾತದ ಫಲಗಳನ್ನು ಕೇಳಿದುದು ಮೊದಲು, ಧರ್ಮರಾಜನಿಗೆ ಮನಸ್ಸಿನಲ್ಲಿ ಭೀತಿಯೂ, ಚಿಂತೆಯೂ ಅತಿಪ್ರಬಲವಾಯಿತು. ಅದೇ ಚಿಂತೆಯಿಂದ ಆಗಾಗ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ, ತನ್ನಲ್ಲಿ ತಾನು ''ಈಗ ನಾನೇನು ಮಾಡಬಲ್ಲೆನು? ಮನುಷ್ಯಪ್ರಯತ್ನದಿಂದ ದೈವವನ್ನು ಅಡಗಿಸುವುದಕ್ಕೆ ಹೇಗೆತಾನೇ ಸಾಧ್ಯವು? ವ್ಯಾಸಮಹರ್ಷಿಯು ಹೇಳಿದುದೇನೋ ಅದು,

ಆಗಿಯೇ ತೀರುವುದು'' ಎಂದು ನಿರ್ಧರಿಸಿಕೊಂಡು, ತನ್ನ ಸಹೋದರರನ್ನು ಕುರಿತು, "ಈಗ ವ್ಯಾಸಮಹರ್ಷಿಯು ಹೇಳಿದ ಮಾತುಗಳನ್ನು ನೀವೆಲ್ಲರೂ ಕೇಳಿರುವಿರಷ್ಟೆ? ಅದನ್ನು ಕೇಳಿದುದು ಮೊದಲು ನನಗೆ ಮರಣದಲ್ಲಿಯೇ ನಿಶ್ಚಯಬುದ್ಧಿಯು ಹುಟ್ಟಿದೆ. ಎಲ್ಲಾ ಕ್ಷತ್ರಿಯರ ನಾಶಕ್ಕೂ ನಾನೇ ಮುಖ್ಯಕಾರಣನಾಗುವೆನೆಂದು ಆ ಮಹರ್ಷಿಯು ಹೇಳಿರುವನು. ಹಾಗಿದ್ದ ಪಕ್ಷದಲ್ಲಿ, ಅಂತಹ ಅನರ್ಥಕ್ಕೆ ಕಾರಣನಾದ ನಾನು ಬದುಕಿರಬಾರದು; ಕಾಲವು ನನ್ನನ್ನು ಇದಕ್ಕಾಗಿಯೇ ನಿರ್ಮಿಸಿದ್ದರೆ ನಾನು ಜೀವಿಸಿ ಫಲವೇನು?'' ಎಂದನು. ಈ ಮಾತನ್ನು ಕೇಳಿ ಅರ್ಜುನನು "ಅಣ್ಣಾ! ಬುದ್ಧಿಗೆಟ್ಟು ಇಂತಹ ಭಯಂಕರವಾದ ಪಾಪಕಾರ್ಯಕ್ಕೆ ನೀನು ಯೋಚಿಸಬಾರದು. ಮನಸ್ಸನ್ನು ಸಮಾಧಾನಮಾಡಿಕೊಂಡು, ಚೆನ್ನಾಗಿ ಯೋಚಿಸಿ, ಹೇಗೆ ಯುಕ್ತವೋ ಹಾಗೆ ವರ್ತಿಸು'' ಎಂದನು.

ಆಮೇಲೆ ಧರ್ಮರಾಜನು ವ್ಯಾಸಮಹರ್ಷಿಯ ಮಾತನ್ನು ತನ್ನಲ್ಲಿ ತಾನೇ ಚಿಂತಿಸುತ್ತ, ತಿರುಗಿ ತನ್ನ ತಮ್ಮಂದಿರನ್ನು ಕರೆಸಿಕೊಂಡು, ಆ ಮಹರ್ಷಿಯು ಹೇಳಿದ ವಿವರಗಳನ್ನೆಲ್ಲ ಅವರಿಗೆ ತಿಳಿಸಿ, "ಓ ಸಹೋದರರೇ! ನಿಮಗೆ ಶುಭವಾಗಲಿ! ಈ ದಿನವು ಮೊದಲು ನಾನೊಂದು ಪ್ರತಿಜ್ಞೆಯನ್ನು ಮಾಡುವೆನು. ಅದನ್ನು ನೀವೆಲ್ಲರೂ ಕೇಳಬೇಕು. ಕ್ಷತ್ರಿಯನಾಶಕ್ಕೆ ಕಾರಣನಾದ ನಾನು ಬದುಕಿದ್ದು ಫಲವೇನು? ಇದುಮೊದಲು ಹದಿಮೂರುವರ್ಷಗಳವರೆಗೆ ನನ್ನ ಸಹೋದರರನ್ನು ಕುರಿತಾಗಲಿ, ಇತರರನ್ನು ಕುರಿತಾಗಲಿ ನಾನು ಪರುಷವಾಕ್ಯವನ್ನು ನುಡಿಯುವುದಿಲ್ಲ. ನನ್ನ ಜ್ಞಾತಿಗಳ ಮಾತಿಗೆ ಬದ್ಧನಾಗಿ, ಅವರಿಗೂ ಹಿತವಾದ ಮಾತುಗಳನ್ನೇ ಆಡುತ್ತ, ಅವರೊಡನೆ ಸೇರಿರುವೆನು. ನಾನು ಹೀಗೆ ನಡೆಯುವುದರಿಂದ ನನ್ನ ಮಕ್ಕಳಲ್ಲಿಯಾಗಲಿ, ಇತರರಲ್ಲಿಯಾಗಲಿ, ಭೇದಬುದ್ಧಿಯು ಹುಟ್ಟಲಾರದು. ಮುಖ್ಯವಾಗಿ ಆ ಭೇದಬುದ್ಧಿಯೇ ಕಲಹಕ್ಕೆಲ್ಲ ಮೂಲವು. ಆದುದರಿಂದ ಯುದ್ಧವನ್ನು ಆದಷ್ಟು ದೂರಮಾಡಿ, ಎಲ್ಲರಲ್ಲಿಯೂ ಪ್ರಿಯವನ್ನೇ ಆಚರಿಸುತ್ತ ಬಂದರೆ, ನಾನು ಈ ಲೋಕನಿಂದೆಯನ್ನು ತಪ್ಪಿಸಿಕೊಳ್ಳಬಹುದು. ಆದುದರಿಂದ ಆದಷ್ಟುಮಟ್ಟಿಗೆ ಯಾರನ್ನೂ ದ್ವೇಷಿಸದಂತೆ ಎಚ್ಚರದಿಂದ

ರುವೆನು" ಎಂದನು. ಈ ಮಾತನ್ನು ಕೇಳಿ ಭೀಮಾದಿಗಳು, ಅವನ ಹಿತದಲ್ಲಿಯೇ ಆಸಕ್ತರಾಗಿದುದರಿಂದ ಆ ಅಭಿಪ್ರಾಯಕ್ಕೆ ಸಮ್ಮತಿಸಿದರು. ಧರ್ಮರಾಜನು ತನ್ನ ಸಹೋದರರ ಮುಂದೆ ಹೀಗೆ ನಿರ್ಧಾರಣವನ್ನು ಮಾಡಿಕೊಂಡಮೇಲೆ, ತನ್ನ ದಿನಚರ್ಯೆಯಾದ ಪಿತೃತರ್ಪಣವನ್ನೂ, ದೇವಪೂಜೆಯನ್ನೂ ನಡೆಸಿದನು. ಆಮೇಲೆ, ಮಂಗಳಕಾರ್ಯಗಳನ್ನು ನಡೆಸಿ, ತನ್ನ ಸಹೋದರರೊಡನೆಯೂ, ಮಂತ್ರಿಗಳೊಡನೆಯೂ ಕೂಡಿ, ಯಾಗಶಾಲೆಯಿಂದ ಪುರಪ್ರವೇಶವನ್ನು ಮಾಡಿದನು. ದುರ್ಯೋಧನನೂ, ಶಕುನಿಯೂ ಆ ಧರ್ಮರಾಜನ ಸಭೆಯ ಅಂದವನ್ನೆಲ್ಲ ನೋಡುವುದಕ್ಕಾಗಿ ಅಲ್ಲಿಯೇ ಸ್ವಲ್ಪದಿನಗಳವರೆಗೆ ತಂಗಿ ನಿಂತರು.

ಇದು ಎಪ್ಪತ್ತುಮೂರನೆಯ ಅಧ್ಯಾಯವು.

ಮಯನಿರ್ಮಿತವಾದ ಧರ್ಮರಾಜನ ಸಭೆಯಲ್ಲಿ ದುರ್ಯೋಧನನು ನೆಲಕ್ಕೂ ಜಲಕ್ಕೂ ವ್ಯತ್ಯಾಸವನ್ನರಿಯದೆ, ಭ್ರಾಂತಿಯಿಂದ ತಡವರಿಸಿ ಬಿದ್ದಾಗ, ಭೀಮಾದಿಗಳು ಅದನ್ನು ನೋಡಿ ನಕ್ಕುದು. ಇದರಿಂದ ದುರ್ಯೋಧನನು ಚಿಂತಾಕುಲನಾಗಿ ಶಕುನಿಯೊಡನೆ ತನ್ನ ಸಂಕಟವನ್ನು ಹೇಳಿಕೊಂಡುದು.

ಓ ಜನಮೇಜಯರಾಜಾ! ಕೇಳು! ದುರ್ಯೋಧನನು ಶಕುನಿಯೊಡನೆ ಆ ಧರ್ಮರಾಜನ ನಗರದಲ್ಲಿಯೇ ತಂಗಿದ್ದು, ಆ ದಿವ್ಯ ಸಭೆಯ ಅಂದವನ್ನೆಲ್ಲ ನೋಡುತ್ತ ಬಂದನು. ಶಕುನಿಯೂ ಅವನ ಸಂಗಡಲೇ ಬರುತ್ತಿದ್ದನು. ಹಿಂದೆ ಯಾವಾಗಲೂ ದುರ್ಯೋಧನನು ಹಸ್ತಿನಾವತಿಯಲ್ಲಿ ಇಂತಹ ಶಿಲ್ಪಚಾತುರ್ಯಗಳನ್ನು ನೋಡಿದವನಲ್ಲ. ಹಿಂದೆ ಕಂಡು ಕೇಳಿಲ್ಲದ ಎಷ್ಟೋ ಚಮತ್ಕಾರಗಳು ಆ ಸಭೆಯಲ್ಲಿ ಕಾಣಿಸಿದುವು. ಅಲ್ಲಲ್ಲಿ ಆ ಸಭೆಯನ್ನು ಸುತ್ತಿ ನೋಡುತ್ತ ಬರುವಾಗ, ಸ್ಫಟಿಕದ ನೆಲೆಗಟ್ಟನ್ನು ಕಂಡು, ಅದನ್ನು ನೀರೆಂದು ಭ್ರಮಿಸಿ ತಾನು ಉಟ್ಟಿದ್ದ ಬಟ್ಟೆಯನ್ನು ಮೇಲಕ್ಕೆತ್ತಿ ಕಟ್ಟಿಕೊಂಡನು. ಅದು ಜಲವಲ್ಲವೆಂದು ತಿಳಿದಮೇಲೆ ತಾನು

ಮೋಸಹೋದುದಕ್ಕಾಗಿ ನಾಚಿಕೆಪಟ್ಟು, ಮುಖವನ್ನು ತಗ್ಗಿಸಿಕೊಂಡೇ ಮುಂದೆ ಹೋದನು. ಮತ್ತೊಂದು ಕಡೆಯಲ್ಲಿ ಹಳ್ಳತಿಟ್ಟುಗಳನ್ನು ತಿಳಿಯದೆ ತಬ್ಬಿಬ್ಬಾಗಿ ಕಾಲಿಟ್ಟು ತಡವರಿಸಿ ಕೆಳಕ್ಕೆ ಬಿದ್ದನು. ಇದರಿಂದ ಅವನಿಗೆ ಮತ್ತಷ್ಟು ಅವಮಾನವಾದಂತಾಯಿತು. ತನ್ನ ಸ್ಥಿತಿಗಾಗಿ ಕೊರಗಿ ನಿಟ್ಟುಸಿರನ್ನು ಬಿಡುತ್ತ, ತಲೆಯನ್ನು ತಗ್ಗಿಸಿಕೊಂಡು ಇನ್ನೂ ಮುಂದೆ ಹೋದನು. ಇನ್ನೊಂದು ಕಡೆಯಲ್ಲಿ ಸಟಿಕದಂತೆ ಶುದ್ಧವಾದ ನೀರಿನಿಂದಲೂ, ಸ್ಫಟಿಕದ ತಾವರೆಗಳಿಂದಲೂ ಮಾಡಿದ ಕೊಳವನ್ನು ಕಂಡು, ಅದು ನೆಲವೆಂದು ತಿಳಿದು, ಮುಂದೆ ಹೋಗಿ ಅದರಲ್ಲಿ ಉಟ್ಟಬಟ್ಟೆಯೊಡನೆ ಜಾರಿಬಿದ್ದನು. ಅವನ ಬಟ್ಟೆಯೆಲ್ಲವೂ ನೆನೆದುಹೋಯಿತು. ಹೀಗೆ ಕುರುಡನಂತೆ ಜಲದಲ್ಲಿ ಜಾರಿಬಿದ್ದ ದುರ್ಯೋಧನನ ಸ್ಥಿತಿಯನ್ನು ನೋಡಿ, ಭೀಮಸೇನನೂ ಅಲ್ಲಿದ್ದ ಎಲ್ಲಾ ಸೇವಕರೂ ಗೊಳ್ಳೆಂದು ನಕ್ಕುಬಿಟ್ಟರು. ಒಡನೆಯೇ ಧರ್ಮರಾಜಾಜ್ಞೆಯಿಂದ ಕಿಂಕರರು ಹೊಸಬಟ್ಟೆಗಳನ್ನು ತಂದು ದುರ್ಯೋಧನನಿಗೆ ಕೊಟ್ಟರು. ದುರ್ಯೋಧನನ ಈ ಅವಸ್ಥೆಯನ್ನು ನೋಡಿ ದೂರದಲ್ಲಿದ್ದ ಅರ್ಜುನನೂ, ನಕುಲಸಹದೇವರೂ ನಕ್ಕುಬಿಟ್ಟರು. ಇವರೆಲ್ಲರೂ ನಗುವುದನ್ನು ನೋಡಿ ದುರ್ಯೋಧನನಿಗೆ ಮನಸ್ಸಿನಲ್ಲಿ ಮತ್ತಷ್ಟು ಸಂಕಟವಾಯಿತು. ಅವರ ಪರಿಹಾಸವು ಇವನಿಗೆ ದುಸ್ಸಹವಾಯಿತು. ಆದರೆ ತನ್ನ ಅಭಿಪ್ರಾಯವು ಹೊರಬೀಳಬಾರದೆಂದು ದುರ್ಯೋಧನನು ತಲೆಯೆತ್ತಿ ಯಾರನ್ನೂ ನೋಡದೆ ಮುಂದೆ ಹೋದನು. ತಿರುಗಿ ಮತ್ತೊಂದು ಕಡೆಯಲ್ಲಿ ನೆಲವನ್ನು ನೋಡಿ ಜಲವೆಂದು ಭ್ರಮಿಸಿ ಬಟ್ಟೆಯನ್ನು ಮೇಲಕ್ಕೆತ್ತಿ ಕಟ್ಟದನು. ಆಗಲೂ ಅಲ್ಲಿದ್ದ ಜನರು ಇವನನ್ನು ನೋಡಿ ನಕ್ಕರು. ಸ್ಫಟಿಕದ ಕದಗಳಂತೆ ಮಾಡಿದ್ದ ಒಂದು ಗೋಡೆಯ ಬಳಿಗೆ ಹೋಗಿ, ಅದನ್ನು ಬಾಗಿಲೆಂದು ತಿಳಿದು, ಅದರೊಳಗೆ ಪ್ರವೇಶಿಸಲು ತಲೆಯಿಕ್ಕಿದನು. ಗೋಡೆಯು ತಲೆಗೆ ಬಡಿದು ಆ ಪೆಟ್ಟಿನಿಂದ ಅವನಿಗೆ ತಲೆತಿರುಗಿದಂತಾಗಿ ನಿಂತುಬಿಟ್ಟನು. ಮತ್ತೊಂದು ಕಡೆಯಲ್ಲಿ ದೊಡ್ಡ ಸ್ಫಟಿಕದ ಕದಗಳುಳ್ಳ ಬಾಗಿಲನ್ನು ನೋಡಿ, ಸುಲಭವಾಗಿ ತೆಗೆಯತಕ್ಕ ಆ ಕದಗಳನ್ನು ಕೈಗಳಿಂದ ಬಲವಾಗಿ ನೂಕಿದುದರಿಂದ, ಆ ಬಾಗಿಲೊಳಕ್ಕೆ ಮುಗ್ಗರಿಸಿ ಬಿದ್ದುಬಿಟ್ಟನು. ಹಾಗೆಯೇ ಮತ್ತೊಂದು ಕಡೆಯಲ್ಲಿ ತೆರೆದು



ಪುಟ ೨೯೦. ಮಯನಿರ್ಮಿತವಾದ ಧರ್ಮರಾಜನ ಸಭೆಯಲ್ಲಿ ದುರ್ಯೋಧನನು ನೆಲವೆಂದು ತಿಳಿದು ಜಲದಲ್ಲಿ ಜಾರಿಬಿದ್ದುದು. ಉಪ್ಪರಿಗೆಯ ಮೇಲಿದ್ದ ದ್ರೌಪದಿಯು ಅದನ್ನು ನೋಡುತಿದ್ದುದು.

ಬಿಟ್ಟಿದ್ದ ಒಂದು ಬಾಗಿಲನ್ನು ನೋಡಿ, ಅದೂ ಹಿಂದಿನಂತೆಯೇ ಗೋಡೆ ಯೆಂದು ತಿಳಿದು ಅಲ್ಲಿಂದ ಹಿಂತಿರುಗಿಬಿಟ್ಟನು.

ಓ ಜನಮೇಜಯರಾಜಾ! ಹೀಗೆ ದುರ್ಯೋಧನನು ಅಲ್ಲಲ್ಲಿ ಭ್ರಾಂತಿ ಯಿಂದ ನಿಜಸ್ಥಿತಿಯನ್ನು ತಿಳಿಯದೆ ಮೋಸಹೋಗಿ, ಅವಮಾನಪಟ್ಟು, ಅಲ್ಲಿ ನಿಲ್ಲುವುದಕ್ಕೆ ಇಷ್ಟವಿಲ್ಲದೆ ಪಾಂಡವರ ಅನುಮತಿಯನ್ನು ಕೇಳಿ ಕೊಂಡು ಹಸ್ತಿನಾವತಿಗೆ ಹೊರಟುಬಿಟ್ಟನು. ರಾಜಸೂಯಯಾಗದಲ್ಲಿ ಲೋಕಾಶ್ಚರ್ಯಕರವಾದ ಆ ಧರ್ಮರಾಜನ ಭಾಗ್ಯಸಮೃದ್ಧಿಯನ್ನು ನೋ ಡಿದುದೊಂದು, ತಾನು ಆ ಸಭೆಯಲ್ಲಿ ಸುತ್ತಿಬರುವಾಗ ತಡವರಿಸಿ ಬಿದ್ದು ಅಪಹಾಸ್ಯಕ್ಕೆ ಗುರಿಯಾದುದೊಂದು, ಇವೆರಡರಿಂದ ಆ ದುರ್ಯೋಧನನ ಮನಸ್ಸು ಬಹಳವಾಗಿ ನೊಂದುಹೋಯಿತು. ಪಾಂಡವರ ಭಾಗ್ಯವನ್ನು ನೋಡಿ ಅಸೂಯೆಯಿಂದ ಕುದಿಯುತ್ತ, ಅದೇ ಚಿಂತೆಯಿಂದ ಪ್ರಯಾಣ ಮಾಡಿ ಬರುತಿದ್ದಾಗ ಆ ದುರ್ಯೋಧನನ ಮನಸ್ಸಿನಲ್ಲಿ ಒಂದು ದುರಾಲೋ ಚನೆಯು ಹುಟ್ಟಿತು. ಪಾಂಡವರ ಮಹೋತ್ಸಾಹವನ್ನೂ, ರಾಜರೆಲ್ಲರೂ ಅವರಿಗೆ ವಶವರ್ತಿಗಳಾಗಿರುವುದನ್ನೂ, ಸಣ್ಣ ಮಕ್ಕಳು ಮೊದಲಾಗಿ ಸಕಲ ಪ್ರಜೆಗಳೂ ಆ ಪಾಂಡವರಲ್ಲಿ ಅನುರಕ್ತರಾಗಿರುವುದನ್ನೂ, ಆ ಪಾಂಡವರ ಮೇಲ್ಮೆಯನ್ನೂ ನೋಡಿ ಆ ದುರ್ಯೋಧನನಿಗೆ ಸಂಕಟದಿಂದ ಮುಖವು ಬಣ್ಣಗೆಟ್ಟಿತು. ಪ್ರಯಾಣಕಾಲದಲ್ಲಿ ಅವನು ಧರ್ಮರಾಜನ ಸಭೆಯ ಅಂದವನ್ನೂ, ಎಣೆಯಿಲ್ಲದ ಅವರ ಸಂಪತ್ತನ್ನೂ ನೆನೆಸಿಕೊಂಡು, ಮನಸ್ಸು ಕಲಗಿ ಮಾತಾಡದೆ ಕೇವಲಚಿಂತೆಯಲ್ಲಿದ್ದನು. ಶಕುನಿಯು ತನ್ನನ್ನು ಬಾರಿಬಾರಿಗೂ ನಿರ್ಬಂಧಿಸಿ ಕೇಳುತ್ತಿದ್ದರೂ, ಪ್ರತ್ಯುತ್ತರವನ್ನೇ ಕೊಡದಿ ದ್ದನು. ಆಗ ಶಕುನಿಯು ಅವನನ್ನು ಕುರಿತು "ದುರ್ಯೋಧನಾ! ಏನಿದು? ನಿನ್ನ ಅವಸ್ಥೆ? ಆಗಾಗ ಸಂಕಟದಿಂದ ನಿಟ್ಟುಸಿರುಬಿಡುವೆ! ಮಾತಾಡ ದಿರುವೆ. ಇದರ ಕಾಣವೇನು ಹೇಳು" ಎಂದನು. ಅದಕ್ಕಾ ದುರ್ಯೋ ಧನನು "ಮಾವಾ! ಹೇಳುವುದೇನಿದೆ? ಈ ಭೂಮಿಯೆಲ್ಲವೂ ಮಹಾತ್ಮ ನಾದ ಅರ್ಜುನನ ಅಸ್ತ್ರಪ್ರಭಾವದಿಂದ ಧರ್ಮರಾಜನಿಗೆ ಅಧೀನವಾಗಿಹೋ ಯಿತು. ಆ ಯುಧಿಷ್ಠಿರನ ಯಾಗವೈಭವವಾದರೋ ಅನಿರ್ವರ್ಣನೀಯ

ವಾದುದು! ದೇವತೆಗಳಲ್ಲಿ ಇಂದ್ರನು ಹೇಗೋ ಹಾಗೆ, ಯುಧಿಷ್ಠಿರನು ಈ ಭೂಮಿಯಲ್ಲಿ ಎಲ್ಲರಿಗಿಂತಲೂ ಮೇಲಾಗಿ ಮೆರೆಯುತ್ತಿರುವನು. ಅವನನ್ನು ನೋಡಿ ನನ್ನ ಮನಸ್ಸು ಸಹಿಸಲಾರದು. ಅವನ ಉನ್ನತಿಯನ್ನು ನೋಡಿ ಅಸೂಯೆಯಿಂದ ಹಗಲುರಾತ್ರಿಯೂ ನಾನು ಕೊರಗುತ್ತಿರುವೆನು. ಜ್ಯೇಷ್ಠಾಷಾಢಮಾಸಗಳಲ್ಲಿ ಸಣ್ಣ ಮಡುವು ಬತ್ತಿಹೋಗುವಂತೆ, ಆ ಸಂಕಟದಿಂದ ನನ್ನ ದೇಹವು ಶೋಷಿಸುತ್ತಿರುವುದು. ಕೃಷ್ಣನಿಂದ ಶಿಶುಪಾಲನು ಹತನಾದಾಗಲೂ ಅಲ್ಲಿ ಶಿಶುಪಾಲನಿಗೆ ಬೆಂಬಲವಾಗಿ ನಿಲ್ಲತಕ್ಕ ಧೀರನೊಬ್ಬನಾದರೂ ಇಲ್ಲದೆ ಹೋದನು. ಅಲ್ಲಿದ್ದ ರಾಜರು ಪಾಂಡವಪ್ರತಾಪಾಗ್ನಿಯಿಂದ ದಗ್ಧರಾಗಿ, ಆ ಸಂಕಟವನ್ನು ಸಹಿಸಿಕೊಂಡು ಸುಮ್ಮನಿದ್ದರು. ಅಂತಹ ಕಾರ್ಯವನ್ನು ಯಾವನು ತಾನೇ ನೋಡಿ ಸಹಿಸುವನು? ಅಂತಹ ಅನುಚಿತಕಾರ್ಯವನ್ನು ಕೃಷ್ಣನು ತನ್ನ ಸಭೆಯಲ್ಲಿ ನಡೆಸಿದನು. ಪಾಂಡವರ ಪರಾಕ್ರಮದಿಂದ ಅದೂ ಅವರಿಗೆ ದಕ್ಕಿಹೋಯಿತು. ವೈಶ್ಯರಂತೆ ಅನೇಕರಾಜರು ವಿವಿಧರತ್ನಗಳನ್ನು ಕಾಣಿಕೆಯಾಗಿ ತಂದು ಕಪ್ಪಗಳನ್ನು ಕಟ್ಟಿ ಕುಂತೀಪುತ್ರನಾದ ಆ ಧರ್ಮರಾಜನನ್ನು ಸೇವಿಸಿದರು. ಹೀಗೆ ಧರ್ಮರಾಜನಲ್ಲಿ ಉರಿಯುವ ಬೆಂಕಿಯಂತೆ ಜ್ವಲಿಸುವ ರಾಜತೇಜಸ್ಸನ್ನು ನೋಡಿ, ನನಗೆ ಅಂತಹ ಮೇಲ್ಮೆಯಿಲ್ಲದೆ ಹೋಯಿತೆಂದು ಅಸೂಯೆಯಿಂದ ತಪಿಸುತ್ತಿರುವೆನು. ಮಾವಾ! ಅವರ ಭಾಗ್ಯವನ್ನು ನೋಡಿ ನಾನೇನೋ ಸಹಿಸಲಾರೆನು. ಬೆಂಕಿಯಲ್ಲಿಯಾದರೂ ಬೀಳುವೆನು! ವಿಷವನ್ನಾದರೂ ಭಕ್ಷಿಸುವೆನು! ನೀರಿನಲ್ಲಿಯಾದರೂ ಬಿದ್ದು ಸಾಯುವೆನು. ಲೋಕದಲ್ಲಿ ಪೌರುಷವುಳ್ಳ ಯಾವ ಮನುಷ್ಯನು ತಾನೇ ತನ್ನ ಶತ್ರುಗಳ ಪುರೋವೃದ್ಧಿಯನ್ನೂ, ತನ್ನ ಕ್ಷೀಣತೆಯನ್ನೂ ನೋಡಿ ಸಹಿಸಬಲ್ಲನು? ಆ ಪಾಂಡವರ ಐಶ್ವರ್ಯವನ್ನು ನೋಡಿ ಸಹಿಸಿಕೊಂಡು ಬದುಕಿರುವ ನಾನು ಹೆಂಗಸೂ ಅಲ್ಲ! ಹೆಂಗಸಲ್ಲದವನೂ ಅಲ್ಲ! ಗಂಡಸೂ ಅಲ್ಲ! ಗಂಡಸಲ್ಲದೆಯೂ ಅಲ್ಲ! ನನ್ನ ಸ್ಥಿತಿಯು ಯಾವುದೂ ಇಲ್ಲದಂತಾಗಿದೆ. ಅಂತಹ ಸಾಮ್ರಾಜ್ಯಪದವಿ! ಆ ಐಶ್ವರ್ಯಸಮೃದ್ಧಿ! ಆ ಯಾಗವೈಭವಗಳು! ಇವನ್ನೆಲ್ಲ ಕಣ್ಣಾರೆ ನೋಡಿ ನನ್ನಂತವನು ಹೇಗೆ ತಾನೇ ಸಂಕಟಪಡದಿರುವನು? ನಾನು ಸಹಾಯವಿಲ್ಲದೆ ಏಕಾಕಿಯಾಗಿ

ಆ ಪಾಂಡವರ ರಾಜ್ಯಲಕ್ಷ್ಮಿಯನ್ನು ಕಿತ್ತುಕೊಳ್ಳುವುದೇನೋ ಸಾಧ್ಯವಲ್ಲ. ನನಗೆ ಸಹಾಯಕರಾರೆಂದೂ ತಿಳಿಯಲಿಲ್ಲ. ಆದುದರಿಂದ ಸಾಯುವುದೇ ಮೇಲೆಂದು ನಿರ್ಧರಿಸಿರುವೆನು. ಮಾವಾ! ದೈವವೇ ಪ್ರಬಲವೇಹೊರತು ಪೌರುಷವೇನೂ ಕೆಲಸಕ್ಕೆ ಬಾರದೆಂದೇ ನನಗೆ ತೋರಿದೆ. ಏಕೆಂದರೆ, ಆ ಪಾಂಡವರ ಐಶ್ವರ್ಯವು ಮೇಲೆಮೇಲೆ ಹೆಚ್ಚುತ್ತಿದೆ. ಯಾರಿಂದಲೂ ಅದನ್ನು ಅಳಿಸುವುದಕ್ಕೆ ಸಾಧ್ಯವಿಲ್ಲ. ಮೊದಲೇ ಅವರನ್ನು ನಾನು ಕೊಲ್ಲುವುದಕ್ಕೆ ಯತ್ನಿಸಿದೆನು. ಯಾವುದೂ ಫಲಕಾರಿಯಾಗಲಿಲ್ಲ. ಅವರು ಆ ವಿಪತ್ತುಗಳನ್ನೆಲ್ಲ ದಾಟಿ, ನೀರೊಳಗಿನ ತಾವರೆಯಂತೆ ವೃದ್ಧಿಹೊಂದುತ್ತಿರುವರು. ಆದುದರಿಂದ ದೈವಬಲವೇ ಬಲವು! ಪುರುಷಪ್ರಯತ್ನವು ನಿರರ್ಥಕವು. ಕೌರವರು ದಿನದಿನಕ್ಕೆ ಕ್ಷೀಣಿಸುತ್ತಿರುವರು. ಪಾಂಡವರು ಮೇಲೆಮೇಲೆ ವೃದ್ಧಿಹೊಂದುತ್ತಿರುವರು. ಕೃಷ್ಣನು ಅವರಲ್ಲಿ ಪ್ರೇಮವಿಟ್ಟು ಅವರ ಸಂಪತ್ತನ್ನು ವೃದ್ಧಿಗೊಳಿಸುತ್ತಿರುವನು. ಆ ಪಾಂಡವರ ಐಶ್ವರ್ಯವೂ, ಆ ಯಾಗಸಭೆಯೂ, ಅಲ್ಲಿ ಅವರ ಕಡೆಯ ಸೇವಕರು ನನ್ನ ವಿಷಯವಾಗಿ ಮಾಡಿದ ಪರಿಹಾಸಗಳೂ ಈಗಲೂ ಎದೆಗೆ ಬೆಂಕಿಯಿಟ್ಟಂತೆ ತಪಿಸುತ್ತಿರುವುವು. ಮಾವಾ! ನನಗಾಗಿ ನೀನೊಂದು ಸಹಾಯವನ್ನು ಮಾಡಬೇಕು. ಈಗಲೇ ನೀನು ಇಲ್ಲಿಂದ ನನ್ನ ತಂದೆಯ ಬಳಿಗೆ ಹೋಗಿ, ಈ ನನ್ನ ಸಂಕಟಗಳನ್ನೆಲ್ಲ ಅವನಿಗೆ ತಿಳಿಸಬೇಕು" ಎಂದನು.

ಇದು ಎಪ್ಪತ್ತುನಾಲ್ಕನೆಯ ಅಧ್ಯಾಯವು.

---

ಶಕುನಿಯು ಪಾಂಡವರನ್ನು ಪರಾಕ್ರಮದಿಂದ ಜಯಿಸುವುದು ತಮಗೆ ಸಾಧ್ಯವಿಲ್ಲವೆಂದು ಹೇಳಿ, ತಾನು ದ್ಯೂತದಿಂದಲೇ ಅವರನ್ನು ಜಯಿಸುವುದಾಗಿ ದುರ್ಯೋಧನನಿಗೆ ಸಮಾಧಾನ ಹೇಳಿದುದು.

ಆಗ ಶಕುನಿಯು ದುರ್ಯೋಧನನನ್ನು ಕುರಿತು "ಮಿತ್ರ ದುರ್ಯೋಧನಾ! ಧರ್ಮರಾಜನ ವಿಷಯವಾಗಿ ಅಸೂಯೆಯಿಂದ ಕೊರಗಿ ಪ್ರಯೋಜನವಿಲ್ಲ. ಅವರ ಅದೃಷ್ಟದಲ್ಲಿದ್ದುದನ್ನು ಅವರು ಅನುಭವಿಸುತ್ತಿರುವರು.

ಹಿಂದೆ ನೀನು ಏನೇನೋ ಉಪಾಯಗಳಿಂದ ಅವರನ್ನು ಕೆಡಿಸಬೇಕೆಂದು ಯತ್ನಿಸಿದೆ. ಆದರೇನು? ಅವರನ್ನು ಕೆಡಿಸುವುದಕ್ಕೆ ನಿನ್ನಿಂದ ಸಾಧ್ಯ ವಾಯಿತೇ? ನೀನು ಬಾರಿಬಾರಿಗೂ ಅವರಿಗೆ ಏನೇನೋ ಪ್ರಯತ್ನದಿಂದ ವಿಧವಿಧವಾದ ವಿಪತ್ತುಗಳನ್ನು ತಂದೊಡ್ಡಿದರೂ, ಅವರು ತಮ್ಮ ಅದೃಷ್ಟ ದಿಂದ ಆ ವಿಪತ್ತುಗಳನ್ನೆಲ್ಲ ತಪ್ಪಿಸಿಕೊಂಡರು. ಹಾಗಿದ್ದರೂ ಉತ್ಸಾಹ ವುಳ್ಳ ಪುರುಷರು ತಮ್ಮ ಪ್ರಯತ್ನದಲ್ಲಿ ಹಿಂಜರಿಯಲಾರರು. ರಾಜಾ! ಆ ಪಾಂಡವರ ಅದೃಷ್ಟವನ್ನು ನೋಡು. ಎಂತಹ ರಾಜರಿಗೂ ದುರ್ಲಭೆ ಯಾದ ದ್ರೌಪದಿಯು ಅವರಿಗೆ ಲಭಿಸಿದಳು. ದ್ರುಪದನೂ, ಅವನ ಮಕ್ಕ ಳೂ, ದಿವ್ಯಶಕ್ತಿಯುಳ್ಳ ಕೃಷ್ಣನೂ, ಇನ್ನೂ ಅನೇಕರಾಜರೂ ಅವರ ಸಹಾಯಕ್ಕೆ ಒದಗಿರುವರು. ಅವರು ಮತ್ತೊಬ್ಬರ ಪ್ರಯೋಜನಕ್ಕೆ ಭಂಗ ವನ್ನು ತಾರದೆ ತಮ್ಮ ತಂದೆಯ ಭಾಗವನ್ನು ಮಾತ್ರ ಪಡೆದಿದ್ದರೂ, ಅದು ಅವರ ಸ್ವಶಕ್ತಿಯಿಂದ ಮೇಲೆಮೇಲೆ ಅಭಿವೃದ್ಧಿಯನ್ನು ಹೊಂದಿತು. ಇದ ಕ್ಕಾಗಿ ನೀನು ಕೊರಗಿದರೆ ಫಲವೇನು? ಆ ಧನಂಜಯನು ಅಗ್ನಿಯನ್ನು ತೃಪ್ತಿಗೊಳಿಸಿದನು. ಅದರಿಂದ ಅವನಿಗೆ ಗಾಂಡೀವವೆಂಬ ದಿವ್ಯಧನು ಸ್ಸೂ, ಅಕ್ಷಯಬಾಣಗಳುಳ್ಳ ಬತ್ತಳಿಕೆಗಳೂ, ದಿವ್ಯಾಸ್ತ್ರಗಳೂ ಲಭಿಸಿದುವು. ಅವುಗಳ ಪ್ರಭಾವದಿಂದಲೂ, ತನ್ನ ಬಾಹುಬಲದಿಂದಲೂ, ಅವನು ರಾಜ ರನ್ನೆಲ್ಲ ವಶಮಾಡಿಕೊಂಡನು. ಅದಕ್ಕಾಗಿ ನಿನಗೆ ವ್ಯಥೆಯೇಕೆ? ಮತ್ತು ಆಗ ಧನಂಜಯನು ಖಾಂಡವವನದಹನಕಾಲದಲ್ಲಿ ಮಯನನ್ನು ಅಗ್ನಿ ಭಯದಿಂದ ತಪ್ಪಿಸಿ ಆ ಸಭೆಯನ್ನು ಮಾಡಿಸಿಕೊಂಡನು. ಆ ಮಯನ ಕೈಕೆಳಗಿನ ಕಿಂಕರರೆಂಬ ರಾಕ್ಷಸರು ಆ ಸಭೆಯನ್ನು ರಕ್ಷಿಸುತ್ತಿರುವರು. ಅದಕ್ಕಾಗಿ ನೀನು ಚಿಂತಿಸಿ ಫಲವೇನು? ರಾಜಾ! ನಿನಗೆ ಯಾರೂ ಸಹಾ ಯವಿಲ್ಲವೆಂದು ಹೇಳಿದೆ. ಅದು ಮಾತ್ರ ಸುಳ್ಳು! ನಿನ್ನ ಸಹೋದರರಿರು ವರು! ಮಹಾಧನುರ್ಧಾರಿಗಳಾದ ದ್ರೋಣಾಶ್ವತ್ಥಾಮರಿರುವರು! ಮಹಾ ರಥನಾದ ಕರ್ಣನಿರುವನು! ಇವರೆಲ್ಲರೂ ನಿನಗೆ ವಶರಾಗಿರುವರು. ಆ ಕರ್ಣ ನೊಬ್ಬನೇ ಪಾಂಡವರನ್ನೂ, ಸೋಮಕರನ್ನೂ, ಯುದ್ಧದಲ್ಲಿ ಸೋಲಿಸಬಲ್ಲ ನು. ಹೀಗಿರುವಾಗ ನಿನಗೆ ಬೇರೆ ಸಹಾಯವೇನು ಬೇಕಾಗಿದೆ? ಇದಲ್ಲದೆ, ಪುರುಷಶ್ರೇಷ್ಠನಾದ ಭೀಷ್ಮನು, ಮಹಾರಥನಾದ ಕೃಪನು, ಬಲಾಢ್ಯನಾದ

ಜಯದ್ರಥನು, ಸೋಮದತ್ತನು, ಅವನ ಮಗನು, ನಾನು, ನನ್ನ ಸಹೋದರರು, ಇಷ್ಟುಮಂದಿಯಿರುವಾಗ ನೀನು ಯಾವ ರಾಜ್ಯವನ್ನು ಜಯಿಸಬಾರದು?'' ಎಂದನು.

ಅದಕ್ಕಾ ದುರ್ಯೋಧನನು, "ಮಾವಾ! ನೀನು ಸಮ್ಮತಿಸುವುದಾದರೆ, ಈಗಲೇ ನಾವೆಲ್ಲರೂ ಸೇರಿಕೊಂಡು, ಆ ಪಾಂಡವರನ್ನು ಯುದ್ಧದಲ್ಲಿ ಜಯಿಸುವುದಕ್ಕೆ ಪ್ರಯತ್ನಿಸುವೆವು. ಈಗಲೇ ಅವರನ್ನು ಜಯಿಸಿಬಿಟ್ಟರೆ, ಸಮಸ್ತಭೂಮಿಯೂ, ರಾಜರೂ, ಬೆಲೆಯುಳ್ಳ ಆ ಸಭೆಯೂ ನಮ್ಮ ವಶವಾಗುವುದಲ್ಲವೇ?'' ಎಂದನು. ಅದಕ್ಕಾ ಶಕುನಿಯು ತಿರುಗಿ ದುರ್ಯೋಧನನನ್ನು ಕುರಿತು, "ದುರ್ಯೋಧನಾ! ಆ ಭ್ರಾಂತಿಯನ್ನು ಬಿಟ್ಟುಬಿಡು. ಕೃಷ್ಣನೂ, ಭೀಮಸೇನನೂ, ಯುಧಿಷ್ಠಿರನೂ, ಅವನ ಮಕ್ಕಳೂ ಮಹಾವೀರರು. ಅವರನ್ನು ಯುದ್ಧದಲ್ಲಿ ಗೆಲ್ಲಬೇಕೆಂದರೆ ದೇವತೆಗಳಿಗೂ ಸಾಧ್ಯವಿಲ್ಲ. ಎಲ್ಲರೂ ಮಹಾರಥರು! ಅಸ್ತ್ರವಿಶಾರದರು! ಯುದ್ಧನಿಪುಣರು! ಆದುದರಿಂದ ಯುದ್ಧವನ್ನು ಬಿಟ್ಟು ಬೇರೆ ವಿಧದಿಂದ ಆ ಯುಧಿಷ್ಠಿರನನ್ನು ಜಯಿಸುವ ಉಪಾಯವನ್ನು ನಾನು ತಿಳಿಸುವೆನು. ನೀನು ಅದರಂತೆ ನಡೆಸುವೆಯಾ?'' ಎಂದನು. ಅದಕ್ಕಾ ದುರ್ಯೋಧನನು, "ಮಾವಾ! ನಮ್ಮ ಕಡೆಯ ಬಂಧುಮಿತ್ರರೊಬ್ಬರಿಗೂ ಅಪಾಯವಿಲ್ಲದಂತೆ ಪಾಂಡವರನ್ನು ಗೆಲ್ಲತಕ್ಕ ಬೇರೆ ಉಪಾಯವಿದ್ದರೆ ತಿಳಿಸು ಒಡನೆಯೇ. ಹಾಗೆ ನಡೆಸುವೆನು'' ಎಂದನು. ಆಗ ಶಕುನಿಯು "ದುರ್ಯೋಧನಾ! ಧರ್ಮರಾಜನಿಗೆ ಜೂಜಾಡುವುದರಲ್ಲಿ ಆಸೆಯು ಹೆಚ್ಚು. ಆದರೆ, ಆಡುವುದಕ್ಕೆಮಾತ್ರ ಅವನಿಗೆ ತಿಳಿಯದು. ನಾವು ಜೂಜಾಟಕ್ಕೆ ಕರೆದರೆ, ಅವನು ಬಾರದಿರನು. ನಾನೋ ಜೂಜಾಟದಲ್ಲಿ ಬಹಳ ನೈಪುಣ್ಯವುಳ್ಳವನು. ಆ ಆಟದಲ್ಲಿ ನನಗೆ ಸಮಾನನು ಈ ಭೂಮಿಯಲ್ಲಿ, ಕಡೆಗೆ ಮೂರುಲೋಕದಲ್ಲಿಯೇ ಇಲ್ಲವೆಂದು ತಿಳಿ. ನೀನು ಅವನನ್ನು ಜೂಜಾಟಕ್ಕೆ ಕರೆಯಿಸು. ದಾಳವನ್ನೆಸೆಯುವುದರಲ್ಲಿ ಸಮರ್ಥನಾದ ನಾನು ಅವನ ರಾಜ್ಯವನ್ನೂ, ಐಶ್ವರ್ಯವನ್ನೂ ಆ ಜೂಜಿನ ಮೂಲಕವಾಗಿಯೇ ಅಪಹರಿಸಿ ನಿನ್ನ ವಶಮಾಡುವೆನು. ದುರ್ಯೋಧನಾ! ಆದರೆ, ಮೊದಲು ನೀನು ಈ ವಿಚಾರವನ್ನು

ನಿನ್ನ ತಂದೆಗೆ ತಿಳಿಸಿ, ಅವನ ಸಮ್ಮತಿಯನ್ನು ತೆಗೆದುಕೊಂಡುಬಿಟ್ಟರೆ, ನಾವು ನಿರ್ಭಯವಾಗಿ ಆ ಕಾರ್ಯವನ್ನು ಮಾಡಬಹುದು" ಎಂದನು. ಅದಕ್ಕಾ ದುರ್ಯೋಧನನು "ಮಾವಾ! ಈ ವಿಚಾರವನ್ನು ನಾನು ನನ್ನ ತಂದೆಯಮುಂದೆ ಹೇಳಲಾರೆನು. ನೀನೇ ಯುಕ್ತಿಯಿಂದ ಅವನಿಗೆ ತಿಳಿಸಿ ಅವನನ್ನೊಪ್ಪಿಸಬೇಕು" ಎಂದನು.

ಇದು ಎಪ್ಪತ್ತೈದನೆಯ ಅಧ್ಯಾಯವು.

{ ಶಕುನಿದುರ್ಯೋಧನರಿಬ್ಬರೂ, ಧೃತರಾಷ್ಟ್ರನಿಗೆ ಜೂಜಾಟದ ಉದ್ದೇಶಗಳನ್ನು ತಿಳಿಸಲು, ಧೃತರಾಷ್ಟ್ರನು ಅದಕ್ಕೆ ಸಮ್ಮತಿಸಿದುದು. }

ಓ ಜನಮೇಜಯರಾಜಾ! ಕೇವಲ ದುರ್ಬುದ್ಧಿಯುಳ್ಳ ಶಕುನಿಯು, ಯುಧಿಷ್ಠಿರನ ಯಾಗವೈಭವಗಳನ್ನು ನೋಡಿಬಂದುದು ಮೊದಲು, ದುರ್ಯೋಧನನಿಗೆ ದುರಾಲೋಚನೆಗಳನ್ನೇ ಹೇಳುತ್ತಿದ್ದನು. ಕೇವಲ ಪಾಪಬುದ್ಧಿಯುಳ್ಳ ಆ ದುಷ್ಟನು, ದುರ್ಯೋಧನನ ಮನಸ್ಸಿಗೊಪ್ಪುವಂತೆಯೇ ಮಾತನಾಡುತ್ತ, ಅವನ ಮನೋವ್ಯಥೆಯನ್ನು ನೀಗಿಸುವ ನೆವದಿಂದ ಭರತವಂಶವನ್ನೇ ನಾಶಮಾಡುವ ಮಾರ್ಗವನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಡನು. ಶಕುನಿ ದುರ್ಯೋಧನರಿಬ್ಬರೂ ಹಸ್ತಿನಾವತಿಗೆ ಬಂದಮೇಲೆ, ಶಕುನಿಯು, ಧೃತರಾಷ್ಟ್ರಮಹಾರಾಜನು ಸುಖಾಸೀನನಾಗಿ ಕುಳಿತಿದ್ದಾಗ ಮೆಲ್ಲಗೆ ಅವನ ಬಳಿಗೆ ಬಂದನು. ಅಲ್ಲಿ ಕುರುಡನಾಗಿ ಕುಳಿತಿದ್ದ ಧೃತರಾಷ್ಟ್ರನನ್ನು ಕುರಿತು "ಮಹಾರಾಜಾ! ನಿನ್ನ ಹಿರಿಯ ಮಗನಾದ ದುರ್ಯೋಧನನು ಬಹಳ ವ್ಯಸನದಿಂದ ಕೊರಗಿ, ಬಣ್ಣಗೆಟ್ಟು, ದಿನದಿನಕ್ಕೆ ಕ್ಷೀಣಿಸುತ್ತಿರುವನು. ಅವನಿಗೆ ದುಸ್ಸಹವಾದ ದುಃಖವು ಪ್ರಾಪ್ತವಾಗಿದೆ. ಈ ಸಮಯದಲ್ಲಿ ನೀನು ನಿರ್ವಿಚಾರವಾಗಿ ಕುಳಿತಿರುವುದು ಸರಿಯೇ?" ಎಂದನು. ಒಡನೆಯೇ ಧೃತರಾಷ್ಟ್ರನ ಹೃದಯವು ನಡುಗಿತು. ಆಕ್ಷಣವೇ ದುರ್ಯೋಧನನನ್ನು ಕರೆಸಿಕೊಂಡು "ಓ ಪ್ರಿಯಕುಮಾರಾ! ದುರ್ಯೋಧನಾ!

ನಿನ್ನ ದುಃಖಕಾರಣವೇನು ತಿಳಿಸು. ಅದರಲ್ಲಿ ರಹಸ್ಯವೇನೂ ಇಲ್ಲವಷ್ಟೆ? ಏನೋ ಮಹಾವ್ಯಸನದಿಂದ, ಕೊರಗಿ ನೀನು ಬಣ್ಣಗೆಟ್ಟು ದಿನದಿನಕ್ಕೆ ಕೃಶವಾಗುತ್ತಿರುವೆಯೆಂದು ನಿನ್ನ ಮಾವನು ಹೇಳುತ್ತಿರುವನು. ಎಷ್ಟೆಷ್ಟು ಯೋಚಿಸಿದರೂ ನಿನ್ನ ದುಃಖಕ್ಕೆ ಕಾರಣವೇನೆಂದು ನನಗೆ ತಿಳಿಯಲಿಲ್ಲ. ನಿನಗೆ ಬೇಕಾದಷ್ಟು ಐಶ್ವರ್ಯವಿರುವುದು! ನಿನ್ನ ಮಿತ್ರರಾದ ಸಹೋದರರೆಲ್ಲರೂ ನಿನಗೆ ಅಪ್ರಿಯವಾದ ಮಾರ್ಗಕ್ಕೆ ಹೋಗದೆ, ನಿನ್ನ ಆಜ್ಞಾಧೀನರಾಗಿರುವರು. ನೀನು ನಿನ್ನ ಮನಸ್ಸಿಗೆ ಬೇಕಾದುದನ್ನೆಲ್ಲ ಉಣುತ್ತಿರುವೆ. ಉಡುತ್ತಿರುವೆ. ಒಳ್ಳೇ ಮಾಂಸಯುಕ್ತವಾದ ಅನ್ನವನ್ನು ತಿನ್ನುತ್ತಿರುವೆ. ಉತ್ತಮಾಶ್ವಗಳನ್ನೇರಿ ವಿಹರಿಸುತ್ತಿರುವೆ. ನಿನಗೆ ಯಾವ ಭೋಗಗಳಲ್ಲಿ ತಾನೇ ಕೊರತೆಯುಂಟು? ಉತ್ತಮವಾದ ಹಾಸಿಗೆಗಳು, ರೂಪವತಿಯರಾದ ಸ್ತ್ರೀಯರು, ಒಳ್ಳೇ ಅನುಕೂಲವಾದ ಉಪ್ಪರಿಗೆಯ ಮನೆಗಳು, ವಿಹಾರಸ್ಥಾನಗಳು, ಇವೆಲ್ಲಾ ನಿನಗೆ ಅಧೀನವಾಗಿರುವುವು. ದೇವತೆಗಳಂತೆ ನೀನು ಭೋಗಗಳನ್ನೆಲ್ಲ ಅನುಭವಿಸುತ್ತಿರುವೆ. ಲೋಕವೆಲ್ಲ ನಿನ್ನ ಮಾತಿಗೆ ಕಟ್ಟುಪಟ್ಟಿರುವುದು. ನಿನ್ನನ್ನು ಯಾರೂ ಗೆಲ್ಲಲಾರರು. ಇಂತಹ ನೀನು ಕೇವಲದೀನನಂತೆ ದುಃಖಿಸುವುದೇಕೆ? ತಂದೆತಾಯಿಗಳು ತಮ್ಮ ಮಗನಿಗೆ ಮಾಡಬೇಕಾದ ಉತ್ತಮ ಸೌಕರ್ಯಗಳೇನುಂಟೋ, ಅವನ್ನೆಲ್ಲ ನೀನು ನಮ್ಮಿಂದ ಪಡೆದಿರುವೆ. ಕೌರವ ಕುಲದ ಎಣೆಯಿಲ್ಲದ ರಾಜ್ಯಲಕ್ಷ್ಮಿಯೇ ನಿನ್ನ ವಶವಾಗಿದೆ. ದೇವಲೋಕದಲ್ಲಿ ದೇವೇಂದ್ರನು ಹೇಗೋಹಾಗೆ ನೀನು ಬೇಕುಬೇಕಾದ ಭಕ್ಷ್ಯಭೋಜ್ಯಪಾನೀಯಗಳೇ ಮೊದಲಾಗಿ ಎಲ್ಲಾ ಕೋರಿಕೆಗಳನ್ನು ಅನುಭವಿಸುತ್ತಿರುವೆ. ಹೀಗಿರುವಾಗ ನಿನ್ನ ವ್ಯಸನಕ್ಕೆ ಕಾರಣವೇನಿದೆ? ಷಡಂಗಗಳೊಡನೆ ವೇದಗಳನ್ನೂ, ಸ್ವರಾದಿ ದಶಲಕ್ಷಣಗಳಿಂದ ಕೂಡಿದ ವ್ಯಾಕರಣವನ್ನೂ, ಎಲ್ಲಾ ಅಸ್ತ್ರವಿದ್ಯೆಗಳನ್ನೂ ನೀನು ಕೃಪಾಚಾರ್ಯರಲ್ಲಿ ಅಭ್ಯಸಿಸಿರುವೆ. ಬಲರಾಮನಲ್ಲಿಯೂ, ದ್ರೋಣನಲ್ಲಿಯೂ ಅನೇಕಾಸ್ತ್ರಗಳನ್ನು ತಿಳಿದಿರುವೆ. ನಿನ್ನ ಸಹೋದರರಲ್ಲಿ ನೀನೇ ಜ್ಯೇಷ್ಠನು. ರಾಜ್ಯಾಧಿಕಾರದಲ್ಲಿರತಕ್ಕವನು! ಹಗಲೂ, ರಾತ್ರಿಯೂ, ನಿನ್ನನ್ನು ಸೂತಮಾಗಧರು ಹೊಗಳುತ್ತಿರುವರು. ನೀನು ಎಲ್ಲವನ್ನೂ ತಿಳಿದ ವಿವೇಕಿಯೂ ಆಗಿರುವೆ. ಇಂತಹ ಪದವಿಯಲ್ಲಿದ್ದು

ಸಮಸ್ತ ರಾಜಭೋಗಗಳನ್ನೂ ಅನುಭವಿಸುವ ನಿನಗೆ ವ್ಯಸನಕಾರಣವೇನಿದೆ? ಮತ್ತೊಬ್ಬರ ಮೇಲ್ಮೆಯನ್ನು ನೋಡಿ ವ್ಯಸನಪಡುವುದೂ ವಿವೇಕಿಯಾದ ನಿನಗೆ ತರವಲ್ಲ. ನಿಜವಾದ ಕಾರಣವೇನು ಹೇಳು" ಎಂದನು. ಆಗ ಅಲ್ಪಬುದ್ಧಿಯುಳ್ಳ ದುರ್ಯೋಧನನು ತಂದೆಯನ್ನು ನೋಡಿ ತನ್ನ ಕೆಟ್ಟ ಹೃದಯವನ್ನು ಹೊರಪಡಿಸುತ್ತ "ಜನಕಾ! ನೀನು ಹೇಳಿದುದೆಲ್ಲವೂ ವಾಸ್ತವವೇ! ನಾನು ಬೇಕಾದ ಬಟ್ಟೆಗಳನ್ನು ಕಟ್ಟುವೆನು! ಬೇಕಾದಹಾಗೆ ತಿನ್ನುವೆನು! ಕೇವಲ ಅಲ್ಪಮನುಷ್ಯನಂತೆ ನಾನು ಹೊಟ್ಟೆಹೊರೆಯುವುದಕ್ಕಾಗಿ ಎಷ್ಟೆಷ್ಟು ಉಂಡರೇನು? ಉಟ್ಟರೇನು? ನಮ್ಮ ಕೆಟ್ಟಕಾಲವನ್ನು ದಾಟುವ ನಿರೀಕ್ಷಣೆಯಿಂದ, ಅತಿ ದುಸ್ಸಹವಾದ ಸಂಕಟವನ್ನು ನಾನು ಸಹಿಸಿಕೊಂಡಿರುವೆನು. ಲೋಕದಲ್ಲಿ ಯಾವ ರಾಜನು ತನ್ನ ರಾಜಾಂಗಗಳು ಪರರ ಕೈವಶವಾದುದನ್ನು ಸಹಿಸದೆ ಶತ್ರುವನ್ನು ನಿಗ್ರಹಿಸಿ, ಆ ವಿರೋಧಿಗಳಿಂದ ತನಗುಂಟಾದ ವ್ಯಸನವನ್ನು ನೀಗಿಸಬಲ್ಲನೋ ಅಂತವನೇ ಪುರುಷನೆನಿಸುವನು. ಹಾಗಿಲ್ಲದೆ ತನಗಿದ್ದುದೇ ಸಾಕೆಂದು ತೃಪ್ತನಾಗಿರುವುದೂ, ದಯೆ, ಭೀತಿ, ಎಂಬಿವುಗಳೂ ಮನುಷ್ಯನ ಐಶ್ವರ್ಯವನ್ನೂ, ಗೌರವವನ್ನೂ ಕೆಡಿಸುವುವು. ಅಂತವರು ಎಂದಿಗೂ ಮುಂದಕ್ಕೆ ಬರಲಾರರು. ಆ ಯುಧಿಷ್ಠಿರನಲ್ಲಿ ರಾಜ್ಯಲಕ್ಷ್ಮಿಯೂ, ಸಂಪತ್ತೂ, ಮೇಲೆಮೇಲೆ ಪ್ರಕಾಶಹೊಂದಿದಷ್ಟೂ, ಅದು ನನ್ನ ತೇಜಸ್ಸನ್ನು ಕಂದಿಸಿ ಬಣ್ಣಗೆಡಿಸುವುದು. ಆ ಐಶ್ವರ್ಯವನ್ನು ನೋಡಿ ನಾನು ಸಹಿಸಲಾರೆನು. ನಾನು ತಿಂದುದೂ ನನ್ನ ಮೈಗೆ ಅಂಟುವುದಿಲ್ಲ. ನಾನು ಅನುಭವಿಸುವ ಭೋಗಗಳೂ ನನಗೆ ತೃಪ್ತಿಕರವಾಗಿಲ್ಲ. ನನ್ನ ವೈರಿಗಳಾದ ಆ ಪಾಂಡವರ ಪುರೋವೃದ್ಧಿಯನ್ನೂ, ನನ್ನ ಕ್ಷೀಣದಶೆಯನ್ನೂ ನೋಡಿ ನನಗೆ, ಅದನ್ನು ಕಾಣದೆ ದೂರದಲ್ಲಿದ್ದಾಗಲೂ, ಅದು ಸದಾ ನನ್ನ ಕಣ್ಣಿನಲ್ಲಿಯೇ ಕಟ್ಟಿದಂತಿದೆ. ಆದುದರಿಂದಲೇ ನಾನು ದಿನದಿನಕ್ಕೆ ಕಂದಿ, ಕುಂದಿ, ಕೃಶನಾಗಿ ಬಣ್ಣಗೆಡುತ್ತಿರುವೆನು. ಅಯ್ಯೋ! ಆ ಧರ್ಮರಾಜನ ಮೇಲ್ಮೆಯನ್ನು ನೆನೆಸಿಕೊಂಡರೆ, ನನ್ನ ಹೊಟ್ಟೆಯು ಉರಿಯುವುದಲ್ಲ! ನಾನು ಹೇಗೆತಾನೇ ಸಹಿಸಲಿ! ಆ ಯುಧಿಷ್ಠಿರನ ಯಾಗಕ್ಕೆ ಬಂದಿದ್ದ ಸ್ನಾತಕರೂ, ಗೃಹಸ್ಥರೂ ಒಬ್ಬರಿಬ್ಬರೆ? ಎಂಭತ್ತೊಂಭತ್ತು ಸಾವಿರಮಂದಿಯಿದ್ದರು. ಅವರಲ್ಲಿ ಒಬ್ಬೊಬ್ಬರಿಗೂ

ಮೂವತ್ತು ಮಂದಿಯಂತೆ ಪರಿಚಾರಕರು. ಇವರನ್ನೆಲ್ಲ ಯುಧಿಷ್ಠಿರನು ಪೋಷಿಸುತ್ತಿರುವನು. ಅವನ ಗೃಹದಲ್ಲಿ ಜಿತೇಂದ್ರಿಯರಾದ ಹತ್ತು ಸಾವಿರಮಂದಿ ಯತಿಗಳಿದ್ದರು. ಅವರೆಲ್ಲರೂ ಚಿನ್ನದ ಪಾತ್ರೆಗಳಲ್ಲಿಯೇ ಭುಜಿಸುತಿದ್ದರು. ಕಾಂಭೋಜರಾಜನು ಆ ಯುಧಿಷ್ಠಿರನಿಗೆ ಕಪ್ಪು, ಕೆಂಪು, ನೀಲ ಮುಂತಾದ ವಿವಿಧವರ್ಣಗಳುಳ್ಳ ಕದಳೀಮೃಗಗಳೆಂಬ ಜಿಂಕೆಗಳ ಚರ್ಮಗಳನ್ನೂ, ಬೆಲೆಯುಳ್ಳ ಶಾಲುವೆಗಳನ್ನೂ ಕಳುಹಿಸಿಕೊಟ್ಟುದನ್ನು ನಾನು ಕಣ್ಣಾರೆ ಕಂಡೆನು. ಇನ್ನೂ ಅನೇಕರಾಜರು ಸಾವಿರಾರು ಸಂಖ್ಯೆಯಿಂದ, ಹೆಣ್ಣಾನೆಗಳನ್ನೂ, ಗೋವುಗಳನ್ನೂ, ಕುದುರೆಗಳನ್ನೂ ಅವನಿಗೆ ತಂದೊಪ್ಪಿಸಿದರು. ಒಬ್ಬನು ಮುನ್ನೂರುಒಂಟೆಗಳನ್ನು ಕಳುಹಿಸಿದನು. ಮತ್ತೊಬ್ಬನು ಎಷ್ಟೋ ನೂರು ಹೆಣ್ಣುಕುದುರೆಗಳನ್ನು ತಂದೊಪ್ಪಿಸಿದನು. ಹೀಗೆ ಅನೇಕರಾಜಕುಮಾರರು, ಇವುಗಳನ್ನೆಲ್ಲ ಯುಧಿಷ್ಠಿರನಿಗೆ ಕಾಣಿಕೆಗಳನ್ನಾಗಿ ತೆಗೆದುಕೊಂಡು, ಆ ಧರ್ಮರಾಜನ ಮನೆಯ ಬಾಗಿಲಲ್ಲಿ ಗುಂಪುಗುಂಪಾಗಿ ಕಾದಿರುವುದನ್ನು ಕಂಡೆನು. ಇನ್ನೂ ಅನೇಕ ರಾಜರು, ನಾನಾಬಗೆಯ ರತ್ನರಾಶಿಗಳನ್ನು ಆ ಯುಧಿಷ್ಠಿರನಿಗಾಗಿ ತಂದರು. ಆ ಯಜ್ಞದಲ್ಲಿ ಧರ್ಮರಾಜನಿಗೆ ಬಂದಷ್ಟು ಧನಸಂಪಾದನೆಯು ಇದುವರೆಗೆ ಹಿಂದೆ ಯಾರಿಗಾದರೂ ಬಂದುದನ್ನು ನಾನು ಕಂಡುದೂ ಇಲ್ಲ! ಕೇಳಿದುದೂ ಇಲ್ಲ. ಅಪ್ಪಾ! ಒಂದುವೇಳೆ ನಿನಗೆ ನನ್ನ ಮಾತುಗಳು ಸುಳ್ಳೆಂದು ತೋರಿದರೆ, ಸಂಜಯನನ್ನು ಕೇಳು. ನನ್ನ ಶತ್ರುವಾದ ಆ ಯುಧಿಷ್ಠಿರನಿಗೆ ಅಷ್ಟೊಂದು ಮಂದಿ ರಾಜರು, ಅಷ್ಟು ಧನರಾಶಿಯನ್ನು ತಂದೊಪ್ಪಿಸಿದರಲ್ಲವೆ? ಅದನ್ನೆಲ್ಲ ನಾನು ಕಣ್ಣಾರೆ ನೋಡಿ ಹೇಗೆ ತಾನೇ ಸಹಿಸಲಿ! ಬ್ರಾಹ್ಮಣರು, ಒಳ್ಳೇ ಭೂಸ್ಥಿತಿಯುಳ್ಳವರು, ಪಶುಸಮೃದ್ಧಿಯುಳ್ಳವರು, ಇವರೆಲ್ಲರೂ ನೂರಾರುಮಂದಿ ಗುಂಪುಗುಂಪಾಗಿ, ಮೂರು ಸಹಸ್ರಕೋಟಿ ಸುವರ್ಣನಾಣ್ಯಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಬಂದಿದ್ದರೂ ಒಳಕ್ಕೆ ಹೋಗಲು ಅವಕಾಶವಿಲ್ಲದೆ, ಬಾಗಿಲಲ್ಲಿಯೇ ದ್ವಾರಪಾಲಕರಿಂದ ತಡೆಯಲ್ಪಟ್ಟು, ಅಲ್ಲಿ ಸಮಯನಿರೀಕ್ಷಣೆಮಾಡುತ್ತ ನಿಂತಿದ್ದರು. ತ್ರಿಖರ್ವದೇಶದವರು ಆ ಯುಧಿಷ್ಠಿರನಿಗಾಗಿ ಬಂಗಾರದ ಕಲಶಗಳನ್ನು ಮಾಡಿಸಿ ತಂದಿದ್ದರು. ಧರ್ಮರಾಜನಿಗೆ ಈ ವಿಚಾರವನ್ನು ದ್ವಾರ

ಪಾಲಕರು ತಿಳಿಸಿದಮೇಲೆ, ರಾಜಾಜ್ಞೆಯಿಂದ ಅವರಿಗೆ ಒಳಕ್ಕೆ ಪ್ರವೇಶವು ಸಿಕ್ಕಿತು. ದೇವಸ್ತ್ರೀಯರು ಇಂದ್ರನಿಗಾಗಿ ಮಧುವನ್ನು ತುಂಬಿಕೊಡುವ ವರುಣಸಂಬಂಧವಾದ ಕಂಚಿನ ಪಾತ್ರೆಯೊಂದನ್ನು ಧರ್ಮರಾಜನ ಅಭಿಷೇಕಕ್ಕಾಗಿ ಕ್ಷೀರಸಮುದ್ರರಾಜನೇ ಕಳುಹಿಸಿಕೊಟ್ಟನು. ಅನೇಕಸುವರ್ಣಗಳ ಬೆಲೆಯುಳ್ಳುದಾಗಿಯೂ, ರತ್ನಾಲಂಕೃತವಾಗಿಯೂ, ಯಾವಾಗಲೂ ಉರೆಯಲ್ಲಿಯೇ ಕಟ್ಟಿಡಲ್ಪಟ್ಟುದಾಗಿಯೂ ಇರುವ ದಿವ್ಯಶಂಖವೊಂದರಲ್ಲಿ ಕೃಷ್ಣನು ತನ್ನ ಕೈಯಿಂದಲೇ ಧರ್ಮರಾಜನಿಗೆ ಅಭಿಷೇಕವನ್ನು ನಡೆಸಿದನು. ಅದನ್ನು ನೋಡಿದುದು ಮೊದಲು ಸಂಕಟದಿಂದ ನನ್ನ ಮೈಗೆ ಜ್ವರಹಿಡಿದಂತಾಗಿದೆ. ಓ ಜನಕಾ! ಕೆಲವುಪಕ್ಷಿಗಳು ಆ ಶಂಖವನ್ನೆತ್ತಿಕೊಂಡು ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಗಳಿಗೆ ತೀರ್ಥವನ್ನು ತರುವುದಕ್ಕಾಗಿ ಹೋದುವು. ಉತ್ತರಸಮುದ್ರಕ್ಕೆಮಾತ್ರ ಅವು ಹೋಗಲಾರವು. ಅರ್ಜುನನು ದಿಗ್ವಿಜಯಕ್ಕಾಗಿ ಉತ್ತರದಿಕ್ಕಿಗೆ ಹೋಗಿ ಅಪರಿಮಿತವಾದ ಧನವನ್ನು ತಂದನು. ಇದಲ್ಲದೆ ದೈತ್ಯಶಿಲ್ಪಿಯಾದ ಮಯನು ಬಿಂದುಸರಸ್ಸಿನಲ್ಲಿದ್ದ ರತ್ನಗಳನ್ನೇ ತಂದು, ಸ್ಫಟಿಕಮಯವಾದ ನೆಲಗಟ್ಟನ್ನು ಮಾಡಿದ್ದನು. ಆ ಧರ್ಮರಾಜನ ಸಭೆಯಲ್ಲಿ ಅದನ್ನು ನಾನು ನೀರುತುಂಬಿದ ಕೊಳವೆಂದು ಭ್ರಮಿಸಿ, ಅದನ್ನು ದಾಟಿಹೋಗಬೇಕೆಂದು ಉಟ್ಟಿದ್ದ ಬಟ್ಟೆಯನ್ನು ಮೇಲೆತ್ತಿ ಕಟ್ಟಿಕೊಂಡೆನು. ಇದನ್ನು ನೋಡಿ ಭೀಮನೂ, ಆ ಸಭೆಗೆ ಕಾವಲಾಗಿದ್ದ ಕಿಂಕರರೂ, ನನ್ನನ್ನು ನೋಡಿ ಘೊಳ್ಳೆಂದು ನಕ್ಕರು. ಅಪ್ಪಾ! ನಾನು ಆ ಅವಮಾನವನ್ನು ಸಹಿಸಲಾರದೆ ಆಗಲೇ ಪ್ರಾಣವನ್ನು ಬಿಡಬೇಕೆಂದಿದ್ದೆನು. ಆದರೆ, ತಂದೆತಾಯಿಗಳಾದ ನಿಮಗಾಗಿ ನಾನು ಎಷ್ಟೋ ಪ್ರಯಾಸದಿಂದ ನನ್ನ ಉಸಿರನ್ನು ಹಿಡಿದುಕೊಂಡೆನು. ನನ್ನಿಂದ ಸಾಧ್ಯವಾಗಿದ್ದರೆ ಆಗಲೇ ಭೀಮನನ್ನು ಕೊಂದುಬಿಡುತಿದ್ದೆನು. ಏನು ಮಾಡಲಿ! ನನ್ನಿಂದಾಗದೆ ಹೋಯಿತು! ನನ್ನ ವೈರಿಯಾದ ಭೀಮನು ಮಾಡಿದ ಪರಿಹಾಸವು ನನ್ನನ್ನು ದಹಿಸುತ್ತಿದೆ. ಆ ಧರ್ಮರಾಜನ ಸಭೆಯ ಮತ್ತೊಂದು ಕಡೆಯಲ್ಲಿ, ಕಮಲಗಳಿಂದಲೂ, ಸ್ಫಟಿಕದ ನೆಲಗಟ್ಟಿನಂತೆ ಕಾಣುವ ನೀರಿನಿಂದಲೂ ಮಾಡಿದ್ದ ಪುಷ್ಕರಿಣಿಯೊಂದನ್ನು ನಾನು ನೆಲವೆಂದು ಭ್ರಮಿಸಿ, ಅದರಲ್ಲಿ ಕಾಲಿಟ್ಟು ಜಾರಿಬಿದ್ದೆನು. ಆಗ ನನ್ನನ್ನು

ಹಿಂಬಾಲಿಸಿ ಬರುತಿದ್ದ ಭೀಮಾರ್ಜುನರಿಬ್ಬರೂ ಫಕ್ಕನೆ ಗಟ್ಟಿಯಾಗಿ ನಕ್ಕುಬಿಟ್ಟರು. ಸ್ತ್ರೀಯರ ಗುಂಪಿನಲ್ಲಿ ಕುಳಿತಿದ್ದ ದ್ರೌಪದಿಯೂ, ಆಗ ಎಲ್ಲಾ ಸ್ತ್ರೀಯರೊಡನೆ ನನ್ನನ್ನು ನೋಡಿ ನಕ್ಕಳು. ಜನಕಾ! ಆಗ ನನ್ನ ಮನಸ್ಸು ಹೇಗಿರಬೇಕೋ ನೀನೇ ಯೋಚಿಸು! ನನಗೆ ಬುದ್ಧಿಯು ತಬ್ಬಿಬ್ಬಾಯಿತು. ನನ್ನ ಬಟ್ಟೆಯೆಲ್ಲ ನೆನೆದುಹೋಯಿತು. ಇಷ್ಟರಲ್ಲಿಯೇ ಧರ್ಮರಾಜನಿಂದ ಕಳುಹಿಸಲ್ಪಟ್ಟ ಕಿಂಕರರು ನನಗೆ ಬೇರೆಬಟ್ಟೆಗಳನ್ನು ತಂದುಕೊಟ್ಟರು. ಅವುಗಳನ್ನು ತೆಗೆದುಕೊಳ್ಳುವಾಗ, ನನ್ನ ದುಃಖವು ಇನ್ನೂ ಹೆಚ್ಚಾಯಿತು. ಅಪ್ಪಾ! ಮಯನಿರ್ಮಿತವಾದ ಆ ಸಭೆಯ ಸೊಬಗನ್ನು ನಾನೇಂದು ಹೇಳಲಿ! ಕಂಬಗಳಿಲ್ಲದ ಕಡೆ ಕಂಬಗಳಿದ್ದಂತೆ ಕಾಣುವುದು! ಸಾವಿರಾರು ಕಂಬಗಳಿದ್ದ ಕಡೆಯಲ್ಲಿ ಕಂಬಗಳೇನೂ ಇಲ್ಲದಂತೆ ಕಾಣುವುದು! ಅಂತಹ ಸ್ಥಳದಲ್ಲಿ ನಾನು ಮುಂದೆ ನುಗ್ಗಿ ಸ್ಫಟಿಕದ ಕಲ್ಲುಗಳಿಂದ ತಲೆಯನ್ನೊಡೆದುಕೊಂಡೆನು. ಬಾಗಿಲಿಲ್ಲದ ಒಂದು ಕಡೆಯಲ್ಲಿ ಬಾಗಿಲಿದ್ದಹಾಗೆ ತೋರಿದುದರಿಂದ ಮುಂದೆ ಹೋದೆನು. ಅಲ್ಲಿ ಗೋಡೆಗೆ ನನ್ನ ತಲೆಯು ಬಡಿಯಿತು. ಆ ನೋವನ್ನು ತಡೆಯಲಾರದೆ ತಲೆಯನ್ನು ಸವರಿಕೊಳ್ಳುತ್ತ ಹಿಂತಿರುಗಿದೆನು ಆಮೇಲೆ ಗೋಡೆಯನ್ನು ಕೈಯಿಂದ ಸವರುತ್ತ ಬೇರೆ ದಾರಿಹಿಡಿದೆನು. ನಾನು ಹೀಗೆ ಭ್ರಾಂತನಾಗಿ ಅಲ್ಲಲ್ಲಿ ಜಾರಿಬಿದ್ದು, ಅಲ್ಲಲ್ಲಿ ತಲೆಯೊಡೆದುಕೊಂಡು, ಕಷ್ಟಪಡುವುದನ್ನು ನೋಡಿ, ಭೀಮನು ನನ್ನನ್ನು ನೋಡಿ ಪರಿಹಾಸ್ಯದೊಡನೆ “ಕೌರವರಾಜಾ! ಇದೋ ಇಲ್ಲಿ ಬಾಗಿಲು! ಅದು ಬಾಗಿಲಲ್ಲ! ಇಲ್ಲಿ ಕಂಭಗಳು! ಇಲ್ಲಿ ಕಂಭಗಳಿಲ್ಲ” ಎಂದು ಕುರುಡನಿಗೆ ಹೇಳುವಂತೆ ನನಗೆ ಒಂದೊಂದನ್ನೂ ವಿವರವಾಗಿ ಹೇಳುತ್ತ ಬಂದನು. ಆ ನನ್ನ ದುರವಸ್ಥೆಯನ್ನು ನೋಡಿ ಆಗಾಗ ಹೆಂಗಸರೆಲ್ಲರೂ ಘೊಳ್ಳೆಂದು ನಗುತಿದ್ದರು. ಆ ಸಭೆಯಲ್ಲಿದ್ದವರಿಗೆ ನನ್ನ ಸ್ಥಿತಿಯೇ ಒಂದು ವಿನೋದಕ್ಕೆ ಕಾರಣವಾಯಿತು. ಇದುವರೆಗೆ ನಾನು ಹಿಂದೆ ಯಾವಾಗಲೂ ಕಂಡುಕೇಳದ ವಿವಿಧರತ್ನಗಳನ್ನೆಲ್ಲ ಅಲ್ಲಿ ನೋಡಿಬಂದೆನು. ಪಾಂಡವರ ಆ ಐಶ್ವರ್ಯವನ್ನು ನೋಡಿ ನನ್ನ ಹೃದಯವು ದಹಿಸುತ್ತಿದೆ! ದುಃಖವನ್ನು ತಡೆಯಲಾರೆನು. ಜನಕಾ! ಬೆಂಕಿಯಲ್ಲಿಯಾದರೂ ಬಿದ್ದು ಸಾಯುವೆನು. ಸಮುದ್ರದಲ್ಲಿಯಾದರೂ ಬಿಳು

ವೆನು. ನನ್ನಂತಹ ಸಂಭಾವಿತನಿಗೆ ಈ ಅವಮಾನವು ಮರಣಕ್ಕಿಂತಲೂ ಅಧಿಕವಾದುದು. ಜನಕಾ! ಅಲ್ಲಿ ನಡೆದ ಮತ್ತೊಂದಾಶ್ಚರ್ಯವನ್ನು ಕೇಳು. ಲಕ್ಷ ಬ್ರಾಹ್ಮಣರಿಗೆ ಸಂತರ್ಪಣೆಯಾದರೆ ಆ ಒಂದು ಪಂಙ್ತಿಯ ಭೋಜನವು ಮುಗಿದೊಡನೆ, ಅದಕ್ಕೆ ಸೂಚಕವಾಗಿ ಒಂದಾವರ್ತಿ ಶಂಖವನ್ನೂದುವ ಪದ್ಧತಿ! ಇಂತಹ ಶಂಖಧ್ವನಿಗಳು ದಿನಕ್ಕೆ ಎಷ್ಟೋಸಾರಿ ಕೇಳಿಸುತಿದ್ದುವು. ಯಾವಾಗಲೂ ಆ ಶಂಖಧ್ವನಿಗಳು ಕಿವಿಗೆ ಬೀಳುತ್ತಲೇ ಇದ್ದುವು. ಅದನ್ನು ಕೇಳಿದಾಗಲೆಲ್ಲ ನನ್ನ ಮೈಯಲ್ಲಿ ರೋಮಾಂಚವೇಳುತಿತ್ತು. ಅನೇಕರಾಜರಿಂದ ತುಂಬಿದ ಆ ಮಹಾಸಭೆಯು, ನಕ್ಷತ್ರಗಳಿಂದ ತುಂಬಿದ ಆಕಾಶದಂತೆ ಕಾಣಿಸುತಿದ್ದಿತು. ರಾಜರು ತೆರಿಗೆಯನ್ನು ತಂದೊಪ್ಪಿಸುವ ವೈಶ್ಯರಂತೆ, ವಿವಿಧ ರತ್ನಗಳನ್ನು ಧರ್ಮರಾಜನಿಗೆ ಕಾಣಿಕೆಯಾಗಿ ತಂದುಕೊಡುತಿದ್ದರು. ಅಷ್ಟೇಕೆ? ಬ್ರಾಹ್ಮಣರಿಗೆ ಭೋಜನವನ್ನು ಬಡಿಸುವವರೂ ರಾಜರೇ ಆಗಿದ್ದರು. ಜನಕಾ! ಆ ಯುಧಿಷ್ಠಿರನಿಗಿರುವ ಐಶ್ವರ್ಯವು ಇಂದ್ರ, ಯಮ, ವರುಣ, ಕುಬೇರರಿಗೂ ಇರಲಾರದು. ಆ ಮಹಾಭಾಗ್ಯವನ್ನು ನೋಡಿ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲದಿದೆ. ನನ್ನ ಹೃದಯವು ದಹಿಸುತ್ತಿದೆ. ಆ ಪಾಂಡವರ ಐಶ್ವರ್ಯವನ್ನು ಕಿತ್ತುಕೊಂಡ ಹೊರತು ನನಗೆ ಸಮಾಧಾನವಿಲ್ಲ. ಈಗಲೇ ಹೋಗಿ ನಾನಾದರೂ ಅವರನ್ನು ನನ್ನ ಬಾಣಗಳಿಂದ ಕಡಿದು ನೆಲದಲ್ಲಿ ಉರುಳಿಸಬೇಕು. ಇಲ್ಲವೇ ನಾನಾದರೂ ಅವರ ಕೈಯಿಂದ ಸತ್ತು ಮಲಗಬೇಕು. ಈ ಅವಸ್ಥೆಯಲ್ಲಿ ನಾನು ಬದುಕಿದ್ದು ಫಲವೇನು? ಪಾಂಡವರು ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದುತ್ತಿರುವರು. ನಮ್ಮ ಪುರೋವೃದ್ಧಿಯೆಲ್ಲ ಇಷ್ಟರಲ್ಲಿಯೇ ನಿಂತುಹೋಯಿತು" ಎಂದನು.

ಆಗ ಸಮೀಪದಲ್ಲಿದ್ದ ಶಕುನಿಯು "ಮಿತ್ರ ದುರ್ಯೋಧನಾ! ಸತ್ಯಪರಾಕ್ರಮಾ! ಇದಕ್ಕಾಗಿ ನೀನೇಕೆ ಚಿಂತಿಸುವೆ? ಪಾಂಡವರ ಯಾವ ಐಶ್ವರ್ಯವನ್ನು ನೋಡಿ ನೀನು ಕೊರಗುವೆಯೋ ಅದನ್ನು ಕಿತ್ತುಕೊಳ್ಳುವುದಕ್ಕೆ ಉಪಾಯವೇನೆಂಬುದನ್ನು ನಾನು ಬಲ್ಲೆನು. ಈ ಭೂಮಿಯೊಳಗೆಲ್ಲ ಪಗಡೆಯ ಆಟದಲ್ಲಿ ನನಗೆ ಸಮಾನರಿಲ್ಲ. ಆಡುವಾಗ ದಾಳಗಳ

ಗತಿಯನ್ನೆಲ್ಲ ನಾನು ಮೊದಲೇ ತಿಳಿಯಬಲ್ಲೆನು. ಪಂಥಗಳ ಕ್ರಮ ವನ್ನೂ ಬಲ್ಲೆನು. ಅಕ್ಷದ್ಯೂತದ ಮರ್ಮಗಳೆಲ್ಲ ನನಗೆ ಚೆನ್ನಾಗಿ ತಿಳಿ ಯುವುದು. ಆ ಧರ್ಮರಾಜನಾದರೋ ಜೂಜಿನಲ್ಲಿ ಬಹಳ ಆಸೆಯುಳ್ಳ ವನು. ಆದರೆ ಆವನಿಗೆ ಆಡುವುದಕ್ಕೆ ಬಾರದು. ಆಟಕ್ಕೆ ಕರೆದೊಡನೆ ಬರುವನು. ಅಲ್ಲದೆ ಅವನು ಇತರರನ್ನು ತಾನೇ ಆಟಕ್ಕಾಗಿ ಕರೆಯುವುದೂ ಉಂಟು. ಮಿತ್ರಾ! ಅವನನ್ನು ನಾನು ತಂತ್ರದಿಂದ ಆಟದಲ್ಲಿ ಜಯಿಸಿ, ಅವನ ಐಶ್ವರ್ಯವನ್ನೆಲ್ಲ ನಿನಗೆ ತಂದು ಸೇರಿಸುವೆನು. ಅವನನ್ನು ಇಲ್ಲಿಗೆ ಕರೆಸು" ಎಂದನು. ಈ ಮಾತನ್ನು ಕೇಳಿದೊಡನೆ ದುರ್ಯೋಧನನು ತಂದೆಯನ್ನು ಕುರಿತು "ಜನಕಾ! ಈ ಶಕುನಿಯು ದ್ಯೂತದಲ್ಲಿ ಒಳ್ಳೇ ನೈಪುಣ್ಯವುಳ್ಳವನು. ಇವನು ತಂತ್ರದಿಂದ ಆಟದಮೂಲಕವಾಗಿ ಯುಧಿ ಷ್ಠಿರನ ರಾಜ್ಯಲಕ್ಷ್ಮಿಯನ್ನೆಲ್ಲ ಅಪಹರಿಸಬಲ್ಲನು. ನೀನು ಅದಕ್ಕೆ ಅನು ಮತಿಸಬೇಕು" ಎಂದನು. ಅದಕ್ಕಾ ಧೃತರಾಷ್ಟ್ರನು "ಕುಮಾರಾ! ವಿದುರನು ನಮಗೆ ಮಂತ್ರಿ! ಮಹಾಬುದ್ಧಿಶಾಲಿ! ಮೊದಲು ಅವನಲ್ಲಿ ಆಲೋಚನೆಯನ್ನು ಮಾಡಿ, ಆವನು ಹೇಳಿದಂತೆ ನಡೆಸುವೆವು. ಅವನು ದೂರಾಲೋಚನೆಯುಳ್ಳವನಾದುದರಿಂದ, ಈ ಕಾರ್ಯನಿಶ್ಚಯವನ್ನು ತಿಳಿ ಸುವನು. ವಿವೇಕಿಯಾದ ಆ ವಿದುರನು ಧರ್ಮವನ್ನು ಮುಂದಿಟ್ಟು ಕೊಂಡೇ ಉಭಯಪಕ್ಷದವರಿಗೂ ಹಿತವಾಗಿಯೂ, ಉಚಿತವಾಗಿಯೂ ಇರುವ ತೀರ್ಮಾನವನ್ನು ಹೇಳುವನು" ಎಂದನು. ಆಗ ದುರ್ಯೋಧ ನನು "ಜನಕಾ! ಬೇಡ ಬೇಡ! ಆ ವಿದುರನು ಬಂದರೆ ನಿನ್ನ ಮನ ಸ್ಸನ್ನು ತಿರುಗಿಸಿಬಿಡುವನು. ನಿನ್ನ ಮನಸ್ಸು ತಿರುಗಿಹೋದರೆ ನಾನು ಸಾಯುವುದೇ ನಿಶ್ಚಯವು. ಆಮೇಲೆ ನೀನು ವಿದುರನೊಡನೆಯೇ ಸುಖ ವಾಗಿರು. ನೀನೇ ಭೂಮಿಯನ್ನೆಲ್ಲ ಆಳು. ನಿನಗೆ ನನ್ನಿಂದಾಗಬೇಕಾದು ದೇನು?" ಎಂದನು. ಮಗನ ಈ ದೀನವಾಕ್ಯಗಳನ್ನು ಕೇಳಿದೊಡನೆ ಧೃತರಾಷ್ಟ್ರನ ಮನಸ್ಸು ಕರಗಿಹೋಯಿತು. ದುರ್ಯೋಧನನ ಮಾತಿಗೆ ಸಮ್ಮತಿಸಿಬಿಟ್ಟನು. ಒಡನೆಯೇ ಶಿಲ್ಪಿಗಳನ್ನು ಕರೆಸಿ, ಒಂದು ರಮ್ಯವಾದ ಸಭೆಯನ್ನು ನಿರ್ಮಿಸುವುದಕ್ಕಾಗಿ ಆಜ್ಞಾಪಿಸಿದನು. ಸಾವಿರಾರು ಸ್ತಂಭ ಗಳಿಂದಲೂ, ಅನೇಕ ದ್ವಾರಗಳಿಂದಲೂ ಕೂಡಿ, ಕಣ್ಣಿಗೂ, ಮನಸ್ಸಿಗೂ

ಆನಂದವನ್ನುಂಟುಮಾಡುವ ಒಂದು ಮಂದಿರವನ್ನು ನಿರ್ಮಿಸಿ, ಅದಕ್ಕೆಲ್ಲ ರತ್ನದ ನೆಲಗಟ್ಟನ್ನು ಮಾಡಿಸಿ, ಅದನ್ನು ತನಗೆ ತಿಳಿಸಬೇಕೆಂದು ಶಿಲ್ಪಿಗಳಿಗೆ ಆಜ್ಞಾಪಿಸಿದನು. ಹೀಗೆ ಧೃತರಾಷ್ಟ್ರನು ದುರ್ಯೋಧನನ ಇಷ್ಟದಂತೆ ನಡೆಸುವುದಾಗಿ ನಿರ್ಧರಿಸಿ, ಆಮೇಲೆ ವಿದುರನಿಗೆ ಹೇಳಿಕಳುಹಿಸಿದನು. ಓ ಜನಮೇಜಯರಾಜಾ! ವಿದುರನನ್ನು ಕೇಳದೆ ಧೃತರಾಷ್ಟ್ರನು ಯಾವ ಕೆಲಸವನ್ನೂ ಮಾಡುವವನಲ್ಲ. ದ್ಯೂತದಲ್ಲಿರುವ ದೋಷಗಳೂ ಆ ಧೃತರಾಷ್ಟ್ರನಿಗೆ ಚೆನ್ನಾಗಿ ತಿಳಿದುದೇ! ಆದರೇನು? ಪುತ್ರಸ್ನೇಹದಿಂದ ಅವನು ಕೆಟ್ಟ ದಾರಿಗೇ ಎಳೆಯಲ್ಪಟ್ಟನು. ವಿದುರನಿಗೆ ಈ ಸಂಗತಿಯು ತಿಳಿಯಿತು. ಕಲಹಕ್ಕೆ ಇದೇ ಮೂಲವಾಗಿ, ಕೌರವರಿಗೆ ವಿನಾಶಕಾಲವು ಆರಂಭಿಸಿತೆಂದು ತಿಳಿದು ವಿದುರನು, ಧೃತರಾಷ್ಟ್ರನ ಬಳಿಗೆ ಓಡಿಬಂದನು. ಅಣ್ಣನಾದ ಧೃತರಾಷ್ಟ್ರನ ಪಾದಗಳನ್ನು ಹಿಡಿದು ನಮಸ್ಕರಿಸಿ, "ಪ್ರಭೂ! ನಿನ್ನ ಪ್ರಯತ್ನವೇನೋ ನನಗೆ ಸ್ವಲ್ಪವಾದರೂ ಸಮ್ಮತವಲ್ಲ. ಈ ದ್ಯೂತದಿಂದ ನಿನ್ನ ಮಕ್ಕಳಲ್ಲಿ ಭೇದಬುದ್ಧಿಯು ಹೆಚ್ಚುವುದು. ಅದಕ್ಕೆ ಅವಕಾಶವನ್ನು ಕೊಡಬೇಡ" ಎಂದನು. ಅದಕ್ಕಾ ಧೃತರಾಷ್ಟ್ರನು "ವಿದುರಾ! ಇದರಿಂದ ನಮ್ಮ ಮಕ್ಕಳಲ್ಲಿ ಕಲಹವೇನೂ ಆಗಲಾರದು. ದೇವತೆಗಳು ನಮ್ಮಲ್ಲಿ ಅನುಗ್ರಹವಿಟ್ಟರೆ, ನಮಗೇನೂ ಹಾನಿಯನ್ನು ಮಾಡಲಾರರು. ಅಶುಭವಾಗಲಿ, ಶುಭವಾಗಲಿ, ಹಿತವಾಗಲಿ, ಅಹಿತವಾಗಲಿ ನನ್ನ ಮಕ್ಕಳು ಅವರ ಇಷ್ಟದಂತೆ ಸುಮ್ಮನೆ ವಿನೋದಕ್ಕಾಗಿ ಆ ದ್ಯೂತವನ್ನು ನಡೆಸಿಕೊಳ್ಳಲಿ. ಆ ಸುಹೃದ್ದ್ಯೂತಕ್ಕೆ ನಾವು ಅಡ್ಡಿಮಾಡಬಾರದು. ಇದರಮೇಲೆ ಅದೃಷ್ಟಕ್ಕೆ ಯಾರೇನು ಮಾಡುವುದು? ನಡೆಯಲಿ! ಅವರಿಷ್ಟದಂತೆ ನಡೆಯಲಿ! ನಾನೂ, ನೀನೂ, ಭೀಷ್ಮದ್ರೋಣರೂ ಇರುವಾಗ, ನನ್ನ ಮಕ್ಕಳಲ್ಲಿ ಅಂತಹ ಅಕ್ರಮವೇನೂ ನಡೆಯಲಾರದು. ನೀನು ಈಗಲೇ ಒಳ್ಳೇ ವೇಗವುಳ್ಳ ರಥವನ್ನೇರಿ ಖಾಂಡವಪ್ರಸ್ಥಕ್ಕೆ ಹೋಗು! ಏನೋ ಒಂದು ನೆವಹೇಳಿ, ಧರ್ಮರಾಜನನ್ನು ಕರೆದುಕೊಂಡು ಬಾ! ಆದರೆ ನನ್ನ ಉದ್ದೇಶವನ್ನು ಧರ್ಮರಾಜನಲ್ಲಿ ತಿಳಿಸಬೇಡ. ನಿನಗೆ ಮಾತ್ರ ನಾನು ಈ ಮರ್ಮವನ್ನು ಹೇಳಿದೆನು. ಮುಖ್ಯವಾಗಿ ದೈವವು ಪ್ರಬಲವಾದುದು. ಅದರಿಂದಲೇ ಹೀಗೆಲ್ಲಾ ಬಂದೊದಗುವುದು" ಎಂದನು. ಇದನ್ನು ಕೇಳಿ

ವಿದುರನು, ತನ್ನಲ್ಲಿ ತಾನು "ಕೌರವಕುಲಕ್ಕೆ ಮೃತ್ಯುವು ಸಮಾಪಿಸಿತು" ಎಂದು ಹೇಳುತ್ತ ಭೀಷ್ಮನಿದ್ದಲ್ಲಿಗೆ ಬಂದನು.

ಇದು ಎಪ್ಪತ್ತಾರನೆಯ ಅಧ್ಯಾಯವು.

{ ದುರ್ಯೋಧನನು ತಂದೆಯೊಡನೆ ಹೇಳಿಕೊಂಡ ತನ್ನ ದುಃಖವನ್ನು ವೈಶಂಪಾಯನನು ಜನಮೇಜಯರಾಜನಿಗೆ ವಿಸ್ತರಿಸಿ ಹೇಳಿದುದು. }

ಆಗ ಜನಮೇಜಯನು ವೈಶಂಪಾಯನನನ್ನು ಕುರಿತು "ಓ ಮುನೀಂದ್ರಾ! ನನ್ನ ತಾತಂದಿರಿಗೆ ಅಂತಹ ಮಹಾಕಷ್ಟವನ್ನು ತಂದೊಡ್ಡಿ, ಕುಲನಾಶಕ್ಕೆ ಕಾರಣವಾದ ಆ ದ್ಯೂತವು ಹೇಗೆ ನಡೆಯಿತು? ಆ ದ್ಯೂತದಲ್ಲಿ ಸಭ್ಯರಾಗಿದ್ದವರಾರು? ಅದನ್ನು ಸಮ್ಮತಿಸಿದವರಾರು? ಅದನ್ನು ಬೇಡವೆಂದು ತಡೆದವರಾರು? ಲೋಕಕ್ಷಯಕಾರಣವಾದ ಅದರ ವಿವರವನ್ನು ಸವಿಸ್ತರವಾಗಿ ತಿಳಿಸಬೇಕು" ಎಂದನು. ಅದಕ್ಕಾ ವೈಶಂಪಾಯನನು "ಮಹಾರಾಜಾ! ಹೇಳುವೆನು ಕೇಳು! ವಿದುರನಿಗೆ ಈ ದ್ಯೂತವು ಸಮ್ಮತವಲ್ಲವೆಂದು ತಿಳಿದಮೇಲೆ, ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು "ಕುಮಾರಾ! ದ್ಯೂತಪ್ರಯತ್ನವನ್ನು ಬಿಟ್ಟುಬಿಡು. ವಿದುರನಿಗೆ ಇದು ಸಮ್ಮತವಲ್ಲ. ಅವನು ಬಹಳ ಬುದ್ಧಿವಂತನು. ನಮಗೆ ಹಿತೈಷಿ! ಅವನು ನಮಗೆ ಅಹಿತವನ್ನು ಹೇಳಲಾರನು. ಕಾಲಜ್ಞನಾದ ಬೃಹಸ್ಪತಿಯು ಇಂದ್ರನಿಗೆ ಉಪದೇಶಿಸಿದ ನೀತಿಶಾಸ್ತ್ರಧರ್ಮಗಳನ್ನೆಲ್ಲ ಅವುಗಳ ರಹಸ್ಯದೊಡನೆ ಈ ವಿದುರನು ತಿಳಿದಿರುವನು. ನಾನೂಕೂಡ ಅವನ ಮಾತನ್ನು ಮೀರಿ ನಡೆಯುವುದಿಲ್ಲ. ಯಾದವರಿಗೆ ಉದ್ಧವನು ಹೇಗೋ ಹಾಗೆ ಕೌರವರಿಗೆ ವಿದುರನು ಪೂಜ್ಯನು. ಜೂಜಿನಿಂದ ವಿರೋಧವು ಹುಟ್ಟಿ, ಅದರಿಂದ ರಾಜ್ಯವೇ ನಶಿಸುವುದು. ಪುತ್ರಾ! ಬೇಡ! ಆ ದ್ಯೂತವನ್ನು ಬಿಟ್ಟುಬಿಡು! ತಂದೆತಾಯಿಗಳು ಮಗನಿಗಾಗಿ ನಡೆಸಬೇಕಾದ ಪ್ರಯೋಜನವೇನುಂಟೋ ಅದನ್ನೆಲ್ಲ ನೀನು ಪಡೆದಿರುವೆ. ಪಿತೃಪಿತಾಮಹಪರಂಪರೆಯಿಂದ ಬಂದ ರಾಜ್ಯವು ನಿನ್ನ ವಶವಾಗಿದೆ. ನೀನು ವೇದಶಾಸ್ತ್ರಗ

ಳನ್ನು ಬಲ್ಲವನು. ಮನೆಯಲ್ಲಿ ಎಲ್ಲರಿಗೂ ಪ್ರಿಯನಾಗಿ ಲಾಲಿಸಲ್ಪಟ್ಟವನು. ಸಹೋದರರಲ್ಲಿ ಜ್ಯೇಷ್ಠನು. ನೀನು ಪಡೆಯದ ಮೇಲ್ಮೆಯೊಂದಿಲ್ಲ. ಇತರ ದುರ್ಲಭವಾದ ಅನ್ನವಸ್ತ್ರಗಳನ್ನು ಅನುಭವಿಸುತ್ತಿರುವೆ. ನಿನಗೆ ದುಃಖ ಕಾರಣವೇನಿದೆ? ದೇವಲೋಕದಲ್ಲಿ ಇಂದ್ರನು ಹೇಗೋ ಹಾಗೆ ನೀನು ಭಾಗ್ಯಸಮೃದ್ಧವಾದ ರಾಜ್ಯಕ್ಕೆ ಪ್ರಭುವೆನಿಸಿ, ಎಲ್ಲರಿಗೂ ಆಜ್ಞೆಮಾಡುವ ಪದವಿಯಲ್ಲಿರುವೆ. ಇಂತಹ ಐಶ್ವರ್ಯಗಳೂ, ಭೋಗಗಳೂ ಬೇರೊಬ್ಬರಿಗೆ ಲಭಿಸಲಾರವು. ಎಲ್ಲವನ್ನೂ ಬಲ್ಲ ನಿನ್ನಂತವನಿಗೆ ನಾನು ಹೊಸದಾಗಿ ಹೇಳುವುದೇನಿದೆ?'' ಎಂದನು. ಅದಕ್ಕಾ ದುರ್ಯೋಧನನು, "ಜನಕಾ! ನಾನು ಎಷ್ಟು ಉಂಡರೇನು? ಉಟ್ಟರೇನು? ಆ ಅನ್ನವಸ್ತ್ರಗಳಲ್ಲಿ ಮಾತ್ರ ತೃಪ್ತಿಹೊಂದಿ, ಪೌರುಷವನ್ನು ಬಿಟ್ಟು, ಇತರರ ಐಶ್ವರ್ಯವನ್ನು ನೋಡಿಯೂ ರೋಷವಿಲ್ಲದ ಮನುಷ್ಯನು ಪುರುಷಾಧಮನೆನಿಸುವನು. ಸರ್ವಸಾಧಾರಣವಾದ ರಾಜ್ಯಲಕ್ಷ್ಮಿಯೆಂಬುದು ನನಗೆ ಅಷ್ಟೇನೂ ತೃಪ್ತಿಕರವಾಗಲಾರದು. ಆ ಕುಂತಿಯ ಮಗನಲ್ಲಿ ಜ್ವಲಿಸುವಂತಿರುವ ರಾಜ್ಯಲಕ್ಷ್ಮಿಯನ್ನು ನೋಡಿಯೇ ನಾನು ವ್ಯಥೆಪಡುವೆನು. ಲೋಕವೆಲ್ಲ ಆ ಯುಧಿಷ್ಠಿರನ ಆಜ್ಞೆಗೆ ಒಳಪಟ್ಟಿದೆ. ಇದನ್ನು ನೋಡಿಯೂ ಬದುಕಿರುವ ನನ್ನಂತೆ ಕಠಿನಾತ್ಮನು ಬೇರೊಬ್ಬರಿಲ್ಲ. ತಡೆಯಲಾರದ ವ್ಯಸನದಿಂದ ನಾನು ಇದನ್ನು ಹೇಳುವೆನು. ನೀಪರು, ಚಿತ್ರಕರು, ಕುಕುರರು, ಕಾರಸ್ಕಾರರು, ಲೋಹಜಂಘರು, ಈ ರಾಜರೆಲ್ಲರೂ ಆ ಯುಧಿಷ್ಠಿರನ ಮನೆಯ ಊಳಿಗದವರಂತೆ ಕೆಲಸಮಾಡುತ್ತಿರುವರು. ಹಿಮಾಲಯದಲ್ಲಿಯೂ, ಸಮುದ್ರದ್ವೀಪಗಳಲ್ಲಿಯೂ ಇದ್ದುಕೊಂಡು, ರತ್ನದ ಗಣಿಗಳಿಗೆ ಒಡೆಯರಾದ ರಾಜರೂ, ಮ್ಲೇಚ್ಛಾದಿಪ್ರಭುಗಳೂ ಆ ಯುಧಿಷ್ಠಿರನ ಬಾಗಿಲಲ್ಲಿ ಒಳಕ್ಕೆ ಪ್ರವೇಶವಿಲ್ಲದೆ ತಡೆಯಲ್ಪಟ್ಟಿದ್ದರು. ಆ ಯುಧಿಷ್ಠಿರನು, ನನ್ನನ್ನು ದೊಡ್ಡವನೆಂದೂ, ಶ್ರೇಷ್ಠನೆಂದೂ ಭಾವಿಸಿ, ಗೌರವದಿಂದ ಅವನಿಗೆ ಬಂದ ಕಪ್ಪಕಾಣಿಕೆಗಳನ್ನು ತೆಗೆದಿಡುವುದಕ್ಕಾಗಿ ನನ್ನನ್ನೇ ನಿಯಮಿಸಿದ್ದನು. ಅಲ್ಲಿ ಬಂದ ಕಾಣಿಕೆಗಳಿಗೆ ಮಿತಿಯಿಲ್ಲ! ಅವನಿಗೆ ಕಾಣಿಕೆಯಾಗಿ ಬಂದ ರತ್ನಗಳಿಗೆ ಮೇರೆಯಿಲ್ಲ! ಆ ಧನರಾಶಿಯನ್ನು ತೆಗೆದಿಡುವುದಕ್ಕೆ ನನ್ನ ಎರಡು ಕೈಗಳೂ ಸಾಲದೆಹೋದುವು. ನಾನು ಬಹಳವಾಗಿ

ಶ್ರಮಪಟ್ಟಿರುವುದನ್ನು ನೋಡಿ, ಅವರವರು ತಾವು ತಂದ ಕಾಣಿಕೆಗಳನ್ನು ತಮ್ಮ ಕೈಯಲ್ಲಿಯೇ ಇಟ್ಟುಕೊಂಡು ನಿರೀಕ್ಷಿಸುತ್ತಿದ್ದರು. ಮಯನು ಬಿಂದುಸರಸ್ಸಿನಿಂದ ತಂದ ರತ್ನಗಳಿಂದಲೂ, ಸ್ಫಟಿಕದ ಕಲ್ಲುಗಳಿಂದಲೂ, ಹೊದ್ದಿಸಿದ ಒಂದು ನೆಲವನ್ನು ನೋಡಿ ನಾನು ಜಲವೆಂದು ಭ್ರಮಿಸಿ, ಮುಂದೆ ಹೋಗುವುದಕ್ಕಾಗಿ ಉಟ್ಟಬಟ್ಟೆಯನ್ನು ಮೇಲಕ್ಕೆತ್ತಿ ಕಟ್ಟಿದೆನು. ನನ್ನ ಭ್ರಾಂತಿಯನ್ನು ನೋಡಿ ಭೀಮನು ನಕ್ಕನು. ನನ್ನಿಂದಾಗಿದ್ದರೆ ಆಗಲೇ ಭೀಮನನ್ನು ಕೊಂದುಬಿಡುತಿದ್ದೆನು. ನಾನು ಭೀಮನನ್ನು ಕೆಣಕಿದ್ದರೆ ಶಿಶುಪಾಲನ ಗತಿಯೇ ನನಗೂ ಆಗುತ್ತಿತ್ತು. ಆ ಭೀಮನು ನನ್ನನ್ನು ನೋಡಿ ನಕ್ಕುದು ಈಗಲೂ ನನ್ನ ಹೃದಯವನ್ನು ದಹಿಸುತ್ತಿದೆ. ಮತ್ತೊಂದುಕಡೆ ಜಲವನ್ನು ನೋಡಿ ನೆಲವೆಂದು ತಿಳಿದು ಆ ನೀರಿನಲ್ಲಿ ಬಿದ್ದೆನು. ಆಗ ಕೃಷ್ಣಾರ್ಜುನರಿಬ್ಬರೂ ನನ್ನನ್ನು ನೋಡಿ ಗಟ್ಟಿಯಾಗಿ ನಕ್ಕುಬಿಟ್ಟರು. ಧರ್ಮರಾಜನ ಕಡೆಯ ಕಿಂಕರರು ನನಗೆ ಬೇರೆ ಬಟ್ಟೆಯನ್ನು ತಂದುಕೊಟ್ಟರು. ಇವೆಲ್ಲಾ ನನಗೆ ಬಹಳ ವ್ಯಸನಕರವಾಗಿದೆ. ಬಾಗಿಲಿಲ್ಲದ ಕಡೆಯಲ್ಲಿ ಬಾಗಿಲೆಂದು ತಿಳಿದು ಮುಂದೆ ನುಗ್ಗಿ, ಗೋಡೆಗೆ ತಗುಲಿ ನನ್ನ ತಲೆಗೆ ಗಾಯವಾಯಿತು. ಆಗ ನನ್ನ ಗಾಯವನ್ನು ನೋಡಿ ನಕುಲಸಹದೇವರು ಬಂದು ನನ್ನ ಕೈ ಹಿಡಿದುಕೊಂಡರು. ಆಗ ಸಹದೇವನು ನಗುತ್ತ ನನ್ನನ್ನು ನೋಡಿ "ಧೃತರಾಷ್ಟ್ರಪುತ್ರಾ! ಅದು ಬಾಗಿಲಲ್ಲ! ಇತ್ತ ಬಾ!" ಎಂದು ಆಗಾಗ ನನಗೆ ದಾರಿತೋರಿಸುತಿದ್ದನು. ಭೀಮನೂ ಹಾಗೆಯೇ ನನ್ನನ್ನು "ಧೃತರಾಷ್ಟ್ರಪುತ್ರಾ!" (ಕುರುಡನ ಮಗನೇ!) ಎಂದು ಕರೆದು ನಗುತ್ತ "ಅಲ್ಲಿ ಬಾಗಿಲಿಲ್ಲ! ಇಲ್ಲಿ ಬಾಗಿಲಿದೆ!"ಯೆಂದು ಕಣ್ಣುಕಾಣದ ಕುರುಡರಿಗೆ ಹೇಳುವಂತೆಯೇ ಹೇಳುತ್ತಿದ್ದನು. ಜನಕಾ! ಹೆಚ್ಚು ಮಾತೇಕೆ? ಅಲ್ಲಿ ನಾನು ನೋಡಿಬಂದ ರತ್ನಗಳ ಹೆಸರನ್ನುಕೂಡ ನಾನು ಹಿಂದೆ ಕೇಳಿರಲಿಲ್ಲ. ಅಯ್ಯೋ! ಈ ವೈಭವಗಳೆಲ್ಲವನ್ನೂ ನೋಡಿ ನಾನು ಹೇಗೆ ಸಹಿಸಲಿ?" ಎಂದನು.

ಇದು ಎಪ್ಪತ್ತೇಳನೆಯ ಅಧ್ಯಾಯವು.



(ರಾಜಸೂಯಯಾಗದಲ್ಲಿ ಧರ್ಮರಾಜನಿಗೆ ನಾನಾದೇಶದ ರಾಜರು ತಂದುಕೊಟ್ಟ ಕಾಣಿಕೆಗಳನ್ನು ಕುರಿತು ದುರ್ಯೋಧನನು ತಂದೆಗೆ ವಿವರಿಸಿದುದು.)

ಜನಕಾ ! ಅಲ್ಲಿ ಪಾಂಡವರಿಗೆ ಅನೇಕರಾಜರು ತಂದುಕೊಟ್ಟ ಮುಖ್ಯವಸ್ತುಗಳಲ್ಲಿ, ನಾನು ನೋಡಿದ ಕೆಲವನ್ನು ಮಾತ್ರ ಹೇಳುವೆನು ಕೇಳು. ನಮ್ಮ ಶತ್ರುಗಳ ಐಶ್ವರ್ಯವನ್ನು ನೋಡಿದಾಗಲೇ ನನ್ನ ಮನಸ್ಸು ಕಲಗಿ, ನನ್ನನ್ನು ನಾನೇ ತಿಳಿಯದಂತಾದೆನು. ಅಲ್ಲಿ ನಾನು ನೋಡಿಬಂದುದನ್ನು ಹೇಳುವುದಕ್ಕೂ ನನಗೆ ತೋರುವುದಿಲ್ಲ. ಆದರೂ ಮುಖ್ಯವಾದ ಕೆಲವನ್ನು ಹೇಳುವೆನು. ಅಲ್ಲಿ ಗಣಿಗಳಿಂದ ತೆಗೆದ ರತ್ನಾದಿಗಳಿಗೂ, ಬೆಳೆಯಿಂದ ಬಂದ ವಸ್ತುಗಳಿಗೂ ಮಿತಿಯೇ ಇಲ್ಲ. ಇಲಿ, ಹೆಗ್ಗಣ, ಬೆಕ್ಕು, ಮುಂತಾದುವುಗಳ ಚರ್ಮದಿಂದಲೂ, ಕುರಿಯ ತುಪಟದಿಂದಲೂ ಮಾಡಲ್ಪಟ್ಟು, ಚಿನ್ನದ ಸರಿಗೆಗಳಿಂದ ಅಲಂಕರಿಸಲ್ಪಟ್ಟ ಮೇಲುವಸ್ತ್ರಗಳನ್ನೂ, ಚರ್ಮವಸ್ತ್ರಗಳನ್ನೂ ಕಾಂಭೋಜರಾಜನು ಅನೇಕವಾಗಿ ತಂದುಕೊಟ್ಟನು. ಗುಬ್ಬಚ್ಚಿಗಳಂತೆ ಚಿತ್ರವರ್ಣವುಳ್ಳ ಮತ್ತು ಗಿಳಿಯ ಮೂಗಿನಂತೆ ಕೆಂಪುಬಣ್ಣವುಳ್ಳ ಮುನ್ನೂರು ಕುದುರೆಗಳನ್ನು ತ್ರಿಗರ್ತದೇಶದವರು ತಂದುಕೊಟ್ಟರು. ಶ್ಲೇಷ್ಮಾತಕ, ಬನ್ನಿ, ಇವುಗಳ ಕಾಯಿಗಳನ್ನೇ ತಿಂದು ಚೆನ್ನಾಗಿ ಕೊಬ್ಬಿ ಬೆಳೆದ ಒಂಟೆಗಳನ್ನೂ, ಹೆಣ್ಣುಕುದುರೆಗಳನ್ನೂ ತ್ರಿಗರ್ತರಾಜರು ಅನೇಕವಾಗಿ ತಂದುಕೊಟ್ಟರು. ಗೊಲ್ಲಜಾತಿಯವರೂ, ಅವರ ಕಡೆಯವರೂ ನಾಲ್ಕುಕಾಲುಗಳುಳ್ಳ ಅನೇಕ ಪ್ರಾಣಿಗಳನ್ನು ತಂದರು. ವಸಾತಿಗಳೆಂಬ ಜಾತಿಯವರು (ವಿವಿಧ ವಿಚಿತ್ರ) ದ್ರವ್ಯಗಳನ್ನು ತಂದು, ಆ ಧರ್ಮರಾಜನ ಬಾಗಿಲಲ್ಲಿ ಅವನಿಗೆ ಕೊಡುವುದಕ್ಕಾಗಿ ಸಮಯವನ್ನು ನಿರೀಕ್ಷಿಸುತ್ತಿದ್ದರು. ತ್ರಿಖರ್ವದೇಶದ ರಾಜನು ತನ್ನ ಬಂಧುಗಳೊಡನೆ ಅತ್ಯುತ್ಸಾಹದಿಂದ ಬಂಗಾರದ ಕಮಂಡಲುಗಳನ್ನೂ, ಸುವರ್ಣನಾಣ್ಯಗಳನ್ನೂ, ಚಿನ್ನದ ಗಟ್ಟಿಗಳನ್ನೂ ಧರ್ಮರಾಜನಿಗೆ ತಂದೊಪ್ಪಿಸಿದನು. ಕುಳಿಂಗನೆಂಬ ಬ್ರಾಹ್ಮಣನು ಒಂದು ಶಂಖವನ್ನು ತಂದುಕೊಡಲು ಸಹೋದರರೆಲ್ಲರೂ ಅದನ್ನು ಅರ್ಜುನನಿಗೆ ಕೊಟ್ಟರು. ಆ ಶಂಖವು ನೂರಾರುವರಹಗಳ ಬಂಗಾರದಿಂದ ಚಿತ್ರಿತವಾಗಿ, ತೇಜಸ್ಸಿನಿಂದ ಜ್ವಲಿಸುವಂತಿತ್ತು. ಅದು ವಿಶ್ವಕರ್ಮನ ಕೈಯಿಂದಲೇ ಪೂ

ಜಿತವಾದುದು. ಧರ್ಮರಾಜನು ಅದನ್ನು ಕಂಡೊಡನೆ ಹಲವುಸಾರಿ ನಮಸ್ಕರಿಸಿ ಕೈಗೆತ್ತಿಕೊಂಡನು. ಬಾಯಿಂದೂದುವುದಕ್ಕೆ ಮೊದಲೇ ಅದು ಗರ್ಜಿಸುವುದು. ಅರ್ಜುನನು ಅದನ್ನು ತೆಗೆದು ಊದಿದೊಡನೆ ಅಲ್ಲಿದ್ದ ರಾಜರೆಲ್ಲ ತಬ್ಬಿಬ್ಬಾದರು. ಧೃಷ್ಟದ್ಯುಮ್ನನು, ಪಂಚಪಾಂಡವರು, ಸಾತ್ಯಕಿ, ಕೃಷ್ಣನು ಈ ಎಂಟು ಮಂದಿಹೊರತು ಮಿಕ್ಕ ರಾಜರೊಡನೆ ನಾನೂ ಮೂರ್ಛಿತನಾದೆನು. ಆ ಎಂಟುಮಂದಿಯೂ ನನ್ನನ್ನು ನೋಡಿ ನಕ್ಕರು. ಆಮೇಲೆ ಅರ್ಜುನನು ಸುವರ್ಣಶೃಂಗವುಳ್ಳ ಐನೂರು ಎತ್ತುಗಳನ್ನು ಆ ಕುಳಿಂದನೆಂಬ ಬ್ರಾಹ್ಮಣನಿಗೆ ಪಾರಿತೋಷಿಕವಾಗಿ ಕೊಟ್ಟನು. ಸುಮುಖನೆಂಬ ರಾಜನು ಧರ್ಮರಾಜನಿಗಾಗಿ ಮುಖ್ಯವಾದ ಉಪಹಾರಗಳನ್ನು ಕಳುಹಿಸಿದನು. ಕುವಿಂದನು ವಿವಿಧವಸ್ತ್ರಗಳನ್ನೂ, ಬಂಗಾರದ ನಾಣ್ಯಗಳನ್ನೂ ಕಳುಹಿಸಿದನು. ಕಾಶ್ಮೀರರಾಜನು ಶುದ್ಧವಾಗಿಯೂ, ಮಧುರವಾಗಿಯೂ ಇರುವ ದ್ರಾಕ್ಷಾರಸದ ಮಧುವನ್ನು ಕಳುಹಿಸಿಕೊಟ್ಟನು. ಯವನರು ಪರ್ವತಪ್ರದೇಶಗಳಲ್ಲಿ ಹುಟ್ಟಿದ ಮನೋವೇಗವುಳ್ಳ ಕುದುರೆಗಳನ್ನೂ, ಬೆಲೆಯುಳ್ಳ ರತ್ನಕಂಬಳಿಗಳನ್ನೂ ತಂದಿತ್ತರು. ಆ ರತ್ನಕಂಬಳಿಗಳು ಎಷ್ಟೋ ಅಂದವಾಗಿ, ತೆಳುವಾಗಿ, ಹೊಸವಿಧವಾಗಿದ್ದುವು. ಆ ಯವನರು ಇನ್ನೂ ಅನೇಕ ರತ್ನಗಳನ್ನು ತಂದು ಬಾಗಿಲಲ್ಲಿ ಕಾದಿದ್ದರು. ಕಳಿಂಗರಾಜನಾದ ಕೃಶಾಯುವು ಮುತ್ತುಗಳನ್ನೂ, ರತ್ನಗಳನ್ನೂ ತಂದುಕೊಟ್ಟನು. ಅಂಗರಾಜನು ಒಳ್ಳೇ ಒಡವೆಗಳಿಂದಲಂಕೃತರಾದ ಸುಂದರಸ್ತ್ರೀಯರನ್ನು ತಂದಿತ್ತನು. ವಂಗರಾಜನು ದಕ್ಷಿಣಸಮುದ್ರತೀರದಿಂದ ನೂರಾರುಸುವರ್ಣದ ಮಂಚಗಳನ್ನೂ, ಸಾವಿರಾರು ಹೊಸವಸ್ತ್ರಗಳನ್ನೂ, ಸಮುದ್ರಜನ್ಯವಾದ ರತ್ನಗಳನ್ನೂ, ತನಗೆ ಇತರರಾಜರಿಂದ ಬಂದ ಕಪ್ಪಗಳನ್ನೂ ತಂದುಕೊಟ್ಟನು. ಪಾಂಡ್ಯರಾಜನು ದರ್ದುರಪರ್ವತದಲ್ಲಿ ಹುಟ್ಟಿದ ತೊಂಭತ್ತಾರು ಭಾರತೂಕವುಳ್ಳ ಗಂಧದ ಕಟ್ಟಿಗೆಗಳನ್ನೂ, ಅಷ್ಟೇ ಶಂಖಗಳನ್ನೂ ತಂದುಕೊಟ್ಟನು. ಹಾಗೆಯೇ ಚೋಳ ಕೇರಳ ರಾಜರಿಬ್ಬರೂ ಅಗರು ಚಂದನಗಳನ್ನೂ, ವೈಡೂರ್ಯಗಳನ್ನೂ ಅಪರಿಮಿತವಾಗಿ ತಂದುಕೊಟ್ಟರು. ಅಶ್ಮಕನೆಂಬ ರಾಜನು ಕೊಡಹಾಲುಕರೆಯುವ, ಮತ್ತು ಚಿನ್ನದ ಕೊಂಬುಳ್ಳ ಹತ್ತುಸಾವಿರ ಗೋವುಗಳನ್ನು ಕರುಗಳೊಡನೆ ಆ ಧರ್ಮರಾಜನಿಗಾಗಿ

ತಂದುಕೊಟ್ಟನು. ಸೈಂಧವರಾಜನು ಸಿಂಧುದೇಶದಲ್ಲಿ ಹುಟ್ಟಿದ ಸುವರ್ಣಾಲಂಕೃತಗಳಾದ ಇಪ್ಪತ್ತೈದುಸಾವಿರ ಉತ್ತಮಾಶ್ವಗಳನ್ನು ತಂದುಕೊಟ್ಟನು. ಸೌವೀರನು, ಆನೆಗಳಿಂದೆಳೆಯಲ್ಪಡತಕ್ಕ ಮುನ್ನೂರು ರಥಗಳನ್ನು ತಂದುಕೊಟ್ಟನು. ಆ ರಥಗಳೆಲ್ಲವೂ ಸುವರ್ಣರತ್ನಗಳಿಂದಲೇ ಅಲಂಕೃತವಾಗಿ ಮಧ್ಯಾಹ್ನದ ಸೂರ್ಯನಂತೆ ಜ್ವಲಿಸುತಿದ್ದುವು. ಈ ರಥಗಳೊಡನೆ ಅವನು ಇನ್ನೂ ಬೇರೆ ಕಪ್ಪಗಳನ್ನೂ ಯುಧಿಷ್ಠಿರನಿಗೆ ತಂದೊಪ್ಪಿಸಿದನು. ಅವಂತಿರಾಜನು ವಿವಿಧರತ್ನಗಳನ್ನೂ, ಹಾರಗಳು, ಅಂಗದಗಳು ಮುಂತಾದ ಒಡವೆಗಳನ್ನೂ, ಹತ್ತುಸಾವಿರದಷ್ಟು ದಾಸೀಜನರನ್ನೂ, ಧರ್ಮರಾಜನಿಗೆ ಕಪ್ಪವನ್ನಾಗಿ ತೆಗೆದುಕೊಂಡುಬಂದು ಸಭಾದ್ವಾರದಲ್ಲಿ ಕಾದಿದ್ದನು. ದಶಾರ್ಣರಾಜನೂ, ಚೇದಿರಾಜನೂ, ಶೂರಸೇನರಾಜನೂ, ಉತ್ತಮವಸ್ತ್ರಗಳು, ವಿವಿಧರತ್ನಗಳು ಮುಂತಾದ ಕಾಣಿಕೆಗಳನ್ನು ತಂದುಕೊಟ್ಟರು. ಕಾಶೀರಾಜನು ಎಂಭತ್ತುಸಾವಿರ ಗೋವುಗಳನ್ನೂ, ಎಂಟುನೂರು ಆನೆಗಳನ್ನೂ, ಸಿಂಧುನದೀ ತೀರದಲ್ಲಿ ಹುಟ್ಟಿದ ಹತ್ತುಸಾವಿರ ಕುದುರೆಗಳನ್ನೂ, ಬೆಲೆಯುಳ್ಳ ರತ್ನಗಳನ್ನೂ ಕಾಣಿಕೆಯಾಗಿ ತಂದುಕೊಟ್ಟನು. ವಿದೇಹರಾಜನಾದ ಕೃತಕ್ಷಣನೂ, ಕೋಸಲದೇಶದ ಬೃಹದ್ಬಲನೂ, ಹದಿನಾಲ್ಕುಸಾವಿರ ಉತ್ತಮಾಶ್ವಗಳನ್ನು ತಂದುಕೊಟ್ಟನು. ಶೈಬ್ಯನು ವಸನಾದಿಗಳೊಡನೆಯೂ, ತ್ರಿಗರ್ತನು ಮಾಲವರೊಡನೆಯೂ ಬಂದು, ಒಬ್ಬೊಬ್ಬರೂ ಅಪರಿಮಿತಧನವನ್ನು ಪಾಂಡವರಿಗೆ ಕೊಟ್ಟರು. ಕಚ್ಛದೇಶದ ರಾಜನು ಉತ್ತಮಹಾರಗಳು, ಆಭರಣಗಳು, ಒಳ್ಳೇ ಎಳಪ್ರಾಯವುಳ್ಳ ಸ್ತ್ರೀಯರು, ಸಾವಿರಾರು ಮಂದಿ ದಾಸಿಯರು, ಇವನ್ನೆಲ್ಲ ಧರ್ಮರಾಜನಿಗೆ ಕಾಣಿಕೆಯಾಗಿ ತಂದುಕೊಟ್ಟರು. ಮತ್ತು ಅವನು ಬ್ರಾಹ್ಮಣೋತ್ತಮರು ಧರಿಸತಕ್ಕ ಶುದ್ಧವಾದ ಕಂಬಳಿಗಳನ್ನೂ ಕಾಣಿಕೆಯಾಗಿ ತಂದು, ಧರ್ಮರಾಜನ ದರ್ಶನಕ್ಕಾಗಿ ಬಾಗಿಲಲ್ಲಿ ಕಾದಿದ್ದನು. ಮಳೆನೀರೂ, ನದಿಯನೀರೂ ಸಮೃದ್ಧವಾಗಿರುವುದರಿಂದ ಕೃಷಿಯಿಲ್ಲದೆಯೇ ಬೆಳೆಯನ್ನು ಪಡೆಯುವವರೂ, ಸಮುದ್ರಪ್ರಾಂತದಲ್ಲಿ ಹುಟ್ಟಿ ಸಿಂಧುನದೀತೀರದಲ್ಲಿ ವಾಸಿಸುವವರೂ ಆದ ದ್ರುಮ, ಪಾರದ, ಕೈಶ್ಯ, ಕೈರಾತಕದೇಶದವರು, ವಿವಿಧರತ್ನಗಳನ್ನೂ, ಕುರಿ, ಮೇಕೆ, ಹಸು, ಹೇಸರಗತ್ತೆ, ಒಂಟೆ,

ಮುಂತಾದ ಮೃಗಗಳನ್ನೂ, ಸುವರ್ಣಗಳನ್ನೂ, ಹಣ್ಣುಗಳಿಂದ ತೆಗೆದ ಜೇನನ್ನೂ, ನಾನಾಬಗೆಯ ಕಂಬಳಿಗಳನ್ನೂ, ಧರ್ಮರಾಜನಿಗೆ ಕಾಣಿಕೆಯಾಗಿ ತಂದು ದ್ವಾರದಲ್ಲಿ ಕಾದಿದ್ದರು. ಮ್ಲೇಚ್ಛಾಧಿಪತಿಯೂ, ಪ್ರಾಗ್ಜ್ಯೋತಿಷ ರಾಜನೂ ಆದ ಭಗದತ್ತನು, ಅನೇಕ ಯವನಸೈನ್ಯಗಳೊಡಗೂಡಿ, ಆಜಾನೇಯಗಳೆಂಬ ಉತ್ತಮ ಜಾತಿಯ ಕುದುರೆಗಳನ್ನೂ, ಬೇರೆ ಕಾಣಿಕೆಗಳನ್ನೂ, ಕುದುರೆಗಳಿಗೆ ತೊಡಿಸತಕ್ಕ ಕೆಲವು ಉತ್ತಮಾಭರಣಗಳನ್ನೂ ತಂದು ಬಾಗಿಲಲ್ಲಿ ನಿವಾರಿತನಾಗಿ ಕಾಲನಿರೀಕ್ಷಣೆಮಾಡುತ್ತ ನಿಂತಿದ್ದನು. ಇನ್ನೂ ಅಲ್ಲಿ ದ್ವ್ಯಕ್ಷರು, ತ್ರ್ಯಕ್ಷರು, ಲಲಾಟಾಕ್ಷರು, ಔಷ್ಣೀಷರು, ಅಹಯರು, ಬಾಹುಕರು, ಪುರುಷಾದಕರು, ಮುಂತಾದ ವಿಚಿತ್ರಜಾತಿಯವರೆಲ್ಲ ಕಾಣಿಕೆಗಳನ್ನು ತಂದು ಬಾಗಿಲಲ್ಲ ನಿರೀಕ್ಷಿಸುತಿದ್ದರು. ಏಕಪಾದರೆಂಬ ಒಂದು ಪಂಗಡದವರು ಚಿನ್ನ ಬೆಳ್ಳಿ ಮೊದಲಾದ ಧನಗಳೊಡನೆ ದ್ವಾರದಲ್ಲಿ ಕಾದಿದ್ದರಲ್ಲದೆ, ಪಟ್ಟೆಹುಳುಗಳು, ಗಿಳಿಗಳು, ಇಂದ್ರಧನುಸ್ಸು, ಸಂಜೆಗೆಂಪು, ಮುಂತಾದ ವಿವಿಧವರ್ಣಗಳುಳ್ಳ ಕಾಡುಕುದುರೆಗಳನ್ನೂ, ಭಂಗಾರದ ಗಟ್ಟಿಗಳನ್ನೂ ಕಾಣಿಕೆಯಾಗಿ ತಂದಿದ್ದರು. ಸಿಂಹಳರಾಜನು ವಿಶೇಷಧನವನ್ನೂ, ನೂರು ಭಾರದಷ್ಟು ಕೆಂಪು, ಕಪ್ಪು, ಹಳದಿ ಬಣ್ಣದ ಗಂಧದ ಕಟ್ಟಿಗೆಗಳನ್ನೂ ಸಾಗಿಸಿತಂದು ಬಾಗಿಲಲ್ಲಿ ಕಾದಿದ್ದನು. ನಗ್ನ ಬರ್ಬರ ದೇಶಾಧಿಪತಿಗಳು, ಲಕ್ಷ ದಾಸಿಯರನ್ನೂ, ಸಾವಿರ ಕಂಬಳಿಗಳನ್ನೂ ತಂದು ಕಾದಿದ್ದರಲ್ಲದೆ, ಹಟಸಾಧಕರಾದ ಪೌಂಡ್ರ ತಾಮ್ರಲಿಪ್ತರೆಂಬ ರಾಜರು, ಗಂಧ ಬೆಳ್ಳಿಗಳನ್ನೂ, ಅಗರುಚಂದನಗಳಿಂದಲೂ, ದಂತದಿಂದಲೂ ಮಾಡಿದ ಹಲವು ಸಾಮಗ್ರಿಗಳನ್ನೂ, ಜಾಯಿಕಾಯಿ, ತಕ್ಕೋಲ, ಲವಂಗ, ಕರ್ಪೂರ ಮೊದಲಾದ ಸುಗಂಧವಸ್ತುಗಳನ್ನೂ ತಂದು ಬಾಗಿಲಲ್ಲಿಯೇ ಕಾದಿದ್ದರು. ಶೈಲೇಯನೆಂಬ ರಾಜನು ಬಿಳೀ ಪಟ್ಟೆಮಡಿಗಳನ್ನು ಹಿಡಿದು ನಿಂತಿದ್ದನು. ಚೀನರು, ಹೂಣರು, ಕಕ್ಷರು, ಕಾಶರು ಎಂಬೀ ಪರ್ವತವಾಸಿಗಳಾದ ವೀರರು, ಹದಿನಾಲ್ಕುಸಾವಿರದಷ್ಟು ಸುಶಿಕ್ಷಿತಗಳಾದ ಕುದುರೆಗಳನ್ನೂ, ಶಾಖವುಳ್ಳ ಕಂಬಳಿಗಳನ್ನೂ, ಬಾಹ್ಲೀಕ, ಚೀನದೇಶಗಳಲ್ಲಿ ಹುಟ್ಟಿದ ಪಟ್ಟೆಹುಳುಗಳಿಂದಲೂ, ರತ್ನಗಳಿಂದಲೂ ಮಾಡಿದ ಉತ್ತಮವಾದ ಬಣ್ಣವುಳ್ಳ ಮಡಿಗಳನ್ನೂ, ರುಚಿಯಾದ ಫಲಗಳನ್ನೂ, ವಾಸನಾ

ದ್ರವ್ಯಗಳನ್ನೂ ತಂದು ನಿಂತಿದ್ದು, ರಾಜಾಜ್ಞೆಯಾದಮೇಲೆ ಒಳಕ್ಕೆ ಪ್ರವೇಶಿಸಿದರು. ಖರ್ವಟ, ತೋಮರ, ಶೂರ, ವರ್ಧನಕರೆಂಬ ದೇಶದವರು, ವಿವಿಧವಸ್ತ್ರಗಳನ್ನು ತಂದಿದ್ದರು. ಪ್ರಾಕ್ಕೋಟ, ನಾಟಕೇಯ, ನಂದಿನಗರ, ನಾಪಿತ, ತ್ರೈಪುರ, ಪಂಚಮೇಯ, ಊರುಜರೇ ಮೊದಲಾದ ಆಟವಿಕರಾಜರೂ ಅಲ್ಲಿ ಕಪ್ಪಗಳೊಡನೆ ಕಾದಿದ್ದರು. ಶಕ, ತುಷಾರ, ರೋಮಕ, ಶೃಂಗ, ಅಶ್ಮಕ, ಸುಗಮರೆಂಬ ಅನೇಕರಾಜರು, ಒಳ್ಳೇ ಅಪರಂಜಿ ಭಂಗಾರಗಳನ್ನೂ, ಉತ್ತಮ ಖಡ್ಗಗಳನ್ನೂ, ಯಷ್ಟಿ, ಶಕ್ತಿ, ಕೊಡಲಿ, ಮೊದಲಾದ ಆಯುಧಗಳನ್ನೂ, ಹತ್ತಿಯ ನೂಲಿನಿಂದ ಮಾಡಿದ ನವಿರುಬಟ್ಟೆಗಳನ್ನೂ, ಹದಮಾಡಿದ ಮೇಕೆಯ ತೊಗಲನ್ನೂ, ಮದಿಸಿದ ಸೈನ್ಯಗಳನ್ನೂ ತಂದು, ಬಾಗಿಲಲ್ಲಿ ತಡೆಯಲ್ಪಟ್ಟು, ಬಹಳ ಹೊತ್ತು ಕಾದಿದ್ದರು. ಅವರು ತಂದ ಹತ್ತುಕೋಟಿನಾಣ್ಯಗಳನ್ನು ನಾನೇ ಆಮೇಲೆ ಎಣಿಸಿ ತೆಗೆದಿಟ್ಟೆನು. ಪೂರ್ವದೇಶದ ರಾಜನೊಬ್ಬನು, ಸುವರ್ಣರತ್ನಗಳಿಂದಲೂ, ಆನೆಯ ದಂತದಿಂದಲೂ ಚಿತ್ರಕೆಲಸಮಾಡಲ್ಪಟ್ಟ ವಾಹನಗಳು, ಶಯನಗಳು, ಆಸನಗಳು, ಸುವರ್ಣಾಲಂಕೃತಗಳಾದ ಒಳ್ಳೇ ಕುದುರೆಗಳಮೇಲೆ ಹೂಡಿ, ಹುಲಿದೊಗಲನ್ನು ಹೊದ್ದಿಸಿ, ವಿಚಿತ್ರಾಲಂಕಾರಗಳಿಂದ ಕೂಡಿದ ಅನೇಕರಥಗಳು, ಇವನ್ನೆಲ್ಲ ತಂದುದಲ್ಲದೆ, ಬಿಲ್ಲುಗಳು, ಅರ್ಧಚಂದ್ರಬಾಣಗಳು, ನಾರಾಚಗಳು, ವಿವಿಧಾಸ್ತ್ರಗಳು ಮುಂತಾಗಿ ಇನ್ನೂ ಹಲವು ಕಾಣಿಕೆಗಳೊಡನೆ ಆ ಯಾಗಶಾಲೆಗೆ ಬಂದಿದ್ದನು. ಅವನು ಎರಡುಸಾವಿರಪಟ್ಟೆಮಡಿಗಳು, ಹತ್ತುಸಾವಿರನಾರುಮಡಿಗಳು, ಕಂಚಿನಪಾತ್ರೆಗಳು, ಬೆಲೆಯುಳ್ಳ ರತ್ನಕಂಬಳಿಗಳು, ವಿವಿಧರತ್ನಗಳು ಇವನ್ನೆಲ್ಲ ತಂದುಕೊಟ್ಟನು. ಸಮುದ್ರತೀರವಾಸಿಗಳಾದ ಮನುಷ್ಯರೂ, ಮಾಲವರೂ, ತಮ್ಮಲ್ಲಿದ್ದ ರತ್ನಗಳನ್ನೆಲ್ಲ ತಂದುಕೊಟ್ಟರು. ಸೌರಾಷ್ಟ್ರರಾಜನು ಕೋಟಿ ಕೊಳಗದಷ್ಟು ಗೋಧುಮೆ ಮುಂತಾದ ಧಾನ್ಯಗಳನ್ನೂ, ರತ್ನಗಳನ್ನೂ ಕೊಟ್ಟು ಯಾಗಶಾಲೆಗೆ ಬಂದನು. ಆ ಸೌರಾಷ್ಟ್ರರಾಜನು, ಎರಡು ಕೊಳಗ ಹಿಡಿಯುವ, ಹತ್ತುಸಾವಿರ ಎಣ್ಣೆಯ ಕೊಪ್ಪರಿಗೆಗಳನ್ನೂ ಸಾವಿರ ಬಂಡಿಗಳಲ್ಲಿ ಬೆಲ್ಲವನ್ನೂ ತುಂಬಿ ತಂದನು. ಇನ್ನೂ ಎಷ್ಟೋ ರಾಜರು ಎಷ್ಟೋ ರತ್ನಗಳನ್ನು ತಂದು ಧರ್ಮರಾಜನಿಗೆ ಕೊಟ್ಟರು.

ಪರ್ವತಾರಣ್ಯಗಳೊಡಗೂಡಿದ ಈ ಜಂಬೂದ್ವೀಪದ ಮೊತ್ತದಲ್ಲಿ ಧರ್ಮ ರಾಜನಿಗೆ ಕಪ್ಪವನ್ನು ತಂದುಕೊಡದ ರಾಜನೊಬ್ಬನಿಲ್ಲ. ಆ ಯಾಗಕ್ಕೆ ಬಾರದ ಮನುಷ್ಯನೊಬ್ಬನಿಲ್ಲ. ಜನಸಮೃದ್ಧವಾದ ಆ ಯಾಗಶಾಲೆಯು, ಇಂದ್ರಸಭೆಯಂತೆ ಪ್ರಕಾಶಿಸುತಿತ್ತು. ಆ ಯಾಗಕ್ಕೆ ಕಾಣಿಕೆಯಾಗಿ ಬಂದ ಧನರಾಶಿಗೆ ಮಿತಿಯಿಲ್ಲ! ಮೇರು ಮಂದರ ಪರ್ವತಗಳ ನಡುವೆ, ಶೈಲೋದೆ ಯೆಂಬ ನದೀತೀರದ ಬಿದಿರು ತೋಟಗಳಲ್ಲಿ ವಾಸಮಾಡುವ ಒಳ್ಳೇ ಗೌರವ ಸ್ಥರಾದ ಕಷ, ಪ್ರದರ, ದೀರ್ಘವೇಣು, ಪಾರದ, ಪುಳಿಂದ, ಕಂಕಣ, ಪರ ಕಂಕಣ ಮೊದಲಾದ ಮನುಷ್ಯರು, ಇರುವೆಗಳಿಂದ ರಂಧ್ರಗಳಮೂಲಕ ವಾಗಿ ಭೂಮಿಯಮೇಲಕ್ಕೆ ತಂದು ರಾಶಿಹಾಕಲ್ಪಟ್ಟಿದ್ದ ಪಿಪೀಲಿಕವೆಂಬ ಹೆಸರುಳ್ಳ ಅಪರಂಜಿಯ ಬಂಗಾರವನ್ನು ಕೊಳಗಗಳಿಂದಲೇ ಅಳೆದುಹಾಕು ವಷ್ಟು ರಾಶಿರಾಶಿಯಾಗಿ ತಂದುಕೊಟ್ಟರು. ಕಪ್ಪು, ಬಿಳುಪು ಬಾಲಗಳುಳ್ಳ ಜಿಂಕೆಗಳನ್ನೂ, ಹಿಮಾಲಯ ಪರ್ವತದ ಹೂಗಳಲ್ಲಿ ತೆಗೆದ ರುಚಿಯಾದ ಜೇ ನನ್ನೂ, ಉತ್ತರಕುರುದೇಶಗಳಿಂದಲೂ, ಕೈಲಾಸದ ಉತ್ತರಭಾಗದಿಂದಲೂ ತಂದ ಒಳ್ಳೇ ಶಕ್ತಿಯುಳ್ಳ ಮೂಲಿಕೆಗಳನ್ನೂ, ವ್ಯಾಘ್ರಮಲ್ಲರೆಂಬ ರಾಜರೂ ಇನ್ನೂ ಕೆಲವು ಪರ್ವತದೇಶಾಧಿಪತಿಗಳೂ ಧರ್ಮರಾಜನಿಗೆ ತಂದುಕೊಟ್ಟು, ನಮಸ್ಕಾರಮಾಡಿ ನಿಂತರು. ಹಿಮಾಲಯದ ಆಚೆಗೂ, ಉದಯಾದ್ರಿಯ ಪಕ್ಕದಲ್ಲಿಯೂ, ಸಮುದ್ರತೀರದಲ್ಲಿಯೂ, ಲೌಹಿತ್ಯವೆಂಬ ನದಿಯ ಸಮೀ ಪಲ್ಲಿಯೂ ವಾಸಮಾಡಿಕೊಂಡು, ಚರ್ಮವನ್ನುಟ್ಟು ಫಲಮೂಲಗಳಿಂದಲೇ ಜೀವಿಸುತ್ತಿರುವ ಕಿರಾತರು, ಗಂಧ, ಅಗಿಲು, ಕಂಬಳಿ, ತೊಗಲು, ಬೆಳ್ಳಿ, ಬಂಗಾರ, ರತ್ನದ ಕಲ್ಲುಗಳು, ವಾಸನಾದ್ರವ್ಯಗಳು, ಹತ್ತುಸಾವಿರಮಂದಿ ಕಿರಾತಜಾತಿಯ ದಾಸರುಗಳು, ಕಣ್ಣಿಗೆ ಇಂಪಾದ ಹಲವು ವಸ್ತುಗಳು, ಬಹುದೂರಕ್ಕೆ ಹೋಗತಕ್ಕ ಮೃದಪಕ್ಷಿಗಳು, ಬೆಟ್ಟದ ಗನಿಯೊಳಗೆ ಸಿಕ್ಕಿದ ಉತ್ತಮಬಂಗಾರಗಳು, ಇವನ್ನೆಲ್ಲ ಹಿಡಿದುಕೊಂಡು ಬಾಗಿಲಲ್ಲಿ ಕಾದಿದ್ದರು. ಕಾಪವ್ಯ, ದರದ, ದರ್ಪ, ಶೂರ, ಯಮಕ, ಔದುಂಬರ, ದುರ್ವಿಭಾಗ, ಕಾಶ್ಮೀರ, ಕುಮಾರ, ಗೌರಕ, ಹಂಸಕ, ಶಿಬಿ, ತ್ರಿಗರ್ತ, ಯೌಧೇಯ, ರುದ್ರಕ, ವಸುತೇಯ, ಮೌಲೇಯ, ದಾಹ, ಕ್ಷುದ್ರಕ, ಮಾಲ ವ, ಚೌಂಡಿಕ, ಔದಕ, ಸಾಲ್ವ, ಅಂಗ, ವಂಗ, ಯವನ, ಗಯರೆಂಬ

ಉತ್ತಮ ಜಾತಿಯ ವೀರರು ನೂರಾರು ವರಿಸೆಗಳಾಗಿ ಕಾಣಿಕೆಗಳನ್ನು ಹಿಡಿದುನಿಂತು, ಧರ್ಮರಾಜನಿಗಾಗಿ ಕಾದಿದ್ದರು. ಮತ್ತು ಮಗಧ, ಕಳಿಂಗ, ತಾಮ್ರಯುಕ್ತ, ಪುಂಡ್ರಕರೆಂಬ ರಾಜರು, 'ಕೌಶಿಕ'ವೆಂಬ ನಾರುಮಡಿಗಳನ್ನೂ, 'ಪತ್ರೋರ್ಣ'ಗಳೆಂಬ ಪಟ್ಟೆಮಡಿಗಳನ್ನೂ ಧರ್ಮರಾಜನಿಗಾಗಿ ತಂದುಕೊಟ್ಟರು. ಈ ರಾಜರೆಲ್ಲರೂ ಇಷ್ಟೊಂದು ಕಾಣಿಕೆಗಳನ್ನು ತಂದಿದ್ದರೂ, ರಾಜನ ಪ್ರೀತಿಯನ್ನು ಪಡೆಯದೆ, ದ್ವಾರಪಾಲಕರಿಂದ ಬಾಗಿಲಲ್ಲಿಯೇ ತಡೆಯಲ್ಪಟ್ಟು ಸಮಯವನ್ನು ನಿರೀಕ್ಷಿಸುತಿದ್ದರು. ನೊಗದಂತಿರುವ ದೊಡ್ಡ ಕೊಂಬುಗಳಿಂಲೂ, ಚಿನ್ನದ ಹೊರಜಿಗಳಿಂದಲೂ, ಕಮಲದಂತೆ ವೈಬಣ್ಣದಿಂದಲೂ, ರತ್ನಕಂಬಳಿಗಳ ಕೌದಿಗಳಿಂದಲೂ ಕೂಡಿ, ಬೆಟ್ಟದಂತಿರುವ ಸಾವಿರ ಮದದಾನೆಗಳನ್ನು ಒಬ್ಬೊಬ್ಬರಾಜನೂ ಧರ್ಮರಾಜನಿಗೆ ಕಾಣಿಕೆಯಾಗಿ ತಂದು ನಿಲ್ಲಿಸಿಟ್ಟುಕೊಂಡಿದ್ದನು. ಈ ಆನೆಗಳು ಕಾಮ್ಯಕವೆಂಬ ತಟಾಕದ ಸಮೀಪದಲ್ಲಿ ಬೆಳೆದ ಒಳ್ಳೇ ಜಾತಿಯವುಗಳಾಗಿ, ಅತ್ಯಂತ ಸಾಧುಗಳಾಗಿ, ಅಂದವಾಗಿಯೂ ಇದ್ದುವು. ಇಂಥವರು ಕೂಡ ಸುಲಭವಾಗಿ ಒಳಕ್ಕೆ ಹೋಗಲು ಅವಕಾಶವಿಲ್ಲದೆ ದ್ವಾರಪಾಲಕರಿಂದ ತಡೆಯಲ್ಪಟ್ಟು ನಿಂತಿದ್ದರು. ವಿದೇಹರು, ಪುಂಡ್ರರು, ಗೌಲೇಯರು, ತಾಮ್ರಲಿಪ್ತಕರು, ಮರುಕರು, ಕೌಶಿಕರು, ದರ್ದರು, ಭೌಮೇಯರು, ನಟನಾಟಕರು, ಕರ್ಣಾಟಕರು, ಕಾಂಸ್ಯಕುಟ್ಟರು, ಪದ್ಮಜಾಲರು, ಸತೀನರರು, ದಾಕ್ಷಿಣಾತ್ಯರು, ಪುಳಿಂದರು, ಶವೇರರು, ಗರ್ಗರರು, ಭೀರಕರು, ಪಲ್ಲವರು, ತುಂಬಕರು, ಕೌಶಿಕರು ಮೊದಲಾಗಿ ಇನ್ನೂ ಅನೇಕರಾಜರು ಎಷ್ಟೆಷ್ಟೋ ರತ್ನಗಳನ್ನು ಕಾಣಿಕೆಯಾಗಿ ತಂದಿದ್ದರು. ಸಿಂಹಳರು ಸಮುದ್ರಜನ್ಯಗಳಾದ ಉತ್ತಮವೈಡೂರ್ಯಗಳಗನ್ನೂ, ಮುತ್ತುಚಿಪ್ಪುಗಳನ್ನೂ ಬಲಮುರಿ ಶಂಖಗಳನ್ನೂ ತಂದುಕೊಟ್ಟರು. ಇಂದ್ರಾನುಚರನಾದ ಚಿತ್ರರಥನೆಂಬ ಗಂಧರ್ವರಾಜನು, ರತ್ನದ ಜೀನುಗಳಿಂದ ಅಲಂಕೃತಗಳಾಗಿ, ಕಣ್ಣಿನ ಕೊನೆಯಲ್ಲಿ ಕೆಂಪುಬಣ್ಣವುಳ್ಳ ಉತ್ತಮಜಾತಿಯ ಕುದುರೆಗಳು ನಾನೂರನ್ನು ಧರ್ಮರಾಜನಿಗೆ ಕಳುಹಿಸಿಕೊಟ್ಟನು. ತುಂಬುರುವೆಂಬ ಗಂಧರ್ವನು, ಮಾವಿನೆಯಲೆಯ ಬಣ್ಣವುಳ್ಳ ನೂರು ಕುದುರೆಗಳನ್ನು ಸುವರ್ಣಾಲಂಕಾರಗಳಿಂದ ಅಲಂಕರಿಸಿ, ಧರ್ಮರಾಜನಿಗೆ ತಂದೊಪ್ಪಿಸಿದನು.

ಶುಕದೇಶದ ರಾಜನು ನೂರು ಉತ್ತಮಜಾತಿಯ ಗಜಗಳನ್ನು ತಂದಿತ್ತನು. ಮತ್ಸ್ಯದೇಶದ ವಿರಾಟನು ಎರಡುಸಾವಿರ ಮದದಾನೆಗಳನ್ನು ತಂದುಕೊಟ್ಟನು. ಪಾಂಸುರಾಷ್ಟ್ರದ ವಸುಧಾನನೆಂಬ ರಾಜನು ಒಳ್ಳೇ ಎಳಪ್ರಾಯವುಳ್ಳ ಮತ್ತು ಸುವರ್ಣಾಲಂಕೃತಗಳಾದ ಎರಡುಸಾವಿರ ಕುದುರೆಗಳನ್ನೂ, ಇಪ್ಪತ್ತಾರು ಆನೆಗಳನ್ನೂ ತಂದುಕೊಟ್ಟನು. ದ್ರುಪದನು ಹದಿನಾಲ್ಕುಸಾವಿರ ದಾಸಿಯರನ್ನೂ, ಪತ್ನಿಯರೊಡಗೂಡಿದ ಹತ್ತುಸಾವಿರ ದಾಸರನ್ನೂ, ಆನೆಗಳಮೇಲೆ ಹೂಡಿದ ಇಪ್ಪತ್ತಾರು ರಥಗಳನ್ನೂ, ಪೂರ್ಣವಾದ ತನ್ನ ರಾಜ್ಯವನ್ನೂ ಪಾಂಡವರ ಯಾಗಕ್ಕಾಗಿಯೇ ಒಪ್ಪಿಸಿದ್ದನು. ಕೃಷ್ಣನು ಅರ್ಜುನನ ಬಹುಮಾನಕ್ಕಾಗಿ ಹದಿನಾಲ್ಕುಸಾವಿರ ಆನೆಗಳನ್ನು ತಂದುಕೊಟ್ಟನು. ಜನಕಾ! ಅರ್ಜುನನಿಗೆ ಕೃಷ್ಣನೇ ಪ್ರಾಣವು. ಕೃಷ್ಣನಿಗೆ ಅರ್ಜುನನೇ ಪ್ರಾಣವು. ಕೃಷ್ಣನು ಯಾವುದನ್ನು ಹೇಳಿದರೂ ಅರ್ಜುನನು ಅದನ್ನು ತಪ್ಪದೆ ನಡೆಸುವನು. ಅರ್ಜುನನಿಗಾಗಿ ಕೃಷ್ಣನು ಸ್ವರ್ಗಲೋಕವನ್ನಾದರೂ ಬಿಟ್ಟುಕೊಡುವನು. ಕೃಷ್ಣನಿಗಾಗಿ ಅರ್ಜುನನು ಪ್ರಾಣಗಳನ್ನಾದರೂ ಬಿಡುವನು. ಚೋಳಪಾಂಡ್ಯರೆಂಬ ರಾಜರಿಬ್ಬರೂ ಮಲಯದುರ್ದರಗಳೆಂಬ ಬೆಟ್ಟಗಳಿಂದ ಒಳ್ಳೇ ಸುವಾಸನೆಯುಳ್ಳ ಗಂಧದ ಕಟ್ಟಿಗೆಗಳನ್ನು ತಂದು, ಅದನ್ನರೆದು, ಚಿನ್ನದ ಕಲಶಗಳಲ್ಲಿ ತುಂಬಿ ತಂದರು. ಅಲ್ಲದೆ, ಗಂಧದ ಕೊರಡುಗಳನ್ನೂ, ಅಗಿಲುಚಂದನಗಳನ್ನೂ ತಂದುಕೊಟ್ಟರು. ಒಳ್ಳೇ ಕಾಂತಿಯುಳ್ಳ ರತ್ನಗಳನ್ನೂ, ಸರಿಗೆಯ ದುಕೂಲಗಳನ್ನೂ ತಂದರು. ಇವರಿಗೂ ಅಲ್ಲಿ ಸುಲಭವಾಗಿ ಒಳಗೆ ಪ್ರವೇಶಿಸುವುದಕ್ಕೆ ಅವಕಾಶವಿಲ್ಲದೆ, ಬಾಗಿಲಲ್ಲಿಯೇ ಕಾದಿದ್ದರು. ಒಳ್ಳೇ ಉಡುಪುಗಳನ್ನುಟ್ಟು; ಕೆಂಪಾದ ಕಡೆಗಣ್ಣುಗಳಿಂದ ರೂಪವಂತರಾಗಿದ್ದ ಸಿಂಹಳದೇಶದವರೆಷ್ಟೋ ಮಂದಿ, ವೈಡೂರ್ಯಗಳು, ಚಿತ್ರಕಂಬಳಿ ಮೊದಲಾದ ಕಾಣಿಕೆಗಳನ್ನಿಟ್ಟುಕೊಂಡು ಬಾಗಿಲಲ್ಲಿಯೇ ಕಾದಿದ್ದರು. ಮತ್ತು ಬ್ರಾಹ್ಮಣರೂ, ಪರಾಜಿತರಾದ ಕ್ಷತ್ರಿಯರೂ, ವೈಶ್ಯರೂ, ಮ್ಲೇಚ್ಛರೂ, ಪ್ರಥಮ, ಮಧ್ಯಮ, ಅಧಮವರ್ಣದವರೂ, ಇವರೆಲ್ಲರೂ ಧರ್ಮರಾಜನಿಗಾಗಿ ಕಾಣಿಕೆಯನ್ನು ತಂದಿದ್ದರು. ಎಲ್ಲಾ ದೇಶದಿಂದ ಎಲ್ಲಾಜಾತಿಯವರೂ ಅಲ್ಲಿಗೆ ಬಂದಿದ್ದುದ

ರಿಂದ, ಈ ಜಗತ್ತೆಲ್ಲಾ ಆ ಯುಧಿಷ್ಠಿರನ ಯಾಗಸಭೆಯಲ್ಲಿಯೇ ಕೂಡಿದ್ದಂತೆ ಕಾಣಿಸಿತು. ನನ್ನ ಶತ್ರುಗಳಾದ ಆ ಪಾಂಡವರಿಗೆ ರಾಜರಿಂದ ಬಂದ ಕಾಣಿಕೆಗಳನ್ನು ನೋಡಿದಾಗಲೇ, ನನಗೆ ದುಃಖದಿಂದ ಪ್ರಾಣತ್ಯಾಗ ಮಾಡಬೇಕೆಂದು ತೋರಿತು. ಜನಕಾ ! ಆ ಧರ್ಮರಾಜನು ಆಮರೂಪವಾಗಿಯೂ, ಪಕ್ವರೂಪವಾಗಿಯೂ, ತಮ್ಮ ತಮ್ಮ ಸೇವಕರಲ್ಲಿ ಎಷ್ಟು ಮಂದಿಗೆ ಹೇಗೆ ಭೋಜನ ಪದಾರ್ಥಗಳನ್ನು ವಿಭಾಗಿಸಿಕೊಟ್ಟನೋ, ಅದನ್ನು ಕುರಿತು ಕೆಲವು ಸಂಗತಿಗಳನ್ನು ತಿಳಿಸುವೆನು ಕೇಳು. ಆನೆಯ ಮಾವುತರು, ಕುದುರೆಯ ರಾಹುತರು, ಇವರ ಸಂಖ್ಯೆಯು ಮೂರು ಕೋಟಿಯೂ ಹದಿನಾಲ್ಕುಸಾವಿರವಿದ್ದಿತು. ಹತ್ತುಕೋಟಿ ರಥಿಕರಿದ್ದರು. ಕಾಲಾಳುಗಳಿಗೆ ಲೆಕ್ಕವೇ ಇಲ್ಲ. ಒಂದುಕಡೆಯಲ್ಲಿ ಧಾನ್ಯಗಳನ್ನು ಅಳತೆಮಾಡುವುದು, ಒಂದು ಕಡೆಯಲ್ಲಿ ಪಕ್ವಮಾಡುವುದು, ಒಡನೆಯೇ ಬಡಿಸುವುದು, ಮತ್ತೊಂದು ಕಡೆಯಲ್ಲಿ ಶುದ್ಧಿಗಾಗಿ ಪುಣ್ಯಾಹಘೋಷಗಳನ್ನು ಮಾಡುವುದು. ಇವು ಯಾವಾಗಲೂ ಎಡೆಬಿಡದೆ ನಡೆಯುತಿದ್ದುವು. ಆ ಯಾಗಸಭೆಯಲ್ಲಿ ಯಾವ ಜಾತಿಯಲ್ಲಿಯೇ ಆಗಲಿ, ತಿನ್ನದವನೂ, ಕುಡಿಯದವನೂ, ಅಲಂಕಾರವಿಲ್ಲದವನೂ, ಸತ್ಕಾರಹೊಂದದವನೂ ಒಬ್ಬನಾದರೂ ನನ್ನ ಕಣ್ಣಿಗೆ ಬೀಳಲಿಲ್ಲ. ಅಲ್ಲಿ ಯುಧಿಷ್ಠಿರನಿಂದ ಆದರಿಸಲ್ಪಟ್ಟ ಸ್ನಾತಕರ ಮತ್ತು ಗೃಹಸ್ಥರ ಸಂಖ್ಯೆಯೇ ಎಂಭತ್ತೆಂಟುಸಾವಿರದಷ್ಟಿದ್ದಿತು. ಅವರಲ್ಲಿ ಒಬ್ಬೊಬ್ಬರಿಗೂ ಮೂವತ್ತುಮಂದಿ ಪರಿಚಾರಕರು ! ಅವರೆಲ್ಲರೂ ಮನಃಪೂರ್ವಕವಾದ ತೃಪ್ತಿಯಿಂದ ಯುಧಿಷ್ಠಿರನಿಗೆ “ ನಿನ್ನ ಶತ್ರುಗಳೆಲ್ಲರೂ ನಾಶವಾಗಲಿ” ಎಂದು ಆಶೀರ್ವಾದಮಾಡುತ್ತಲೇ ಇದ್ದರು. ಇದಲ್ಲದೆ ಧರ್ಮರಾಜನ ಮನೆಯಲ್ಲಿ ಜಿತೇಂದ್ರಿಯರಾದ ಹತ್ತುಸಾವಿರಮಂದಿ ಯತಿಗಳು ಚಿನ್ನದ ತಟ್ಟೆಗಳಲ್ಲಿ ಊಟಮಾಡುತಿದ್ದರು. ಓ ಜನಕಾ ! ಅಲ್ಲಿ ಆ ಪಾಂಡವಪತ್ನಿಯಾದ ದ್ರೌಪದಿಯು ತಾನು ಭೋಜನಮಾಡದೆಯೇ ಇದ್ದು, ಗೂನರು, ಕುಳ್ಳರು, ಮೊದಲಾದ ಅಂಗಹೀನರಲ್ಲಿ ಊಟಮಾಡಿದವರಾರು ಮಾಡದವರಾರೆಂಬದನ್ನು ತಾನೇ ಗಮನಿಸುತಿದ್ದಳು. ಮಹಾರಾಜಾ ! ಪಾಂಚಾಲರು ಆ ಪಾಂಡವರಿಗೆ ಸಂಬಂಧಿಗಳಾಗಿ, ಅಂಧಕವೃಷ್ಣಿಗಳು

ಸ್ನೇಹಿತರಾಗಿದ್ದುದರಿಂದ, ಅವರಿಬ್ಬರುಮಾತ್ರ ಧರ್ಮರಾಜನಿಗೆ ಯಾವು ದನ್ನೂ ಕಪ್ಪರೂಪವಾಗಿ ತಂದುಕೊಡಲಿಲ್ಲ'' ಎಂದನು.

ಇದು ಎಪ್ಪತ್ತೆಂಟನೆಯ ಅಧ್ಯಾಯವು.

{ ದುರ್ಯೋಧನನನು ಧೃತರಾಷ್ಟ್ರನಿಗೆ ರಾಜಸೂಯವನ್ನು ವರ್ಣಿಸಿ ಹೇಳಿದುದು. }

ಜನಕಾ! ಆ ಧರ್ಮರಾಜನನ್ನು ಎಂತೆಂತಹ ರಾಜಾಧಿರಾಜರೆಲ್ಲರೂ ವಿಧೇಯರಾಗಿ ಸೇವಿಸುತ್ತಿದ್ದವರೆಂದು ಬಲ್ಲೆ! ಸಚ್ಚರಿತ್ರವುಳ್ಳವರೂ, ಸತ್ಯ ಸಂಧರೂ, ಮಹಾವ್ರತನಿಷ್ಠರೂ, ವಿದ್ಯಾಪ್ರವೀಣರೂ, ವಾಗ್ಮಿಗಳೂ, ವೇದಾಂತಗಳನ್ನು ಬಲ್ಲವರೂ, ಎಷ್ಟೋ ಯಜ್ಞಗಳನ್ನು ಮುಗಿಸಿ ಅವ ಭೃಥಸ್ನಾನಗಳನ್ನು ಮಾಡಿದವರೂ, ಧೀರರೂ, ಯಶಸ್ವಿಗಳೂ, ಅಕಾರ್ಯಕ್ಕೆ ನಾಚುವವರೂ ಆದ ಮೂರ್ಧಾಭಿಷಿಕ್ತರೆನಿಸಿದ ರಾಜರೇ ಅವನನ್ನು ಸೇವಿ ಸುತ್ತಿದ್ದರು. ಅನೇಕರಾಜರು ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡುವು ದಕ್ಕಾಗಿ ಹಾಲುಕರೆಯುವ ಕಂಚಿನಪಾತ್ರೆಗಳೊಡನೆ ಮೇಲಾದ ಕಾಡುದನ ಗಳನ್ನು ಅನೇಕ ಸಹಸ್ರಸಂಖ್ಯೆಯಿಂದ ತಂದಿದ್ದರು. ಎಲ್ಲೆಲ್ಲಿಯೂ ಅವುಗಳೇ ಕಾಣುತ್ತಿದ್ದುವು. ಇನ್ನು ಕೆಲವು ರಾಜರು ಅಭಿಷೇಕಕ್ಕೆ ಬೇ ಕಾದ ವಿವಿಧವಸ್ತುಗಳನ್ನು ತಂದುಕೊಟ್ಟರು. ಬಾಹ್ಲೀಕರಾಜನು ಒಂದು ಸುವರ್ಣರಥವನ್ನು ತಂದುಕೊಟ್ಟನು. ಸುದಕ್ಷಿಣನೆಂಬ ರಾಜನು ಕಾಂ ಭೋಜದೇಶದ ಬಿಳೀಕುದುರೆಗಳನ್ನು ತಂದು ಆ ರಥಕ್ಕೆ ಕಟ್ಟಿದನು. ಚೇದಿ ರಾಜನಾದ ಶಿಶುಪಾಲನು ಆ ರಥಕ್ಕೆ ಒಂದು ಅಚ್ಚನ್ನೂ, ಒಂದು ಎತ್ತರ ವಾದ ಧ್ವಜದಂಡವನ್ನೂ ತಂದಿತ್ತನು. ಹೀಗೆಯೇ ದಕ್ಷಿಣದೇಶದ ರಾಜ ರು ಕವಚವನ್ನೂ, ಮಾಗಧನು ಮಾಲಿಕೆ ಮತ್ತು ತಲೆಪಾಗನ್ನೂ ವಸು ಧಾನನು ಅರುವತ್ತು ವಯಸ್ಸುಳ್ಳ ಒಂದು ಉತ್ತಮಗಜವನ್ನೂ, ಮತ್ಸ್ಯರಾ ಜನು ಚಿನ್ನದ ಪಗಡೆಗಳನ್ನೂ, ಏಕಲವ್ಯನು ಎರಡು ಕಾಲ್ಜೋಡುಗಳನ್ನೂ ಆವಂತ್ಯನು ಅಭಿಷೇಕಾರ್ಥವಾದ ಅನೇಕತೀರ್ಥಗಳನ್ನೂ, ಚೇಕಿತಾನನು ಬತ್ತಳಿಕೆಯನ್ನೂ, ಕಾಶಿರಾಜನು ಧನುಸ್ಸನ್ನೂ, ಶಲ್ಯನು ಒಳ್ಳೇ ಹಿಡಿಯು

ಳ್ಳ ಸುವರ್ಣಾಲಂಕೃತವಾದ ಕತ್ತಿಯನ್ನೂ ತಂದು ಬಹುಮಾನಿಸಿದನು. ಆಮೇಲೆ ಧೌಮ್ಯವ್ಯಾಸರಿಬ್ಬರೂ ಅಸಿತ, ದೇವಲ, ನಾರದರನ್ನು ಮುಂದಿಟ್ಟುಕೊಂಡು ಧರ್ಮರಾಜನಿಗೆ ಅಭಿಷೇಕವನ್ನು ನಡೆಸಿದರು. ಆ ಅಭಿಷೇಕಕ್ಕಾಗಿ ಎಷ್ಟೋ ಮಹರ್ಷಿಗಳು ಬಂದಿದ್ದರು. ಇಂದ್ರನ ಬಳಿಗೆ ಹೋಗುವ ಸಪ್ತರ್ಷಿಗಳಂತೆ ಪರಶುರಾಮನೇ ಮೊದಲಾದ ಮಹಾತ್ಮರು, ಮಂತ್ರಪಠನ ಮಾಡುತ್ತ ಆ ಯುಧಿಷ್ಠಿರನಲ್ಲಿಗೆ ಬಂದರು. ಆ ಅಭಿಷೇಕಕಾಲದಲ್ಲಿ ಧರ್ಮರಾಜನಿಗೆ ಸಾತ್ಯಕಿಯೇ ತನ್ನ ಕೈಯಿಂದ ಶ್ವೇತಚ್ಛತ್ರವನ್ನು ಹಿಡಿದನು. ಭೀಮಾರ್ಜುನರು ಬೀಸಣಿಗೆಗಳನ್ನೂ, ನಕುಲಸಹದೇವರಿಬ್ಬರೂ ಎರಡು ಚಾಮರಗಳನ್ನೂ ಹಿಡಿದಿದ್ದರು. ಪೂರ್ವಯುಗದಲ್ಲಿ ಬ್ರಹ್ಮನು ಇಂದ್ರನಿಗಾಗಿ ತೆಗೆದುಕೊಂಡ ವರುಣಶಂಖವನ್ನು ಕ್ಷೀರಸಮುದ್ರವೇ ಅಭಿಷೇಕಕ್ಕಾಗಿ ತಂದೊಪ್ಪಿಸಿತು. ವಿಶ್ವಕರ್ಮನಿರ್ಮಿತವಾಗಿ, ಸುವರ್ಣಾಲಂಕೃತವಾಗಿ, ಯಾವಾಗಲೂ ಉರಿಯುಲ್ಲಿಯೇ ಇಟ್ಟಿರುವ ಆ ಶಂಖವನ್ನು ಕೃಷ್ಣನೇ ತನ್ನ ಕೈಯಿಂದೆತ್ತಿ ಅಭಿಷೇಕವನ್ನು ಮಾಡಿದನು. ಅದನ್ನು ನೋಡಿ ನನ್ನ ಹೃದಯವು ಸಹಿಸದೆಹೋಯಿತು. ಪಕ್ಷಿಗಳು ಉತ್ತರಸಮುದ್ರವನ್ನು ಬಿಟ್ಟು ಬೇರೆ ಸಮುದ್ರಗಳಿಂದ ತೀರ್ಥವನ್ನು ತಂದುವು. ಆ ಅಭಿಷೇಕಕಾಲದಲ್ಲಿ ಹೊರಟ ಸಾವಿರಾರು ಶಂಖಧ್ವನಿಯನ್ನು ಕೇಳಿ ನನ್ನ ಮೈಯಲ್ಲಿ ರೋಮಾಂಚವೆದ್ದಿತು. ಭೀರುಸ್ವಭಾವವುಳ್ಳ ಕೆಲವು ರಾಜರು ಕೆಳಕ್ಕೆ ಬಿದ್ದುಬಿಟ್ಟರು. ಪಂಚಪಾಂಡವರು, ಧೃಷ್ಟದ್ಯುಮ್ನನು, ಸಾತ್ಯಕಿ, ಕೃಷ್ಣನು, ಈ ಎಂಟುಮಂದಿಯೇ ಧೈರ್ಯಗುಂದದೆ ನಿಂತು ಪ್ರಜ್ಞೆತಪ್ಪಿ ಹೋದ ರಾಜರನ್ನೂ, ನನ್ನನ್ನೂ ನೋಡಿ ನಕ್ಕರು. ಆಮೇಲೆ ಅರ್ಜುನನು ಚಿನ್ನದ ಕೊಂಬುಳ್ಳ ಐದು ವೃಷಭಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಜನಕಾ! ಆಗಿನ ಧರ್ಮರಾಜನ ವೈಭವವು ಹಿಂದೆ ರಂತಿದೇವ, ನಾಭಾಗ, ಮನು, ಮಾಂಧಾತೃ, ವೇನಪುತ್ರನಾದ ಪೃಥು, ಭಗೀರಥ, ಯಯಾತಿ, ನಹುಷರೆಂಬ ಚಕ್ರವರ್ತಿಗಳಿಗೂ ಇಲ್ಲವೆಂದೇ ನನ್ನ ಭಾವನೆ. ಹೀಗೆ ಹರಿಶ್ಚಂದ್ರನಂತೆ ಯುಧಿಷ್ಠಿರನು ರಾಜಸೂಯವನ್ನು ಮಾಡಿದನು. ಆ ಹರಿಶ್ಚಂದ್ರನಲ್ಲಿ ಹೇಗೋ ಹಾಗೆ ಆ ಯುಧಿಷ್ಠಿರನಲ್ಲಿ ಕಾಣಿಸಿದ ರಾಜ್ಯಲಕ್ಷ್ಮಿಯನ್ನು ನೋಡಿದಮೇಲೆ, ನನಗೆ ಈ ನನ್ನ ಬದುಕೇ ವ್ಯರ್ಥವೆಂದು

ತೋರಿದೆ. ನೀನುತಾನೇ ನನ್ನ ಜೀವನವು ಯಾವ ವಿಷಯದಲ್ಲಿ ಶ್ಲಾಘ್ಯ ವೆಂದು ಹೇಳುವೆ? ಜನಕಾ! ಈಗಿನಕಾಲವೇ ಕುರುಡನ ಕಾರ್ಯದಂತೆ ವಿಪರೀತವಾಗಿದೆ. ಕೀಳಾದವರು ಮೇಲೇರಿ ಹೋಗುವರು! ಮೇಲಾದವರು ಕೆಳಗೆ ಬೀಳುವರು. ನನಗೇನೋ ಈ ಸಂಕಟವು ದುಸ್ಸಹವಾದುದರಿಂದ, ಹೀಗೆ ಬಣ್ಣಗೆಟ್ಟು ಕೃಶನಾಗುತ್ತಿರುವೆನು" ಎಂದನು.

ಇದು ಎಪ್ಪತ್ತೊಂಭತ್ತನೆಯ ಅಧ್ಯಾಯವು.

ಧೃತರಾಷ್ಟ್ರನು ಪಾಂಡವರೊಡನೆ ದ್ವೇಷವನ್ನು ಮಾಡಬಾರದೆಂದು ದುರ್ಯೋಧನನಿಗೆ ಬುದ್ಧಿ ಹೇಳಿದುದು.

ಆಗ ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು, "ಕುಮಾರಾ! ನೀನು ನನ್ನ ಜ್ಯೇಷ್ಠಪುತ್ರನು. ನನ್ನ ಜ್ಯೇಷ್ಠಪತ್ನಿಯಲ್ಲಿ ಹುಟ್ಟಿದವನು. ಪಾಂಡವರನ್ನು ದ್ವೇಷಿಸಬಾರದು. ದ್ವೇಷಬುದ್ಧಿಯುಳ್ಳವನು ಮರಣಕ್ಕೆ ಸಮಾನವಾದ ದುಃಖಕ್ಕೆ ಗುರಿಯಾಗುವನು. ಅಲ್ಲದೆ ಆ ಯುಧಿಷ್ಠಿರನಾದರೋ ಕಪಟವನ್ನರಿಯದವನು. ಐಶ್ವರ್ಯದಲ್ಲಿಯೂ ಅವನು ನಮಗೇನೂ ಕಡಿಮೆಯಾದವನಲ್ಲ. ನಮ್ಮ ಮಿತ್ರರೇ ಅವನಿಗೂ ಮಿತ್ರರು. ಅವನಿಗೆ ನಮ್ಮಲ್ಲಿ ದ್ವೇಷಬುದ್ಧಿಯಿಲ್ಲ. ಅಂತವನೊಡನೆ ನಿನಗೆ ದ್ವೇಷವು ಯುಕ್ತವೆ? ನೀನು ಕುಲದಲ್ಲಿಯೂ, ಪರಾಕ್ರಮದಲ್ಲಿಯೂ ಅವನಿಗೆ ಸಮಾನನೇ. ವಿವೇಕಿಯಾದ ನೀನು ಅವನ ಐಶ್ವರ್ಯಕ್ಕಾಗಿ ಕೊರಗುವುದೇಕೆ? ನೀನು ಹಾಗಿರಬಾರದು. ದುಃಖವನ್ನು ಬಿಡು! ಶಾಂತಿಯನ್ನು ಹೊಂದು. ಅಲ್ಲಿನ ಯಾಗವೈಭವವನ್ನು ನಿನಗೂ ಅನುಭವಿಸಬೇಕೆಂಬ ಆಸೆಯಿದ್ದರೆ, ಋತ್ವಿಕ್ಕುಗಳನ್ನು ಕರೆಸಿ, ನೀನೂ ಒಂದು ಯಾಗವನ್ನು ನಡೆಸು. ನಿನಗೂ ಅನೇಕರಾಜರು ಎಷ್ಟೋ ಗೌರವದಿಂದ ರತ್ನಗಳನ್ನೂ, ಆಭರಣಗಳನ್ನೂ ಧನವನ್ನೂ ಕಾಣಿಕೆಯಾಗಿ ತಂದುಕೊಡುವರು. ಪರರ ಸ್ವತ್ತಿಗೆ ಆಸೆಪಡುವುದು ಕೇವಲದುರ್ಜನರ ಸ್ವಭಾವವು. ತನಗಿದ್ದುದರಲ್ಲಿ ತಾನು ತೃಪ್ತನಾಗಿ, ಸ್ವಧರ್ಮವನ್ನು ಬಿಡದೆ ಇರತಕ್ಕವನೇ ವೃದ್ಧಿಗೆ ಬರುವನು. ಕೋರಿದ ಕೋರಿಕೆಗಳನ್ನು ಕೊಡತಕ್ಕ ಭೂಮಿಯೂ, ರಾಜ್ಯಲಕ್ಷ್ಮಿಯೂ,

ವೀರರ ಪತ್ನಿಯರು. ನಿನಗೆ ಆ ಶಕ್ತಿಯಿದ್ದರೆ, ನೀನೂ ಸಾಮ್ರಾಜ್ಯವನ್ನಾಳಬಹುದು. ಪರರ ಸ್ವತ್ತನ್ನು ಅಪಹರಿಸುವುದುಮಾತ್ರ ಯೋಗ್ಯವಲ್ಲ. ತನಗೆ ಬೇಕಾದವರಿಗೆ ಕೇಡನ್ನು ಬಯಸುವುದು ಇಹಪರಗಳೆರಡರಲ್ಲಿಯೂ ದುಃಖಕಾರಣವು. ಪರರ ಸ್ವತ್ತಿಗಾಗಿ ಆಸೆಪಡದಿರುವುದು, ತನ್ನ ಕರ್ತವ್ಯದಲ್ಲಿ ದೃಢಬುದ್ಧಿ, ಆರ್ಜಿಸಿದ ವಸ್ತುಗಳನ್ನು ಚೆನ್ನಾಗಿ ರಕ್ಷಿಸಿಡುವುದು, ಇವೇ ಪ್ರಭುತ್ವದ ಲಕ್ಷಣಗಳು. ಆಪತ್ತುಗಳಲ್ಲಿ ಎದೆಗುಂದದೆ ಸಮರ್ಥನಾಗಿ, ಉದ್ಯೋಗಪರನಾಗಿ, ಎಲ್ಲಾ ವಿಷಯದಲ್ಲಿಯೂ ಎಚ್ಚರಗೊಂಡವನಾಗಿ ಮನಸ್ಸನ್ನು ಅಡಗಿಸಿದವನೇ ಯಾವಾಗಲೂ ಕ್ಷೇಮದಲ್ಲಿರುವನು. ನಿನ್ನ ಕೈಯನ್ನು ನೀನೇ ಕಡಿದುಕೊಳ್ಳುವಂತೆ ಆ ಪಾಂಡವರನ್ನು ಕೆಡಿಸುವುದಕ್ಕೆ ಯೋಚಿಸಬೇಡ. ಆ ಪಾಂಡವರು ನಿನ್ನ ವಿಷಯದಲ್ಲಿ ತನ್ನವನೆಂಬ ಬುದ್ಧಿಯನ್ನೇ ಇಟ್ಟಿರುವರು. ಅರವ ಧನಕ್ಕೆ ಆಸೆಪಟ್ಟು ನೀನು ಮಿತ್ರದ್ರೋಹವನ್ನು ಮಾಡಬಾರದು. ಅವರನ್ನೂ, ಅವರ ಐಶ್ವರ್ಯವನ್ನೂ ನೀನು ದ್ವೇಷಿಸಬೇಡ. ಮಿತ್ರದ್ರೋಹವು ಬಹಳ ಅನರ್ಥಹೇತುವು. ನಿನ್ನ ಪಿತಾಮಹರೇ ಅವರಿಗೂ ಪಿತಾಮಹರು. ನೀನೂ ಆ ಧರ್ಮರಾಜನಂತೆ ಅಂತರ್ವೇದಿಕೆಯೆಂಬ ಯಾಗಶಾಲೆಯಲ್ಲಿ ಬೇಕಾದಷ್ಟು ಧನವನ್ನು ದಾನಮಾಡು! ಇಷ್ಟಭೋಗಗಳನ್ನನುಭವಿಸು! ಸ್ತ್ರೀಯರೊಡನೆ ಭೋಗಿಸುತ್ತ ನಿಶ್ಚಿಂತನಾಗಿ ಸುಖದಿಂದಿರು'' ಎಂದನು.

ಇದು ಎಂಭತ್ತನೆಯ ಅಧ್ಯಾಯವು.



### { ದುರ್ಯೋಧನನು ಧೃತರಾಷ್ಟ್ರನ ಮಾತುಗಳನ್ನು ನಿರಾಕರಿಸಿ ಮಾತಾಡಿದುದು. }

ಆಗ ದುರ್ಯೋಧನನು ತಂದೆಯನ್ನು ಕುರಿತು '' ಜನಕಾ! ಸಾಕು ಸುಮ್ಮನಿರು. ತನಗಾಗಿ ಬುದ್ಧಿಯಿಲ್ಲದವನು ಎಷ್ಟೇ ಶಾಸ್ತ್ರಗಳನ್ನು ಕೇಳಿದವನಾದರೂ, ಸೌಟಿಗೆ ಪಾಯಸದ ರುಚಿಯು ತಿಳಿಯದಹಾಗೆ, ಅವನು ಆ ಶಾಸ್ತ್ರದ ಮರ್ಮವನ್ನು ತಿಳಿಯಲಾರನು. ನಿನ್ನ ಸ್ಥಿತಿಯೂ ಅದೇ.

ಹಾಗೆಯೇ ಇದೆ. ಅಥವಾ ನೀನು ತಿಳಿದೂ ನನ್ನನ್ನು ಭ್ರಮೆಗೊಳಿಸುವು ದಕ್ಕಾಗಿ ಹೀಗೆ ಹೇಳುವೆಯೋ? ದೋಣಿಯು ಹಿಂದೆ ತಗಲುಹಾಕಿದ ಬೇರೆ ದೋಣಿಯಂತೆ ಬೇರೊಬ್ಬರು ಎಳೆದಹಾಗೆ ನೀನು ಹೋಗುವೆಯೋಹೊರತು, ನಿನಗೆ ನಿನ್ನ ಸ್ವಕಾರ್ಯದಲ್ಲಿ ದೃಷ್ಟಿಯಿಲ್ಲವೆಂದು ತೋರುತ್ತದೆ. ಹಾಗಿ ಲ್ಲವೇ ನೀನು ನಮ್ಮನ್ನು ದ್ವೇಷಿಸುತ್ತಿರಬೇಕು. ಇನ್ನುಮೇಲೆ ನಿನ್ನ ಆಜ್ಞೆಗೆ ಕಟ್ಟುಪಟ್ಟ ಮಕ್ಕಳು ನಿನಗಿಲ್ಲವೆಂದೇ ತಿಳಿ! ಮುಂದೆ ತಾನಾಗಿ ಸಂಭ ವಿಸುವ ವಿಷಯಗಳನ್ನೆಲ್ಲ ಈಗಲೇ ಮಾಡಬೇಕಾದ ಕಾರ್ಯವನ್ನಾಗಿ ನಮಗೆ ಬೋಧಿಸುವುದೇ ನಿನ್ನ ಸ್ವಭಾವವು. ಪರರ ಬುದ್ಧಿಯನ್ನೇ ನಂಬಿ ನಡೆಯುವವನನ್ನು ತನಗೆ ನಿಯಾಮಕನನ್ನಾಗಿ ಪಡೆದವನು ದಾರಿತಿಳಿ ಯದೆ ತಡಬಡಿಸುವನು. ಅವನ ಹಿಂದೆ ಹೋಗತಕ್ಕವರು ಹೇಗೆತಾನೇ ಸರಿ ಯಾದ ದಾರಿಯಲ್ಲಿ ಹೋಗುವರು? ಜನಕಾ! ನೀನಾದರೋ ವೃದ್ಧನಾಗಿ ಪಕ್ವವಾದ ಜ್ಞಾನವುಳ್ಳವನು. ಹಿರಿಯರನ್ನು ಸೇವಿಸಿದವನು. ಜಿತೇಂದ್ರಿ ಯನು. ಇಂತಹ ನೀನು ನಿನ್ನ ಸೌಖ್ಯಕ್ಕಾಗಿಯೇ ಪ್ರಯತ್ನಿಸುವ ನಮ್ಮ ನ್ನು ಭ್ರಮೆಗೊಳಿಸುತ್ತಿರುವೆ. ಲೋಕದ ಜನರ ದಾರಿಯೇ ಬೇರೆ! ರಾಜರ ಮಾರ್ಗವೇ ಬೇರೆ! ಬೃಹಸ್ಪತಿಯೇ ಇದನ್ನು ಹೇಳಿರುವನು. ಆದುದರಿಂದ ರಾಜನು ಯಾವಾಗಲೂ ಎಚ್ಚರತಪ್ಪದೆ ಸ್ವಪ್ರಯೋಜನವನ್ನೇ ಚಿಂತಿಸು ತ್ತಿರಬೇಕು. ಕ್ಷತ್ರಿಯಜೀವನವು ಜಯದಲ್ಲಿಯೇ ನಿಂತಿದೆ. ಆ ಜಯ ಕ್ಕಾಗಿಯೇ ಅವನು ಪ್ರಯತ್ನಿಸಬೇಕು. ಧರ್ಮವಾಗಲಿ, ಅಧರ್ಮವಾಗಲಿ, ಸ್ವಕರ್ಮದಲ್ಲಿ ಹಿಂದುಮುಂದನ್ನು ಪರೀಕ್ಷಿಸುವುದೇನಿದೆ? ಶತ್ರುವಿನ ಐಶ್ವ ರ್ಯವನ್ನು ಸಾಧಿಸಬೇಕೆಂಬ ಬಯಕೆಯುಳ್ಳ ರಾಜನು, ಸಾರಥಿಯು ಚಾಟಿ ಯಿಂದ ಕುದುರೆಗಳನ್ನಟ್ಟುವಂತೆ ಶತ್ರುಗಳನ್ನು ಹೊಡೆದಟ್ಟಬೇಕು. ರಹಸ್ಯ ವಾಗಿಯಾಗಲಿ, ಪ್ರಕಾಶವಾಗಿಯಾಗಲಿ, ಶತ್ರುಗಳನ್ನು ಬಾಧೆಪಡಿಸತಕ್ಕ ಉಪಾಯವಾವುದೋ ಅದೇ ಶಸ್ತ್ರವು. ಅಲಗಿನಿಂದ ಕತ್ತರಿಸುವುದು ಮಾತ್ರವೇ ಶಸ್ತ್ರವೆನಿಸುವುದಿಲ್ಲ. ಶತ್ರುತ್ವ ಮಿತ್ರತ್ವಗಳನ್ನು ಯಾರೂ ನಿರ್ಣಯಿಸಿ ಬರೆದಿಟ್ಟಿಲ್ಲ. ಅದೊಂದು ಶಾಸನವೂ ಅಲ್ಲ. ಯಾವನು ಯಾವನಿಗೆ ಸಂತಾಪಕಾರಣನೋ ಅವನೇ ಅವನಿಗೆ ಶತ್ರು. ತೃಪ್ತನಾಗ

ದಿರುವುದೇ ಸಂಪತ್ತಿಗೆ ಮೂಲವು. ಅಂತಹ ಸಂಪತ್ತಿಗಾಗಿಯೇ ನಾವೂ ಆಸೆಪಡುವೆವು. ಪುರೋವೃದ್ಧಿಗೆ ಪ್ರಯತ್ನಪಡುವುದೇ ದೊಡ್ಡ ನೀತಿ. ರಾಜ್ಯದಲ್ಲಿಯೂ, ಧನದಲ್ಲಿಯೂ ತನ್ನದೆಂಬ ಮಮತೆಯನ್ನು ಯಾರೂ ಇಡಬಾರದು. ಅದು ಇಂಥವರದೇ ಎಂಬ ನಿರ್ಣಯವಿಲ್ಲ. ಹಿಂದೆ ಒಬ್ಬರದಾಗಿದ್ದುದು ಆಮೇಲೆ ಮತ್ತೊಬ್ಬರದಾಗುವುದು. ಇದೇ ರಾಜಧರ್ಮವು. ತಾನು ದ್ರೋಹಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿದ ಇಂದ್ರನೇ ನಮುಚಿಯ ತಲೆಯನ್ನು ಕಡಿದುಬಿಟ್ಟನು. ಶತ್ರುವಿನ ವಿಷಯದಲ್ಲಿ ಹೀಗೆಯೇ ನಡೆಯಬೇಕೆಂಬುದು ಇಂದ್ರನಿಗೂ ಅಭಿಮತವಲ್ಲವೆ? ವಿರೋಧವಿಲ್ಲದ ರಾಜನು, ಊರುಬಿಟ್ಟುಹೋಗದ ಬ್ರಾಹ್ಮಣನು, ಇವರಿಬ್ಬರನ್ನೂ ಹಾವು ಇಲಿಗಳನ್ನು ಹೇಗೋ ಹಾಗೆ ಭೂಮಿಯೇ ನುಂಗಿಬಿಡುವುದು. ಒಬ್ಬ ಮನುಷ್ಯನಿಗೆ ಜನ್ಮದಿಂದಲೇ ಯಾವನೂ ಶತ್ರುವಲ್ಲ. ಅವನ ಮನಸ್ಸಿಗೆ ಸರಿಬೀಳದ ವೃತ್ತಿಯುಳ್ಳವನೇ ಅವನಿಗೆ ಶತ್ರುವೆನಿಸುವನಲ್ಲದೆ, ಮಿಕ್ಕವರಾರೂ ಶತ್ರುಗಳಲ್ಲ. ಅಜ್ಞಾತೆಯಿಂದ ಯಾವನು ಶತ್ರುಗಳ ಪುರೋವೃದ್ಧಿಯನ್ನು ಉಪೇಕ್ಷಿಸುವನೋ, ಅವನನ್ನು ಶತ್ರುಪಕ್ಷದವರೇ ಚಿಕಿತ್ಸೆಯಿಲ್ಲದೆ ಬೆಳೆಬಿಟ್ಟ ವ್ಯಾಧಿಯಂತೆ ನಿರ್ಮೂಲವಾಗಿ ನಾಶಮಾಡಿಬಿಡುವರು. ಶತ್ರುವು ಅಲ್ಪನಾಗಿದ್ದರೂ, ಮುಂದೆಮುಂದೆ ಪ್ರಬಲನಾಗುವನು. ಗಿಡದಬುಡದಲ್ಲಿ ಹುಟ್ಟಿದ ಹುತ್ತವು ಆ ಗಿಡವನನ್ನು ಹೇಗೋ ಹಾಗೆ, ಆ ಶತ್ರುವು ಮೆಲ್ಲಗೆ ಪಕ್ಕದಲ್ಲಿದ್ದುಕೊಂಡೇ ನುಂಗಿಬಿಡುವನು. ಜನಕಾ! ನಮ್ಮ ಶತ್ರುವಿನ ಐಶ್ವರ್ಯಕ್ಕಾಗಿ ನೀನು ಹಿಗ್ಗಬಾರದು. ಈ ನೀತಿಯು ಬುದ್ಧಿವಂತರು ತಲೆಯಮೇಲೆ ಹೊತ್ತ ಭಾರವಾಗಿದೆ. ತನ್ನ ಶರೀರದ ಬೆಳೆವಳಿಕೆಯಂತೆ ಧನದ ಅಭಿವೃದ್ಧಿಯನ್ನು ಅಕ್ಕರೆಯಿಂದ ಕೋರುವವನೇ ತನ್ನ ಗುಂಪಿನವರಲ್ಲಿ ಮೇಲೆನಿಸುವನು. ಪರಾಕ್ರಮವೇ ಸದ್ಯೋವೃದ್ಧಿಗೆ ಕಾರಣವು. ಪಾಂಡವರ ಐಶ್ವರ್ಯವನ್ನು ನಾನು ಕಣ್ಣಾರೆ ಕಾಣದಿದ್ದಪಕ್ಷದಲ್ಲಿ ನನಗೆ ಪ್ರಾಣಸಂಶಯವೂ ಇರುತ್ತಿರಲಿಲ್ಲ. ಅವರ ಐಶ್ವರ್ಯವನ್ನು ಕಿತ್ತುಕೊಳ್ಳಲೇ ಬೇಕು. ಇಲ್ಲವೇ ಯುದ್ಧಕ್ಕೆ ನಿಂತು ಅವರ ಕೈಯಿಂದ ನಾನು ಹತನಾಗಿ ಸಾಯುವೆನು. ಪಾಂಡವರೇನೋ ದಿನದಿನಕ್ಕೆ ಪ್ರಬಲರಾಗುತ್ತಿರುವರು. ನಮ್ಮ ವೃದ್ಧಿಯು

ಕದಲಿಹೋಗುತ್ತಿದೆ. ಹೀಗಿದ್ದು ನಾನು ಬದುಕಿ ಫಲವೇನು? ನನ್ನ ಕ್ಷೇಮದ ದಾರಿಯನ್ನು ಚಿಂತಿಸು" ಎಂದನು.

ಇದು ಎಂಭತ್ತೊಂದನೆಯ ಅಧ್ಯಾಯವು.

ದುರ್ಯೋಧನನಿಗೆ ಶಕುನಿಯ ದುರ್ಬೋಧನೆ. ದ್ಯೂತಸಭಾ ನಿರ್ಮಾಣವು. ಧೃತರಾಷ್ಟ್ರಾಜ್ಞೆಯಿಂದ ಪಾಂಡವರನ್ನು ಕರೆತರಲು ವಿದುರನು ಹೊರಟುದು.

ಪಾಂಡವರ ಐಶ್ವರ್ಯಕ್ಕಾಗಿ ಮತ್ಸರಗೊಂಡು ಚಿಂತಾಕುಲನಾಗಿದ್ದ ದುರ್ಯೋಧನನನ್ನು ಕುರಿತು ಶಕುನಿಯು "ಓ ಜಯಶೀಲನೆ! ಪಾಂಡುಪುತ್ರನಾದ ಯುಧಿಷ್ಠಿರನಲ್ಲಿ ನೀನು ಯಾವ ಐಶ್ವರ್ಯವನ್ನು ನೋಡಿ ಕರುಬುತ್ತಿರುವೆಯೋ, ಆ ಐಶ್ವರ್ಯವನ್ನು ನಾನು ಜೂಜಿನಮೂಲಕವಾಗಿ ನಿಮಿಷಮಾತ್ರದಲ್ಲಿ ಅಪಹರಿಸುವೆನು ನೋಡು. ಆ ಯುಧಿಷ್ಠಿರನನ್ನುಮಾತ್ರ ಉಪಾಯದಿಂದ ಇಲ್ಲಿಗೆ ಕರೆಸು. ನಮಗೆ ಜಯವೋ ಅಪಜಯವೋ ಎಂಬ ಸಂಶಯವೂ ಇಲ್ಲದೆ, ಯುದ್ಧದಲ್ಲಿ ಹೊಡೆದಾಡಬೇಕಾದ ಶ್ರಮವೂ ಇಲ್ಲದೆ, ಸ್ವಲ್ಪವಾದರೂ ಮೈಯಲ್ಲಿ ಗಾಯಪಡದೆ, ಬರೀದಾಳಗಳನ್ನೆಸೆದೇ ಅವರ ಸಕಲೈಶ್ವರ್ಯವನ್ನೂ ಅಪಹರಿಸುವೆನು ನೋಡು. ಅಕ್ಷವಿದ್ಯೆಯಲ್ಲಿ ನಿಪುಣನಾದ ನಾನು, ಅದರಲ್ಲಿ ಏನೇನೂ ತಿಳುವಳಿಕೆಯಿಲ್ಲದ ಆ ಪಾಂಡವರನ್ನು ಸುಲಭವಾಗಿ ಸೋಲಿಸಬಲ್ಲೆನು. ಮಿತ್ರ ಸುಯೋಧನಾ! ನಮಗೆ ಬೇರೆ ಯುದ್ಧಸಾಮಗ್ರಿಗಳೇಕೆ? ಆಟಕ್ಕೆ ಒಡ್ಡುವ ಪಣಗಳೇ ನನ್ನ ಬಿಲ್ಲುಗಳು! ದಾಳಗಳೇ ನನ್ನ ಬಾಣಗಳು! ಅಕ್ಷಹೃದಯವೇ ನನ್ನ ಧನುಸ್ಸಿನ ಹೆದೆ! ಪಗಡೆಗಳನ್ನು ನಡೆಸುವ ಮತ್ತು ದಾಳಗಳನ್ನೆಸೆಯುವ ನನ್ನ ಚಾತುರ್ಯವೇ ನನಗೆ ಯುದ್ಧರಥವೆಂದು ತಿಳಿ!" ಎಂದನು.

ಆಮೇಲೆ ದುರ್ಯೋಧನನು, ಧೃತರಾಷ್ಟ್ರನ ಬಳಿಗೆ ಬಂದು "ಜನಕಾ! ಅಕ್ಷವನ್ನು ಬಲ್ಲ ಈ ಶಕುನಿಯು, ಜೂಜಾಟದ ಮೂಲಕವಾಗಿ

ಪಾಂಡವರ ಐಶ್ವರ್ಯವನ್ನೆಲ್ಲ ನಾವು ಅಪಹರಿಸಬಹುದೆಂದು ಹೇಳುವನು. ಈ ವಿಷಯದಲ್ಲಿ ನೀನು ಅನುಮತಿಸಬೇಕು" ಎಂದನು. ಆಗ ಧೃತರಾಷ್ಟ್ರನು "ವತ್ಸ ದುರ್ಯೋಧನಾ! ನಾನು ಈ ವಿಷಯದಲ್ಲಿ ನನ್ನ ಭ್ರಾತೃವಾದ ಮತ್ತು ಮಹಾತ್ಮನಾದ ವಿದುರನ ಮಾತಿನಂತೆ ನಡೆಯುತಕ್ಕವನು. ಅವನನ್ನು ಕೇಳಿ ತಿಳಿಯುವೆನು" ಎಂದನು. ಆಗ ದುರ್ಯೋಧನನು "ಜನಕಾ! ಆ ವಿದುರನೇನೋ ವ್ಯಾಸನಿಗಿಂತಲೂ ಹೆಚ್ಚಾಗಿ ತಿಳಿದವನೇ! ಆದರೆ, ಅವನು ಯಾವಾಗಲೂ ಧರ್ಮವನ್ನೇ ಉಪದೇಶಿಸುವನು. ಅದು ನಮಗೆ ಜಯಸಾಧಕವಲ್ಲ. ಜಯಕ್ಕೂ, ಧರ್ಮಕ್ಕೂ ಬಹಳ ದೂರವು. ಆದುದರಿಂದ ನಮ್ಮ ವಿರೋಧಿಗಳನ್ನು ತಂತ್ರದಿಂದಲೇ ಜಯಿಸಬೇಕು. ವ್ಯಾಸವಿದುರರಿಬ್ಬರೂ ಜಯಕ್ಕೆ ವಿರೋಧಿಗಳು. ನೀನು ಈ ವಿಚಾರವನ್ನು ವಿದುರನಲ್ಲಿ ಪ್ರಸ್ತಾಪಿಸಿದರೆ, ಅವನು ನಿನ್ನ ಮನಸ್ಸನ್ನು ಕೆಡಿಸಿಬಿಡುವನು. ಅವನಿಗೆ ಪಾಂಡವರಲ್ಲಿರುವಷ್ಟು ಪಕ್ಷಪಾತವು ನಮ್ಮಲ್ಲಿಲ್ಲ. ಅವನು ಯಾವಾಗಲೂ ಅವರಿಗೇ ಹಿತವನ್ನು ಕೋರತಕ್ಕವನು. ಮನುಷ್ಯನು ಮತ್ತೊಬ್ಬರ ಸಾಮರ್ಥ್ಯವನ್ನವಲಂಬಿಸಿಯೇ ತನ್ನ ಕಾರ್ಯವನ್ನಾರಂಭಿಸಬಾರದು. ಕಾರ್ಯಗಳಲ್ಲಿ ಇಬ್ಬರ ಮನಸ್ಸು ಒಂದಾಗಿರಲಾರದು. ತನಗೆ ಬರುವ ಭಯವನ್ನು ತಪ್ಪಿಸಿಕೊಂಡು ತನ್ನನ್ನು ರಕ್ಷಿಸಿಕೊಳ್ಳುತ್ತ, ಮಳೆಗಾಲದಲ್ಲಿ ನೆನೆಯುವ ಆಲದ ಮರದಂತೆ ಇರುವವನು ಯಾವನೋ ಅವನು ಎಂದಿಗೂ ಕಷ್ಟಕ್ಕೆ ಸಿಕ್ಕಲಾರನು. ವ್ಯಾಧಿಗಳೂ, ಮೃತ್ಯುವೂ ಒಬ್ಬನು ಶ್ರೇಯಸ್ಸನ್ನು ಹೊಂದುವವರೆಗೂ ಕಾದಿರುವುದಿಲ್ಲ. ತನಗೆ ಶಕ್ತಿಯಿರುವಷ್ಟರೊಳಗಾಗಿಯೇ ಮನುಷ್ಯನು ತನ್ನ ಶ್ರೇಯಸ್ಸಿಗೆ ಸಾಧಕವಾದ ಕಾರ್ಯವನ್ನು ನಡೆಸಬೇಕು" ಎಂದನು. ಅದಕ್ಕಾ ಧೃತರಾಷ್ಟ್ರನು "ವತ್ಸಾ! ಹೇಗಾದರೂ ಬಲಶಾಲಿಗಳೊಡನೆ ವಿರೋಧವು ನನಗೆ ಸಮ್ಮತವಿಲ್ಲ. ವೈರವೆಂಬುದು ಮನುಷ್ಯನ ಸ್ಥಿತಿಯನ್ನೇ ಮಾರ್ಪಡಿಸಿ, ಅವನನ್ನು ಬಹಳವಾಗಿ ನೋಯಿಸುವುದು. ವೈರವೆಂಬುದು ಉಕ್ಕಿನಿಂದ ಮಾಡಲ್ಪಡದ ಶಸ್ತ್ರವೆಂದು ತಿಳಿ! ಕುಮಾರಾ! ಈಗ ನೀನಾದರೋ ಅನರ್ಥವನ್ನೇ ಅರ್ಥವನ್ನಾಗಿ ಭಾವಿಸಿರುವೆ. ದ್ಯೂತವೆಂಬುದು ಕಲಹಕ್ಕೆ ಬೀಜವು. ದ್ಯೂತವನ್ನಾರಂಭಿಸಿದ ಮೇಲೆ ಹೇಗಾದರೂ ಅದು ಪರಿಣಾಮದಲ್ಲಿ ಕತ್ತಿಗಳನ್ನೂ, ತೀಕ್ಷ್ಣಬಾಣ

ಗಳನ್ನೂ ಹುಟ್ಟಿಸದೆ ಬಿಡಲಾರದು" ಎಂದನು. ಆಗ ದುರ್ಯೋಧನನು "ಜನಕಾ! ಜೂಜಾಟವೆಂಬುದು ಬಹುಪುರಾತನಕಾಲದಿಂದಲೂ ಬಳಕೆಯಲ್ಲಿ ಬಂದುದೇಹೊರತು ಹೊಸದಲ್ಲ. ಪೂರ್ವಿಕರೆಲ್ಲ ಇದರಲ್ಲಿ ಪ್ರವರ್ತಿಸುತ್ತಿದ್ದವರೇ! ಇದರಲ್ಲಿ ಪಾಪಕ್ಕಾಗಲಿ, ಅಪಾಯಕ್ಕಾಗಲಿ ಕಾರಣವಿಲ್ಲ. ಶಕುನಿಯ ಅಭಿಪ್ರಾಯಕ್ಕೆ ಸಮ್ಮತಿಸು. ಈಗಲೇ ಸಭೆಯನ್ನು ಏರ್ಪಡಿಸುವಂತೆ ಆಜ್ಞಾಪಿಸು. ಜನಕಾ! ಈಗ ನಾವು ಜೂಜಾಡುವುದರಿಂದ ನಮಗೆ ಸ್ವರ್ಗದ್ವಾರವೇ ತೆರೆದಿಟ್ಟಂತಾಗುವುದು. ಸ್ವರ್ಗವಾಸಿಗಳಿಗಾದರೂ ನಮ್ಮ ದ್ಯೂತವೇ ಪ್ರಿಯವೆಂದು ತಿಳಿ. ಹೆಚ್ಚು ಮಾತಿನಿಂದೇನು? ದ್ಯೂತಕ್ಕೆ ಸಮಾನವಾದುದು ದ್ಯೂತವೇ! ಆದುದರಿಂದ ಪಾಂಡವರೊಡನೆ ದ್ಯೂತಕ್ಕಾಗಿ ಏರ್ಪಾಡನ್ನು ಮಾಡು" ಎಂದನು. ಅದಕ್ಕಾ ಧೃತರಾಷ್ಟ್ರನು "ಕುಮಾರಾ! ನೀನು ಹೇಳಿದ ಮಾತೊಂದೂ ನನಗೇನೋ ರುಚಿಸಲಿಲ್ಲ. ಇನ್ನು ನಿನ್ನ ಇಷ್ಟವಿದ್ದಂತಾಗಲಿ! ಹೇಗಿದ್ದರೂ ನೀನು ಈಗ ನಾನು ಹೇಳುವ ಮಾತನ್ನು ನೆನೆಸಿಕೊಂಡು ಮುಂದೆ ನಿನ್ನ ಅಕಾರ್ಯಕ್ಕಾಗಿ ಪಶ್ಚಾತ್ತಾಪಪಡದಿರಲಾರೆ. ನೀನು ಹೇಳುವ ಮಾತು ಧರ್ಮಸಮ್ಮತವಲ್ಲ! ಮುಂದೆ ನಿನಗೆ ಇದರಿಂದ ಶ್ರೇಯಸ್ಸೂ ಉಂಟಾಗಲಾರದು. ಪುತ್ರಾ! ವಿದುರನಾದರೋ ವಿದ್ಯೆಯಲ್ಲಿಯೂ, ಬುದ್ಧಿಯಲ್ಲಿಯೂ ಮೇಲೆನಿಸಿದವನು. ಚೆನ್ನಾಗಿ ನೋಡಿಯೂ, ವಿಚಾರಮಾಡಿಯೂ ತಿಳಿಯತಕ್ಕವನು. ಅವನಿಗೆ ಸೂಕ್ಷ್ಮವಿಷಯಗಳೆಲ್ಲವೂ ಚೆನ್ನಾಗಿ ತಿಳಿಯುವುದು. ಅವನ ಮಾತಿನಂತೆ ಕ್ಷತ್ರಿಯರಿಗೆಲ್ಲ ನಾಶಕರವಾದ ಮಹಾಭಯವು ಅನಿವಾರ್ಯವಾಗಿ ನಮ್ಮ ಮುಂದೆ ಕಾದಿದೆಯೆಂಬುದೂ ನಿಶ್ಚಯವೇ" ಎಂದನು.

ಓ ಜನಮೇಜಯರಾಜಾ! ಧೃತರಾಷ್ಟ್ರನು ಸಹಜವಾಗಿ ವಿವೇಕಶಾಲಿಯಾದುದರಿಂದ, ಇಷ್ಟುದೂರದವರೆಗೆ ಬುದ್ಧಿವಾದಗಳನ್ನು ಹೇಳಿದನು. ಆದರೇನು? ದೈವವು ಬಲವತ್ತರವಾದುದು. ದೈವಸಂಕಲ್ಪವನ್ನು ಮೀರುವುದು ಯಾರಿಂದಲೂ ಸಾಧ್ಯವಲ್ಲ. ದುರ್ದೈವದಿಂದ ಅವನೂ ಬುದ್ಧಿಗೆಟ್ಟವನಾಗಿ, ಮಗನ ವಾಕ್ಯಕ್ಕೇ ಸಮ್ಮತಿಸಿದನು. ಆಗಲೇ ಕೆಲಸಗಾರರನ್ನು ಕರೆಸಿ "ಎಲೈ ಶಿಲ್ಪಿಗಳೇ! ನೀವು ಒಂದು ಮಹಾಸಭೆಯನ್ನು

ನಿರ್ಮಿಸಬೇಕು. ಆ ಸಭೆಗೆ ಸಾವಿರಕಂಬಗಳೂ, ನೂರು ಬಾಗಿಲುಗಳೂ ಇರಬೇಕು. ಸ್ಫಟಿಕದ ತೋರಣಗಳಿಂದಲೂ, ಸುವರ್ಣವೈಡೂರ್ಯ ಚಿತ್ರಿತಗಳಾದ ಸನ್ನಿವೇಶಗಳಿಂದಲೂ, ಆ ಸಭೆಯು ಬಹಳ ರಮ್ಯವಾಗಿ ಕಾಣುವಂತಿರಲಿ! ಆ ಸಭೆಯು ಒಂದು ಕ್ರೋಶದಷ್ಟು ವಿಶಾಲವಾಗಿರಲಿ! ಇಂತಹ ಸಭೆಯನ್ನು ನೀವು ಶೀಘ್ರದಲ್ಲಿಯೇ ಕಟ್ಟಿಮುಗಿಸಬೇಕು'' ಎಂದನು. ಒಡನೆಯೇ ಬುದ್ಧಿವಂತರೂ, ಸಮರ್ಥರೂ ಆದ ಶಿಲ್ಪಿಗಳು ಸೇರಿ, ಬಹಳ ಶೀಘ್ರದಲ್ಲಿಯೇ ಸಭೆಯನ್ನು ನಿರ್ಮಿಸಿದರು. ಅಲ್ಲಿಗೆ ಬೇಕಾದ ಸಕಲಪದಾರ್ಥಗಳನ್ನೂ ಸಿದ್ಧಪಡಿಸಿದರು. ಸಾವಿರಾರು ಶಿಲ್ಪಿಗಳು ಸೇರಿ ಸ್ವಲ್ಪಕಾಲದಲ್ಲಿಯೇ ಸಭಾನಿರ್ಮಾಣವನ್ನು ಪೂರ್ತಿಗೊಳಿಸಿದರು. ಆ ಮಹಾಸಭೆಯು ವಿಚಿತ್ರರತ್ನಗಳಿಂದಲೂ ವಿಚಿತ್ರಾಸನಗಳಿಂದಲೂ ಅತ್ಯಂತ ರಮ್ಯವಾಗಿದ್ದಿತು. ಒಡನೆಯೇ ಆ ಸಭೆಯ ನಿರ್ಮಾಣಕಾರ್ಯವು ಮುಗಿದುದಾಗಿ ಸೇವಕರು ಬಂದು ರಾಜನಲ್ಲಿ ವಿಜ್ಞಾಪಿಸಿದರು. ಆಗ ಧೃತರಾಷ್ಟ್ರನು ವಿದುರನನ್ನು ಕರೆಸಿ ''ವಿದುರಾ! ನೀನು ಯುಧಿಷ್ಠಿರನ ಬಳಿಗೆ ಹೋಗಿ, ನನ್ನ ಮಾತಿನಿಂದ ಆತನನ್ನು ಈಗಲೇ ಇಲ್ಲಿಗೆ ಕರೆದುಕೊಂಡು ಬಾ! ಅನೇಕ ರತ್ನಗಳಿಂದ ವಿಚಿತ್ರವಾಗಿ, ಬೆಲೆಯುಳ್ಳ ಶಯ್ಯಾಸನಗಳಿಂದ ರಮ್ಯವಾದ ಸಭೆಯೊಂದನ್ನು ಈಗ ನಾನು ಹೊಸದಾಗಿ ಕಟ್ಟಿಸಿರುವೆನು. ಆ ಪಾಂಡವರೆಲ್ಲರೂ ಸೇರಿಬಂದು, ಆ ಸಭೆಯನ್ನು ನೋಡಿ ಸಂತೋಷಿಸಲಿ! ಈ ಮನೋಹರವಾದ ಸಭೆಯಲ್ಲಿ ಅವರೊಡನೆ ನನ್ನ ಮಕ್ಕಳು ಸುಹೃದ್ದ್ಯೂತವನ್ನು ಆಡಲಿ. ಆ ನನ್ನ ತಮ್ಮನ ಮಕ್ಕಳನ್ನೆಲ್ಲ ಈಗಲೇ ಕರೆದುಕೊಂಡು ಬಾ!'' ಎಂದನು.

ಓ ಜನಮೇಜಯರಾಜಾ! ಧೃತರಾಷ್ಟ್ರನ ಸ್ವಭಾವವನ್ನು ನೋಡಿದೆಯಾ? ತನ್ನ ಮಗನ ದುರುದ್ದೇಶವನ್ನು ಅವನು ಚೆನ್ನಾಗಿ ಬಲ್ಲನು. ಆದರೂ ದೈವವು ದುಸ್ತರವೆಂಬುದನ್ನು ತಿಳಿದೇ ತಾನೂ ಈ ಅಕಾರ್ಯದಲ್ಲಿ ಒಂದಾಗಿ ಕಲೆತನು. ಹೀಗೆ ಧೃತರಾಷ್ಟ್ರನ ಅನ್ಯಾಯಪ್ರವರ್ತನವನ್ನು ಕೇಳಿ ವಿದುರನು ಮನಸ್ಸಿನಲ್ಲಿ ವ್ಯಥೆಪಟ್ಟು, ''ಮಹಾರಾಜಾ! ನಿನ್ನ ಆಜ್ಞೆಗೆ ನಾನು ಬದ್ಧನಾಗಿ ನಡೆಯಬೇಕಾಗಿದ್ದರೂ, ಈ ಕಾರ್ಯವು

ಮಾತ್ರ ನನಗೆ ಉಚಿತವಾಗಿ ತೋರಲಿಲ್ಲ. ಇದರಿಂದ ನಮ್ಮ ಕುಲಕ್ಕೇ ನಾಶವುಂಟಾಗುವುದೆಂದು ಹೆದರುವೆನು. ಈ ದ್ಯೂತದ ನೆವದಿಂದ ನಿನ್ನ ಮಕ್ಕಳಲ್ಲಿ ಮುಂದೆ ದೊಡ್ಡ ಕಲಹಕ್ಕೆ ಅವಕಾಶವಾಗುವುದು ನಿಶ್ಚಯವು'' ಎಂದನು. ಅದಕ್ಕಾ ಧೃತರಾಷ್ಟ್ರನು "ವಿದುರಾ! ನನಗೆ ಆ ಕಲಹದ ಭಯವು ಸ್ವಲ್ಪಮಾತ್ರವೂ ಇಲ್ಲ. ದೈವವುಮಾತ್ರ ನಮಗೆ ಪ್ರತಿಕೂಲ ವಾಗದಿದ್ದರೆ, ಆ ಕಲಹವು ನಮ್ಮನ್ನೇನೂ ಮಾಡಲಾರದು. ಹೇಗಾದರೂ ಆಗಲಿ! ಈ ಜಗತ್ತೆಲ್ಲವೂ ದೈವಕ್ಕೆ ಅಧೀನವಾಗಿ ನಡೆಯುತ್ತಿರುವುದು. ಯಾವುದೂ ಸ್ವತಂತ್ರವಲ್ಲ. ವಿಧಿವಶದಂತೆ ನಡೆಯಲಿ! ನೀನು ಈಗಲೇ ಹೊರಡು. ನನ್ನ ಆಜ್ಞೆಯನ್ನು ತಿಳಿಸಿ ಯುಧಿಷ್ಠಿರನನ್ನು ಈಗಲೇ ಇಲ್ಲಿಗೆ ಕರೆದುಕೊಂಡು ಬಾ'' ಎಂದನು.

ಇದು ಎಂಭತ್ತೆರಡನೆಯ ಅಧ್ಯಾಯವು.

—————

{ ವಿದುರನು ಪಾಂಡವರನ್ನು ಕರೆತಂದುದು. ಪಾಂಡವರು ದ್ಯೂತಸಭೆಯನ್ನು ಪ್ರವೇಶಿಸಿದುದು. }

ಧೃತರಾಷ್ಟ್ರನ ಅಪ್ಪಣೆಯಮೇರೆಗೆ ವಿದುರನು, ಒಳ್ಳೆಯ ಕುದುರೆಗಳನ್ನು ಕಟ್ಟಿದ ರಥವನ್ನೇರಿ ಪಾಂಡವರಿದ್ದಲ್ಲಿಗೆ ಪ್ರಯಾಣಮಾಡಿದನು. ಮಾರ್ಗಮಧ್ಯದಲ್ಲಿ ತನಗೆ ಬ್ರಾಹ್ಮಣರು ಮಾಡಿದ ಪೂಜೆಗಳನ್ನೆಲ್ಲ ಸ್ವೀಕರಿಸುತ್ತ ಧರ್ಮರಾಜನ ಪಟ್ಟಣಕ್ಕೆ ಪ್ರವೇಶಿಸಿದನು. ಅಲ್ಲಿ ಕುಬೇರಗೃಹಕ್ಕೆ ಸಮಾನವಾದ ಅರಮನೆಯಲ್ಲಿ ಧರ್ಮರಾಜನಿದ್ದಲ್ಲಿಗೆ ಬಂದನು. ಒಡನೆ ಧರ್ಮರಾಜನು ವಿದುರನನ್ನು ಯೋಗ್ಯರೀತಿಯಲ್ಲಿ ಪೂಜಿಸಿ, ಆತನನ್ನು ಕುಳಿತುಕೊಳ್ಳುವಂತೆ ಹೇಳಿ, ಧೃತರಾಷ್ಟ್ರನ ಮತ್ತು ಆತನ ಮಕ್ಕಳ ಕುಶಲವನ್ನು ವಿಚಾರಿಸಿ "ಅಯ್ಯಾ! ನಿನ್ನ ಮುಖವನ್ನು ನೋಡಿದರೆ, ನಿನ್ನ ಮನಸ್ಸಿಗೆ ಹರ್ಷವೇ ಇಲ್ಲದಂತೆ ತೋರುವುದು. ಕ್ಷೇಮಕಾರ್ಯಕ್ಕಾಗಿ ಬಂದಿರುವೆಯಷ್ಟೆ? ವೃದ್ಧನಾದ ಧೃತರಾಷ್ಟ್ರನಿಗೆ ಅವನ ಮಕ್ಕಳು ಅನುಕೂಲರಾಗಿರುವರೆ? ಪ್ರಜೆಗಳು ರಾಜಭಕ್ತಿಪರಾಯಣರಾಗಿರುವರೆ?'' ಎಂದನು.

ಅದಕ್ಕಾ ವಿದುರನು "ವತ್ಸ ಧರ್ಮಪುತ್ರಾ! ಮಹಾತ್ಮನಾದ ಧೃತರಾಷ್ಟ್ರರಾಜನು ಪುತ್ರರೊಡನೆಯೂ, ಬಾಂಧವರೊಡನೆಯೂ ಸೇರಿಕೊಂಡು ದೇವೇಂದ್ರನಂತೆ ಸುಖದಿಂದಿರುವನು. ಆತನು ತನ್ನ ಪುತ್ರರ ಗುಣಗಳಿಗೆ ಸ್ವಾಧೀನನಾಗಿ, ದುಃಖವನ್ನು ಬಿಟ್ಟು, ತನ್ನ ಹೆಮ್ಮೆಗಾಗಿ ತಾನು ಸಂತೋಷಗೊಂಡಿರುವನು. ಅವನು ನಿನ್ನ ಕ್ಷೇಮವನ್ನು ವಿಚಾರಿಸಿ ಹೀಗೆಂದು ಹೇಳಿಕಳುಹಿಸಿರುವನು. "ವತ್ಸ ಯುಧಿಷ್ಠಿರಾ! ಈಗ ನಿನ್ನ ಸಹೋದರರು ಒಂದು ಹೊಸ ಸಭೆಯನ್ನು ನಿರ್ಮಿಸಿರುವರು. ಆ ಸಭೆಯೂ ನಿನ್ನ ಸಭೆಗೆ ಸಮಾನವಾದ ಶಿಲ್ಪಚಾತುರ್ಯದಿಂದ ಕೂಡಿದೆ. ನೀನು ಸಹೋದರರೊಡನೆ ಬಂದು ಅದನ್ನು ನೋಡಿ ಆನಂದಿಸಬೇಕು. ಅಲ್ಲಿ ನೀನೂ, ನನ್ನ ಮಕ್ಕಳೂ ಕೇವಲ ಸ್ನೇಹಪರವಾದ ದ್ಯೂತವನ್ನು (ಸುಹೃದ್ದ್ಯೂತವನ್ನು) ಆಡುತ್ತ, ಸಂತೋಷದಿಂದ ಕಾಲವನ್ನು ಕಳೆಯಬಹುದು. ನೀವೆಲ್ಲರೂ ಒಂದಾಗಿ ಕಲೆತಿರಬೇಕೆಂಬುದೇ ನನ್ನ ಕೋರಿಕೆ. ಕೌರವರೆಲ್ಲರೂ ಮುಂದಾಗಿಯೇ ಅಲ್ಲಿಗೆ ಬಂದು ಸೇರಿರುವರು" ಎಂದು ನಿನಗೆ ಧೃತರಾಷ್ಟ್ರನು ತನ್ನ ಮಾತಿನಿಂದ ಹೇಳಿಕಳುಹಿಸಿರುವನು. ರಾಜಾ! ಆ ಧೃತರಾಷ್ಟ್ರನು ತನ್ನ ಮಗನ ಪ್ರೇರಣೆಯಿಂದ ಏರ್ಪಡಿಸಿದ ಆ ಸಭೆಯಲ್ಲಿ, ಈಗ ಸೇರಿರುವ ಮೋಸಗಾರರಾದ ಜೂದಾಳಿಗಳನ್ನು ನೀನು ಬಂದು ನೋಡಬೇಕೆಂದು ಹೇಳುವುದಕ್ಕಾಗಿಯೇ ನಾನು ಇಲ್ಲಿಗೆ ಬಂದೆನು. ಇನ್ನು ನೀನು ಹೊರಡು" ಎಂದನು. ಆಗ ಯುಧಿಷ್ಠಿರನು "ಚಿಕ್ಕಯ್ಯಾ! ದ್ಯೂತದಿಂದ ನಮ್ಮಲ್ಲಿ ಕಲಹವು ಸಂಭವಿಸುವುದು ನಿಶ್ಚಯವು. ವಿವೇಕಿಗಳಾದವರಾರೂ ಜೂಜಿಗೆ ಪ್ರವೇಶಿಸಬಾರದು. ಇದರಮೇಲೆ ನಿನ್ನ ಅಭಿಪ್ರಾಯವೇನು ಹೇಳು. ನಾವೆಲ್ಲರೂ ನಿನ್ನ ಆಜ್ಞೆಯಂತೆ ನಡೆಯಲು ಸಿದ್ಧರಾಗಿರುವೆವು" ಎಂದನು. ಆಗ ವಿದುರನು "ಕುಮಾರಾ! ನೀನು ಪ್ರಾಜ್ಞನು. ಜೂಜು ಅನರ್ಥಕಾರಣವೆಂಬುದನ್ನು ನಾನೂ ಬಲ್ಲೆನು. ಈ ಪ್ರಯತ್ನವನ್ನು ತಪ್ಪಿಸುವುದಕ್ಕಾಗಿ ನಾನೂ ಎಷ್ಟೋ ಪಾಡುಪಟ್ಟೆನು. ಆದರೇನು? ರಾಜನು ನನ್ನನ್ನು ನಿರ್ಬಂಧಿಸಿ ನಿನ್ನಲ್ಲಿಗೆ ಕಳುಹಿಸಿರುವನು. ಇನ್ನು ನಿನಗೆ ಹೇಗೆ ಯುಕ್ತವೆಂದು ತೋರುವುದೋ ಹಾಗೆ ನಡೆಸು" ಎಂದನು. ಆಗ ಯುಧಿಷ್ಠಿರನು "ಜನಕಾ! ಆ ಸಭೆಯಲ್ಲಿ ಧೃತರಾಷ್ಟ್ರಪುತ್ರರುಹೊರತು ಜೂಜಿನಲ್ಲಿ

ನಿಪುಣರಾದವರು ಬೇರೆ ಯಾರಿರುವರು ? ನಾನು ಅಲ್ಲಿ ಯಾರೊಡನೆ ಆಡಬೇಕಾಗಿದೆ?'' ಎಂದನು. ಅದಕ್ಕಾ ವಿದುರನು ''ಗಾಂಧಾರರಾಜನಾದ ಶಕುನಿಯು ಜೂಜಿನಲ್ಲಿ ಎಲ್ಲರನ್ನೂ ಮೀರಿಸಿದವನು. ದಾಳಗಳು ಅವನು ಹೇಳಿದಂತೆ ಕೇಳುವುವು. ಇದಲ್ಲದೆ ವಿವಿಂಶತಿ, ಚಿತ್ರಸೇನ, ಸತ್ಯವ್ರತ, ಪುರುಮಿತ್ರ, ಜಯರೆಂಬೀ ರಾಜರುಕೂಡ ಜೂಜಿನಲ್ಲಿ ತೇರಿದವರೇ'' ಎಂದನು. ಆಗ ಯುಧಿಷ್ಠಿರನು '' ಪಿತೃವ್ಯಾ! ಹಾಗಿದ್ದರೆ ಮೋಸವನ್ನೇ ಹಿಡಿದು ಜೂಜಾಟವನ್ನಾಡುವುದಕ್ಕೆ ಸಿದ್ಧರಾಗಿರುವವರನೇಕರು ಅಲ್ಲಿ ನೆರೆದಿರುವಂತಿದೆ. ಆದರೇನು? ಜಗತ್ತೆಲ್ಲವೂ ದೈವವಶವಾಗಿ ನಡೆಯು ತಕ್ಕುದು! ಬ್ರಹ್ಮನು ಈ ಪ್ರಪಂಚವನ್ನೆಲ್ಲ ದೈವವಶವಾಗಿ ಮಾಡಿರುವನೇ ಹೊರತು, ಇದರಲ್ಲಿ ಯಾವುದೂ ಸ್ವತಂತ್ರವಲ್ಲ. ನೀನು ಎಲ್ಲವನ್ನೂ ತಿಳಿದಿ ರುವೆ. ಹೇಗಾದರೂ ರಾಜನ ಆಜ್ಞೆಯಂತೆ ನಾನು ಅಲ್ಲಿಗೆ ಬಾರದೆ ತೀರದು. ತಂದೆಯನ್ನು ಪುತ್ರನು ಹೇಗಿದ್ದರೂ ಪ್ರೀತಿಸಬೇಕು. ನೀನು ಹೇಳಿ ದಂತೆ ನಡೆಯುವೆನು. ಶಕುನಿಯು ಜೂಜಿನಲ್ಲಿ ಎಲ್ಲರನ್ನೂ ಜಯಿಸುವ ನೈಪುಣ್ಯವುಳ್ಳವನೆಂದು ಹೇಳಿದೆಯಲ್ಲವೆ? ಇದ್ದರೇನು? ಅವನೊಡನೆ ನಾನು ಆಟಕ್ಕೆ ಕುಳ್ಳಿರುವ ಸಂಭವವೇ ಇಲ್ಲ. ಆ ಸಭೆಯಲ್ಲಿ ಅವನಾಗಿ ನನ್ನ ನ್ನು ನಿರ್ಬಂಧಿಸಿ ಕರೆದ ಹೊರತು, ನಾನು ಅವನಿಗಿದಿರಾಗಿ ದಾಳವನ್ನು ಹಿಡಿಯುವವನೂ ಅಲ್ಲ. ಮೊದಲು ನನಗೆ ಆಟದಲ್ಲಿ ಆಶೆಯೂ ಇಲ್ಲ. ಅವನು ಆಟಕ್ಕೆ ಕರೆದರೆಮಾತ್ರ ನಾನು ಹಿಂಜರಿಯುವವನಲ್ಲ. ಇದು ಬಹುಕಾಲದಿಂದ ನಾನು ಹಿಡಿದ ನಿಯಮವೆಂದು ತಿಳಿ'' ಎಂದನು.

ಧರ್ಮರಾಜನು ಒಡನೆಯೇ ಬೇಕಾದ ಸನ್ನಾಹಗಳನ್ನು ಸಿದ್ಧಪಡಿಸು ವಂತೆ ಸೇವಕರಿಗೆ ಆಜ್ಞಾಪಿಸಿದನು. ಸಭೆಯು ನೆರೆಯುವುದಕ್ಕೆ ಮುಂದಿನ ದಿನವೇ ಅಲ್ಲಿಗೆಹೋಗಿ ಸೇರುವುದಕ್ಕಾಗಿ ತನ್ನ ಕಡೆಯವರೆಲ್ಲರೊಡನೆಯೂ, ದ್ರೌಪದಿ ಮೊದಲಾದ ಸ್ತ್ರೀಯರೊಡನೆಯೂ ಪ್ರಯಾಣಹೊರಟನು. ''ಮಿಂ ಚು ಥಟ್ಟನೆ ಕಣ್ಣುಗಳ ಶಕ್ತಿಯನ್ನು ತಗ್ಗಿಸುವಂತೆ ದೈವವು ಪ್ರಜ್ಞೆ ಯನ್ನು ಕೆಡಿಸಿಬಿಡುವುದು. ಮನುಷ್ಯನು ಪಾಶಬದ್ಧನಂತೆ ದೈವವಶ ನಾಗಿಯೇ ಎಳೆಯಲ್ಪಡುವನು'' ಎಂದು ಹೇಳುತ್ತ ಆ ಯುಧಿಷ್ಠಿರನು ತನ್ನ

ತಂದೆಯೇ ತನ್ನನ್ನು ಈ ಅಕಾರ್ಯಕ್ಕೆ ಕರೆದುದಕ್ಕಾಗಿ ಮನಸ್ಸಿನಲ್ಲಿ ವ್ಯಥೆಪಡುತ್ತ, ವಿದುರನೊಡನೆ ಪ್ರಯಾಣಬೆಳೆಸಿದನು. ತನ್ನ ಸಹೋದರರೊಡನೆ ಬಾಹ್ಲೀಕದೇಶದ ಉತ್ತಮಾಶ್ವಗಳಿಂದ ಕೂಡಿದ ರಥವನ್ನೇರಿ, ವಿದುರನನ್ನೂ, ಬ್ರಾಹ್ಮಣರನ್ನೂ ಮುಂದಿಟ್ಟುಕೊಂಡು ಹೊರಟನು. ಸಮೀಪದಲ್ಲಿದ್ದ ಭೃತ್ಯರನ್ನು ನಗರರಕ್ಷಣೆಗಾಗಿ ನಿಯಮಿಸಿದನು. ಆಮೇಲೆ ರಾಜಯೋಗ್ಯವಾದ ರಥಗಳು, ಬಿರುದುಗಳು ಮೊದಲಾದುವನ್ನೆಲ್ಲ ನಿಲ್ಲಿಸಿಟ್ಟು, ಮೊದಲು ಬ್ರಾಹ್ಮಣರ ಸ್ವಸ್ತಿವಾಚನವು ನಡೆದಮೇಲೆ ಪ್ರಯಾಣಕ್ಕೆ ಸಿದ್ಧನಾದನು. ಬ್ರಾಹ್ಮಣರಿಗೂ, ಇತರರಿಗೂ ತನ್ನ ಪ್ರಯಾಣಮಂಗಳಕ್ಕಾಗಿ ವಿಧ್ಯುಕ್ತವಾದ ರತ್ನಾದಿಗಳನ್ನು ದಾನಮಾಡಿದನು. ಹಾರ, ಕಿರೀಟ ಮೊದಲಾದ ಸಕಲಾಭರಣಗಳಿಂದ ಅಲಂಕೃತನಾಗಿ, ಬಂಗಾರದಂತಿರುವ ದೇಹಚ್ಛಾಯೆಯಿಂದ ಬೆಳಗುತ್ತ, ಬಿಳೀದುಕೂಲವನ್ನು ಹೊದಿಸಿದ ಅರುವತ್ತು ವರ್ಷದ ಮದದಾನೆಯನ್ನೇರಿ ಕುಳಿತು, ಸುವರ್ಣವೇದಿಕೆಯಲ್ಲಿ ಹವಿಸ್ಸಿನಿಂದ ಹುತವಾದ ಅಗ್ನಿಯಂತೆ ರಾಜ್ಯಲಕ್ಷ್ಮಿಯಿಂದ ಶೋಭಿಸುತಿದ್ದನು. ಆ ಪ್ರಯಾಣಕಾಲದಲ್ಲಿ ಉತ್ಸಾಹಯುಕ್ತರಾದ ಅನೇಕ ಪದಾತಿಗಳೂ, ವಾಹನಗಳೂ, ರಥಗಳೂ ನೆರೆದುವು. ಸೂತಮಾಗಧರ ಸ್ತುತಿಗಳೊಡನೆ ಈ ಸೇನಾಘೋಷವು ಆಕಾಶವನ್ನೆಲ್ಲ ತುಂಬುತ್ತಿರಲು, ಆಕಾಶದಲ್ಲಿ ಕಿರಣಸಮೂಹದೊಡಗೂಡಿದ ಸೂರ್ಯನಂತೆ ದೊಡ್ಡ ಸೈನ್ಯದೊಡನೆ ಹೊರಟನು. ಆಗ ಅವನ ತಲೆಯಮೇಲೆ ಪೂರ್ಣಚಂದ್ರನಂತೆ ಶ್ವೇತಚ್ಛತ್ರವು ಪ್ರಕಾಶಿಸುತ್ತಿರುವುದು. ನಾಲ್ಕು ಕಡೆಗಳಲ್ಲಿಯೂ ಚಿನ್ನದ ಹಿಡಿಗಳುಳ್ಳ ಬಿಳಿಯಚಾಮರಗಳು ಆಡುತ್ತಿರುವುವು. ದಾರಿಯುದ್ದಕ್ಕೂ ಅನೇಕಜನರು ಉತ್ಸಾಹದಿಂದ ಜಯಜಯಧ್ವನಿಗಳನ್ನು ಮಾಡುತ್ತಿರುವರು. ಗುರುಹಿರಿಯರು ಆಶೀರ್ವದಿಸುತ್ತಿರುವರು. ಸೈನ್ಯಗಳ ಕೋಲಾಹಲವು ಆಕಾಶವನ್ನೆಲ್ಲ ವ್ಯಾಪಿಸುತ್ತಿರುವುದು. ಇಂತಹ ಅಟ್ಟಹಾಸದೊಡನೆ ಧರ್ಮರಾಜನು ಪ್ರಯಾಣವನ್ನು ಬೆಳೆಸಿದನು. ಭೀಮನು ರಥಾರೂಢನಾಗಿ ಮುಂದೆ ಹೋದನು. ನಕುಲಸಹದೇವರಿಬ್ಬರೂ ಬೇರೆಬೇರೆ ರಥಗಳನ್ನೇರಿ ತಮ್ಮ ತಮ್ಮ ಸೈನ್ಯಗಳೊಡನೆ ರಾಜನ ಉಭಯಪಾರ್ಶ್ವಗಳಲ್ಲಿ ಹೊರಟರು. ಅರ್ಜುನನು ತನಗೆ ಅಗ್ನಿದತ್ತವಾದ ಬಿಳೀ ಕುದುರೆಗಳುಳ್ಳ ರಥವನ್ನೇರಿ,

ಗಾಂಡೀವವನ್ನು ಹಿಡಿದು, ಧರ್ಮರಾಜನ ಹಿಂಭಾಗದಲ್ಲಿ ಬರುತ್ತಿದ್ದನು. ಯುಧಿಷ್ಠಿರನು ಸೈನ್ಯದ ಮಧ್ಯದಲ್ಲಿದ್ದನು. ದ್ರೌಪದಿ ಮೊದಲಾದ ರಾಜಪತ್ನಿಯರು ತಮ್ಮತಮ್ಮ ಗೌಡಿಯರೊಡನೆಯೂ, ಪರಿಕರಗಳೊಡನೆಯೂ ನಾನಾವಿಧವಾಹನಗಳನ್ನೇರಿ, ಧರ್ಮರಾಜನ ಮುಂಭಾಗದಲ್ಲಿ ಬರುತಿದ್ದರು. ಹೀಗೆ ಪ್ರಯಾಣಮಾಡುತ್ತಿದ್ದ ಆ ಪಾಂಡವರ ಸೈನ್ಯವು, ಕಿಕ್ಕಿರಿದ ಗಜತುರಗಪದಾತಿಗಳಿಂದಲೂ, ಧ್ವಜಾಲಂಕೃತಗಳಾದ ಮಹಾರಥಗಳಿಂದಲೂ ಖಡ್ಗಧಾರಿಗಳಿಂದಲೂ ನಿಬಿಡವಾಗಿ, ಶಂಖ, ಭೇರಿ, ತಾಳ, ಮೃದಂಗ, ವೀಣೆ ವೇಣು ಮೊದಲಾದ ವಾದ್ಯಧ್ವನಿಗಳೊಡನೆ ಹೊರಟಿತು. ಪೂರ್ವದಲ್ಲಿ ಲಂಕಾಧೀಶನಾಗಿದ್ದ ಕುಬೇರನು ತನ್ನ ಸೇನಾವಿಭವಗಳೊಡನೆ ದೇವರಾಜನಾದ ಇಂದ್ರನ ಬಳಿಗೆ ಹೋದಂತೆ, ಈಗ ಧರ್ಮರಾಜನೂಕೂಡ ಅಪರಿಮಿತ ವೈಭವಗಳಿಂದ ಶೋಭಿಸುವ ಮಹಾಸೈನ್ಯದೊಡನೆ ಪ್ರಯಾಣಮಾಡಿಬರುತಿದ್ದನು. ದಾರಿಯಲ್ಲಿ ದೊಡ್ಡದೊಡ್ಡ ನದಿಗಳನ್ನೂ, ಕೆರೆಗಳನ್ನೂ, ಕಾಡುಗಳನ್ನೂ, ಮಹಾರಣ್ಯಗಳನ್ನೂ ದಾಟಿ ಹಸ್ತಿನಾಪುರದ ಸಮೀಪಕ್ಕೆ ಬಂದು ಅಲ್ಲಿ ಹಳ್ಳತಿಟ್ಟಿಲ್ಲದೆ ಸುಖಕರವಾದ ಸ್ಥಳವನ್ನು ನೋಡಿ, ತನ್ನ ಸೇನೆಯನ್ನು ನಿಲ್ಲಿಸಿದನು. ಅಷ್ಟರಲ್ಲಿ ವಿದುರನು ತನ್ನ ಮನಸ್ಸಿನೊಳಗಿನ ವ್ಯಸನವನ್ನು ತಡೆದಿಟ್ಟುಕೊಳ್ಳಲಾರದೆ, ಗದ್ಗದಕಂಠದಿಂದ ಧರ್ಮರಾಜನನ್ನು ಕರೆದು, ಧೃತರಾಷ್ಟ್ರನು ಅವನ ವಿಷಯದಲ್ಲಿ ಮಾಡಬೇಕೆಂದಿರುವ ಮೋಸವನ್ನೆಲ್ಲ ಯಥಾವತ್ತಾಗಿ ಅವನಿಗೆ ತಿಳಿಸಿದನು. ಅದಕ್ಕಾ ಧರ್ಮರಾಜನು “ ಜನಕಾ! ಮಾಡುವುದೇನು ? ಅವನು ನನ್ನನ್ನು ಕರೆದಾಗಲೇ ನನಗೆ ಅತೃಪ್ತಿಯುಂಟಾಯಿತು. ಆದರೇನು ? ನಾನು ಪಿತ್ರಾಜ್ಞೆಗೆ ಬದ್ಧನಾಗಿ ನಡೆಯುತಕ್ಕವನು. ಆದುದರಿಂದ ಹೋಗದೆ ತೀರದು. ಹೇಗಾದರೂ ಬ್ರಾಹ್ಮಣರಿಗೂ, ಪ್ರಜೆಗಳಿಗೂ ಕ್ಷೇಮವುಂಟಾಗಲಿ ” ಎಂದನು. ಆಮೇಲೆ ವಿಧಿಪ್ರೇರಿತನಾದ ಆ ಯುಧಿಷ್ಠಿರನು ಧೃತರಾಷ್ಟ್ರನ ಅರಮನೆಯೊಳಗೆ ಪ್ರವೇಶಿಸಿದನು. ಅಲ್ಲಿ ಧೃತರಾಷ್ಟ್ರನನ್ನೂ, ಭೀಷ್ಮ, ದ್ರೋಣ, ಕರ್ಣ, ಕೃಪ, ಅಶ್ವತ್ಥಾಮಾದಿಗಳನ್ನೂ ಸಂಧಿಸಿ, ಉಚಿತರೀತಿಯಲ್ಲಿ ಅವರನ್ನು ವಿಚಾರಿಸಿದನು. ಆಮೇಲೆ ಸೋಮದತ್ತನನ್ನೂ, ತಮ್ಮನಾದ ದುರ್ಯೋಧನನನ್ನೂ ಶಕುನಿಯನ್ನೂ, ದುಶ್ಶಾಸನಾದಿ ಸಹೋದರನ್ನೂ, ಜಯದ್ರಥನನ್ನೂ,

ಮೊದಲೇ ಅಲ್ಲಿ ಬಂದು ನೆರೆದಿದ್ದ ಇತರ ರಾಜರನ್ನೂ, ಕೌರವರನ್ನೂ ಕ್ರಮವಾಗಿ ಸಂಧಿಸಿ ಮಾತಾಡಿದನು. ಆಮೇಲೆ ತನ್ನ ತಮ್ಮಂದಿರೊಡನೆ ಧೃತರಾಷ್ಟ್ರನ ಅಂತಃಪುರಕ್ಕೆ ಹೋಗಿ, ಅಲ್ಲಿ ತಾರೆಗಳಿಂದ ಪರಿವೃತ ಳಾದ ರೋಹಿಣಿಯಂತೆ ತನ್ನ ಸೊಸೆಯರನಡುವೆ ಕುಳಿತಿದ್ದ ಪತಿವ್ರತೆ ಯಾದ ಗಾಂಧಾರಿಯನ್ನು ಕಂಡು ನಮಸ್ಕರಿಸಿ, ಅವಳ ಆಶೀರ್ವಾದವನ್ನು ಪಡೆದು, ಅಲ್ಲಿಂದ ವೃದ್ಧನೂ, ತಂದೆಯೂ, ಪ್ರಜ್ಞಾಚಕ್ಷುವೂ ಆದ ಧೃತ ರಾಷ್ಟ್ರನ ಬಳಿಗೆ ಬಂದನು. ಆಗ ಧೃತರಾಷ್ಟ್ರನು ಪ್ರೀತಿಯಿಂದ ಪಾಂಡ ವರೆಲ್ಲರ ಶಿರಸ್ಸನ್ನೂ ಆಘ್ರಾಣಿಸಿದನು.

ಓ ಜನಮೇಜಯರಾಜಾ ! ಪ್ರಿಯದರ್ಶನರಾದ ಆ ಪಾಂಡವರನ್ನು ನೋಡಿದಮಾತ್ರದಲ್ಲಿಯೇ ಕುರುವಂಶದವರೆಲ್ಲರಿಗೂ ಮನಸ್ಸಿನಲ್ಲಿ ಎಷ್ಟೋ ಸಂತೋಷವುಂಟಾಯಿತು. ಆಮೇಲೆ ಪಾಂಡವರು ಧೃತರಾಷ್ಟ್ರನ ಅನು ಮತಿಯನ್ನು ಪಡೆದು, ರತ್ನಮಯವಾದ ರಾಜಗೃಹಗಳನ್ನು ಪ್ರವೇಶಿಸಿ ದರು. ಅಲ್ಲಿ ಬಂದವರೆಲ್ಲರೂ ಪಾಂಡವಪತ್ನಿಯಾದ ದ್ರೌಪದಿಯನ್ನೂ, ಅವಳೊಡನೆ ಬಂದ ಇತರ ಸ್ತ್ರೀಯರನ್ನೂ ಕಂಡರು. ಲಕ್ಷ್ಮಿಯಂತೆ ಬೆಳ ಗುತ್ತಿದ್ದ ಆ ದ್ರೌಪದಿಯ ಅಪೂರ್ವವಾದ ಕಳೆಯನ್ನು ನೋಡಿ, ಧೃತರಾ ಷ್ಟ್ರನ ಸೊಸೆಯರಿಗೆಮಾತ್ರ ಮಾತ್ಸರ್ಯದಿಂದ ಅಷ್ಟಾಗಿ ಸಂತೋಷವುಂ ಟಾಗಲಿಲ್ಲ ಪಾಂಡವರು ಆ ಸ್ತ್ರೀಯರೊಡನೆ ಯಥೋಚಿತವಾದ ಮಾತು ಗಳನ್ನಾಡಿ, ಸಂಧ್ಯಾವಂದನಾದಿ ನಿತ್ಯಕೃತ್ಯಗಳನ್ನು ನಡೆಸಿ, ಚಂದನಾದಿ ಗಳಿಂದ ದೇಹವನ್ನಲಂಕರಿಸಿಕೊಂಡರು. ಬ್ರಾಹ್ಮಣರ ಸ್ವಸ್ತಿವಾಚನ ವಾದಮೇಲೆ, ಹಿತವಾದ ಭಕ್ಷ್ಯಗಳನ್ನು ಭುಜಿಸಿ, ಸ್ತ್ರೀಯರ ಗಾನಗಳನ್ನು ಕೇಳುತ್ತ ಶಯನಗೃಹಕ್ಕೆ ಹೋಗಿ ಅಲ್ಲಿ ಆ ರಾತ್ರಿಯನ್ನು ಸುಖನಿದ್ರೆ ಯಿಂದ ಕಳೆದರು. ಬೆಳಗಾದಕೂಡಲೇ ವಂದಿಮಾಗಧರ ಸ್ತೋತ್ರದಿಂದ ಎಚ್ಚರಗೊಂಡು, ಬೆಳಗಿನ ಕೃತ್ಯಗಳನ್ನು ಮುಗಿಸಿಕೊಂಡರು. ಇಷ್ಟರಲ್ಲಿ ದುರ್ಯೋಧನನ ಕಡೆಯ ದೂತರು ಬಂದು ಕರೆಯಲು, ಒಡನೆಯೇ ಸಭೆಗೆ ಹೊರಟರು.

ಇದು ಎಂಭತ್ತುಮೂರನೆಯ ಅಧ್ಯಾಯವು.

{ ಶಕುನಿ ಯುಧಿಷ್ಠಿರ ಸಂವಾದವು. ದ್ಯೂತಕ್ಕಾಗಿ ಇಬ್ಬರೂ ಒಪ್ಪಿದುದು. }

ಪಾಂಡವರು ಸಭೆಯನ್ನು ಪ್ರವೇಶಿಸಿ, ಅಲ್ಲಿ ನೆರೆದಿದ್ದ ರಾಜರನ್ನೆಲ್ಲ ಉಚಿತರೀತಿಯಲ್ಲಿ ಗೌರವಿಸಿ, ಉತ್ತಮವಾದ ದಿಂಬುಗಳುಳ್ಳ ಆಸನಗಳಲ್ಲಿ ತಮ್ಮತಮ್ಮ ಪದವಿಗೆ ತಕ್ಕಂತೆ ಕುಳಿತರು. ಎಲ್ಲರೂ ಕುಳಿತಮೇಲೆ ಶಕುನಿಯು ಯುಧಿಷ್ಠಿರನನ್ನು ಕುರಿತು “ ಓ ರಾಜಾ! ಈ ಸಭೆಯ ಮಧ್ಯದಲ್ಲಿ ಪಗಡೆಯ ಹಾಸನ್ನು ಹಾಸಿದೆ. ಎಲ್ಲರೂ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವರು. ಆಟಕ್ಕೆ ಸಿದ್ಧನಾಗಬಹುದಲ್ಲವೆ?” ಎಂದನು. ಅದಕ್ಕಾ ಯುಧಿಷ್ಠಿರನು “ ಓ ಶಕುನೀ! ಜೂಜಾಟವು ಮೋಸಕ್ಕೂ, ಪಾಪಕ್ಕೂ ಎಡೆಯಾದುದು. ಇದರಲ್ಲಿ ಕ್ಷತ್ರಿಯರ ಶೌರ್ಯವನ್ನು ಪ್ರದರ್ಶಿಸಲವಕಾಶವಿಲ್ಲ. ಇದು ನೀತಿಯುಕ್ತವಾದುದೂ ಅಲ್ಲ. ಹೀಗಿರುವಾಗ ನೀನೇಕೆ ಅಂತಹ ದ್ಯೂತಕ್ಕಾಗಿ ಆಶಿಸುವೆ? ದ್ಯೂತವು ಮೋಸಕ್ಕೆಡೆಯಾದುದರಿಂದ, ವಿವೇಕಿಗಳು ಅದನ್ನು ಆದರಿಸಬಾರದು. ಶಕುನೀ! ಇಂತಹ ಕೆಟ್ಟ ದಾರಿಯಿಂದ ನಮ್ಮನ್ನು ಗೆಲ್ಲಬೇಕೆಂದು ಮಾತ್ರ ನೀನು ಬಯಸಬೇಡ” ಎಂದನು.

ಆಗ ಶಕುನಿಯು ಧರ್ಮರಾಜನನ್ನು ಕುರಿತು “ ಓ ಕುಂತೀಪುತ್ರ! ಆಟವಾಡತಕ್ಕ ರೀತಿಯನ್ನು ಚೆನ್ನಾಗಿ ತಿಳಿದುಕೊಂಡು, ಪಗಡೆಯ ಕಾಯಿಗಳನ್ನು ನಡೆಸಬಲ್ಲ ಮೇಧಾವಿಯೇ ರಾಜಕಾರ್ಯವನ್ನೂ ಚೆನ್ನಾಗಿ ನಡೆಸಬಲ್ಲನೆಂದು ತಿಳಿ! ನನ್ನೊಡನೆ ಪಂಥವನ್ನೊಡ್ಡಿ ಅನೇಕರಾಜರು ಸೋತಿರುವರು. ಇದರಿಂದಲೇ ಅವರಿಗೆಲ್ಲ ಈ ದ್ಯೂತವು ದೋಷಾಸ್ಪದವೆಂಬ ಭಾವನೆಗೆ ಅವಕಾಶವಾಗಿದೆ. ಗೆದ್ದಿದ್ದರೆ, ಆಗ ಅವರು ಅದನ್ನೇ ಪ್ರಶಂಸೆ ಮಾಡುತಿದ್ದರು. ರಾಜಾ, ಬಾ! ಆಡುವೆವು” ಎಂದನು. ಅದಕ್ಕಾ ಧರ್ಮರಾಜನು “ ಲೋಕವ್ಯವಹಾರದಲ್ಲಿ ಚೆನ್ನಾಗಿ ನುರುಗಿದ ದೈವಜ್ಞಾನಿಯಾದ ದೇವಲನೆಂಬ ಋಷಿಯು “ ದ್ಯೂತವೂ, ಮೋಸವೂ ಒಂದೇ! ಜೂಜಾಟವು ಪಾಪಕರವು. ಯುದ್ಧದಲ್ಲಿ ಶತ್ರುಗಳನ್ನು ಜಯಿಸುವುದೇ ಕ್ಷತ್ರಿಯನಿಗೆ ಶ್ರೇಯಸ್ಕರವು ಮತ್ತು ಧರ್ಮವು” ಎಂದು ಹೇಳಿರುವನು.

ಕ್ಷತ್ರಿಯರಾದ ನಾವು ನಮ್ಮ ಕೈಲಾದವರೆಗೂ ಬ್ರಾಹ್ಮಣರನ್ನು ರಕ್ಷಿಸಿ ದುಷ್ಟರನ್ನು ಶಿಕ್ಷಿಸಬೇಕು. ಅದೇ ನಮ್ಮ ಕಾರ್ಯವು. ಅದೇ ನಮಗೆ ಸಂಪತ್ತು. ಓ ಶಕುನೀ! ಮೋಸದಿಂದ ದ್ಯೂತದಲ್ಲಿ ನಮ್ಮನ್ನು ಗೆಲ್ಲಬೇಡ. ನಿಮಗೆ ಮೋಸವನ್ನು ಮಾಡಿ ಸುಖವನ್ನೂ, ಐಶ್ವರ್ಯವನ್ನೂ ಪಡೆಯುವ ಅಭಿಲಾಷೆಯು ನನಗಿಲ್ಲ. ಸಮರ್ಥನಾದರೂ ದ್ಯೂತಗಾರನನ್ನು ಜನರು ಗೌರವಿಸುವುದಿಲ್ಲ" ಎಂದನು. ಆಗ ಶಕುನಿಯು "ಓ ಯುಧಿಷ್ಠಿರಾ! ವೇದಾಧ್ಯಯನ ಮಾಡಿದವನು ಅಧ್ಯಯನಮಾಡದವನನ್ನೂ, ವಿದ್ಯಾವಂತನಾದವನು ಅವಿದ್ಯಾವಂತನನ್ನೂ ಗೆಲ್ಲುವುದಕ್ಕೆ ಪ್ರಯತ್ನಿಸುವುದು ಮೋಸವಲ್ಲವೇನು? ಆದರೆ ಜನರು ಅದನ್ನು ಮೋಸವೆಂದು ಭಾವಿಸುವುದಿಲ್ಲ. ಹಾಗೆಯೇ ದ್ಯೂತದಲ್ಲಿ ನಿಪುಣನಾದವನು ಪಗಡೆಯಾಟವನ್ನು ತಿಳಿಯದವನನ್ನೂ, ಅಸ್ತ್ರವಿದ್ಯಾನಿಪುಣನು ಅಸ್ತ್ರವಿದ್ಯೆಯಲ್ಲಿ ವಿಶೇಷ ಪರಿಶ್ರಮವಿಲ್ಲದವನನ್ನೂ, ಮಹಾಬಲಶಾಲಿಯಾದವನು ಶಕ್ತಿಯಿಲ್ಲದವನನ್ನೂ ಜಯಿಸುವುದೂ ಮೋಸವೇ! ಯಾವ ಕಾರ್ಯದಲ್ಲಿಯಾದರೂ ತಿಳಿದವರು ತಿಳಿಯದವರನ್ನು ಗೆಲ್ಲಲು ಪ್ರಯತ್ನಿಸುವುದೂ ಮೋಸಕಾರ್ಯವೇ! ಆದರೂ ಸಾಮಾನ್ಯವಾಗಿ ಜನರು ಅವುಗಳನ್ನೆಲ್ಲ ಮೋಸಕೃತ್ಯಗಳೆಂದು ಭಾವಿಸುವುದಿಲ್ಲ. ನನ್ನೊಡನೆ ಜೂಜಾಡುವುದು ಮೋಸವೆಂದು ನೀನು ಭಾವಿಸಿರುವಂತಿದೆ. ನೀನೇಕೆ ಹೀಗೆ ಭಯಪಡುವೆ? ಆಟವಾಡು. ಹಿಂಜರಿಯಬೇಡ" ಎಂದನು. ಯುಧಿಷ್ಠಿರನು "ಓ ಶಕುನೀ! ನನ್ನನ್ನು ಕರೆದಮೇಲೆ ನಾನು ಹಿಂತಿರುಗುವುದಿಲ್ಲ. ಇದು ನನ್ನ ವ್ರತವು. ವಿಧಿಯು ನನ್ನನ್ನು ಬಾಧಿಸುತ್ತಿರುವುದು. ದೈವಕೃಪೆಯಿದ್ದಂತಾಗಲಿ! ಈಗ ನಾನು ಯಾರೊಡನೆ ದ್ಯೂತವಾಡಬೇಕು? ನನ್ನಿದಿರಿಗೆ ಆಡುವವರು ಯಾರು? ಇದು ಗೊತ್ತಾದಮೇಲೆ ಆಟವನ್ನು ಪ್ರಾರಂಭಿಸಬಹುದು" ಎಂದನು. ಆಗ ದುರ್ಯೋಧನನು "ಓ ಧರ್ಮರಾಜಾ! ರತ್ನವನ್ನೂ, ಧನವನ್ನೂ ನಾನೊದಗಿಸುವೆನು. ನನ್ನ ಮಾವನಾದ ಶಕುನಿಯು ನನಗಾಗಿ ಆಡುವನು" ಎಂದನು. ಅದಕ್ಕಾ ಯುಧಿಷ್ಠಿರನು "ಒಬ್ಬನಿಗಾಗಿ ಮತ್ತೊಬ್ಬನು ಆಡುವುದು ಅಸಾಧುವೆಂದೇ ನನಗೆ ತೋರುವುದು. ಆದರೆ ನೀನು

ಸಕಲವನ್ನೂ ತಿಳಿದವನು. ಈ ನೀತಿಯೂ ನಿನಗೆ ತಿಳಿದಿರಬೇಕು. ನಿನಗೆ ಇಷ್ಟವಾಗಿರುವ ಪಕ್ಷದಲ್ಲಿ ಅದೇ ರೀತಿಯಲ್ಲಿ ಜರುಗಲಿ" ಎಂದನು.

ಇದು ಎಂಭತ್ತುನಾಲ್ಕನೆಯ ಅಧ್ಯಾಯವು.

ಧರ್ಮರಾಜನು ದ್ಯೂತದಲ್ಲಿ ಸರ್ವಸ್ವವನ್ನೂ ಶಕುನಿಗೆ ಸೋತುದು.

ರಾಜರೆಲ್ಲರೂ ಧೃತರಾಷ್ಟ್ರನನ್ನು ಮುಂದಿಟ್ಟುಕೊಂಡು ದ್ಯೂತಸಭೆಗೆ ಬಂದಮೇಲೆ, ಭೀಷ್ಮನೂ, ದ್ರೋಣನೂ, ಕೃಪನೂ, ವಿದುರನೂ ಈ ನಾಲ್ವರುಮಾತ್ರ ಮನಸ್ಸಿನಲ್ಲಿ ಹರ್ಷವಿಲ್ಲದೆ, ಮೆಲ್ಲಗೆ ಬಂದು ಸೇರಿದರು. ಮಹಾತೇಜಸ್ವಿಗಳಾಗಿ ಸಿಂಹದಂತೆ ಕಾಣುತಿದ್ದ ಅನೇಕ ವೀರರು ಚಿತ್ರ ವಿಚಿತ್ರಗಳಾದ ಉತ್ತಮಾಸನಗಳಮೇಲೆ ಕೆಲವುಕಡೆ ಇಬ್ಬಿಬ್ಬರಾಗಿಯೂ, ಕೆಲವುಕಡೆ ಒಬ್ಬೊಬ್ಬರಾಗಿಯೂ ಕುಳಿತರು. ಅನೇಕರಾಜರು ನೆರೆದಿದ್ದ ಆ ಸಭೆಯು, ದೇವತೆಗಳೊಡಗೂಡಿದ ದೇವಲೋಕದಂತೆ ಬೆಳಗುತಿತ್ತು. ಅಲ್ಲಿ ಬಂದವರೆಲ್ಲರೂ ವೇದವಿತ್ತುಗಳು! ಶೂರರು! ತೇಜೋಮೂರ್ತಿಗಳು! ಎಲ್ಲರೂ ಬಂದು ಸೇರಿದಮೇಲೆ, ಒಬ್ಬೊಬ್ಬರಿಗೆ ವಿನೋದಾರ್ಥವಾದ ಸ್ನೇಹದಾಟವು ಆರಂಭವಾಯಿತು. ಆದರೇನು? ಆಮೇಲೆ ಆಟದ ಉತ್ಸಾಹವು ಮೇಲೇರಿತು. ಆಗ ಯುಧಿಷ್ಠಿರನು ದುರ್ಯೋಧನನನ್ನು ಕುರಿತು "ರಾಜಾ! ಇದೋ! ಈ ನನ್ನ ಹಾರದೊಳಗಿನ ಈ ನಾಯಕರತ್ನವನ್ನು ನೋಡು. ಇದು ಬಹಳ ಬೆಲೆಯುಳ್ಳದು. ಸಾಗರಾವರ್ತದಲ್ಲಿ (ಸಮುದ್ರದ ಸುಳಿ) ಹುಟ್ಟಿದುದು. ಕುಂದಣದಿಂದ ಅಲಂಕೃತವಾದ, ಇದು ಹೇಗೆ ಪ್ರಕಾಶಿಸುತ್ತಿರುವುದು ನೋಡು. ಇದನ್ನು ನಾನು ಈ ಆಟಕ್ಕೆ ಒಡ್ಡುವೆನು. ಇದಕ್ಕೆ ಬದಲಾಗಿ ನೀನಿಡುವುದೇನು?" ಎಂದನು. ಅದಕ್ಕಾ ದುರ್ಯೋಧನನು "ನನ್ನಲ್ಲಿ ಬೇಕಾದ ಧನಗಳೂ, ರತ್ನಗಳೂ ಸಮೃದ್ಧವಾಗಿವೆ. ಈ ಧನದಾಸೆಯೇ ನನಗಿಲ್ಲ. ನೀನೇ ಆಟವನ್ನು ಗೆಲ್ಲು" ಎಂದನು. ಇಷ್ಟರಲ್ಲಿ ದಾಳದ ಮರ್ಮವನ್ನು

ತಿಳಿದ ಶಕುನಿಯು ದಾಳಗಳನ್ನು ಕೈಗೆತ್ತಿಕೊಂಡು "ಇದೋ! ಜಯಿಸಿಬಿಟ್ಟೆನು!" ಎಂದು ಹೇಳುತ್ತ ದಾಳವನ್ನೆಸೆದನು. ಆಗ ಧರ್ಮರಾಜನು "ಶಕುನೀ! ಓಹೋ ನಿನಗೆ ಅಷ್ಟೊಂದು ಹೆಮ್ಮೆಯೇ? ಮೋಸದಿಂದಲೇ ನೀನು ಜೂಜಿನಲ್ಲಿ ಜಯಿಸುವಂತಿದೆ. ಇನ್ನು ನಾವಿಬ್ಬರೂ ಬೇರೆ ಪಂಥಗಳನ್ನಿಟ್ಟು ಆಡುವೆವು. ಸಾವಿರ ನಿಷ್ಕಗಳಿಂದ ಪೂರ್ಣವಾದ ಜಾಳಿಗೆಯೂ, ಅಕ್ಷಯವಾದ ಸುವರ್ಣಭಂಡಾರವೂ, ನಾನಾತರದ ಆಪರಂಜಿಗಳೂ ನನ್ನಲ್ಲಿವೆ. ಇವು ನನ್ನ ಸ್ವಂತಧನವು. ಇದನ್ನೊಡ್ಡುವೆನು" ಎಂದನು. ಒಡನೆಯೇ ಶಕುನಿಯು ದಾಳವನ್ನೆಸೆದು "ಅದನ್ನೂ ಜಯಿಸಿದುದಾಯಿತು" ಎಂದನು. ಆಗ ಯುಧಿಷ್ಠಿರನು ಮತ್ತಷ್ಟು ರೇಗಿ "ಶಕುನೀ! ಇದೋ ನಾನು ಈಗಲೇ ಏರಿಬಂದ ರಾಜಯೋಗ್ಯವಾದ ಜಯರಥವಿದೆ. ಇದೊಂದೇ ರಥವು ಸಾವಿರರಥಗಳಿಗೆ ಸಾಟಿಯಾದುದು. ಹುಲಿಯ ಚರ್ಮದಿಂದ ಆಚ್ಛಾದಿತವಾಗಿ, ದೃಢವಾದ ಮತ್ತು ಅಂದವಾದ ಚಕ್ರಗಳಿಂದಲೂ, ಇತರ ಪರಿಕರಗಳಿಂದಲೂ ಕೂಡಿ, ಕಿರುಗಂಟೆಗಳಿಂದ ಅಲಂಕೃತವಾಗಿರುವ ಈ ರಥವನ್ನು ನೋಡು. ಮೇಘಗರ್ಜನೆಯಂತೆಯೂ, ಸಮುದ್ರಘೋಷದಂತೆಯೂ ಇರುವ ಗಂಭೀರಧ್ವನಿಯಿಂದ ಮೊಳಗುತ್ತಿರುವ ಈ ರಥವನ್ನೊಡ್ಡಿರುವೆನು. ಇದು ಬಿಳಿಯಬಣ್ಣದ ಎಂಟು ಉತ್ತಮಾಶ್ವಗಳಿಂದ ಎಳೆಯಲ್ಪಡುವುದು. ಭೂಮಿಯಲ್ಲಿರುವ ಯಾವ ಪ್ರಾಣಿಗಳೂ ವೇಗದಲ್ಲಿ ಇದನ್ನು ಮೀರಲಾರವು. ರಾಜಾ! ಇದು ನನ್ನ ಧನವು. ಇದನ್ನೊಡ್ಡಿ ಈ ಆಟವನ್ನಾಡುವೆನು" ಎಂದನು. ಒಡನೆಯೇ ಶಕುನಿಯು "ಅದನ್ನೂ ಜಯಿಸಿದುದಾಯಿತು" ಎಂದನು. ಆಮೇಲೆ ತಿರುಗಿ ಧರ್ಮರಾಜನು "ಇದೋ! ನನ್ನಲ್ಲಿ ಲಕ್ಷದಾಸಿಯರಿರುವರು. ಎಲ್ಲರೂ ನವಯೌವನವುಳ್ಳವರು. ಬಂಗಾರದಂತೆ ಮೈಬಣ್ಣವುಳ್ಳವರು. ಸರ್ವಾಭರಣ ಭೂಷಿತರು. ಗಂಧ, ಪುಷ್ಪ, ವಸ್ತ್ರಾದಿಗಳಿಂದ ಅಲಂಕೃತರು. ಅರುವತ್ತುನಾಲ್ಕು ಕಲೆಗಳಲ್ಲಿಯೂ ನೈಪುಣ್ಯವುಳ್ಳವರು. ಗಾನ ನರ್ತನಗಳಲ್ಲಿ ಸುಶಿಕ್ಷಿತರು. ಇವರು ನನ್ನ ಆಜ್ಞಾಧೀನರಾಗಿ, ಸ್ನಾತಕರಿಗೂ, ಅಮಾತ್ಯರಿಗೂ ಕೆಲಸಗಳನ್ನು ಮಾಡುವವರು. ಇದು ನನ್ನ ಧನವು. ಈಗ ಇದನ್ನಿಟ್ಟು ಆಡುವೆನು" ಎಂದನು. ಒಡನೆಯೇ ಶಕುನಿಯು "ಸರಿ! ಆಡು

ವೆವು'' ಎಂದು ಕಪಟದಿಂದ ದಾಳವನ್ನೆಸೆದು ಅದನ್ನೂ ಜಯಿಸಿ "ಮತ್ತೇನಿದೆ?'' ಎಂದನು. ತಿರುಗಿ ಧರ್ಮರಾಜನು "ನನ್ನಲ್ಲಿ ಸಾವಿರಾರು ಮಂದಿ ದಾಸರಿರುವರು. ಅವರು ಬಹಳ ಸಮರ್ಥರು. ಯಜಮಾನನ ಮನಸ್ಸಿಗೆ ಅನುಕೂಲರಾಗಿ ನಡೆಯತಕ್ಕವರು. ಬುದ್ಧಿವಂತರು. ಜಿತೇಂದ್ರಿಯರಾದ ಯುವಕರು. ವಸ್ತ್ರಾಭರಣಕುಂಡಲಾದಿಗಳಿಂದ ಅಲಂಕೃತರು. ಹಗಲೂ ರಾತ್ರಿಯೂ ಇವರು ಭೋಜನಪಾತ್ರೆಗಳನ್ನು ಕೈಯಲ್ಲಿಟ್ಟುಕೊಂಡು ಅತಿಥಿಗಳನ್ನು ಆದರಿಸುತ್ತಿರುವರು. ಇವರನ್ನೊಡ್ಡಿ ಈ ಆಟವನ್ನಾಡುವೆನು'' ಎಂದನು. ಶಕುನಿಯು ಕಪಟದಿಂದ ಆ ಪಣವನ್ನೂ ಜಯಿಸಿ "ಅದನ್ನೂ ಜಯಿಸಿದುದಾಯಿತು! ಮತ್ತೇನಿದೆ?'' ಎಂದನು. ಆಮೇಲೆ ತಿರುಗಿ ಧರ್ಮರಾಜನು "ಶಕುನೀ! ನನ್ನಲ್ಲಿ ಸಾವಿರ ಮದದಾನೆಗಳುಂಟು. ಬಂಗಾರದ ಸರಪಣಿಗಳಿಂದಲೂ, ಕುಂಭಸ್ಥಳದ ಅಲಂಕಾರಗಳಿಂದಲೂ, ಸುವರ್ಣಮಾಲಿಕೆಗಳಿಂದಲೂ, ಪದ್ಮಕಗಳೆಂಬ ಕೆಂಪಿನ ಬೊಟ್ಟುಗಳಿಂದಲೂ ಶೋಭಿಸುವ ಈ ಆನೆಗಳನ್ನು ಆಟಕ್ಕೊಡ್ಡುವೆನು. ಈ ಆನೆಗಳೆಲ್ಲವೂ ಚೆನ್ನಾಗಿ ಸಾಧುಮಾಡಲ್ಪಟ್ಟು ರಾಜರಿಗೆ ಏರಿಹೋಗತಕ್ಕ ವಾಹನಗಳಾಗಿವೆ. ಯುದ್ಧದಲ್ಲಿ ಎಂತಹ ಶಬ್ದಗಳನ್ನಾದರೂ ಸಹಿಸಬಲ್ಲುವು. ನೇಗಿಲಿನಂತೆ ನೀಡಿದ ಕೊಂಬುಗಳಿಂದಲೂ, ದೊಡ್ಡ ದೇಹದಿಂದಲೂ ಕೂಡಿದ ಈ ಆನೆಗಳು ವರ್ಷಾಕಾಲದ ಮೇಘಗಳಂತಿರುವುವು. ಒಂದೊಂದು ಆನೆಗೂ ಎಂಟೆಂಟು ಹೆಣ್ಣಾನೆಗಳುಂಟು. ಆ ಮದದಾನೆಗಳು ಶತ್ರುನಗರವನ್ನು ನಾಶಮಾಡಬಲ್ಲುವು. ಈ ಆಟಕ್ಕೆ ಅವುಗಳನ್ನೊಡ್ಡಿರುವೆನು. ಅವುಗಳನ್ನು ಜಯಿಸು'' ಎಂದನು. ಈ ಮಾತನ್ನು ಕೇಳಿ ಶಕುನಿಯು ನಗುತ್ತಾ ದಾಳವನ್ನೆಸೆದು "ಅದನ್ನೂ ಜಯಿಸಿದುದಾಯಿತು. ಮತ್ತೇನಿದೆ?'' ಎಂದನು. ತಿರುಗಿ ಯುಧಿಷ್ಠಿರನು "ಶಕುನೀ! ಇದೋ! ನನ್ನಲ್ಲಿ ಆ ಆನೆಗಳ ಸಂಖ್ಯೆಯಷ್ಟೇ ರಥಗಳುಂಟು. ಒಂದೊಂದು ರಥವೂ ಸುವರ್ಣದಂಡಗಳಿಂದಲೂ, ಪತಾಕೆಗಳಿಂದಲೂ, ಪಳಗಿದ ಉತ್ತಮಾಶ್ವಗಳಿಂದಲೂ, ವಿಚಿತ್ರವಾಗಿ ಯುದ್ಧಮಾಡತಕ್ಕ ರಥಿಕರಿಂದಲೂ ಕೂಡಿವೆ. ಆ ಒಬ್ಬೊಬ್ಬ ರಥಿಕನೂ ಒಂದೊಂದು ಸಾವಿರ ನಾಣ್ಯಗಳಿಗಿಂತ ಹೆಚ್ಚು ವೇತನಗಳನ್ನು ಪಡೆಯುತ್ತಿರುವನು. ಯುದ್ಧಮಾಡಿದರೂ, ಮಾಡದಿದ್ದರೂ ಅವರಿಗೆ ಪ್ರತಿತಿಂಗಳಿಗೂ

ತಪ್ಪದೆ ವೇತನಗಳು ಕೊಡಲ್ಪಡುತ್ತಿರುವುವು. ಶಕುನೀ! ಇದು ನನ್ನ ಧನವು. ಈ ಆಟಕ್ಕೆ ಅದನ್ನಿಡುವೆನು" ಎಂದನು. ಒಡನೆಯೇ ಶಕುನಿಯು "ಅದನ್ನೂ ಜಯಿಸಿದೆನು. ಮತ್ತೇನಿದೆ?" ಎಂದನು. ಆ ಮೇಲೆ ತಿರುಗಿ "ಇದೋ! ನನ್ನಲ್ಲಿ, ಹಿಂದೆ ಅರ್ಜುನನಿಂದ ಯುದ್ಧದಲ್ಲಿ ಪರಾಜಿತನಾದ ಚಿತ್ರಾಂಗದನೆಂಬ ಗಂಧರ್ವನು, ಅರ್ಜುನನ ಪರಾಕ್ರಮಕ್ಕೆ ಮೆಚ್ಚಿ ಅವನಿಗೆ ಕೊಟ್ಟ ಗಂಧರ್ವಲೋಕದ ಕುದುರೆಗಳಿವೆ. ಸುವರ್ಣಾಲಂಕೃತಗಳಾಗಿ, ತಿತ್ತಿರಿಪಕ್ಷಿಗಳಂತೆ ಚಿತ್ರವರ್ಣವುಳ್ಳ ಆ ಕುದುರೆಗಳೂ ನನ್ನ ಧನವೇ. ಈ ಆಟಕ್ಕೆ ಅವುಗಳನ್ನೊಡ್ಡುವೆನು. ಆಡಿ ಜಯಿಸು" ಎಂದನು. ಶಕುನಿಯು ತನ್ನ ಕಪಟವನ್ನುಪಯೋಗಿಸಿ, "ಇದೋ! ಅವುಗಳನ್ನೂ ಜಯಿಸಿದೆನು. ಇಡು. ಮತ್ತೇನಿದೆ?" ಎಂದನು. ಆಗ ಧರ್ಮರಾಜನು "ಶಕುನೀ! ನನ್ನಲ್ಲಿ ಇನ್ನೂ ಅಯುತಸಂಖ್ಯಾಕಗಳಾದ ಉತ್ತಮರಥಗಳೂ, ಬಂಡಿಗಳೂ ಇವೆ. ಅವೆಲ್ಲಕ್ಕೂ ಒಳ್ಳೇ ಉತ್ತಮಾಶ್ವಗಳನ್ನು ಕಟ್ಟಿ ಸಿದ್ಧವಾಗಿವೆ. ಮತ್ತು ನನ್ನಲ್ಲಿ ಒಂದೊಂದು ಜಾತಿಯಿಂದಲೂ ಆರಿಸಲ್ಪಟ್ಟ ಮಹಾವೀರ್ಯವುಳ್ಳ ಸಾವಿರಾರು ಮಂದಿ ಯೋಧರುಂಟು. ಅವರೆಲ್ಲ ಒಳ್ಳೇ ಶಾಲ್ಯನ್ನವನ್ನೂ, ಸಮೃದ್ಧವಾದ ಹಾಲನ್ನೂ ಕುಡಿದು ಕೊಬ್ಬಿ ಬೆಳೆದಿರುವರು. ವಿಶಾಲವಾದ ಎದೆಯುಳ್ಳವರು. ಅದೆಲ್ಲವೂ ನನ್ನ ಧನವೇ. ಈ ಆಟಕ್ಕೆ ಅದನ್ನಿಟ್ಟು ಆಡುವೆನು" ಎಂದನು. ಮೊದಲಿನಂತೆಯೇ ಶಕುನಿಯು ಕಪಟವನ್ನು ಹಿಡಿದು ದಾಳವನ್ನು ಬೀಸಿ "ಅದನ್ನೂ ಜಯಿಸಿದೆನು. ಮತ್ತೇನಿದೆ?" ಎಂದನು. ತಿರುಗಿ ಯುಧಿಷ್ಠಿರನು ನನ್ನಲ್ಲಿ ತಾಮ್ರದ ಮತ್ತು ಕಬ್ಬಿಣದ ಕೊಪ್ಪರಿಗೆಗಳಲ್ಲಿಡಲ್ಪಟ್ಟ ನಾನೂರು ನಿಧಿಗಳುಂಟು. ಆ ಒಂದೊಂದು ಕೊಪ್ಪರಿಗೆಯಲ್ಲಿಯೂ ಅಮೂಲ್ಯವಾದ ಐದೈದು ದ್ರೋಣಪರಿಮಾಣದ ಅಚ್ಚ ಬಂಗಾರದ ನಾಣ್ಯಗಳನ್ನು ತುಂಬಿಟ್ಟದೆ. ಅದೂ ನನ್ನ ಧನವೇ. ಅದನ್ನಿಟ್ಟಾಡುವೆನು" ಎಂದನು. ತನ್ನ ಕಪಟತಂತ್ರದಲ್ಲಿ ದೃಢನಿಶ್ಚಯವುಳ್ಳ ಶಕುನಿಯು ದಾಳವನ್ನೆಸೆದು "ಅದನ್ನೂ ಜಯಿಸಿದುದಾಯಿತು. ಮತ್ತೇನಿದೆ?" ಎಂದನು.

ಇದು ಎಂಭತ್ತೈದನೆಯ ಅಧ್ಯಾಯವು.



ವಿದುರನು ದುರ್ಯೋಧನನನ್ನು ನಿಂದಿಸಿ, ದ್ಯೂತವನ್ನು ಅಷ್ಟಕ್ಕೇ ನಿಲ್ಲಿಸುವಂತೆ ಧೃತರಾಷ್ಟ್ರನಿಗೆ ಹೇಳಿದುದು.

ಓ ಜನಮೇಜಯರಾಜಾ! ಹೀಗೆ ದ್ಯೂತವು ಮೇಲೆಮೇಲೆ ಬಹಳ ಪ್ರಬಲವಾಗಿ, ಧರ್ಮರಾಜನು ತನ್ನ ಸರ್ವಸ್ವವನ್ನೂ ಕಳೆದುಕೊಳ್ಳುತಿಪ್ಪನು. ಈ ಭಯಂಕರ ಸ್ಥಿತಿಯನ್ನು ನೋಡಿ ಧೀಮಂತನಾದ ವಿದುರನು ಧೃತರಾಷ್ಟ್ರನನ್ನು ಕುರಿತು “ಮಹಾರಾಜಾ! ನನ್ನದೊಂದು ಮಾತು. ನೀನು ಚೆನ್ನಾಗಿ ಗಮನಿಸಿ ಕೇಳಬೇಕು. ಸಾಯುವವನಿಗೆ ಔಷಧವು ಹೇಗೋ ಹಾಗೆ ನನ್ನ ಮಾತು ನಿನಗೆ ರುಚಿಸದಿರಬಹುದು. ಆದರೂ ಹೇಳಬೇಕಾದುದು ನನ್ನ ಕರ್ತವ್ಯವು. ಪಾಪಬುದ್ಧಿಯುಳ್ಳ ನಿನ್ನ ಮಗನಾದ ಈ ದುರ್ಯೋಧನನು, ತಾಯಿಯ ಗರ್ಭದಿಂದ ಹುಟ್ಟಿದೊಡನೆ, ಕಾಡುನರಿಯಂತೆ ವಿಕಾರಸ್ವರದಿಂದ ಅರಚಿಕೊಂಡುದನ್ನು ನೀನೂ ಚೆನ್ನಾಗಿ ಬಲ್ಲೆ. ಕುಲಗೇಡಿಯಾದ ಈ ನಿನ್ನ ಮಗನು ನಿಮ್ಮ ನಾಶಕ್ಕೆ ಮೂಲವಾಗಿ ಹುಟ್ಟಿರುವನು. ರಾಜಾ! ನೀನಾದರೋ ಪುತ್ರಮೋಹದಿಂದ ನಿನ್ನ ಮನೆಯೊಳಗೆ ಪುತ್ರರೂಪದಿಂದ ಸೇರಿಕೊಂಡಿರುವ ನರಿಯನ್ನೇ ತಿಳಿಯದಿರುವೆ! ಶುಕ್ರನು ಹೇಳಿದ ನೀತಿವಾಕ್ಯವೊಂದನ್ನು ತಿಳಿಸುವೆನು ಕೇಳು. “ಜೇನನ್ನು ತೆಗೆಯತಕ್ಕವನು, ಆ ಜೇನನ್ನು ಕಂಡಾಗ ಮರದ ಮೇಲೇರಿ, ಅದರ ಆಸೆಯಲ್ಲಿ ಕೆಳಗಿರುವ ಕಮರಿಯನ್ನೂ, ಅಥವಾ ಕೊಳವನ್ನೂ ತಿಳಿಯಲಾರನು. ಅಂಥವನು ಅಲ್ಲಿಂದ ಕೆಳಗೆ ಬಿದ್ದು ನೀರಿನಲ್ಲಿ ಮುಳುಗುವನು, ಇಲ್ಲವೇ ಸಾಯುವನು” ಅದರಂತೆಯೇ ಈಗ ನಿನ್ನ ಮಗನಾದ ದುರ್ಯೋಧನನು ದ್ಯೂತವೆಂಬ ಮದ್ಯದಿಂದ ಬುದ್ಧಿಗೆಟ್ಟು, ಮುಂದೆ ತನಗಿರುವ ಹಾನಿಯನ್ನೇ ತಿಳಿಯದಿರುವನು. ಅಂತಹ ಮಹಾರಥರಲ್ಲಿ ವೈರದಿಂದ ಮುಂದೆ ತನಗಾಗುವ ಅನರ್ಥವನ್ನೂ ಯೋಚಿಸದಿರುವನು. ರಾಜಾ! ನೀನು ಮಹಾಪ್ರಾಜ್ಞನು. ಹಿಂದೆ ಭೋಜವಂಶದಲ್ಲಿ ಅಸಮಂಜಸನೆಂಬ ದುಷ್ಪುತ್ರನು ಹುಟ್ಟಿದುದನ್ನೂ, ಪ್ರಜೆಗಳ ಹಿತಕ್ಕಾಗಿ ತಂದೆಯು ಅವನನ್ನು ತೊರೆದುಬಿಟ್ಟುದುದನ್ನೂ ನೀನು ಚೆನ್ನಾಗಿ ಬಲ್ಲೆ. ಇದಲ್ಲದೆ, ಕಂಸನನ್ನು ಕೃಷ್ಣನು ಕೊಂದಾಗ, ಅವನ ಆಜ್ಞೆಯಮೇಲೆ ಅಂಧಕರೂ, ಯಾದವರೂ, ಭೋಜರೂ, ಏಕಾಭಿಪ್ರಾಯದಿಂದ ಸೇರಿ, ಆ ಕಂಸನನ್ನು ಪರಿತ್ಯಾಗಮಾಡಿ

ದರು. ಇದರಿಂದ ಆ ಕುಲಕ್ಕೇ ಕ್ಷೇಮವುಂಟಾಗಿ, ಅವರೆಲ್ಲರೂ ಅನೇಕ ವರ್ಷಗಳವರೆಗೆ ಸಂತೋಷದಿಂದಿರುವಂತಾಯಿತು. ಆದುದರಿಂದ ದುಷ್ಟನಾದೀ ನಿನ್ನ ಮಗನನ್ನು ಅರ್ಜುನನು ಈಗಲೇ ನಿಗ್ರಹಿಸಿಬಿಡಲಿ! ಅದಕ್ಕೆ ನೀನು ಅನುಮತಿಸು. ಈ ಪಾಪಿಯ ನಿಗ್ರಹದಿಂದ ಇತರ ಕೌರವರೆಲ್ಲರಿಗೂ ಕ್ಷೇಮವುಂಟಾಗಲಿ. ಕಾಗೆಯನ್ನೂ, ನರಿಯನ್ನೂ ತೊರೆದು, ವಿಚಿತ್ರವಾದ ಗರಿಗಳುಳ್ಳ ನವಿಲುಗಳನ್ನೂ, ಹುಲಿಗಳನ್ನೂ ಕೊಂಡುಕೊಳ್ಳುವಂತೆ, ಈ ದುರ್ಯೋಧನನನ್ನು ತೊರೆದು, ಆ ಪಾಂಡವರನ್ನು ಆದರಿಸು. ಮಹಾರಾಜಾ! ಅನ್ಯಾಯವಾಗಿ ದುಃಖಸಮುದ್ರದಲ್ಲಿ ಮುಳುಗಬೇಡ. ಒಂದು ಕುಲವನ್ನುಳಿಸಿಕೊಳ್ಳುವುದಕ್ಕಾಗಿ ಒಬ್ಬ ಮನುಷ್ಯನನ್ನು ತೊರೆಯಬಹುದು. ಒಂದು ಗ್ರಾಮವನ್ನುಳಿಸುಕೊಳ್ಳುವುದಕ್ಕಾಗಿ ಒಂದು ಕುಲವನ್ನೇ ತೊರೆಯುಬಹುದು. ಒಂದು ದೇಶವನ್ನುಳಿಸುವುದಕ್ಕಾಗಿ ಒಂದು ಗ್ರಾಮವನ್ನೇ ತೊರೆಯುಬಹುದು. ಆತ್ಮರಕ್ಷಣೆಗಾಗಿ ಭೂಮಿಯನ್ನೇ ತೊರೆದುಬಿಡಬೇಕು. ಸರ್ವಜ್ಞನೂ, ಸರ್ವಜನರ ಅಭಿಪ್ರಾಯವನ್ನು ತಿಳಿದವನೂ, ಶತ್ರುಭಯಂಕರನೂ ಆದ ಶುಕ್ರಾಚಾರ್ಯನು, ಜಂಭಾಸುರನನ್ನು ತೊರೆದುಬಿಡುವುದಕ್ಕಾಗಿ, ದಾನವವೀರರನ್ನು ಕುರಿತು ಹೇಳಿದ ಅಮೂಲ್ಯವಾದ ನೀತಿಯೇ ಇದು. ಮಹಾರಾಜಾ! ಭಂಗಾರದ ಮೊಟ್ಟೆಗಳನ್ನಿಡುತ್ತಿದ್ದ ಕೆಲವು ಕಾಡುಹಕ್ಕಿಗಳನ್ನು ತಂದು ಸಾಕುತಿದ್ದ ರಾಜನೊಬ್ಬನು, ಆ ಭಂಗಾರದಲ್ಲಿ ಅತ್ಯಾಶೆಯಿಂದ, ಆ ಹಕ್ಕಿಗಳ ಹೊಟ್ಟೆಯನ್ನೇ ಸೀಳಿದನಂತೆ. ಮೂಢನಾದ ಆ ರಾಜನು ಎಲ್ಲವನ್ನೂ ಒಂದೇ ಸಲಕ್ಕೆ ಪಡೆಯುಬೇಕೆಂಬ ದುರಾಸೆಯಿಂದ, ಮುಂದಾಲೋಚನೆಯಿಲ್ಲದೆ, ತನಗೆ ಮೊದಲು ಬರುತಿದ್ದ ಮತ್ತು ಮುಂದೆ ಬರಬಹುದಾಗಿದ್ದ ಲಾಭಗಳೆರಡನ್ನೂ ಕಳೆದುಕೊಂಡನು. ಈಗ ನಿನ್ನ ಸ್ಥಿತಿಯೂ ಹಾಗೆಯೇ ಇದೆ. ಧನಾಶೆಯಿಂದ ಪಾಂಡವರಿಗೆ ದ್ರೋಹವನ್ನೆಣಿಸಬೇಡ. ಪಕ್ಷಿಗಳನ್ನು ಕೊಂದ ರಾಜನಂತೆ, ಮೋಹಾಂಧನಾದ ನೀನು ಆಮೇಲೆ ಪರಿತಪಿಸಬೇಕಾಗುವುದು. ಹೂವಾಡಿಗನು ತನ್ನ ತೋಟವನ್ನು ಅಕ್ಕರೆಯಿಂದ ಕಾಪಾಡುತ್ತ, ಆಗಾಗ ಗಿಡಗಳಲ್ಲಿ ಪುಷ್ಪಿಸಿದ ಹೂಗಳನ್ನು ಆ ಗಿಡಗಳಿಗೆ ನೋವಾಗದಂತೆ ಕುಯ್ದು ತಂದು ಲಾಭವನ್ನು ಪಡೆಯುವಂತೆ, ನೀನೂ ಆ ಪಾಂಡವರಲ್ಲಿ ಪ್ರೇಮವನ್ನಿಟ್ಟು, ಅವರು ಆಗಾಗ

ಪ್ರೀತಿಯಿಂದ ತಂದೊಪ್ಪಿಸಿದ ಧನವನ್ನೆಲ್ಲ ಅನುಭವಿಸು. ಇದ್ದಲಿಗಾಗಿ ಫಲವೃಕ್ಷಗಳನ್ನು ಸುಡುವಂತೆ, ಅವರನ್ನು ಸಮೂಲವಾಗಿ ನಾಶಮಾಡ ಬೇಡ. ಪುತ್ರ ಮಿತ್ರ ಮಂತ್ರಿ ಸೈನ್ಯಗಳೊಡನೆ ನರಕಕ್ಕೆ ಹೋಗಬೇಡ! ಪಾಂಡವರುಮಾತ್ರ ಈಗ ಕೋಪಗೊಂಡು ನಿಂತರೆ, ಸಮಸ್ತ ದೇವತೆ ಗಳೊಡಗೂಡಿದ ದೇವೇಂದ್ರನಿಗಾದರೂ ಅವರನ್ನಿದಿರಿಸಲು ಸಾಧ್ಯವಲ್ಲ. ದ್ಯೂತವೆಂಬುದು ದ್ವೇಷವನ್ನು ಹೆಚ್ಚಿಸಿ, ಕಲಹಕ್ಕೆ ಮೂಲವಾಗಿ, ಭಯಂ ಕರವಾದ ವಿಪತ್ತನ್ನು ತಂದಿಡುವುದು. ಈಗ ದುರ್ಯೋಧನನು ಹೂಡಿ ರುವ ಈ ಜೂಜಿನಿಂದ ಪ್ರತೀಪ, ಶಂತನು, ಭೀಮ, ಬಾಹ್ಲೀಕಾದಿ ಪೂರ್ವ ರಾಜರೆಲ್ಲರೂ ದುರ್ಗತಿಗೆ ಗುರಿಯಾಗುವರು. ಈ ದುರ್ಯೋಧನನ ಇದೊಂದ ಪರಾಧದಿಂದ ರಾಜವಂಶವೇ ನಿರ್ಮೂಲವಾಗುವುದು. ಕೊಬ್ಬಿದ ಗೂಳಿ ಯು ತನ್ನ ಮದದಿಂದ ಕಲ್ಲನ್ನು ತಿವಿದು ಕೊಂಬುಗಳನ್ನು ತಾನಾಗಿ ಮುರಿದುಕೊಳ್ಳುವಂತೆ, ದುರ್ಯೋಧನನು ಈ ದುರಾಶೆಯಿಂದ ತನ್ನ ಕ್ಷೇಮ ವನ್ನೂ, ರಾಜ್ಯವನ್ನೂ ತಾನಾಗಿ ಕೆಡಿಸಿಕೊಳ್ಳುವುದು ನಿಜವು. ವೀ ರನೂ, ವಿವೇಕಶಕ್ತಿಯುಳ್ಳವನೂ ಆದವನೊಬ್ಬನು ತನ್ನ ವಿವೇಚನೆಯ ನ್ನು ಬಿಟ್ಟು, ಮತ್ತೊಬ್ಬನ ಮನಸ್ಸನ್ನೇ ಅನುವರ್ತಿಸಿ ಹೋದರೆ, ಅಶಿಕ್ಷಿತ ನಾದ ಬಾಲಕನಿಂದ ನಡೆಸಲ್ಪಡುವ ನಾವೆಯನ್ನೇರಿಹೋದವನು ಸಮು ದ್ರದ ನಡುನೀರಿನಲ್ಲಿ ಮುಳುಗಿಹೋಗುವಂತೆ, ಅವನು ಘೋರವ್ಯಸನದಲ್ಲಿ ಮುಳುಗುವುದೇ ನಿಶ್ಚಯವು. ಈಗ ನಿನ್ನ ಮಗನು ಪಾಂಡವರಲ್ಲಿ ದ್ಯೂತ ವನ್ನು ಹೂಡಿರುವನು. ಅವನು ಆ ಆಟದಲ್ಲಿ ಗೆಲ್ಲುತ್ತಿರುವುದನ್ನು ನೋಡಿ, ಈಗ ನೀನೂ ಆನಂದದಿಂದ ಹಿಗ್ಗುತ್ತಿರುವೆ. ರಾಜಾ! ಈ ಸರಸವೇ ಕೊನೆಗೆ ವಿರಸವಾಗಿ, ದೊಡ್ಡ ಹೊಡೆದಾಟದಲ್ಲಿ ಪರಿಣಮಿಸುವುದು. ಇದ ರಿಂದ ಅನೇಕರಿಗೆ ನಾಶವೂ ಸಂಭವಿಸುವುದು. ಈಗ ನಿನಗೆ ಆನಂದಕರ ವಾದ ಈ ದ್ಯೂತವೇ, ಮುಂದೆ ವಿಪರೀತಫಲವನ್ನು ಕಾಣಿಸುವುದು. ಆದು ದರಿಂದ ಇಂತಹ ವಿಚಾರಗಳಲ್ಲಿ ಮೊದಲೇ ಸರಿಯಾಗಿ ಮಂತ್ರಾಲೋಚನೆ ಯನ್ನು ಮಾಡಿ, ಮನಸ್ಸನ್ನು ದೃಢಪಡಿಸಿಕೊಳ್ಳುವುದೇ ಮನುಷ್ಯನ ಧೀರ ತ್ವವು. ಈಗ ಯುಧಿಷ್ಠಿರನೊಡನೆ ನಿನಗುಂಟಾಗಿರುವ ಕಲಹದ ಪರಿಣಾ ಮವನ್ನುಕುರಿತು, ನೀನು ಸ್ವಲ್ಪವೂ ಯೋಚಿಸದೆ ಅದಕ್ಕಾಗಿ ಅನುಮೋ

ದಿಸುವಂತಿದೆ. ಪ್ರತೀಪ ಶಂತನು ವಂಶೀಯರಾದ ಎಲೈ ರಾಜರೇ! ನೀವೆ ಲ್ಲರೂ ಈಗ ಈ ಕೌರವಸಭಾಮಧ್ಯದಲ್ಲಿ ನಾನು ಹೇಳಿದ ಶುಕ್ರನ ನೀತಿ ವಾಕ್ಯಗಳನ್ನು ಲಾಲಿಸಿ ಕೇಳಬೇಕು. ಬುದ್ಧಿಗೆಟ್ಟವನ ಮಾತನ್ನು ಹಿಂಬಾ ಲಿಸಿ, ನೀವೂ ಭಯಂಕರವಾದ ಉರಿಯುವ ಬೆಂಕಿಯಲ್ಲಿ ಪ್ರವೇಶಿಸಬೇಡಿರಿ. ಈಗ ಜೂಜಾಟದಲ್ಲಿ ಮರುಳುಗೊಂಡಿರುವ ಈ ಧರ್ಮರಾಜನೂ, ಭೀಮ ನೂ, ಅರ್ಜುನನೂ, ನಕುಲಸಹದೇವರೂ, ಇದುವರೆಗೆ ಶಾಂತವಾಗಿದ್ದಂತೆ ಮುಂದೆ ತಮ್ಮ ಕೋಪವನ್ನು ಅಡಗಿಸಿಕೊಳ್ಳಲಾರದೆ ಇದಿರುಬಿದ್ದಪಕ್ಷದಲ್ಲಿ ನಿಮಗೆ ಬೇರೆ ಆಶ್ರಯವೆಲ್ಲಿದೆ? ಧೃತರಾಷ್ಟ್ರಮಹಾರಾಜಾ! ಈಗ ನೀನು ಈ ಜೂಜನ್ನು ಏರ್ಪಡಿಸಿದ ಕಾರಣವೇನು? ಈ ದ್ಯೂತಕ್ಕೆ ಮೊದಲೇ ನೀನು ನಿನ್ನ ಆಸೆತೀರುವಂತೆ ಬೇಕಾದಷ್ಟು ಧನವನ್ನೆಲ್ಲ ಕೈಸೇರಿಸಿಕೊಂಡು ಬಿಟ್ಟಿರುವೆ. ಇನ್ನು ತಿರುಗಿ ಜೂಜಿನಲ್ಲಿ ಪಾಂಡವರನ್ನು ಜಯಿಸಿ, ಅವ ರಲ್ಲಿರುವ ಅಧಿಕಧನವನ್ನೆಲ್ಲ ಕಿತ್ತುಕೊಂಡು, ಅದರಿಂದ ನೀನು ಮಾಡುವು ದಾದರೂ ಏನಿದೆ? ಈಗ ಪಾಂಡವರೊಡನೆ ಶಕುನಿಯು ಆಡುತ್ತಿರುವ ದ್ಯೂತವೆಂತದೆಂಬುದನ್ನು ನಾವೆಲ್ಲರೂ ಬಲ್ಲೆವು. ಪರ್ವತರಾಜನಾದ ಈ ಶಕುನಿಯು ಜೂಜಿನ ಮೋಸಗಳನ್ನೆಲ್ಲ ಚೆನ್ನಾಗಿ ಬಲ್ಲವನು. ಅವನು ಎಲ್ಲಿಂದ ಬಂದನೋ ಅಲ್ಲಿಗೇ ಹೋಗಲಿ! ನೀನು ಅವನನ್ನು ತೊರೆದು, ಪಾಂಡವರೊಡನೆ ಒಂದಾಗಿ ಕಲೆತಿರು'' ಎಂದನು.

ಇದು ಎಂಭತ್ತಾರನೆಯ ಅಧ್ಯಾಯವು.



{ ದುರ್ಯೋಧನನು ವಿದುರನನ್ನು ನಿಂದಿಸಿದುದು. ವಿದುರನ ಹಿತೋಪದೇಶಗಳು. }

ಆಮೇಲೆ ದುರ್ಯೋಧನನು ವಿದುರನನ್ನು ನೋಡಿ '' ವಿದುರಾ! ಧೃತರಾಷ್ಟ್ರನ ಮಕ್ಕಳಾದ ನಮ್ಮನ್ನು ನಿಂದಿಸಿ ನಮ್ಮ ಶತ್ರುಗಳ ಯಶಸ್ಸ ನ್ನು ಕೊಂಡಾಡುವುದೇ ನಿನ್ನ ಸ್ವಭಾವವು. ನಿನಗೆ ಯಾರಲ್ಲಿ ಪ್ರೀತಿಯುಂ ಟೆಂಬುದನ್ನು ನಾವೂ ಬಲ್ಲೆವು. ನಮ್ಮನ್ನು ಸಣ್ಣ ಹುಡುಗರಂತೆ ಭಾವಿಸಿ ಯಾವಾಗಲೂ ಅವಮಾನಗೊಳಿಸಿ ಮಾತನಾಡುತ್ತಿರುವೆ. ನಿನ್ನ ಮನಸ್ಸ

ಶತ್ರುಪಕ್ಷದಲ್ಲಿದೆಯೆಂಬುದು ಚೆನ್ನಾಗಿ ತಿಳಿಯುವುದು. ನಿನ್ನ ನಿಂದಾ ಪ್ರಶಂಸೆಗಳೇ ನಿನ್ನ ಪಕ್ಷಪಾತವನ್ನು ಹೊರಕ್ಕೆ ಕಾಣಿಸುವುವು. ನಿನ್ನ ಮನಸ್ಸು ನಮಗೆ ವಿರುದ್ಧವೆಂಬುದನ್ನು ನಾವು ಬಲ್ಲೆವು. ಮಡಿಲಲ್ಲಿ ಸೇರಿ ಕೊಂಡ ಹಾವಿನಂತೆ ನಮ್ಮಲ್ಲಿ ಸೇರಿಕೊಂಡು ನಮಗೇ ನೀನು ವಿರೋಧಿ ಯಾಗಿರುವೆ. ಬೆಕ್ಕಿನಂತೆ ನೀನು ಸಾಕಿದವನಿಗೇ ಕೇಡನ್ನು ಬಯಸತಕ್ಕ ವನು. ಸ್ವಾಮಿದ್ರೋಹಿಯಾದ ನಿನ್ನನ್ನು ಇಲ್ಲಿ ಪಾಪಿಯೆಂದು ನಿಂದಿ ದಿಸುವರಾರೂ ಇಲ್ಲದುದರಿಂದಲೇ, ನೀನು ಪಾಪಕ್ಕೆ ಹೆದರದೆ ಹೀಗೆ ನಡೆಯುತ್ತಿರುವೆ. ನಾವು ಶತ್ರುಗಳನ್ನು ಜಯಿಸಿ ಅದರ ಫಲವನ್ನು ಪಡೆ ಯುತ್ತಿರುವೆವು. ಇಂದುಮೊದಲು ನೀನು ನಮ್ಮೊಡನೆ ಇಂತಹ ಕ್ರೂರ ವಾದ ಮಾತುಗಳನ್ನಾಡದಿರು. ಯಾವಾಗಲೂ ನಮ್ಮ ಶತ್ರುಗಳೊಡನೆ ಸೇರುವುದರಲ್ಲಿಯೇ ನಿನಗೆ ಪ್ರೀತಿ. ನಮ್ಮ ಸಂಬಂಧವನ್ನು ಯಾವಾಗ ಲೂ ದ್ವೇಷಿಸುವೆ. ನಿನ್ನಂತೆ ಅಹಿತವಾದ ಮಾತುಗಳನ್ನಾಡುವವನೂ ಶತ್ರುವೇ ಆಗುವನು. ಶತ್ರುಗಳನ್ನು ಸ್ತೋತ್ರಮಾಡುವಾಗ ಅವನು ಅವರ ದೋಷಗಳನ್ನೆಲ್ಲ ಮುಚ್ಚಿಡುವನು. ಈಗ ನಿನ್ನ ಸ್ವಭಾವವೂ ಹೀ ಗೆಯೇ. ಎಲೌ ನಾಚಿಕೆಗೇಡಿಯೇ! ನಮ್ಮಲ್ಲಿ ಆಶ್ರಿತನಾಗಿ ಪಾಂಡವರ ಪಕ್ಷವನ್ನೇ ಹಿಡಿದು ನಮ್ಮನ್ನೇಕೆ ಕೊರಗಿಸುವೆ! ನಿನ್ನ ಮನಸ್ಸಿನಲ್ಲೇನಿ ರುವುದೋ ಅದನ್ನೇ ಇಲ್ಲಿ ಒದರುತ್ತಿರುವೆ. ನೀನು ನಮ್ಮನ್ನು ಅವಮಾನ ಗೊಳಿಸಬೇಡ. ನಿನ್ನ ದುರಭಿಪ್ರಾಯವನ್ನು ನಾವು ಬಲ್ಲೆವು. ವೃದ್ಧ ರಾದವರಲ್ಲಿ ಹೋಗಿ ಒಳ್ಳೇ ಬುದ್ಧಿಯನ್ನು ಕಲಿತುಕೋ. ವಿದುರಾ! ನೀ ನು ಸಂಪಾದಿಸಿರುವ ಯಶಸ್ಸನ್ನು ಕಾಪಾಡಿಕೋ. ಶತ್ರುಗಳ ಕಾರ್ಯದಲ್ಲಿ ಶ್ರದ್ಧೆಯನ್ನು ವಹಿಸಬೇಡ. ನಮಗೆಲ್ಲ ನೀನೇ ನಿಯಾಮಕನೆಂದು ತಿಳಿದು ಕೊಳ್ಳಬೇಡ. ಪ್ರತಿದಿನವೂ ನಮ್ಮೊಡನೆ ನೀನು ಇಂತಹ ಪರುಷವಾಕ್ಯ ಗಳನ್ನೂ ಆಡಬಾರದು. ವಿದುರಾ! ನನಗೆ ಹಿತವೇನೆಂದು ನಿನ್ನನ್ನು ಕೇಳಿ ದಾಗಲಲ್ಲವೇ ನೀನು ಹೇಳಬೇಕು. ನಾವೇನೂ ನಿನ್ನನ್ನು ಕೇಳಲಿಲ್ಲ. ನಿನಗೆ ಮಂಗಳವಾಗಲಿ. ಹೋಗಿ ಬಾ! ತಾಳ್ಮೆಯಿಂದಿರುವ ನಮ್ಮನ್ನು ಸುಮ್ಮನೆ ರೇಗಿಸಬೇಡ. ವಿದುರಾ! ನನಗೆ ಆಜ್ಞೆಮಾಡಬಲ್ಲವನೊಬ್ಬನೇ! ಬೇರೊಬ್ಬನು ನನಗೆ ಆಜ್ಞೆಮಾಡುವವನಿಲ್ಲ. ಆ ನಿಯಾಮಕನು ಗರ್ಭ

ದಲ್ಲಿರುವಾಗಲೇ ಮನುಷ್ಯನನ್ನು ನಿಯಮಿಸಬಲ್ಲವನು. ಹಳ್ಳವಿದ್ದ ಆಕಾರಕ್ಕೆ ತಕ್ಕಂತೆ ನೀರು ಹರಡಿಕೊಳ್ಳುವಹಾಗೆ, ಅವನೊಬ್ಬನ ಆಜ್ಞೆಯಿಂದಲೇ ಮನುಷ್ಯನು ಆಕರ್ಷಿಸಲ್ಪಡುವನು. ಅದೇ ರೀತಿಯಾಗಿ ನಾನೂಕೂಡ ಪರಮಪುರುಷನು ಹೇಗೆ ನಿಯಮಿಸುವನೋ ಹಾಗೆ ನಡೆಯುವೆನು. ಬೇರೆ ಯಾರೂ ನನ್ನನ್ನು ನಿಯಮಿಸುವಹಾಗಿಲ್ಲ. ತಲೆಯಿಂದ ಕಲ್ಲನ್ನು ಭೇದಿಸಬೇಕೆಂದು ಹೋಗುವವನಿಗೂ, ಹಾವಿಗೆ ಹಾಲೆರೆದು ಪೋಷಿಸಬೇಕೆಂದು ಬಯಸುವವನಿಗೂ, ಅವನ ಬುದ್ಧಿಯೇ ಇಂತಹ ಅಪಾಯಕಾರಿಗಳಾದ ಕಾರ್ಯಗಳನ್ನು ಮಾಡುವಂತೆ ನಿಯಮಿಸುವುದು. ಯಾವನು ಬಲಾತ್ಕಾರದಿಂದ ಮತ್ತೊಬ್ಬನಿಗೆ ಆಜ್ಞಾಪಿಸುವನೋ, ಅವನು ತಾನಾಗಿಯೇ ಶತ್ರುಗಳನ್ನು ಸಂಪಾದಿಸಿಕೊಳ್ಳುವನು. ಅವಿವೇಕಿಯಾದವನು ತನ್ನಲ್ಲಿ ಸ್ನೇಹಕ್ಕಾಗಿ ಬಂದವನನ್ನೂ ಅಲಕ್ಷ್ಯಮಾಡಿ ನಿರಾಕರಿಸುವನು. ಬೆಂಕಿಯನ್ನು (ಕರ್ಪೂರಾದಿಗಳನ್ನು) ಹತ್ತಿಸಿ ಉರಿಸುವವನು, ಬಹುಕಾಲದವರೆಗೆ ಅದನ್ನು ಆರಿಸದಿದ್ದರೆ, ಅವನಿಗೆ ಕೊನೆಗೆ ಅದರೊಳಗೆ ಬೂದಿಯೂ ದೊರೆಯಲಾರದು. ಹಾಗೆಯೇ ನೀನು ನಮ್ಮನ್ನು ನಿಂದಿಸಿದುದಕ್ಕೆ ನಾವು ಪರಿಹಾರವನ್ನು ಮಾಡದೆ ಸುಮ್ಮನಿದ್ದರೆ, ನಮ್ಮ ಮೊದಲಿನ ಸ್ನೇಹವೂ ಕೂಡ ಲವಮಾತ್ರವೂ ನಿಲ್ಲಲಾರದು. ವಿದುರಾ! ಶತ್ರುಪಕ್ಷಕ್ಕೆ ಸೇರಿ ತನ್ನಲ್ಲಿ ದ್ವೇಷವನ್ನೇ ತೋರಿಸುವ ಮನುಷ್ಯನನ್ನು ಹತ್ತಿರಕ್ಕೆ ಸೇರಿಸಬಾರದು. ಆದುದರಿಂದ ಈಗಲೇ ನೀನು ನಿನ್ನ ಇಷ್ಟವಿದ್ದಕಡೆಗೆ ಹೊರಟುಹೋಗು. ಕೆಟ್ಟನಡತೆಯುಳ್ಳ ಹೆಂಡತಿಗೆ ಎಷ್ಟು ಒಳ್ಳೆಯಮಾತಿನಿಂದ ಹೇಳಿದರೇನು? ಅವಳು ಅದನ್ನು ಕೇಳಲಾರಳಲ್ಲವೆ?" ಎಂದನು.

ಈ ಮಾತನ್ನು ಕೇಳಿ ವಿದುರನು "ಓ ರಾಜಾ! ಇದೊಂದು ಮಾತಿಗಾಗಿಯೇ ಮನುಷ್ಯನನ್ನು ತೊರೆದುಬಿಡುವುದಾದರೆ, ಅಂತಹ ಸ್ನೇಹವು ಎಲ್ಲಿಯವರೆಗೆ ನಿಲ್ಲುವುದು? ಆ ಮೈತ್ರಿಯು ಕೊನೆಯವರೆಗೆ ನಿಲ್ಲತಕ್ಕುದಲ್ಲ. ರಾಜರ ಮನಸ್ಸು ಯಾವಾಗಲೂ ಚಂಚಲವಾದುದು. ಮೃದುವಾದ ಮಾತುಗಳನ್ನಾಡುತ್ತ ಒಡನೆಯೇ ಒನಕೆಗಳಿಂದ ಬಡಿಯುವರು. ಮಹಾರಾಜಾ! ನಿನ್ನದು ಕೇವಲ ಮಂದಬುದ್ಧಿ! ನೀನು ನಿನ್ನನ್ನು ಬಾಲನಲ್ಲ

ವೆಂದೂ, ನನ್ನನ್ನು ಬಾಲನೆಂದೂ ಹೇಳುವೆಯಲ್ಲವೆ? ಯಾವನು ಒಬ್ಬನಲ್ಲಿ ಸ್ನೇಹವನ್ನು ತೋರಿಸಿ, ಆಮೇಲೆ ಅವನನ್ನು ದೂಷಿಸುವನೋ ಅವನೇ ಬಾಲನು! ದುರ್ಯೋಧನಾ! ಶ್ರೋತ್ರಿಯನಾದ ಬ್ರಾಹ್ಮಣನ ಮನೆಯಲ್ಲಿ ಕೆಟ್ಟಸ್ವಭಾವವುಳ್ಳ ಹೆಂಡತಿಯಿದ್ದಂತೆ, ನಿನ್ನ ಮಂದಬುದ್ಧಿಯು ನಿನಗೆ ಎಂದಿಗೂ ಶ್ರೇಯಸ್ಕರವಾಗಲಾರದು. ಚಿಕ್ಕವಯಸ್ಸಿನ ಯುವತಿಗೆ ಅರುವತ್ತುವರ್ಷದ ಗಂಡನು ಹೇಗೋ ಹಾಗೆ ಹಿತವಾದಗಳನ್ನು ಹೇಳುವವರು ನಿನಗೆ ರುಚಿಸಲಾರರು. ಆದುದರಿಂದ ನಿನ್ನ ಮನಸ್ಸಿಗೆ ಇಂಪಾದ ಕಾರ್ಯವನ್ನೇ ನೀನು ಕೋರುವುದಾದರೆ, ಹೆಂಗಸರು, ಜಡಸ್ವಭಾವವುಳ್ಳವರು, ಪಶುಗಳು, ಮುಂತಾದವರಲ್ಲಿ ಹೋಗಿ ನಿನ್ನ ಹಿತಾಹಿತಗಳನ್ನೂ, ಕಾರ್ಯಾಕಾರ್ಯಗಳನ್ನೂ ಆಲೋಚಿಸಬಹುದು. ದುರ್ಯೋಧನಾ! ಈ ಲೋಕದಲ್ಲಿ ಪ್ರಿಯವನ್ನಾಡತಕ್ಕ ಪಾಪಿಗಳೆಷ್ಟೋ ಜನರು ಸಿಕ್ಕುವರು. ಅಪ್ರಿಯವಾಗಿಯೂ, ಹಿತವಾಗಿಯೂ ಇರುವ ಮಾತನ್ನು ಹೇಳುವವನಾಗಲಿ, ಅದನ್ನು ಆದರಿಸಿ ಕೇಳುವವನಾಗಲಿ ಸಿಕ್ಕುವುದು ದುರ್ಲಭವು. ಯಾವನು ಧರ್ಮವನ್ನೇ ಮುಖ್ಯವಾಗಿ ಹಿಡಿದು, ಯಜಮಾನನಿಗೆ ಪ್ರಿಯವಾವುದು, ಅಪ್ರಿಯವಾವುದು ಎಂಬುದನ್ನು ನೋಡದೆ, ಅವನಿಗೆ ಅಪ್ರಿಯವಾದರೂ ಪಥ್ಯವಾದ ಮಾತುಗಳನ್ನೇ ಆಡುವನೋ, ಅಂತವನೇ ರಾಜರಿಗೆ ಒಳ್ಳೇ ಸಹಾಯಕನು. ಮಹಾರಾಜಾ! ವ್ಯಾಧಿಜನ್ಯವೆನಿಸದೆ ಕಟುತ್ವದಿಂದ ಉಂಟಾದುದೂ ತೀಕ್ಷ್ಣವೂ, ಉಷ್ಣವೂ ಆಗಿ ಕೀರ್ತಿಯನ್ನು ಕೆಡಿಸಿ, ದುರ್ಗಂಧವಿಶಿಷ್ಟವೂ, ಪರುಷವೂ ಆದ ಕೋಪವೆಂಬ ರಸವನ್ನು ಕುಡಿದುಬಿಟ್ಟು ಶಾಂತನಾಗಿರು. ಅದನ್ನು ಸತ್ಪುರುಷರುಮಾತ್ರ ಕುಡಿಯುವುದಕ್ಕೆ ಸಾಧ್ಯವು. ಅಸತ್ತುಗಳು ಅದನ್ನು ಕುಡಿಯಲಾರರು" ಎಂದು ಹೇಳಿ ವಿದುರನು, ತನ್ನಷ್ಟಕ್ಕೆ ತಾನು ಎಲ್ಲರಿಗೂ ಕೇಳುವಂತೆ "ಧೃತರಾಷ್ಟ್ರಮಹಾರಾಜನಿಗೂ, ಅವನ ಪುತ್ರರಿಗೂ ಯಶಸ್ಸೂ, ಧನವೂ ಚಿರಸ್ಥಾಯಿಯಾಗಿರಬೇಕೆಂಬುದೇ ನನ್ನ ಮನಃಪೂರ್ವಕವಾದ ಕೋರಿಕೆ! ಧೃತರಾಷ್ಟ್ರಮಹಾರಾಜಾ! ನಿನಗೆ ನಾನು ಕೋರಿದಂತೆ ಕ್ಷೇಮವುಂಟಾಗಲಿ. ನಿನಗೆ ನಮಸ್ಕಾರವು. ಬ್ರಾಹ್ಮಣರು ನನಗೂ ಕ್ಷೇಮವನ್ನು ಕೊಡಲಿ. ಹಲ್ಲುಗಳಲ್ಲಿಯೂ, ಕಣ್ಣುಗಳಲ್ಲಿಯೂ

ವಿಷವುಳ್ಳ ಸರ್ಪಗಳನ್ನು ವಿವೇಕಿಯು ಎಂದಿಗೂ ಕೋಪಗೊಳಿಸಲಾರನು. ಇಷ್ಟುಮಾತ್ರವನ್ನೇ ನಾನು ನಿನಗೆ ಹೇಳಬಲ್ಲೆನು. ಇನ್ನು ನಿನ್ನ ವಿವೇಕವಿದ್ದಂತೆ ನಡೆಸು" ಎಂದನು.

ಇದು ಎಂಭತ್ತೇಳನೆಯ ಅಧ್ಯಾಯವು.

{ ಧರ್ಮರಾಜನು ತನ್ನ ತಮ್ಮಂದಿರನ್ನೂ, ದ್ರೌಪದಿಯನ್ನೂ ದ್ಯೂತಕ್ಕೆ ಪಣವನ್ನಾಗಿ ಒಡ್ಡಿ ಅವರನ್ನು ಸೋತುದು. }

ಶಕುನಿಯು ಯುಧಿಷ್ಠಿರನನ್ನು ಕುರಿತು "ಓ ಧರ್ಮರಾಜಾ! ನಿಮಗಿದ್ದ ಧನವೆಲ್ಲವನ್ನೂ ಸೋತುದಾಯಿತಷ್ಟೆ? ಇನ್ನೂ ದ್ಯೂತಕ್ಕೆ ಒಡ್ಡದಿರುವ ಧನವೇನಾದರೂ ನಿನ್ನಲ್ಲಿರುವುದೇ?" ಎಂದು ಕೇಳಿದನು. ಅದಕ್ಕಾ ಧರ್ಮರಾಜನು "ಎಲೈ ಶಕುನಿಯೇ! ನನ್ನ ಧನವನ್ನು ಲೆಕ್ಕಿಸುವುದು ನಿನಗೆ ಸಾಧ್ಯವಲ್ಲ. ನನ್ನ ಧನದ ವಿಚಾರವು ನನಗೇ ಗೊತ್ತು. ನಿನಗೆ ಆ ಪ್ರಶ್ನೆಯೇಕೆ? ಅಯುತ (ಹತ್ತುಸಾವಿರ), ಪ್ರಯುತ (ಹತ್ತುಲಕ್ಷ) ಶಂಖ (ಹತ್ತುಸಹಸ್ರಕೋಟಿ), ಪದ್ಮ (ನೂರುಕೋಟಿ), ಅರ್ಬುದ (ಹತ್ತುಕೋಟಿ), ಖರ್ವ (ಸಹಸ್ರಕೋಟಿ), ಶಂಖ (ಲಕ್ಷಕೋಟಿ), ನಿಖರ್ವ (ಹತ್ತುಸಾವಿರಕೋಟಿ), ಮಹಾಪದ್ಮ (ನೂರುಲಕ್ಷಕೋಟಿ), ಮಧ್ಯ (ಹದಿನಾಲ್ಕುಲಕ್ಷಕೋಟಿ), ಪರಾರ್ಧ (ಲಕ್ಷಲಕ್ಷಕೋಟಿ), ಮುಂತಾದ ಹಲವು ಕೋಟಿಗಳನ್ನೂ, ಅದಕ್ಕೂ ಹೆಚ್ಚು ಧನವನ್ನೂ ಪಣವನ್ನಾಗಿ ಒಡ್ಡುವೆನು. ರಾಜಾ! ಇದೋ! ಇದು ನನ್ನ ಧನವು. ಇದನ್ನೊಡ್ಡಿರುವೆನು" ಎಂದನು. ಶಕುನಿಯು ಅದನ್ನೆಲ್ಲ ಕಪಟದಿಂದ ಗೆದ್ದು 'ಅದನ್ನೂ ಜಯಿಸಿದುದಾಯಿತು' ಎಂದನು. ಯುಧಿಷ್ಠಿರನು 'ಶಕುನೀ! ಗೋವುಗಳಿಂದ ತುಂಬಿರುವ ಗೋಶಾಲೆಗಳೂ, ಅಶ್ವಸಮೂಹಗಳೂ, ಅಸಂಖ್ಯಾತಗಳಾದ ಮೇಕೆಗಳೂ, ಕುರಿಗಳೂ, ಅತ್ತಲಾಗಿ ಸಿಂಧುನದಿಗೆ ಪೂರ್ವದಲ್ಲಿರುವ ಪರ್ಣಾಶೆಯೆಂಬ ನದಿಯ ತೀರದಲ್ಲಿವೆ. ಅವೆಲ್ಲವೂ ನನ್ನ ಧನವು. ಅದನ್ನೊಡ್ಡುವೆನು' ಎಂದನು. ಮೋಸದಿಂದ ಶಕುನಿಯು 'ಅದನ್ನೂ ಜಯಿಸಿದುದಾಯಿತು' ಎಂದನು. ಆಗ ಧರ್ಮರಾಜನು "ಶಕುನೀ! ನನ್ನ ನಗರದಲ್ಲಿಯೂ,

ದೇಶದಲ್ಲಿಯೂ, ಇತರ ಭೂಭಾಗಗಳಲ್ಲಿಯೂ ಇರುವ ಬ್ರಾಹ್ಮಣೇತರರ ಧನಗಳೂ, ಬ್ರಾಹ್ಮಣರಲ್ಲದ ಮನುಷ್ಯರೂ, ನನ್ನಲ್ಲಿ ಉಳಿದಿರುವ ಧನವು. ಅದನ್ನೊಡ್ಡಿ ಆಡುವೆನು. ಎಂದನು. ಶಕುನಿಯು ಮೊದಲಿನಂತೆಯೇ ಮೋಸದಿಂದ ಅದನ್ನೂ ಜಯಿಸಿಆಯಿತು. ಮತ್ತೇನಿದೆ?'' ಎಂದನು. ಅದಕ್ಕಾ ಧರ್ಮರಾಜನು, ಈ ರಾಜಕುಮಾರರ ಕಿವಿಗಳಲ್ಲಿ ಬೆಳಗುತ್ತಿರುವ ಕುಂಡಲಗಳು ಮೊದಲಾದ ರಾಜಾಭರಣಗಳೆಲ್ಲವೂ ನನ್ನ ಧನವೇ. ಇವುಗಳನ್ನು ಪಣವಾಗೊಡ್ಡಿ ಆಡುವೆನು. ಎಂದನು. ಶಕುನಿಯು ಮೋಸದಿಂದ ''ಅದನ್ನೂ ಜಯಿಸಿದುದಾಯಿತು'' ಎಂದನು. ಧರ್ಮರಾಜನು ಶ್ಯಾಮಲವರ್ಣದಿಂದ ಕೂಡಿ ಕೆಂಪಾದ ಕಣ್ಣುಗಳನ್ನೂ, ಸಿಂಹದಂತೆ ಗಾಂಭೀರ್ಯವನ್ನೂ, ದೀರ್ಘವಾದ ಬಾಹುಗಳನ್ನೂ ಉಳ್ಳ ಎಳವಯಸ್ಸಿನ ನಕುಲನನ್ನು ಈಗ ಒಡ್ಡುವೆನು. ಶಕುನೀ! ಇವನೂ ನನ್ನ ಧನವೇ' ಎಂದನು. ಆಗ ಶಕುನಿಯು 'ರಾಜಾ! ಯುಧಿಷ್ಠಿರಾ! ನಿನಗೆ ಪ್ರೀತಿಪಾತ್ರನೂ, ರಾಜಕುಮಾರನೂ ಆದ ನಕುಲನು ಇನ್ನು ನಮ್ಮವನೇ' ಎಂದು ದಾಳವನ್ನಾಡಿ ''ಅವನನ್ನೂ ಜಯಿಸಿದುದಾಯಿತು'' ಮತ್ತೆ ಯಾರನ್ನು ಒಡ್ಡುವೆ?' ಎಂದು ಕೇಳಿದನು. ಆಗ ಧರ್ಮರಾಜನು ''ಈ ಸಹದೇವನು ಧರ್ಮವನ್ನುಪದೇಶಿಸತಕ್ಕವನು. ಈತನು ಲೋಕದಲ್ಲಿ ಪಂಡಿತನೆಂದು ಪ್ರಖ್ಯಾತನಾದವನು. ನನ್ನ ವಿಶ್ವಾಸಕ್ಕೆ ಪಾತ್ರನಾದ ಈ ರಾಜಕುಮಾರನನ್ನು ಪಣವಾಗೊಡ್ಡಬಾರದಾದರೂ, ಅಹಿತನಾದವನನ್ನು ಹೇಗೋ ಹಾಗೆ, ಇವನನ್ನೂ ಒಡ್ಡಿ ಆಡುವೆನು' ಎಂದನು. ಜಯದಲ್ಲಿ ನಂಬಿಕೆಯುಳ್ಳ ಶಕುನಿಯು, ತಂತ್ರವನ್ನು ಹಿಡಿದು, ಅವನನ್ನೂ ಜಯಿಸಿ, ''ರಾಜಾ! ಮಾದ್ರೀಪುತ್ರರೇನೋ ನಿನಗೆ ವಶರಾದವರು! ಇವರನ್ನು ನಾನು ಗೆದ್ದೆನು. ಭೀಮಾರ್ಜುನರು ನಿನಗಿಂತಲೂ ಮೇಲಾದವರೆಂದು ನಾನೆಣಿಸುವೆನು' ಎಂದನು. ಆ ಮಾತನ್ನು ಕೇಳಿ ಯುಧಿಷ್ಠಿರನು 'ಎಲ ಮೂಢನೇ! ನಿನಗೆ ನಮ್ಮ ನೀತಿಯು ತಿಳಿಯದು. ನೀನು ಯಾವಾಗಲೂ ಅಧರ್ಮವನ್ನು ಆಚರಿಸತಕ್ಕವನು. ನೀನು ಏಕಹೃದಯರಾದ ನಮ್ಮಲ್ಲಿ ಭೇದಬುದ್ಧಿಯನ್ನು ಹುಟ್ಟಿಸಲು ಉದ್ದೇಶಿಸಿದೆಯಲ್ಲವೇ?' ಎಂದನು. ಆಗ ಶಕುನಿಯು ''ಓ ರಾಜಾ! ಧನದಿಂದ ಕೊಬ್ಬಿದವನು ಹಳ್ಳದಲ್ಲಿ ಬಿಳು

ವನು. ಅಜಾಗರೂಕನಾಗಿ ಸ್ಥಾವರದಂತಿರುವನು. ಭರತಸತ್ತಮಾ! ನೀನು ಜ್ಯೇಷ್ಠನಾಗಿಯೂ, ಶ್ರೇಷ್ಠನಾಗಿಯೂ ಇರುವೆ. ನಿನಗೆ ನಮಸ್ಕಾರವು. ಜೂಜಾಡುವವರು ದ್ಯೂತವಾಡುವಾಗ ಬಾಯಿಗೆಬಂದಂತೆ ಹರಟುವರು. ಸ್ವಪ್ನದಲ್ಲಿಯಾಗಲಿ, ಎಚ್ಚರದಲ್ಲಿಯಾಗಲಿ ಕಾಣದ ಪ್ರಲಾಪಗಳೆಲ್ಲ ನಡೆಯುವುವು" ಎಂದನು. ಆಗ ಯುಧಿಷ್ಠಿರನು ನಮ್ಮನ್ನು ಯುದ್ಧಗಳಲ್ಲಿ ಹಡಗಿನಂತೆ ದಡಕ್ಕೆ ಸೇರಿಸತಕ್ಕವನೂ, ಶತ್ರುಗಳನ್ನು ಜಯಿಸತಕ್ಕವನೂ, ಪರಾಕ್ರಮಶಾಲಿಯೂ, ಜಗದೇಕವೀರನೂ ಆದ ಅರ್ಜುನನು ಪಂದ್ಯಕ್ಕೆ ಇಡಲ್ಪಡತಕ್ಕವನಲ್ಲದಿದ್ದರೂ, ಅವನನ್ನೇ ಪಣವಾಗಿ ಒಡ್ಡಿ ದ್ಯೂತವಾಡುವೆನು' ಎಂದನು. ಇದನ್ನು ಕೇಳಿ ಮೋಸಬುದ್ಧಿಯುಳ್ಳ ಶಕುನಿಯು ಮೋಸವನ್ನೇ ಹಿಡಿದು 'ಇದೋ ಜಯಿಸಿದೆನೆಂದು ತಿಳಿ' ಎಂದು ದಾಳವನ್ನೆಸೆದು 'ಧರ್ಮರಾಜಾ! ಪಾಂಡವರಲ್ಲಿ ಒಳ್ಳೇ ಧನುರ್ಧರನಾದ ಸವ್ಯಸಾಚಿಯನ್ನೂ ನಾನು ಗೆದ್ದೆನು. ಇನ್ನು ನಿನಗೆ ಪ್ರಿಯನಾದ ಭೀಮನನ್ನು ಪಂಥಕ್ಕಿಡು! ನಿನ್ನ ಆಟಕ್ಕೆ ಉಳಿದಿರುವವನು ಈಗ ಅವನೊಬ್ಬನೇ' ಎಂದನು. ಅದಕ್ಕಾ ಧರ್ಮರಾಜನು "ಸೌಬಲಾ! ಈ ಭೀಮನೇ ನಮಗೆಲ್ಲ ನಿಯಾಮಕನು. ಯುದ್ಧದಲ್ಲಿ ನಮ್ಮನ್ನೆಲ್ಲ ನಡೆಸತಕ್ಕವನೂ ಇವನೇ. ಇಂದ್ರನಂತೆ ಇವನೇ ದೈತ್ಯರಿಗೆಲ್ಲ ಏಕಶತ್ರುವು. ಅಡ್ಡ ನೋಟದಿಂದಲೂ, ಬಾಗಿದ ಹುಬ್ಬಿನಿಂದಲೂ, ಸಿಹ್ಮದಂತೆ ಹೆಗಲಿನಿಂದಲೂ ಕೂಡಿದವನು. ಮಹಾತ್ಮನು. ಅವಮಾನಕ್ಕೆ ಸ್ವಲ್ಪವೂ ಸಹಿಸದವನು. ಬಲದಲ್ಲಿ ಇವನಿಗೆ ಸಮಾನನಾದ ಪುರುಷನಿಲ್ಲ. ಗದಾಧಾರಿಗಳಲ್ಲಿ ಮೇಲೆನಿಸಿದವನು. ಶತ್ರುಮರ್ದನನು. ಯೋಗ್ಯವಲ್ಲದಿದ್ದರೂ ಆ ರಾಜಕುಮಾರನನ್ನೇ ಈ ಆಟಕ್ಕೊಡ್ಡುವೆನು" ಎಂದನು. ಆದೇ ಕಪಟಪ್ರವೃತ್ತಿಯುಳ್ಳ ಶಕುನಿಯು 'ಇದೋ ಜಯಿಸಿದೆನು' ಎಂದು ದಾಳವನ್ನೆಸೆಯುತ್ತ 'ಯುಧಿಷ್ಠಿರಾ! ನೀನು ಬಹುಧನವನ್ನು ಸೋತೆ! ಆನೆಗಳು, ಕುದುರೆಗಳು, ಸಹೋದರರು ಎಲ್ಲರನ್ನೂ ಸೋತುದಾಯಿತು. ನಿನ್ನಲ್ಲಿ ಬೇರೆ ಏನಾದರೂ ಧನವಿದ್ದರೆ ಹೇಳು' ಎಂದನು. ಅದಕ್ಕಾ ಯುಧಿಷ್ಠಿರನು "ಶಕುನೀ! ಎಲ್ಲಾ ಸಹೋದರರಿಗೂ ನಾನು ಜ್ಯೇಷ್ಠನು. ಎಲ್ಲರಿಗೂ ಪ್ರಿಯನಾದವನು. ನಾನು ನನ್ನನ್ನೇ ಪಂಥಕ್ಕೊಡ್ಡುವೆನು. ಸೋತರೆ, ನೀವು ನಿರ್ಬಂಧಿಸಿದ ಊಳಿಗ

ವನ್ನು ಮಾಡುವೆನು" ಎಂದನು. ಶಕುನಿಯು ಅದೇ ತಂತ್ರವನ್ನು ಹಿಡಿದು 'ಇದೋ ಜಯಿಸಿದೆನು' ಎಂದು ದಾಳವನ್ನುರುಳಿಸಿ, 'ಯುಧಿಷ್ಠಿರಾ! ನೀನು ನಿನ್ನನ್ನೇ ಇಟ್ಟು ಸೋತುದರಿಂದ, ತಪ್ಪು ಕೆಲಸವನ್ನು ಮಾಡಿದೆ! ತನ್ನಲ್ಲಿ ಬೇರೆ ಧನವಿರುವಾಗ ತನ್ನನ್ನೇ ತಾನಿಟ್ಟು ಸೋಲುವುದು'ಮಹಾಪಾಪವು' ಎಂದನು.

ಓ ಜನಮೇಜಯರಾಜಾ! ಜೂಜಿನ ಮರ್ಮವನ್ನು ತಿಳಿದ ಶಕುನಿಯು ಹೀಗೆಂದು ಹೇಳಿ, ಲೋಕೈಕವೀರರಾದ ಆ ಪಾಂಡವರೆಲ್ಲರೂ ತನ್ನ ಪಂಥಕ್ಕೆ ಒಡ್ಡಲ್ಪಟ್ಟುದನ್ನು ಅಲ್ಲಿದ್ದ ರಾಜರ ಮುಂದೆ ಬೇರೆಬೇರೆಯಾಗಿ ಹೇಳಿ ತೋರಿಸುತ್ತ, ಅವರನ್ನೆಲ್ಲ ಜಯಿಸಿದನು. ಆಮೇಲೆ ಯುಧಿಷ್ಠಿರನನ್ನು ಕುರಿತು "ರಾಜಾ! ಇನ್ನೂ ನೀನು ಆಟಕ್ಕೊಡ್ಡದ ಪಣವೊಂದುಂಟು. ಅವಳು ನಿನ್ನ ಭಾರ್ಯೆ! ಅವಳನ್ನೊಡ್ಡಿ ನೀನು ಜಯಿಸಿದರೆ, ಹಿಂದೆ ಸೋತುದನ್ನೆಲ್ಲ ಬಿಡಿಸಿಕೊಳ್ಳಬಹುದು. ಆ ದ್ರೌಪದಿಯನ್ನು ನೀನು ಪಂಥಕ್ಕಿಡಬಹುದಲ್ಲವೆ?" ಎಂದನು. ಅದಕ್ಕಾ ಯುಧಿಷ್ಠಿರನು 'ಶಕುನೀ! ಆಗಲಿ! ಅವಳನ್ನೂ ಇಟ್ಟು ಆಡಿಬಿಡುವೆನು. ಅವಳು ಬಹಳ ಎತ್ತರವೂ ಅಲ್ಲದೆ, ತಗ್ಗೂ ಅಲ್ಲದೆ, ಬಹಳ ಸ್ಥೂಲವೂ ಅಲ್ಲದೆ, ಕೃಶವೂ ಅಲ್ಲದೆ ಅನುರೂಪವಾಗಿರುವ ಶರೀರವುಳ್ಳವಳು. ಕಪ್ಪಾಗಿ ಬಾಗಿದ ಮುಂಗುರುಳುಳ್ಳವಳು. ಶರತ್ಕಾಲದ ನೈದಿಲೆಯೆಸಳಂತೆ ಕಣ್ಣುಳ್ಳವಳು. ನೈದಿಲೆಯ ಗಂಧವುಳ್ಳವಳು. ಶರತ್ಕಾಲದ ನೈದಿಲೆಯನ್ನೇ ಮುಡಿಯತಕ್ಕವಳು. ರೂಪದಲ್ಲಿ ಲಕ್ಷ್ಮಿಗೆ ಸಮಾನಳು. ರೂಪದಲ್ಲಿಮಾತ್ರವಲ್ಲದೆ, ದಯೆ, ಶಾಂತಿ, ಸೌಶೀಲ್ಯಾದಿಗಳಲ್ಲಿಯೂ ಶ್ರೀದೇವಿಗೆ ಸಾಟಿಯಾದವಳು. ಅವಳು ಸಕಲಗುಣಸಂಪನ್ನಳು. ಪತಿಗೆ ಅನುಕೂಲೆಯಾದವಳು. ಯಾವಾಗಲೂ ಪ್ರಿಯವನ್ನೇ ನುಡಿಯತಕ್ಕವಳು. ಧರ್ಮಕಾಮಾರ್ಥಗಳೆಂಬ ಪುರುಷಾರ್ಥಗಳ ಸಿದ್ಧಿಯನ್ನು ಬಯಸತಕ್ಕ ಪುರುಷನು ಅಂತವಳನ್ನೇ ಬಯಸಬೇಕು. ರಾತ್ರಿ ಎಲ್ಲರೂ ಮಲಗಿದಮೇಲೆ ಮಲಗಿ, ಎಲ್ಲರಿಗೂ ಮುಂದಾಗಿ ಏಳತಕ್ಕವಳು. ಅವಳು ಗೊಲ್ಲರು, ಕುರುಬರು ಮುಂತಾಗಿ ಎಲ್ಲರೂ ಮಾಡುವ ಮತ್ತು ಮಾಡಿದ ಕಾರ್ಯವನ್ನೆಲ್ಲ ಬಲ್ಲವಳು. ಬೆವರಿದ ಅವಳ ಮುಖವು, ಮಧುವಿಶಿಷ್ಟವಾದ

ತಾವರೆಯನ್ನೂ, ಮಲ್ಲಿಗೆಯನ್ನೂ ಹೋಲುವುದು. ವೇದಿಕೆಯಂತೆ ನಡು! ಉದ್ದವಾದ ತಲೆಕೂದಲು! ಕೆಂಪಾದ ಮುಖದ ಕಳೆ! ಬಹಳವಾಗಿ ರೋಮವಿಲ್ಲದ ಮೈ! ಅಂದವಾದ ನಡು! ಇಂತಹ ಸೌಂದರ್ಯದಿಂದೊಪ್ಪುವ ಆ ದ್ರೌಪದಿಯನ್ನೇ ಈ ಆಟಕ್ಕಿಟ್ಟು ಪಗಡೆಯನ್ನಾಡುವೆನು" ಎಂದನು. ಧರ್ಮರಾಜನ ಬಾಯಿಂದ ಹೊರಟ ಈ ಮಾತುಗಳನ್ನು ಕೇಳಿ ಆ ಸಭೆಯಲ್ಲಿದ್ದ ವೃದ್ಧರ ಕಡೆಯಿಂದ 'ಛೀ! ಛೀ!' ಎಂಬ ಮಾತುಗಳು ಹೊರಟುವು. ಆ ಸಭೆಯೆಲ್ಲವೂ ಕಲಗಿದಂತಾಯಿತು. ರಾಜರೆಲ್ಲರೂ ವ್ಯಸನಾಕ್ರಾಂತರಾದರು. ಭೀಷ್ಮ, ದ್ರೋಣ, ಕೃಪಾದಿಗಳಿಗೆ ಮೈಯಲ್ಲಿ ಬೆವರು ಕಿತ್ತುಕೊಂಡಿತು. ವಿದುರನು ತನ್ನ ತಲೆಯನ್ನು ಬಿಗಿಯಾಗಿ ಹಿಡಿದುಕೊಂಡು, ಪ್ರಜ್ಞೆತಪ್ಪಿದವನಂತೆ ನಿಶ್ಚೇಷ್ಟನಾಗಿ ಧ್ಯಾನಿಸುತ್ತ ಹಾವಿನಂತೆ ನಿಟ್ಟುಸಿರುಬಿಡುತ್ತಿದ್ದನು. ಬಾಹ್ಲೀಕ, ಸೋಮದತ್ತ, ಸಂಜಯ, ಅಶ್ವತ್ಥಾಮ, ಭೂರಿಶ್ರವಸ್ಸು, ಧೃತರಾಷ್ಟ್ರಪುತ್ರನಾದ ಯುಯುತ್ಸು, ಇವರೆಲ್ಲರೂ ತಲೆಬಗ್ಗಿ ಹಾವಿನಂತೆ ನಿಟ್ಟುಸಿರು ಬಿಡುತ್ತಿದ್ದರು. ಕಣ್ಣುಕಾಣದ ಧೃತರಾಷ್ಟ್ರನೊಬ್ಬನುಮಾತ್ರ ಸಂತೋಷದಿಂದ ತನ್ನ ದುರ್ಬುದ್ಧಿಯನ್ನು ಮರೆಸಿಟ್ಟುಕೊಳ್ಳಲಾರದೆ "ನನ್ನ ಮಗನು ಏನೇನನ್ನು ಜಯಿಸಿದನು? ಯಾವಯಾವುದನ್ನು ತನ್ನ ವಶಮಾಡಿಕೊಂಡನು?" ಎಂದು ಬಾರಿಬಾರಿಗೂ ಪಕ್ಕದಲ್ಲಿದ್ದವರನ್ನು ಕೇಳುತಿದ್ದನು. ಕರ್ಣನು ದುಶ್ಶಾಸನಾದಿಗಳೊಡನೆ ಸಂತೋಷದಿಂದ ಅಟ್ಟಹಾಸಮಾಡಿ ನಗುತ್ತಿದ್ದನು. ಬೇರೆಯವರಿಗೆಲ್ಲ ಕಣ್ಣುಗಳಲ್ಲಿ ನೀರು ತುಳುಕುತ್ತಿದ್ದಿತು. ಮದೋದ್ಧತನಾದ ಆ ಸೌಬಲನಾದರೋ (ಶಕುನಿ) ತನ್ನ ಜಯದಲ್ಲಿ ನಂಬಿಕೆಯಿಂದ "ಇದೋ! ಜಯಿಸಿದೆನು" ಎಂದು ದಾಳಗಳನ್ನೆಸೆದನು.

ಇದು ಎಂಭತ್ತೆಂಟನೆಯ ಅಧ್ಯಾಯವು.



( ದುರ್ಯೋಧನಾಜ್ಞೆಯಿಂದ ದುಶ್ಶಾಸನನು ದ್ರೌಪದಿಯನ್ನು ಸಭೆಗೆ ಎಳೆತಂದುದು. ದ್ರೌಪದಿಯು ಸಭಿಕರನ್ನು ಪ್ರಶ್ನೆಮಾಡಿದುದು. )

ಓ ಜನಮೇಜಯರಾಜಾ! ಆಗ ದುರ್ಯೋಧನನು ಸಂತೋಷದಿಂದ ವಿದುರನನ್ನು ಕುರಿತು ಹಾಸ್ಯಪೂರ್ವಕವಾಗಿ "ಚಿಕ್ಕಪ್ಪಾ! ಬಾ! ನಿನ್ನ ಪಾಂಡವರಿಗೆ ಬಹಳ ಇಷ್ಟಳಾದ ಪ್ರಿಯಪತ್ನಿಯನ್ನು (ಆ ದ್ರೌಪದಿಯನ್ನು) ನೀನೇ ಕರೆದುಕೊಂಡು ಬಾ! ನನ್ನ ಮನೆಯನ್ನು ಗುಡಿಸಬೇಕಾಗಿದೆ. ಅವಳು ಬೇಗನೆ ಬರಲಿ! ಆ ನಿರ್ಭಾಗ್ಯೆಯು ನಮ್ಮ ಗೌಡಿಯರೊಡನೆ ಸೇರಿ ಕೆಲಸಮಾಡಲಿ" ಎಂದನು. ಆಗ ವಿದುರನು "ಎಲ ಮೂಢಾ! ಯಾರೂ ಆಡಬಾರದ ಮಾತನ್ನಾಡುತ್ತಿರುವೆ. ನೀನು ಈ ಮಾತನ್ನಾಡಬಾರದು. ಯಮಪಾಶವು ನಿನ್ನ ಕತ್ತಿನಲ್ಲಿ ಸುತ್ತಿರುವುದನ್ನು ನೀನು ತಿಳಿಯೆ. ದೊಡ್ಡ ಕಮರಿಯಮೇಲೆ ನೀನು ತಲೆಕೆಳಗಾಗಿ ನೇತಾಡುತ್ತಿರುವುದನ್ನೂ ನೀನರಿಯೆ. ಅಲ್ಪಮೃಗವಾದ ನೀನು ಹೆಬ್ಬುಲಿಗಳನ್ನು ಕೆಣಕುತ್ತಿರುವೆ! ಎಲೆ ಮಂದಾತ್ಮಾ! ವಿಷವುಳ್ಳ ಸರ್ಪಗಳು ಉಗ್ರಕೋಪದಿಂದ ನಿನ್ನ ತಲೆಯ ಮೇಲೆ ಆಡುತ್ತಿರುವುವು! ಅವುಗಳನ್ನು ನೀನು ಮತ್ತಷ್ಟು ಕೋಪಗೊಳಿಸಬೇಡ. ಅನ್ಯಾಯವಾಗಿ ಯಮಲೋಕಕ್ಕೆ ಹೋಗಬೇಡ. ಓ ಸಭ್ಯರೇ! ಮಹಾತ್ಮಳಾದ ಆ ಕೃಷ್ಣೆಯು ಎಂದಿಗೂ ದಾಸಿಯಲ್ಲ. ಧರ್ಮರಾಜನು ಬುದ್ಧಿಮೋಹದಿಂದ ತನಗೆ ಸ್ವಾತಂತ್ರ್ಯವಿಲ್ಲದಿರುವಾಗಲೂ ಅವಳನ್ನು ಪಂಥಕ್ಕೆ ಒಡ್ಡಿರುವನೆಂಬುದು ನನ್ನ ಅಭಿಪ್ರಾಯವು. ಬಿದಿರು ತನ್ನ ನಾಶಕ್ಕೆ ಹೇತುವಾದ ಹಣ್ಣನ್ನು ಬಿಡುವಂತೆ, ಧೃತರಾಷ್ಟ್ರಪುತ್ರನಾದ ಈ ರಾಜನು ಮಹಾನರ್ಥಕ್ಕೂ, ವೈರಕ್ಕೂ ಕಾರಣವಾದ ಈ ಜೂಜನ್ನು ಹೂಡಿದನೇಹೊರತು ಬೇರೆಯಲ್ಲ. ಮದಾಂಧನಾದ ಈತನು ತನ್ನ ಕೇಡುಗಾಲವನ್ನೇ ತಾನು ತಿಳಿಯದಿರುವನು. ಮನುಷ್ಯನು ಇತರರಿಗೆ ಪರುಷವಾಕ್ಯವನ್ನಾಡಬಾರದು. ಅಲ್ಪಮನುಷ್ಯನಿಂದ ಮಹತ್ತಾದ ವಸ್ತುವನ್ನು ತೆಗೆಯಬಾರದು. ಇತರರಿಗೆ ಸಂಕಟಕರವಾದ ಮತ್ತು ನರಕಕಾರಣವಾದ ಮಾತನ್ನು ನುಡಿಯಬಾರದು. ಬಾಯಿಂದ ತಡೆಬಡೆಯಿಲ್ಲದೆ ಸಿಕ್ಕಿದ ಮಾತುಗಳು ಹೊರಡಲು ಸಿದ್ಧವಾಗಿರುವುವು. ಅವು ಇತರರನ್ನು ರಾತ್ರಿ

ಹಗಲೂ ಕೊರಗುವಂತೆ ಮಾಡುವುವು. ಆ ವಾಕ್ಯಗಳು ಕೇಳುವವರ ಮರ್ಮಸ್ಥಾನಗಳನ್ನೇ ಹಿಡಿದು ಚುಚ್ಚುವುವು. ಅಂತಹ ಮಾತುಗಳು ಬಾಯಿಂದ ಹೊರಡದಹಾಗೆ ತಡೆಯಬಲ್ಲವನೇ ಪಂಡಿತನೆನಿಸುವನು. ಓ ದುರ್ಯೋಧನಾ! *ಒಂದು ಮೇಕೆಯು ತಾನು ತಿನ್ನುವ ಸೊಪ್ಪೆಂದು ಭ್ರಮಿಸಿ, ಒಂದು ಕತ್ತಿಯನ್ನು ನುಂಗಿತಂತೆ. ಆ ಕತ್ತಿಯು ಅದರ ಕಂಠದೊಳಗೆ ಸಿಕ್ಕಿ ಮರೆಸಿಹೋದುದರಿಂದ, ಅದನ್ನು ಕೊಂದು ಅದರ ತಲೆಯನ್ನು ಕುಯ್ದು ತೆಗೆಯಬೇಕಾಗಿ ಸಂಭವಿಸಿತಂತೆ. ಅದರಂತೆಯೇ ಈ ಪಾಂಡವರೊಡನೆ ನೀನು ಬೆಳೆಸುವ ವೈರವು ನಿನ್ನ ಕಂಠದಲ್ಲಿ ಹುದುಗಿದ ಭಯಂಕರವಾದ ಕತ್ತರಿಯೆಂದು ತಿಳಿ. ಅವರೊಡನೆ ವೈರವನ್ನು ಮಾಡಬೇಡ. ಪಾಂಡವರ ಬಾಯಿಂದ ಇಂತಹ ಕ್ರೂರವಾದ ಮಾತುಗಳು ಎಂದಿಗಾದರೂ ಹೊರಡುವುವೇ? ನಾಯಿಗಳು ಕಾಡಿನಲ್ಲಿರುವ ಬೇಡನನ್ನಾಗಲಿ, ಒಳ್ಳೆಯ ಸದ್ಗೃಹಸ್ಥನನ್ನಾಗಲಿ, ತಪಸ್ವಿಯನ್ನಾಗಲಿ, ಪೂರ್ಣವಿದ್ಯೆಯುಳ್ಳ ಪಂಡಿತರನ್ನಾಗಲಿ ಯಾರನ್ನು ಕಂಡರೂ ಅವರವರ ತಾರತಮ್ಯವನ್ನರಿಯದೆ ಒಂದೇವಿಧವಾಗಿ ಬೊಗಳುವಂತೆ, ನಾಯಿಯ ಗುಣವುಳ್ಳ ಮನುಷ್ಯರೂ ತಾರತಮ್ಯವನ್ನರಿಯದೆ ಕೂಗುವರು. ಆಹಾ! ಎಲೈ ಸಭಿಕರೇ! ಬಹಳ ಭಯಂಕರವಾಗಿ ನರಕದ್ವಾರವೆನಿಸಿದ ಈ ಪಾಪದ ಫಲವು ಇನ್ನೂ ಈ ಧೃತರಾಷ್ಟ್ರಪುತ್ರನಿಗೆ ತಿಳಿಯದಿರುವುದಲ್ಲಾ! ದುಶ್ಶಾಸನನೇ ಮೊದಲಾದ ಕೌರವರನೇಕರು ಈ ಜೂಜಾಟದ ಜಯಕ್ಕಾಗಿ ಸಂತೋಷಿಸುತ್ತ ಆ ದುರ್ಯೋಧನನನ್ನೇ ಅನುಸರಿಸುತ್ತಿರುವರು. ತೇಲತಕ್ಕ ಸೋರೆಕಾಯಿಗಳು ನೀರಿನಲ್ಲಿ ಮುಳುಗಿಹೋಗುವುವು. ಕಲ್ಲುಗಳು ತೇಲುವುವು. ಹಡಗುಗಳು ಆಗಾಗ ದಾರಿತಪ್ಪಿಹೋಗುವುವು. ಮೂಢನಾದ ಧೃತರಾಷ್ಟ್ರಪುತ್ರನು, ನಾನು ಹೇಳುವ ಪಥ್ಯವಾದ ಮಾತುಗಳಿಗೆ ಕಿವಿಗೊಡುವಂತಿಲ್ಲ. ಕೌರವರಿಗೆ ಇದೇ ಅಂತ್ಯಕಾಲವು ನಿಶ್ಚಯವು. ಎಲ್ಲರನ್ನೂ ಒಟ್ಟಿಗೆ

* ಒಬ್ಬ ಬೆಸ್ತನು ಮೀನು ಹಿಡಿಯುವುದಕ್ಕಾಗಿ ಹಿಟ್ಟನ್ನು ಸವರಿಟ್ಟಿದ್ದ ಗಾಳದ ಕೊಕ್ಕೆಯನ್ನು, ಒಂದು ಮೇಕೆಯು ನುಂಗಿದುದಾಗಿಯೂ, ಬೆಸ್ತನು ಆ ಗಾಳವನ್ನೆಳೆಯುವಾಗ ಮೇಕೆಯ ಕಂಠವು ಸೀಳಿಹೋಗಿ, ಅದು ಸತ್ತುದಾಗಿಯೂ ಒಂದು ಸಣ್ಣಕಥೆಯುಂಟು.

ನಿರ್ಮೂಲವಮಾಡುವ ಮಹಾಘೋರವಾದ ನಾಶವು ಬರುತ್ತಿದೆ. ಏಕೆಂದರೆ, ಹಿತೈಷಿಗಳಾದ ಮನುಷ್ಯರು ಹೇಳಿದ ನೀತಿವಚನಗಳನ್ನು ಇವರಾರೂ ಕೇಳುವಹಾಗಿಲ್ಲ. ಇವರಲ್ಲಿ ಲೋಭಬುದ್ಧಿಯೇ ಹೆಚ್ಚುತ್ತಿದೆ. ನಾವು ಮಾಡುವುದೇನು ?" ಎಂದನು. ಈ ಮಾತನ್ನು ಕೇಳಿ ದುರ್ಯೋಧನ ನಿಗೆ ಮತ್ತಷ್ಟು ಕೋಪವುಂಟಾಯಿತು. ಆಗ ದುರ್ಯೋಧನನು ವಿದುರ ನನ್ನು ನೋಡಿ "ಛೀ ! ಸಾಕು. ಸುಮ್ಮನಿರು" ಎಂದು ಹೇಳಿ, ಆ ಸಭಾಮ ಧ್ಯದಲ್ಲಿದ್ದ ಪ್ರಾತಿಕಾಮಿಯೆಂಬ ಸೂತನನ್ನು ನೋಡಿ, ಆ ಮಹಾಜನರ ಮುಂದೆ "ಪ್ರಾತಿಕಾಮೀ ! ನೀನು ಹೋಗು ! ಆ ದ್ರೌಪದಿಯನ್ನು ಕರೆ ದುಕೊಂಡು ಬಾ ! ಪಾಂಡವರಿಗಾಗಿ ಹೆದರಬೇಕಾದುದಿಲ್ಲ. ಈ ವಿದು ರನು ಅವರ ಭಯಕ್ಕಾಗಿ ಬಾಯಿಗೆ ಬಂದಂತೆ ಮಾತಾಡುತ್ತಿರುವನು. ಇವನು ಯಾವಾಗಲೂ ನಮ್ಮ ಶ್ರೇಯಸ್ಸನ್ನು ಬಯಸುವವನೇ ಅಲ್ಲ" ಎಂದನು. ರಾಜಾಜ್ಞೆಯನ್ನು ಕೇಳಿದೊಡನೆ ಸೂತನಾದ ಪ್ರಾತಿಕಾಮಿಯು ಬಹುಶೀಘ್ರವಾಗಿ ಹೊರಟು, ಸಿಹ್ಮದ ಗುಹೆಗೆ ನರಿಯು ಹೊಕ್ಕಂತೆ ನೆಟ್ಟಗೆ ದ್ರೌಪದಿಯಿದ್ದ ಸ್ಥಳಕ್ಕೆ ಹೋಗಿ "ದ್ರೌಪದೀ ! ನನ್ನೊಡನೆ ಹೊರಟು ಬಾ! ಯುಧಿಷ್ಠಿರನು ದ್ಯೂತವ್ಯಸನದಿಂದ ಬುದ್ಧಿಗೆಟ್ಟು, ದುರ್ಯೋಧನನಿಗೆ ಸೋತಿರುವನು. ಇನ್ನು ನೀನು ಧೃತರಾಷ್ಟ್ರನ ಮನೆಗೆ ಹೋಗು. ಈ ದಿನ ದಿಂದಲೇ ಅಲ್ಲಿನ ಊಳಿಗಕ್ಕಾಗಿ ನಿನ್ನನ್ನು ಕರೆತರುವಂತೆ ದುರ್ಯೋಧನ ನಾಜ್ಞೆ !" ಎಂದನು. ಆಗ ದ್ರೌಪದಿಯು "ಪ್ರಾತಿಕಾಮಿ! ಹೀಗೇಕೆ ಮಾ ತಾಡುವೆ? ಯಾವ ಕ್ಷತ್ರಿಯನು ತಾನೇ ಹೆಂಡತಿಯನ್ನು ಜೂಜಿನಲ್ಲಿ ಒಡ್ಡಿ ಆಟವಾಡುವನು ? ಏನು ಹೇಳಿದೆ ? ಧರ್ಮರಾಜನು ದ್ಯೂತವ್ಯಸನದಿಂದ ಬುದ್ಧಿಗೆಟ್ಟು ನನ್ನನ್ನು ಆಟಕ್ಕಿಟ್ಟನೇ ? ಅವನಿಗೆ ಪಂಥಕ್ಕಾಗಿ ಬೇರೆ ಯಾವ ವಸ್ತುವೂ ಇರಲಿಲ್ಲವೆ ?" ಎಂದಳು. ಅದಕ್ಕಾ ಪ್ರಾತಿಕಾಮಿಯು "ಅ ಮ್ಮಾ! ದ್ರೌಪದೀ! ಬೇರೆ ವಸ್ತುವೇನೂ ಇಲ್ಲದಿದ್ದುದರಿಂದಲೇ ಅಜಾತಶತ್ರು ವು ನಿನ್ನನ್ನು ಪಂಥಕ್ಕೊಡ್ಡಿದನು. ತನ್ನ ಸರ್ವಸ್ವವೂ ತೀರಿದಮೇಲೆ ಆತನು ತನ್ನ ಸಹೋದರರನ್ನೊಡ್ಡಿದನು. ಅವರನ್ನೂ ಸೋತಮೇಲೆ ತನ್ನನ್ನೇ ಪಂಥಕ್ಕೆ ಒಡ್ಡಿದನು. ಆ ಆಟವೂ ಸೋತಮೇಲೆ ನಿನ್ನನ್ನು ಪಂಥಕ್ಕಿ ಟ್ಟನು" ಎಂದನು. ಆಗ ದ್ರೌಪದಿಯು "ಪ್ರಾತಿಕಾಮಿ! ಹಾಗಿದ್ದರೆ

ನೀನು ಹೋಗು. ನೀನು ಆ ಜೂದಾಳಿಯಲ್ಲಿಗೆ ಹೋಗಿ, ಸಭಾಮಧ್ಯ ದಲ್ಲಿ ಅವನನ್ನು ಕುರಿತು "ಮೊದಲು ನೀನು ಪಂಥಕ್ಕೆ ಯಾರನ್ನೊಡ್ಡಿದೆ? ನಿನ್ನನ್ನೇ ಮೊದಲು ಪಂಥಕ್ಕಿಟ್ಟೆಯೋ? ಇಲ್ಲವೇ ದ್ರೌಪದಿಯನ್ನಿಟ್ಟೆ ಯೋ?" ಎಂದು ಕೇಳು! ಅವನೇನು ಹೇಳುವನೋ ಅದನ್ನು ತಿಳಿದು ಕೊಂಡು ಬಾ. ಆಮೇಲೆ ನೀನು ನನ್ನನ್ನು ಕರೆದುಕೊಂಡುಹೋಗಬಹುದು. ರಾಜನ ಅಭಿಪ್ರಾಯವನ್ನು ತಿಳಿದುಕೊಂಡು, ಅದರಮೇಲೆ ನಾನು ಮುಂದೆ ಎಂತಹ ದುಃಖವನ್ನನುಭವಿಸಬೇಕೋ ಅದಕ್ಕೆ ಸಿದ್ಧಳಾಗಿ ಬರುವೆನು" ಎಂದಳು. ಅದರಂತೆಯೇ ಪ್ರಾತಿಕಾಮಿಯು ಹಿಂತಿರುಗಿ ಬಂದು, ರಾಜ ಸಭಾಮಧ್ಯದಲ್ಲಿದ್ದ ಧರ್ಮರಾಜನನ್ನು ಕುರಿತು "ಧರ್ಮಪುತ್ರಾ! ತನ್ನನ್ನು ಪಂಥದಲ್ಲಿಡುವುದಕ್ಕೆ ನಿನಗೆ ಅಧಿಕಾರವುಂಟೇ? ಮೊದಲು ನಿನ್ನನ್ನು ಸೋ ತೆಯಾ? ನನ್ನನ್ನು ಮೊದಲು ಸೋತೆಯಾ?" ಎಂದು ದ್ರೌಪದಿಯು ನಿನ್ನ ನ್ನು ಕೇಳಿಬರುವಹಾಗೆ ನನ್ನೊಡನೆ ಹೇಳಿಕಳುಹಿಸಿರುವಳು" ಎಂದನು. ಈ ಮಾತನ್ನು ಕೇಳಿ ಯುಧಿಷ್ಠಿರನಿಗೆ ಬುದ್ಧಿಯು ತಬ್ಬಿಬ್ಬಾಯಿತು. ಪ್ರಜ್ಞೆತಪ್ಪಿದವನಂತಾಗಿ, ಸಾಧುವೆಂದಾಗಲಿ, ಅಸಾಧುವೆಂದಾಗಲಿ ಪ್ರಾತಿ ಕಾಮಿಗೆ ಯಾವ ಪ್ರತ್ಯುತ್ತರವನ್ನೂ ಹೇಳದೆ ಸುಮ್ಮನಿದ್ದನು. ಆಗ ದುರ್ಯೋಧನನು ಪ್ರಾತಿಕಾಮಿಯನ್ನು ಕುರಿತು "ಸೂತಾ! ಇಲ್ಲಿ ಈ ಪಂಚಾಯಿತಿಗಳೆಲ್ಲವೂ ಏಕೆ? ಆ ದ್ರೌಪದಿಯೇ ಇಲ್ಲಿಗೆ ಬಂದು ತನಗೆ ಬೇಕಾದ ಪ್ರಶ್ನೆಗಳನ್ನು ಕೇಳಲಿ! ಅವಳು ಯಾವಯಾವ ಪ್ರಶ್ನೆಗಳನ್ನು ಹಾಕುವಳೋ, ಅವಕ್ಕೆಲ್ಲ ಈ ಧರ್ಮರಾಜನು ಯಾವಯಾವ ಉತ್ತರಗ ಳನ್ನು ಹೇಳುವನೋ, ಅದನ್ನೆಲ್ಲ ಈ ಸಭೆಯಲ್ಲಿರುವವರೆಲ್ಲ ಕೇಳಲಿ!" ಎಂದನು. ತಿರುಗಿ ಪ್ರಾತಿಕಾಮಿಯು ದುರ್ಯೋಧನನ ಆಜ್ಞೆಗೆ ಬದ್ಧನಾಗಿ ದ್ರೌಪದಿಯ ಬಳಿಗೆ ಬಂದು ಮಹಾವ್ಯಸನದೊಡನೆ ಅವಳನ್ನು ಕುರಿತು "ರಾಜಕುಮಾರೀ! ಆ ದುರ್ಯೋಧನನ ಸಭಿಕರು ನಿನ್ನನ್ನೇ ಅಲ್ಲಿಗೆ ಬರ ಬೇಕೆಂದು ಹೇಳುವರು. ಮುಖ್ಯವಾಗಿ ಕೌರವರೆಲ್ಲರಿಗೂ (ಕೌರವರ ಬದು ಕಿಗೇ) ಸಂಶಯವುಂಟಾದಂತೆ ನನಗೆ ತೋರಿದೆ. ಅಲ್ಪಬುದ್ಧಿಯುಳ್ಳ ದುರ್ಯೋಧನನು ನಿನ್ನ ಘನತೆಯನ್ನು ಯೋಚಿಸಿದಹಾಗೆ ಕಾಣಲಿಲ್ಲ. ನಿನ್ನನ್ನು ಸಭೆಗೆ ಕರೆತರಿಸುವ ದುರುದ್ದೇಶದಿಂದಿರುವನು" ಎಂದನು. ಅದ

ಕ್ಕಾ ದ್ರೌಪದಿಯು "ಪ್ರಾತಿಕಾಮೀ! ಬ್ರಹ್ಮನು ವಿಧಿಸಿರುವುದೇ ಹಾಗೆ! ಯಾರೇನುಮಾಡಬಲ್ಲರು? ಶೀತೋಷ್ಣಗಳು ವೃದ್ಧರಿಗಾಗಲಿ, ಬಾಲರಿಗಾಗಲಿ ತಪ್ಪಿದುದಲ್ಲವಷ್ಟೆ? ಅದರಂತೆಯೇ ಸುಖದುಃಖಗಳು ಎಂತವರನ್ನೂ ಬಿಟ್ಟುದಲ್ಲ. ಲೋಕದಲ್ಲಿ ಧರ್ಮವೊಂದೇ ಪ್ರಧಾನವೆಂದು ಹೇಳಲ್ಪಟ್ಟಿದೆ. ಆ ಧರ್ಮವನ್ನು ಬಿಡದೆ ನಾವು ಕಾಪಾಡುತ್ತಿದ್ದರೆ, ಅದೇ ನಮ್ಮನ್ನು ರಕ್ಷಿಸಿ, ನಮಗೆ ಕ್ಷೇಮವನ್ನುಂಟುಮಾಡುವುದು. ಅಂತಹ ಧರ್ಮವು ಕೌರವಸಭೆಯನ್ನು ಬಿಟ್ಟುಹೋಗದಿರಲಿ! ತಿರುಗಿ ನೀನು ಹೋಗಿ ಧರ್ಮಯುಕ್ತವಾದ ಈ ನನ್ನ ಮಾತನ್ನು ಸಭಿಕರಲ್ಲಿ ತಿಳಿಸು. ಧರ್ಮಾತ್ಮರೂ, ನೀತಿವಿದರೂ, ಶ್ರೇಷ್ಠರೂ ಆದ ಆ ಸಭ್ಯರು, ನಾನು ಕೇಳುವ ಧರ್ಮಸೂಕ್ಷ್ಮವನ್ನು ಕುರಿತು ಹೇಗೆ ನಿರ್ಣಯಿಸುವರೋ ಅದರಂತೆ ನಾನು ನಡೆದುಕೊಳ್ಳಲು ಸಿದ್ಧಳಾಗಿರುವೆನು" ಎಂದಳು. ಇದೇ ಮಾತನ್ನು ಪ್ರಾತಿಕಾಮಿಯು ಸಭೆಗೆ ಹೋಗಿ ತಿಳಿಸಿದನು. ಆದರೆ, ದುರ್ಯೋಧನನು ಕೇವಲಮೂರ್ಖನಾಗಿ ಹಠಹಿಡಿದಿದ್ದುದನ್ನು ನೋಡಿ, ಯಾರೊಬ್ಬರೂ ಬಾಯೆತ್ತಿ ಮಾತಾಡಲಾರದೆ ತಲೆಬಗ್ಗಿಸಿ ಸುಮ್ಮನಿದ್ದರು. ಇಷ್ಟರಲ್ಲಿ ಧರ್ಮರಾಜನು ದ್ರೌಪದಿಗೆ ವಿಶ್ವಾಸಪಾತ್ರನಾದ ದೂತನೊಬ್ಬನೊಡನೆ ಆಕೆಗೆ ತಿಳಿಸಿಬರುವಂತೆ ಈ ಮಾತನ್ನು ಹೇಳಿಕಳುಹಿಸಿದನು. "ಪಾಂಚಾಲೀ! ನೀನು ರಜಸ್ವಲೆ! ಒಂದೇವಸ್ತ್ರವನ್ನುಟ್ಟವಳು! ನೀನು ಆ ಸಭಾಮಧ್ಯಕ್ಕೆ ಬಂದು ನಿನ್ನ ಮಾವನ ಮುಂದೆ ರೋದಿಸುತ್ತ ನಿಲ್ಲು! ರಾಜಪುತ್ರಿಯಾದ ನೀನು ಅಂತಹ ಸ್ಥಿತಿಯಲ್ಲಿ ಸಭಾಮಧ್ಯಕ್ಕೆ ಬಂದು ನಿಂತುದನ್ನು ನೋಡಿಯಾದರೂ ಸಭಿಕರು, ಆ ಧೃತರಾಷ್ಟ್ರಪುತ್ರನನ್ನು ಛೀಗುಟ್ಟಿ ಮನಸ್ಸಿನಲ್ಲಿಯಾದರೂ ನಿಂದಿಸಲಿ" ಎಂದು ಹೇಳಿಕಳುಹಿಸಿದನು. ಒಡನೆಯೇ ಆ ದೂತನು ಧರ್ಮರಾಜನ ಅಭಿಪ್ರಾಯವನ್ನು ದ್ರೌಪದಿಗೆ ಬಂದು ತಿಳಿಸಿದನು. ಇತ್ತಲಾಗಿ ಸಭೆಯಲ್ಲಿ ಮಹಾತ್ಮರಾದ ಪಾಂಡವರೆಲ್ಲರೂ ಬಹಳ ದುಃಖದಿಂದ ಬಹಳ ದೀನರಾಗಿದ್ದರು. ಅವರ ಸರ್ವಾವಯವಗಳೂ ಸತ್ಯಪಾಶದಿಂದ ಕಟ್ಟಲ್ಪಟ್ಟು, ನಿಶ್ಚೇಷ್ಟವಾಗಿದ್ದುವು. ಯಾವುದನ್ನೂ ಕಣ್ಣೆತ್ತಿ ನೋಡದೆ, ತಲೆಬಗ್ಗಿಸಿಯೇ ಕುಳಿತಿದ್ದರು. ಇವರ ದುಸ್ಥಿತಿಯನ್ನೂ, ಇವರ ದೀನಮುಖವನ್ನು ನೋಡಿನೋಡಿ ಕೌರವರಿಗೆ ಮನಸ್ಸಿನಲ್ಲಿ ಹರ್ಷವು ಉಕ್ಕುತ್ತಿತ್ತು. ಆ ಸಂ

ತೋಷದಿಂದ ದುರ್ಯೋಧನನು ತಿರುಗಿ ಪ್ರಾತಿಕಾಮಿಯನ್ನು ನೋಡಿ, “ಸೂತಾ! ತಿರುಗಿ ನೀನು ಹೋಗಿ ಆ ಗೌಡಿಯನ್ನು ಇಲ್ಲಿಗೆ ಕರೆತಂದು ನಿಲ್ಲಿಸು. ಅವಳಿದಿರಾಗಿಯೇ ಕೌರವರು ಅವಳ ಪ್ರಶ್ನೆಗೆ ಹೇಳಬೇಕಾದ ಪ್ರತ್ಯುತ್ತರವನ್ನು ಹೇಳುವರು” ಎಂದನು. ಆಗ ಪ್ರಾತಿಕಾಮಿಯು ದುರ್ಯೋಧನನ ಆಜ್ಞೆಗೆ ಕಟ್ಟುಬಿದ್ದವನಾದರೂ, ಅತ್ತಲಾಗಿ ದ್ರೌಪದಿಯ ಕೋಪಕ್ಕೆ ಹೆದರಿ, ಹೋಗುವುದಕ್ಕಿಷ್ಟವಿಲ್ಲದೆ ಕಳವಳಿಸುತಿದ್ದನು. ಕೊನೆಗೆ ಏನಾದರೂ ಆಗಲೆಂದು ತನ್ನ ಮಾನಾವಮಾನದ ಯೋಚನೆಯನ್ನು ಬಿಟ್ಟು, ಅಲ್ಲಿದ್ದ ಸಭಿಕರನ್ನು ನೋಡಿ, “ನಾನು ಇಲ್ಲಿಂದ ಹೋಗಿ ದ್ರೌಪದಿಗೆ ಏನೆಂದು ಹೇಳಲಿ” ಎಂದನು. ಪ್ರಾತಿಕಾಮಿಯು ತಿರುಗಿ ದ್ರೌಪದಿಯ ಬಳಿಗೆ ಹೋಗಲು ಧೈರ್ಯವಿಲ್ಲದೆ ಕಳವಳಿಸುತ್ತಿರುವುದನ್ನು ಕಂಡು ದುರ್ಯೋಧನನು ದುಶ್ಶಾಸನನ ಕಡೆಗೆ ತಿರುಗಿ “ತಮ್ಮಾ! ಈ ಸೂತಪುತ್ರನು ಬಹಳ ಹೇಡಿ! ಅಲ್ಪನು. ಆ ವೃಕೋದರನಿಗಾಗಿ ಹೆದರುತ್ತಿರುವನು. ನೀನೇ ಹೋಗಿ ಆ ಯಾಜ್ಞಸೇನಿಯನ್ನು ಬಲಾತ್ಕಾರದಿಂದ ಹಿಡಿದು ಸೆಳೆದುಕೊಂಡು ಬಾ! ಹಲ್ಲುಕಿತ್ತ ಹಾವುಗಳಂತೆ ಅಸ್ವತಂತ್ರರಾದ ಈ ನಮ್ಮ ಶತ್ರುಗಳು ನಮ್ಮನ್ನೇನೂ ಮಾಡಲಾರರು” ಎಂದು ಹೇಳಿದನು. ದುರ್ಯೋಧನನ ಬಾಯಿಂದ ಈ ಮಾತು ಹೊರಟುದೇ ತಡೆ! ದುಶ್ಶಾಸನನು ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ ನೆಟ್ಟಗೆ ಪಾಂಡವರ ನಿವಾಸಕ್ಕೆ ಪ್ರವೇಶಿಸಿ, ಅಲ್ಲಿದ್ದ ದ್ರೌಪದಿಯನ್ನು ಕುರಿತು “ಪಾಂಚಾಲೀ! ಬಾ! ಬಾ! ಬೇಗನೆ ಬಾ! ಎಲೆ ಕೃಷ್ಣೇ! ನಿನ್ನ ಪತಿಗಳು ನಿನ್ನನ್ನು ಜೂಜಿನಲ್ಲಿ ಸೋತರು! ಇನ್ನು ಲಜ್ಜೆಯನ್ನು ಬಿಟ್ಟು ಬಂದು, ದುರ್ಯೋಧನನನ್ನು ನೋಡು ಬಾ! ಓ ಕಮಲಲೋಚನೇ! ಇನ್ನುಮೇಲೆ ನೀನು ದುರ್ಯೋಧನನನ್ನೇ ಭಜಿಸು! ನಾವು ಧರ್ಮದಿಂದ ನಿನ್ನನ್ನು ಜಯಿಸಿರುವೆವು. ಸಭೆಗೆ ಬಾ!” ಎಂದನು. ಆಗ ದ್ರೌಪದಿಗೆ ಸಹಿಸಲಾರದ ಸಂಕಟವುಂಟಾಯಿತು. ಮುಖವು ಬಿಳುಪೇರಿತು! ಬೆವರೇರಿದ ಮುಖವನ್ನು ಕೈಯಿಂದೊರೆಸಿಕೊಂಡು ರೋದಿಸುತ್ತ, ವೃದ್ಧನಾದ ಧೃತರಾಷ್ಟ್ರನ ಅಂತಃಪುರಸ್ತ್ರೀಯರೆಲ್ಲರೂ ಸೇರಿ ಕುಳಿತಿದ್ದ ಸ್ಥಳಕ್ಕೆ ಓಡಿಬಂದಳು. ಇದನ್ನು ನೋಡಿ ದುಶ್ಶಾಸನನು ಕೋಪದಿಂದ ಗರ್ಜಿಸುತ್ತ, ಅವಳನ್ನು ಹಿಂಬಾ

ಲಿಸಿ ಓಡಿಬಂದು, ಕಪ್ಪಾಗಿಯೂ, ಉದ್ದವಾಗಿಯೂ, ಅಂದವಾದ ಸುಳಿಗಳುಳ್ಳದಾಗಿಯೂ ಇದ್ದ ಅವಳ ತಲೆಕೂದಲಿಗೆ ಕೈಯಿಟ್ಟು ಹಿಡಿದುಕೊಂಡನು. ಆಹಾ ! ಹಿಂದೆ ಧರ್ಮರಾಜನು ನಡೆಸಿದ ರಾಜಸೂಯಯಾಗದ ಅವಭೃಥಕಾಲದಲ್ಲಿ ಯಾವ ಕೂದಲುಗಳು ಪವಿತ್ರವಾದ ಮಂತ್ರೋದಕದಿಂದ ಸೇಚನಮಾಡಲ್ಪಟ್ಟುವೋ, ಅಂತಹ ದ್ರೌಪದಿಯ ಕೇಶಗಳನ್ನು ನೀಚನಾದ ದುಶ್ಶಾಸನನು ಪಾಂಡವರ ಜಯಲಕ್ಷ್ಮಿಯನ್ನೇ ಅವಮಾನಿಸುವಂತೆ ಬಲಾತ್ಕಾರದಿಂದ ಹಿಡಿದೆಳೆಯುವುದಕ್ಕೆ ಆರಂಭಿಸಿದನು. ಹೀಗೆ ದುಶ್ಶಾಸನನು, ಸನಾಥೆಯಾಗಿದ್ದರೂ, ಅನಾಥೆಯಂತೆ ತಿಳಿದು ಆ ದ್ರೌಪದಿಯನ್ನು ಹಿಡಿದು ಬಿರುಗಾಳಿಯು ಬಾಳೆಯ ಗಿಡವನ್ನಾಡಿಸುವಂತೆ ದುಃಖಿತೆಯಾದ ಆಕೆಯನ್ನು ತುರುಬಿನಲ್ಲಿ ಹಿಡಿದೆಳೆದುಕೊಂಡೇ ಸಭಾಮಧ್ಯಕ್ಕೆ ತಂದುಬಿಟ್ಟನು. ಆಗ ಆ ಸಾಧ್ವಿಯು ದುಶ್ಶಾಸನನ ಸೆಳೆದಾಟದಿಂದ ಬಗ್ಗಿದ ಮೈಯುಳ್ಳವಳಾಗಿ, ಮಹಾವ್ಯಸನದಿಂದ ಗದ್ಗದಸ್ವರದೊಡನೆ ದುಶ್ಶಾಸನನನ್ನು ಕುರಿತು "ಎಲಾ ! ಮೂಢಾತ್ಮಾ ! ಅನಾರ್ಯಾ ! ನಾನು ರಜಸ್ವಲೆ! ಏಕವಸ್ತ್ರದಿಂದಿರುವವಳು, ಈ ಸ್ಥಿತಿಯಲ್ಲಿ ನನ್ನನ್ನು ರಾಜಸಭೆಗೆ ಎಳೆದುಕೊಂಡುಹೋಗುವೆಯಾ ? ಬಿಟ್ಟುಬಿಡು" ಎಂದಳು. ಆದರೇನು ? ದುಶ್ಶಾಸನನು ಸ್ವಲ್ಪವೂ ಮರುಕವಿಲ್ಲದೆ, ಬಲಾತ್ಕಾರದಿಂದ ಅವಳ ತುರುಬನ್ನು ಹಿಡಿದಹಾಗೆಯೇ "ಎಲೆ ಯಾಜ್ಞಸೇನೀ ! ನಿನ್ನನ್ನು ರಕ್ಷಿಸುವುದಕ್ಕಾಗಿ ಕೃಷ್ಣನೆಂದೂ ಜಿಷ್ಣುವೆಂದೂ, ಹರಿಯೆಂದೂ, ನರನೆಂದೂ ಬೇರೆಬೇರೆ ಹೆಸರಿನಿಂದ ನೀನು ಬಾರಿಬಾರಿಗೂ ಕೂಗಿ ಮೊರೆಯಿಟ್ಟು ಫಲವೇನು ? ನೀನು ರಜಸ್ವಲೆಯಾದರೂ ಆಗು! ಒಂದೇ ಬಟ್ಟೆಯಲ್ಲಿಯಾದರೂ ಇರು ! ಕೊನೆಗೆ ಮೈಮೇಲೆ ಬಟ್ಟೆಯೇ ಇಲ್ಲದೆ ಇದ್ದರೂ ಅದರಿಂದ ನಮಗೇನು? ನೀನು ದ್ಯೂತದಲ್ಲಿ ಜಿತಳಾಗಿ ನಮಗೆ ದಾಸಿಯಾಗಿರುವೆ. ಇನ್ನುಮೇಲೆ ನೀನು ನಮ್ಮ ದಾಸಿಯರ ಗುಂಪಿನಲ್ಲಿಯೇ ಸೇರತಕ್ಕವಳು" ಎಂದನು.

ಓ ಜನಮೇಜಯರಾಜಾ ! ದುಶ್ಶಾಸನನ ಎಳೆದಾಟದಿಂದ ದ್ರೌಪದಿಯ ತಲೆಕೂದಲುಗಳು ಕೆದರಿಹೋದುವು. ಅವಳು ಉಟ್ಟಿದ್ದ ಬಟ್ಟೆಯೂ ಅಲ್ಲಲ್ಲಿ ಸಡಿಲಿತು. ಲಜ್ಜೆಯು ಬಾಧಿಸುತ್ತಿದ್ದುದರಿಂದ ಒಳಗೊಳಗೆ ಕುದಿ

ಯುತ್ತ, ದೀನಸ್ವರದಿಂದ ಸಭ್ಯರ ಕಡೆಗೆ ತಿರುಗಿ “ಅಯ್ಯೋ! ಈ ಸಭೆಯಲ್ಲಿರುವವರೆಲ್ಲರೂ ಶಾಸ್ತ್ರಗಳನ್ನೋದಿದವರು! ಕರ್ಮನಿಷ್ಠರು! ಇಂದ್ರನಿಗೆ ಸಮಾನರು! ಇಲ್ಲಿರುವವರಲ್ಲಿ ಕೆಲವರು ನನಗೆ ಗುರುಗಳು! ಇತರರು ಗುರುಸ್ಥಾನದಲ್ಲಿರುವವರು. ಇಂತವರ ಮುಂದೆ ನಾನು ಈ ಸ್ಥಿತಿಯಲ್ಲಿ ಹೇಗೆ ನಿಲ್ಲಲಿ? ಎಲ ಕೇಡಿಗಾ! ಅಯೋಗ್ಯಾ! ನನ್ನನ್ನು ಈ ಸಭೆಯಲ್ಲಿ ವಸ್ತ್ರಹೀನಳನ್ನಾಗಿ ಮಾಡಿ ಅವಮಾನಪಡಿಸಬೇಡ. ನನ್ನ ಪತಿಗಳಾದ ರಾಜಪುತ್ರರು ಎಷ್ಟೇ ತಾಳ್ಮೆಯುಳ್ಳವರಾಗಿದ್ದರೂ, ಇದನ್ನುಮಾತ್ರ ಸಹಿಸಲಾರರು. ಇಂದ್ರಾದಿ ದೇವತೆಗಳೇ ನಿನ್ನ ಬೆಂಬಲಕ್ಕೆ ಬಂದರೂ, ನಿನ್ನನ್ನು ಬದುಕಿಸಿಕೊಳ್ಳಲಾರರು. ಮಹಾತ್ಮನಾದ ಧರ್ಮಪುತ್ರನು ಧರ್ಮಕ್ಕೆ ಕಟ್ಟುಬಿದ್ದವನು. ಧರ್ಮವು ಅತಿಸೂಕ್ಷ್ಮವಾದುದು. ವಿದ್ವಾಂಸರಿಗೆಮಾತ್ರವೇ ಅದರ ತತ್ವವು ತಿಳಿಯುವುದೇಹೊರತು ಎಲ್ಲರಿಗೂ ತಿಳಿಯಲಾರದು. ಇಂತಹ ಕಷ್ಟಕ್ಕೆ ಸಿಕ್ಕಿದ್ದರೂ ನಾನು ನನ್ನ ಪತಿಯ ಗುಣಗಳನ್ನುಹೊರತು, ಅವರಲ್ಲಿ ಲವಮಾತ್ರ ದೋಷವನ್ನಾದರೂ ಬಾಯಿಂದಾಡುವವಳಲ್ಲ. ಎಲ ನೀಚಾ! ರಜಸ್ವಲೆಯಾದ ನನ್ನನ್ನು ನೀನು ಈ ಸಭಾಮಧ್ಯಕ್ಕೆಳತಂದುದು ದೊಡ್ಡ ಅಕಾರ್ಯವು. ಅಯ್ಯೋ! ಈ ಸಭೆಯಲ್ಲಿ ನಿನ್ನನ್ನು ಖಂಡಿಸುವರೊಬ್ಬರಾದರೂ ಇಲ್ಲದೆ ಹೋದರೇ? ಇವರೆಲ್ಲರೂ ನಿನ್ನ ಮತವನ್ನೇ ಅಂಗೀಕರಿಸಿದಂತಿದೆ! ಇದರಲ್ಲಿ ಸಂದೇಹವಿಲ್ಲ. ಛೀ! ಛೀ! ಮುಖ್ಯವಾಗಿ ಭರತವಂಶದಲ್ಲಿ ಧರ್ಮವೂ, ಕ್ಷತ್ರಿಯರ ನಡತೆಯೂ ಸಂಪೂರ್ಣವಾಗಿ ಬಿಟ್ಟುಹೋಯಿತು. ಈ ಸಭೆಯಲ್ಲಿ ಧರ್ಮವು ಹದ್ದುಮೀರಿ ಹೋಗುತ್ತಿರುವುದನ್ನು ಕುರುಗಳೆಲ್ಲರೂ ನೋಡುತ್ತಿರುವರಲ್ಲವೇ? ಮಹಾತ್ಮನಾದ ದ್ರೋಣನಿಗಾಗಲಿ, ಭೀಷ್ಮನಿಗಾಗಲಿ, ವಿದುರನಿಗಾಗಲಿ, ವೃದ್ಧನಾದ ಧೃತರಾಷ್ಟ್ರನಿಗಾಗಲಿ ವಿವೇಕವಿಲ್ಲದಂತಾಯಿತೇ? ಅದರಿಂದಲ್ಲವೇ ಕುರುವಂಶಕ್ಕೆಲ್ಲ ಹಿರಿಯರೂ, ಪ್ರಧಾನರೂ ಆದ ಅವರೆಲ್ಲರೂ ಮಹಾಘೋರವಾದ ಈ ಅಧರ್ಮವನ್ನು ಕಣ್ಣಿಂದ ನೋಡಿ ಅಲಕ್ಷ್ಯವಾಗಿರುವರು” ಎಂದಳು. ಹೀಗೆ ಅತಿ ದೈನ್ಯದಿಂದ ಕೂಗಿಡುತ್ತ ದ್ರೌಪದಿಯು, ತನ್ನ ಕಡೆಗಣ್ಣಿನಿಂದ ಪತಿಗಳ ಮುಖವನ್ನು ನೋಡಿದಳು. ಮೊದಲೇ ಕೋಪದಿಂದುರಿಯುತಿದ್ದ ಅವರಿಗೆ ದೀನಳಾದ ದ್ರೌಪದಿಯ ನೋಟವು,

ಅವರ ಕೋಪಾಗ್ನಿಯನ್ನು ಮತ್ತಷ್ಟು ಉರಿಯುವಂತೆ ಮಾಡಿತು. ಅವರಿಗೆ ರಾಜ್ಯವು ಹೋದಾಗಲೂ ಅಷ್ಟು ಸಂಕಟವಿಲ್ಲ! ಧನವು ಹೋದಾಗಲೂ ಅಷ್ಟು ಸಂಕಟವಿಲ್ಲ! ಜೂಜಿನಲ್ಲಿ ತಮ್ಮ ಸಮಸ್ತ ದ್ರವ್ಯಗಳನ್ನು ಕಳೆದುಕೊಂಡಾಗಲೂ ಅಷ್ಟು ವ್ಯಸನವಾಗಲಿಲ್ಲ. ದ್ರೌಪದಿಯು ಮಹತ್ತಾದ ಲಜ್ಜೆಯೊಡನೆಯೂ, ಕೋಪದೊಡನೆಯೂ ತಮ್ಮನ್ನು ನೋಡಿದ ನೋಟವು, ಅವರಿಗೆ ಸಹಿಸಬಾರದ ವ್ಯಸನವನ್ನುಂಟುಮಾಡಿತು. ಇತ್ತಲಾಗಿ ದುಶ್ಶಾಸನನಾದರೋ ದ್ರೌಪದಿಯು ದೈನ್ಯದಿಂದ ತನ್ನ ಪತಿಗಳನ್ನು ನೋಡಿ ಸಂಕಟಪಡುತ್ತಿದ್ದಷ್ಟೂ ಉತ್ಸಾಹದಿಂದ ಆರ್ಭಟಿಸಿ ನಗುತ್ತ, ಮೈಮೇಲೆ ಪ್ರಜ್ಞೆಯಿಲ್ಲದಂತಿದ್ದ ಆಕೆಯನ್ನು "ಎಲೆ ದಾಸೀ!" ಎಂದು ಕರೆದು ಎಳೆದಾಡುತಿದ್ದನು. ಈ ಮಾತನ್ನು ಕೇಳಿದಷ್ಟೂ ಕರ್ಣನು ಸಂತೋಷದಿಂದ ಉಕ್ಕುತ್ತ 'ಭಲೆ! ಭಲೆ!' ಎಂದು ನಗುತ್ತಿದ್ದನು. ಹಾಗೆಯೇ ಶಕುನಿಯೂ ದುಶ್ಶಾಸನನನ್ನು ಕೊಂಡಾಡಿದನು. ಕರ್ಣಶಕುನಿಗಳು, ದುರ್ಯೋಧನನು, ಈ ಮೂವರುಹೊರತು ಉಳಿದವರೆಲ್ಲರೂ ಆ ಸಭೆಯ ಮುಂದೆ ದುಶ್ಶಾಸನನು ದ್ರೌಪದಿಯ ತುರುಬನ್ನು ಹಿಡಿದೆಳೆಯುತಿದ್ದುದನ್ನು ನೋಡಿ ಬಹಳ ಸಂಕಟಪಟ್ಟರು. ಇಷ್ಟರಲ್ಲಿ ಕುರುಪಿತಾಮಹನಾದ ಭೀಷ್ಮನು ದ್ರೌಪದಿಯನ್ನು ಕುರಿತು "ಎಲೆ ಸೌಭಾಗ್ಯವತೀ! ಇಲ್ಲಿ ನೀನು ಕೇಳುವ ಪ್ರಶ್ನೆಯಲ್ಲಿ ಧರ್ಮಸೂಕ್ಷ್ಮವನ್ನು ಹೀಗೆಂದು ನಿರ್ಣಯಿಸಲು ನನಗೂ ತಿಳಿಯದು. ತನಗೆ ತಾನೇ ಸ್ವತಂತ್ರನಲ್ಲದವನು ಮತ್ತೊಬ್ಬನ ಸ್ವತ್ತನ್ನು ಜೂಜಾಟಕ್ಕೆ ಪಂಥವಾಗಿ ಒಡ್ಡುವುದು ನ್ಯಾಯವಲ್ಲವೆಂಬುದೊಂದು! ಎಂತಹ ಸ್ಥಿತಿಯಲ್ಲಿಯೂ ಪತ್ನಿಯು ಪತಿಗೆ ಅಧೀನಳೇ ಎಂಬುದು ಎರಡನೆಯದು! ಇವೆರಡನ್ನೂ ಯೋಚಿಸಿದರೆ, ನಿನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಡುವುದಕ್ಕೆ ನನಗೂ ಶಕ್ಯವಲ್ಲದಂತಿದೆ. ಯುಧಿಷ್ಠಿರನಾದರೋ ಭಾಗ್ಯಸಮೃದ್ಧವಾದ ಸಮಸ್ತಭೂಮಿಯನ್ನಾದರೂ ಬಿಡುವನೇ ಹೊರತು, ಧರ್ಮವನ್ನು ಬಿಡುವವನಲ್ಲ. ಆ ಧರ್ಮವನ್ನು ಹಿಡಿದೇ ಯುಧಿಷ್ಠಿರನು ನಿನ್ನನ್ನು ತಾನು ಸೋತುದಾಗಿ ಬಾಯಿಂದಾಡಿರುವನು. ಈ ವಿಷಯದಲ್ಲಿ ನನಗೆ ಯಾವ ನಿಶ್ಚಯವನ್ನೂ ಹೇಳುವುದಕ್ಕೆ ಸಾಧ್ಯವಿಲ್ಲದಿದೆ. ಶಕುನಿಯಾದರೋ ಜೂಜಿನಲ್ಲಿ ಅಸಮಾನನು. ಅವನು ಧರ್ಮಪುತ್ರನನ್ನು

ಕುರಿತು ಅವನ ಇಷ್ಟದಂತೆಯೇ ನಡೆಯಲು ಅವಕಾಶವನ್ನು ಕೊಟ್ಟನು. ಇಷ್ಟವಿದ್ದರೆ ದ್ರೌಪದಿಯನ್ನೂ ಪಂಥಕ್ಕೊಡ್ಡಿ ಆಟವಾಡಬಹುದೆಂದು ಅವನು ಪ್ರೋತ್ಸಾಹಿಸಿದುದರಮೇಲೆ, ಅವನ ಕಪಟವನ್ನು ತಿಳಿಯದೆ, ಧರ್ಮರಾಜನು ತಾನಾಗಿ ಇಷ್ಟಪಟ್ಟು ನಿನ್ನನ್ನು ಪಣವಾಗಿ ಇಟ್ಟನು. ಆದುದರಿಂದ ಈ ಧರ್ಮಸೂಕ್ಷ್ಮವನ್ನು ಬಿಡಿಸುವುದು ಎಂತವರಿಗೂ ಅಸಾಧ್ಯವೇ!" ಎಂದನು.

ಅದಕ್ಕಾ ದ್ರೌಪದಿಯು ಆ ಭೀಷ್ಮನ ಮಾತಿಗೆ ಪ್ರತ್ಯುತ್ತರವಾಗಿ "ಓ ಪೂಜ್ಯರೇ! ಜೂಜಾಟದಲ್ಲಿ ತಂತ್ರಿಗಳೂ, ಯಾವಾಗಲೂ ಜೂಜಿನಲ್ಲಿಯೇ ಮುಳುಗಿದವರೂ, ಅನಾರ್ಯರೂ, ದುಷ್ಟಾತ್ಮರೂ, ಕಪಟಿಗಳೂ, ಮೋಸಗಾರರೂ ಆದವರನ್ನು ಮುಂದೆ ಬಿಟ್ಟು, ಆ ವಿಷಯದಲ್ಲಿ ಮುಂಜಾಗ್ರತೆಯೇನೂ ಇಲ್ಲದ ರಾಜನನ್ನು ದ್ಯೂತಸಭೆಗೆ ನಿರ್ಬಂಧದಿಂದ ಕರೆಸಿಕೊಂಡಮೇಲೆ, ಆ ರಾಜನ ಇಷ್ಟಾನುಸಾರವಾಗಿಯೇ ಇವರು ನಡೆದರೆಂಬುದು ಹೇಗೆ? ಕೇವಲ ಕಪಟಬುದ್ಧಿಯಿಂದ ವಂಚಿಸುವುದಕ್ಕಾಗಿಯೇ, ಇವರೆಲ್ಲರೂ ಒಂದಾಗಿ ಸೇರಿ, ಕಪಟವನ್ನೇ ತಿಳಿಯದ ಧರ್ಮರಾಜನನ್ನು ಅನೇಕವಿಧದಿಂದ ಜಯಿಸಿದಮೇಲಲ್ಲವೇ ಅವನು ನನ್ನನ್ನು ಪಂಥಕ್ಕೆ ಒಡ್ಡಿದನು. ಇದೋ! ಈ ಸಭೆಯಲ್ಲಿ ತಮ್ಮತಮ್ಮ ಮಕ್ಕಳ, ಮತ್ತು ಸೊಸೆಯರ ಮೇಲೆ ಪೂರ್ಣಾಧಿಕಾರವುಳ್ಳ ಎಷ್ಟೋ ಮಂದಿ ಕೌರವಪ್ರಧಾನರಿರುವರಷ್ಟೆ? ನಾನು ಕೇಳುವ ಈ ಪ್ರಶ್ನೆಗೆ ಅವರೆಲ್ಲರೂ ಚೆನ್ನಾಗಿ ಯೋಚಿಸಿ, ಸರಿಯಾದ ಉತ್ತರವನ್ನು ಕೊಡಲಿ! ಎಲ್ಲಿ ಅನುಭವಶಾಲಿಗಳಾದ ವೃದ್ಧರಿಲ್ಲವೋ ಅದು ಸಭೆಯೆನಿಸುವುದಿಲ್ಲ. ಯಾರು ಧರ್ಮವನ್ನು ನಿಶ್ಚಯಿಸಿ ಹೇಳುವುದಿಲ್ಲವೋ ಅವರು ವೃದ್ಧರೆನಿಸುವುದಿಲ್ಲ. ಎಲ್ಲಿ ಸತ್ಯವಿಲ್ಲವೋ ಅದು ಧರ್ಮವೆನಿಸುವುದಿಲ್ಲ. ಕಪಟದಿಂದ ಕೂಡಿದುದು ಸತ್ಯವೂ ಅಲ್ಲ! ಆದುದರಿಂದ (ದುರ್ಯೋಧನನಿಗೆ ಭಯಪಟ್ಟು ನೀವು ಹೇಳುವ ಮಾತು ಸತ್ಯವಲ್ಲ.) ಸತ್ಯಕ್ಕೆ ತಪ್ಪಿದಮೇಲೆ ಅದು ಧರ್ಮವಲ್ಲ. ಧರ್ಮವನ್ನು ಹೇಳಲಾರದವರು ವೃದ್ಧರಲ್ಲ. ವೃದ್ಧರಿಲ್ಲದಮೇಲೆ ಇದು ಸಭೆಯೆನಿಸುವುದಿಲ್ಲ"ವೆಂದು ದ್ರೌಪದಿಯು ರೋದಿಸುತ್ತ, ದೀನರಾದ ತನ್ನ ಪತಿಗಳನ್ನು ನೋಡುತ್ತಿ

ರುವಾಗಲೇ, ದುಶ್ಶಾಸನನು ಅಪ್ರಿಯವಾಗಿಯೂ, ಕಠೋರವಾಗಿಯೂ ಇರುವ ಮಾತುಗಳಿಂದ ಅವಳನ್ನೂ, ಪಾಂಡವರನ್ನೂ ನಿಂದಿಸಿ ಬಹಳವಾಗಿ ನೋಯಿಸುತಿದ್ದನು. ಹೀಗೆ ಸಭೆಯಲ್ಲಿ ದುಶ್ಶಾಸನನಿಂದೆಳೆದಾಡಲ್ಪಡುತ್ತ, ಮೈಮೇಲಿನ ಬಟ್ಟೆಯು ಸಡಿಲಿ, ಓದಿಸುತ್ತಿರುವ ರಜಸ್ವಲೆಯಾದ ಪತ್ನಿಯ ದುರ್ದಶೆಯನ್ನು ಕಂಡು ಧರ್ಮರಾಜನೂ, ಭೀಮನೂ ಸಹಿಸ ಬಾರದ ದುಃಖದಿಂದಲೂ, ಕೋಪದಿಂದಲೂ ಕುದಿಯುತ್ತಿದ್ದರು.

ಇದು ಎಂಭತ್ತೊಂಭತ್ತನೆಯ ಅಧ್ಯಾಯವು.



{ ಭೀಮನ ಕ್ರೋಧವಾಕ್ಯಗಳು. ವಿಕರ್ಣನ ನೀತಿ. ದುಶ್ಶಾಸನನು ದ್ರೌಪದಿಯ ವಸ್ತ್ರವನ್ನು ಸೆಳೆದುದು. ಶ್ರೀಕೃಷ್ಣಾನುಗ್ರಹದಿಂದ ಅವಳ ವಸ್ತ್ರವು ಅಭಿವೃದ್ಧಿಯಾದುದು. ವಿದುರವಚನವು. }

ಆಗ ಭೀಮನು ಕೋಪದಿಂದ ಧರ್ಮರಾಜನಕಡೆಗೆ ತಿರುಗಿ “ಯುಧಿಷ್ಠಿರಾ! ಎಷ್ಟೋಮಂದಿ ದ್ಯೂತವಾಡುವುದುಂಟು! ಅವರ ಮನೆಯಲ್ಲಿ ಎಷ್ಟೋ ದಾಸಿಯರು ಕೆಲಸಮಾಡುವುದೂ ಉಂಟು. ಜೂಜಾಡುವವರು ತಮ್ಮ ಮನೆಯ ದಾಸಿಯರನ್ನಾದರೂ ಇಂತಹ ಜೂಜಾಟಕ್ಕೊಡ್ಡುವದಿಲ್ಲ. ತಮ್ಮ ದಾಸಿಯರಲ್ಲಿಯೂ ಅವರು ಸ್ತ್ರೀಯರೆಂಬ ಕನಿಕರವನ್ನಿಟ್ಟಿರುವರು. ಅಯ್ಯೋ! ನಮಗೆ ಕಾಶೀರಾಜನೇ ಮೊದಲಾದ ಅನೇಕರಾಜರು ಕಾಣಿಕೆಯಾಗಿ ತಂದಿತ್ತ ಉತ್ತಮಾಸನಗಳನ್ನೂ, ರಥವಾಹನಗಳನ್ನೂ, ಆಯುಧಗಳನ್ನೂ, ಕವಚಗಳನ್ನೂ, ರಾಜ್ಯವನ್ನೂ, ಕೊನೆಗೆ ನಮ್ಮ ಶರೀರವನ್ನೂ ನೀನು ಈ ಜೂಜಿನಲ್ಲಿಟ್ಟು ಎಲ್ಲವನ್ನೂ ಸೋತುಬಿಟ್ಟೆ. ಇದಕ್ಕಾಗಿಯೂ ನನಗೆ ಕೋಪವುಂಟಾಗಲಿಲ್ಲ. ಏಕೆಂದರೆ, ನಮಗೂ, ನಮ್ಮ ಸಮಸ್ತ ಸ್ವತ್ತಿಗೂ ನೀನೇ ಸ್ವಾಮಿ! ಆದರೆ, ನೀನು ದ್ರೌಪದಿಯನ್ನು ಪಂಥಕ್ಕಿಟ್ಟುದುಮಾತ್ರ ಬಹಳ ಅಕ್ರಮವು. ಇಂತಹ ದುರ್ದಶೆಗೆ ಎಂದಿಗೂ ಅರ್ಹಳಲ್ಲದ ಆ ರಾಜಕುಮಾರಿಯು ಪಾಂಡವರಾದ ನಮ್ಮ ಕೈಹಿಡಿದುದಕ್ಕೆ ಅತ್ಯಲ್ಪರೂ, ಕ್ರೂರರೂ, ಬುದ್ಧಿಹೀನರೂ ಆದ ಕೌರವರ ಕೈಯಿಂದ

ಎಳೆದಾಡಲ್ಪಡುವ ಸ್ಥಿತಿಗೆ ಬಂದಳಲ್ಲವೆ? ನೀನಲ್ಲವೇ ಇದಕ್ಕೆಲ್ಲ ಕಾರಣ ಭೂತನು. ಈಗ ನನ್ನ ಕೋಪವನ್ನೆಲ್ಲ ನಿನ್ನಮೇಲೆ ತೀರಿಸಿಕೊಳ್ಳಬೇಕಾಗಿದೆ. ಜೂಜಾಡಿದ ನಿನ್ನ ಕೈಗಳೆರಡನ್ನೂ ಈಗಲೇ ಸುಟ್ಟುಬಿಡುವೆನು! ಸಹದೇವಾ! ಬೆಂಕಿಯನ್ನು ತೆಗೆದುಕೊಂಡು ಬಾ!" ಎಂದನು. ಆಗ ಅರ್ಜುನನು "ಅಣ್ಣಾ ಭೀಮಾ! ಇದೇನಿದು? ನೀನು ಇಂತಹ ಮಾತನ್ನು ಹಿಂದೆ ಎಂದಿಗೂ ಆಡಿದವನಲ್ಲವಲ್ಲಾ? ಧರ್ಮರಾಜನು ನಮ್ಮ ಸರ್ವಸ್ವವನ್ನೂ ಕಳೆದುಕೊಂಡುದಿರಲಿ! ಈಗ ನೀನು ನಮ್ಮ ಶತ್ರುಗಳಮೇಲಿನ ಕೋಪದಿಂದ, ನಮಗಿರುವ ಧರ್ಮಗೌರವವನ್ನೂ ನಾಶಮಾಡಿದೆ. ಧರ್ಮನಾಶವೇ ನಮಗೆ ಎಲ್ಲಕ್ಕಿಂತಲೂ ಪ್ರಬಲವಾದ ಪರಾಜಯವು. ಇದರಿಂದ ನೀನೇ ಶತ್ರುಗಳ ಕೋರಿಕೆಯು ಈಡೇರುವಂತೆ ಮಾಡಬೇಡ. ಧರ್ಮವೇ ಉತ್ತಮವಾದುದು. ಅದನ್ನು ನೀನು ಬಿಡದೆ ಅನುಸರಿಸು. ಧರ್ಮಿಷ್ಠನೂ, ಜ್ಯೇಷ್ಠನೂ ಆದ ಸಹೋದರನನ್ನು ಅತಿಕ್ರಮಿಸುವುದು ಎಂತವನಿಗೂ ಯೋಗ್ಯವಲ್ಲ. ನಮ್ಮ ಶತ್ರುಗಳು ನಿರ್ಬಂಧಿಸಿ ಕರೆದುದರಿಂದ, ಅಣ್ಣನು ಕ್ಷತ್ರಧರ್ಮವನ್ನನುಸರಿಸಿ ದ್ಯೂತಕ್ಕೆ ಪ್ರವರ್ತಿಸಬೇಕಾಯಿತು. ಅದು ನಮ್ಮೆಲ್ಲರಿಗೂ ದೊಡ್ಡ ಯಶಸ್ಸಿಗೆ ಕಾರಣವೆಂದೇ ನಾವು ಭಾವಿಸಬೇಕು" ಎಂದನು. ಅದಕ್ಕಾ ಭೀಮನು "ಅರ್ಜುನಾ! ನಾನೂ ಅದನ್ನು ಬಲ್ಲೆನು. ಇವನು ಮಾಡಿದುದು ಅಧರ್ಮವೆಂದು ನನ್ನ ಮನಸ್ಸಿಗೆ ತೋರಿದ್ದರೆ, ಆಗಲೇ ನಾನು ಇವನ ಎರಡುಕೈಗಳನ್ನೂ ಬಲಾತ್ಕಾರದಿಂದ ಕಟ್ಟಿ, ಜ್ವಲಿಸುವ ಬೆಂಕಿಯಲ್ಲಿ ಸುಟ್ಟುಹಾಕುತಿದ್ದೆನು" ಎಂದನು. ಹೀಗೆ ಪಾಂಡವರು ಧರ್ಮಬದ್ಧರಾಗಿ ದುಃಖದಿಂದ ಪರಿತಪಿಸುತ್ತಿರುವುದನ್ನೂ, ಅತ್ತಲಾಗಿ ದ್ರೌಪದಿಯು ದುಶ್ಶಾಸನನಿಂದ ಸೆಳೆಯಲ್ಪಡುತ್ತಿರುವುದನ್ನೂ ನೋಡಿದಾಗ, ದುರ್ಯೋಧನನ ತಮ್ಮನಾದ ವಿಕರ್ಣನೆಂಬವನಿಗೆ ಸಹಿಸಲಾರದಂತಾಯಿತು. ಆಗ ವಿಕರ್ಣನು, ಆ ಸಭೆಯಲ್ಲಿ ಮೇಲೆದ್ದು ನಿಂತು, "ಎಲೈ ರಾಜರೇ! ದ್ರೌಪದಿಯು ಕೇಳಿದ ಪ್ರಶ್ನೆಗೆ ನೀವು ಮೊದಲು ಉತ್ತರವನ್ನು ಹೇಳಿರಿ! ಕೇಳಿದ ಪ್ರಶ್ನೆಗೆ ಉತ್ತರಹೇಳದಿದ್ದರೆ ನಾವು ನರಕಕ್ಕೆ ಭಾಗಿಗಳಾಗುವೆವು. ಕುರುವೃದ್ಧರಾದ ಭೀಷ್ಮಧೃತರಾಷ್ಟ್ರರಿಬ್ಬರೂ ಈ ಸಭೆಯಲ್ಲಿ ಬಂದು ಕುಳಿತಿರುವಾಗಲೂ ಅವರೂ ಮಾತಾಡದೆ ಹೀಗೆ

ಮೌನದಿಂದಿರುವುದೆಂದರೇನು? ಮಹಾಧೀಮಂತನಾದ ವಿದುರನಾದರೂ ಮಾತಾಡಬೇಡವೆ? ಆಚಾರ್ಯರಾದ ದ್ರೋಣ ಕೃಪರಾದರೂ ಕೇಳಿದ ಪ್ರಶ್ನೆಗೆ ಉತ್ತರ ಹೇಳದೆ ಸುಮ್ಮನಿರಬಹುದೆ? ಅಲ್ಲಲ್ಲಿಂದ ಬಂದು ನೆರೆದಿರುವ ಇತರ ರಾಜರೆಲ್ಲರೂ, ಈ ಸಂದರ್ಭದಲ್ಲಿ ಕಾಮಕ್ರೋಧಗಳನ್ನು ಬಿಟ್ಟು, ತಮಗೆ ತಿಳಿದ ಧರ್ಮವನ್ನು ನಿರ್ದಾಕ್ಷಿಣ್ಯವಾಗಿ ಹೇಳಬೇಡವೆ? ಎಲೈ ರಾಜಶ್ರೇಷ್ಠರೇ! ಶುಭಾತ್ಮಳಾದ ಈ ದ್ರೌಪದಿಯು ಕೇಳಿದ ಪ್ರಶ್ನೆಯನ್ನು ನೀವೆಲ್ಲರೂ ಚೆನ್ನಾಗಿ ಪರ್ಯಾಲೋಚಿಸಿ, ನಿಮ್ಮಲ್ಲಿ ಯಾರುಯಾರಿಗೆ ಹೇಗೆಹೇಗೆ ತೋರುವುದೋ ಅದನ್ನು ಧೈರ್ಯದಿಂದ ಹೇಳಿರಿ'' ಎಂದನು. ವಿಕರ್ಣನು ಎಷ್ಟೆಷ್ಟು ಸಾರಿ ಹೇಳಿದರೂ ಯಾರೂ ಸರಿಯೆಂದಾಗಲಿ, ತಪ್ಪೆಂದಾಗಲಿ ಉತ್ತರ ಕೊಡದಿರಲು, ಅವನು ಕೋಪದಿಂದಲೂ, ವ್ಯಸನದಿಂದಲೂ, ಕೈಹಿಸುಕಿ ನಿಟ್ಟುಸಿರನ್ನು ಬಿಡುತ್ತ ''ಎಲೈ ರಾಜರೇ! ನೀವು ಈಗಿನ ಪ್ರಶ್ನೆಗೆ ಬದಲು ಹೇಳುವುದಾದರೆ ಬೇಗನೆ ಹೇಳಿರಿ! ಬೇರೆ ಏನಾದರೂ ಕಾರಣದಿಂದ ನಿಮಗೆ ಹೇಳುವುದಕ್ಕೆ ಇಷ್ಟವಿಲ್ಲದಿದ್ದರೆ ಹೋಗಲಿ! ಈ ವಿಚಾರದಲ್ಲಿ ನನಗೆ ಯುಕ್ತವಾಗಿ ತೋರಿದುದನ್ನು ನಾನು ನಿರ್ಭಯವಾಗಿ ಹೇಳಿಬಿಡುವೆನು. ಬೇಟೆ, ಮದ್ಯಪಾನ, ಜೂಜು, ಗ್ರಾಮ್ಯಸುಖಗಳಲ್ಲಿ ಆಸಕ್ತಿ, ಇವು ನಾಲ್ಕೂ ರಾಜರಿಗೆ ನಾಲ್ಕು ವ್ಯಸನಗಳೆಂದು ಹೇಳುವರು. ಇವುಗಳಲ್ಲಿ ಬಿದ್ದವರಿಗೆ ಧರ್ಮದಲ್ಲಿ ದೃಷ್ಟಿಯೇ ಇರದು. ಜೂಜಾಳಿಯು ನಡೆಸಿದ ಕಾರ್ಯವು ಲೋಕಕ್ಕೇ ಅಂಗೀಕಾರಾರ್ಹವಲ್ಲ. ಬಲಾತ್ಕಾರದಿಂದ ಅಂತಹ ದ್ಯೂತಕ್ಕಾಗಿ ಕರೆಸಲ್ಪಟ್ಟು, ಆ ವ್ಯಸನದಲ್ಲಿ ಸಿಕ್ಕಿಬಿದ್ದ ಈ ಯುಧಿಷ್ಠಿರನು, ದ್ರೌಪದಿಯನ್ನು ಜೂಜಿನಲ್ಲಿ ಪಣವಾಗಿ ಒಡ್ಡಿದುದು ನಿಜವೇ! ಇದನ್ನು ಯಾರೂ ಇಲ್ಲವೆಂದು ಹೇಳಲಾರರು. ಆದರೆ ಈ ದ್ರೌಪದಿಯಮೇಲೆ, ಎಲ್ಲಾ ಪಾಂಡವರಿಗೂ ಸಮವಾದ ಬಾಧ್ಯತೆಯುಂಟು. ಅಲ್ಲದೆ, ಧರ್ಮರಾಜನು ತನ್ನನ್ನು ಮೊದಲು ಪಂಥಕ್ಕೊಡ್ಡಿ ಸೋತಮೇಲೆ, ಈಕೆಯನ್ನಿಟ್ಟು ಸೋತಿರುವನು. ಇದು ಹೊರತು, ಶಕುನಿಯೇ ಮೊದಲು ಈ ದ್ರೌಪದಿಯನ್ನು ನಿರ್ದೇಶಿಸಿ, ಅವಳನ್ನು ಆಟಕ್ಕೆ ಪಂಥವಾಗಿಡುವಂತೆ ಪ್ರೋತ್ಸಾಹಿಸಿದವನು. ಇವನ್ನೆಲ್ಲ ಆಲೋಚಿಸಿ ನೋಡಿದರೆ,

ಈ ದ್ರೌಪದಿಯು ಆಟದಲ್ಲಿ ಜಯಿಸಲ್ಪಟ್ಟವಳೆಂದು ನನಗೆ ತೋರುವುದಿಲ್ಲ'' ಎಂದನು.

ಓ ಜನಮೇಜಯರಾಜಾ! ವಿಕರ್ಣನ ಮಾತನ್ನು ಕೇಳಿ ಅಲ್ಲಿದ್ದ ಸಭೆಯವರೆಲ್ಲರೂ "ಭಲೆ! ಭಲೆ!" ಎಂದು ಅವನನ್ನು ಕೊಂಡಾಡುತ್ತ, ಶಕುನಿಯನ್ನು ನಿಂದಿಸತೊಡಗಿದರು. ಈ ಸ್ತುತಿನಿಂದೆಗಳಿಂದಾದ ದೊಡ್ಡ ಕೋಲಾಹಲವು ಸಭೆಯನ್ನೆಲ್ಲ ಮೊಳಗಿಸಿತು. ಈ ಗದ್ದಲವು ನಿಂತ ಮೇಲೆ, ಕರ್ಣನು ಕ್ರೋಧಾವಿಷ್ಟನಾಗಿ, ತನ್ನ ನೀಡಿದ ತೋಳನ್ನು ಮೇಲಕ್ಕೆತ್ತಿ ಹೀಗೆಂದು ಹೇಳುವನು. "ವಿಕರ್ಣಾ! ಈ ಲೋಕದಲ್ಲಿ ಎಷ್ಟೋ ವಿಪರೀತಗಳನ್ನು ನಾವು ಕಾಣುವೆವೆಂಬುದಕ್ಕೆ ನೀನೇ ನಿದರ್ಶನವು. ಅರಣಿಯಲ್ಲಿ ಹುಟ್ಟಿದ ಬೆಂಕಿಯು, ತಾನು ಹುಟ್ಟಿದ ಸ್ಥಳವನ್ನೇ ದಹಿಸುವಂತೆ, ಕೌರವಕುಲದಲ್ಲಿ ಹುಟ್ಟಿದ ನೀನು ಕುಲಕ್ಕೇ ಕೇಡನ್ನು ಬಯಸುವೆ. ದ್ರೌಪದಿಯು ಬಾರಿಬಾರಿಗೂ ಪ್ರಶ್ನೆಮಾಡಿದರೂ ಈ ಸಭೆಯಲ್ಲಿ ಯಾರೊಬ್ಬರೂ ಬಾಯೆತ್ತಲಾರದೆ ಸುಮ್ಮನಿದ್ದರು. ದ್ರೌಪದಿಯು ಧರ್ಮದಿಂದಲೇ ಜಯಿಸಲ್ಪಟ್ಟವಳೆಂದು ಅವರು ತಿಳಿದಿರುವುದರಿಂದಲೇ ಮಾತಾಡದೆ ಸುಮ್ಮನಿರುವರು. ನೀನು ಇನ್ನೂ ಬಾಲನಾದುದರಿಂದ, ಹುಡುಗುತನದ ಮಾತನ್ನೇ ಆಡುತ್ತಿರುವೆ. ನೀನು ಇನ್ನೂ ಸಣ್ಣ ಹುಡುಗನಾಗಿದ್ದರೂ ದೊಡ್ಡವರಂತೆ ಎಲ್ಲಕ್ಕೂ ಬಾಯಿಕ್ಕುತ್ತಿರುವೆ. ವಿಕರ್ಣಾ! ನೀನು ಯಾವ ಧರ್ಮವನ್ನೂ ಸರಿಯಾಗಿ ತಿಳಿದವನಲ್ಲ. ದುರ್ಯೋಧನನ ತಮ್ಮನಾಗಿದ್ದು ನೀನು ಹೀಗಾಡುವುದೆ? ಎಲ್ಲರಮುಂದೆ ಪ್ರತ್ಯಕ್ಷವಾಗಿ ಜಯಿಸಲ್ಪಟ್ಟ ದ್ರೌಪದಿಯು ಜಯಿಸಲ್ಪಡಲಿಲ್ಲವೆಂದು ಅಪಲಪಿಸುವ ನಿನ್ನ ಮಂದಬುದ್ಧಿಗೇನೆಂದು ಹೇಳಲಿ! ನೀನು ಧರ್ಮವನ್ನು ಬಲ್ಲವನೆಂದರೆ ಯಾವನು ತಾನೇ ಒಪ್ಪುವನು? ನಿನ್ನ ಬುದ್ಧಿಯು ಕೇವಲ ಅಲ್ಪವಾದುದು. ಪಾಂಡವಾಗ್ರಜನಾದ ಧರ್ಮರಾಜನು ಈ ಸಭೆಯಲ್ಲಿ ತನ್ನ ಸರ್ವಸ್ವವನ್ನೂ ಪಂಥಕ್ಕಿಟ್ಟು ಸೋತಹಾಗೆಯೇ ದ್ರೌಪದಿಯನ್ನೂ ಸೋತಿರುವಾಗ, ಇವಳನ್ನುಮಾತ್ರ ಅವನು ಸೋಲಲಿಲ್ಲವೆಂದು ನೀನು ಹೇಗೆ ಹೇಳುವೆ? ಧರ್ಮರಾಜನು ಆಟದಲ್ಲಿ ಸೋತ ಎಲ್ಲಾ ವಸ್ತುಗಳಲ್ಲಿ ಇವಳೂ ಸೇರಿದವಳೇ!

ಶಕುನಿಯು ದ್ರೌಪದಿಯ ಹೆಸರನ್ನೆತ್ತಿ ಜ್ಞಾಪಿಸಿದುದೇನೋ ವಾಸ್ತವವೇ! ಪಾಂಡವರೂ ಅದಕ್ಕೆ ಅನುಮತಿಸಿಯೇ ಆಟಕ್ಕಿಟ್ಟರು. ಆ ಆಟದಲ್ಲಿ ಶಕುನಿಯು ಜಯಿಸಿದಮೇಲೆ, ಅವಳುಮಾತ್ರ ಜಯಿಸಲ್ಪಡಲಿಲ್ಲವೆಂದು ನೀನು ಹೇಗೆ ಹೇಳುವೆ? ಏಕವಸ್ತ್ರದಿಂದ ಇವಳನ್ನು ಸಭೆಗೆ ಕರೆತಂದುದು ತಪ್ಪೆಂದು ನೀನು ಹೇಳಿದೆಯಲ್ಲವೆ? ಆ ವಿಚಾರದಲ್ಲಿಯೂ ನನ್ನ ಸಿದ್ಧಾಂತವನ್ನು ತಿಳಿಸುವೆನು ಸಾವಧಾನವಾಗಿ ಕೇಳು! ಲೋಕದಲ್ಲಿ ಒಬ್ಬ ಪುರುಷನಿಗೆ ಅನೇಕ ಪತ್ನಿಯರಿರುವುದುಂಟು. ಒಬ್ಬ ಹೆಂಗಸಿಗೆ ಪತಿಯೊಬ್ಬನೇ ಹೊರತು ಅನೇಕಪತಿಗಳಿಲ್ಲ. ಇದೇ ಬ್ರಹ್ಮನ ವಿಧಿ! ಈ ದ್ರೌಪದಿಗಾದರೋ ಎಷ್ಟೋಮಂದಿ ಗಂಡಂದಿರು. ಆದುದರಿಂದ ಇವಳೂ ಒಬ್ಬ ವೇಶ್ಯೆಯೇ ಎಂಬುದರಲ್ಲಿ ಸಂದೇಹವಿಲ್ಲ. ಇವಳನ್ನು ಸಭೆಗೆ ತಂದುದರಿಂದ ಕೆಟ್ಟುಹೋದುದೇನು? ಇಂತವಳು ಏಕವಸ್ತ್ರವನ್ನು ಧರಿಸಿದ್ದರೇನು? ಅರ್ಧವಸ್ತ್ರವನ್ನು ಧರಿಸಿದ್ದರೇನು? ಕೊನೆಗೆ ವಸ್ತ್ರಹೀನೆಯಾಗಿಯೇ ಇದ್ದರೂ, ನಾವೇನೂ ಅದಕ್ಕಾಗಿ ಆಶ್ಚರ್ಯಪಡಬೇಕಾಗಿಲ್ಲ. ಇದು ನನ್ನ ಅಭಿಪ್ರಾಯವು. ಪಾಂಡವರು ತಮ್ಮ ಸರ್ವಸ್ವದೊಡನೆ ಇವಳನ್ನೂ, ತಮ್ಮನ್ನೂ, ನ್ಯಾಯವಾಗಿಯೇ ಸೋತಿರುವರು. ಶಕುನಿಯೂ ಅವರನ್ನೆಲ್ಲ ಧರ್ಮದಿಂದಲೇ ಜಯಿಸಿರುವನು. ಈಗ ಇವೆಲ್ಲವೂ ಶಕುನಿಯ ಸ್ವತ್ತುಗಳೇ" ಎಂದು ಹೇಳಿ ದುಶ್ಶಾಸನನ ಕಡೆಗೆ ತಿರುಗಿ "ದುಶ್ಶಾಸನಾ! ಈ ವಿಕರ್ಣನು ಹುಡುಗನಾದರೂ ಪ್ರಾಜ್ಞನಂತೆ ಮಾತಾಡುವನು. ಅವನು ಏನಾದರೂ ಹರಟಲಿ! ನೀನು ಆ ಪಾಂಡವರ ಮತ್ತು ದ್ರೌಪದಿಯ ವಸ್ತ್ರಗಳನ್ನೆಲ್ಲ ಕಿತ್ತು ತಂದಿಡು" ಎಂದನು.

ಓ ಜನಮೇಜಯರಾಜಾ! ಈ ಮಾತನ್ನು ಕೇಳಿದೊಡನೆ ಪಾಂಡವರೆಲ್ಲರೂ ತಾವುತಾವು ಧರಿಸಿದ್ದ ವಸ್ತ್ರಾಭರಣಗಳನ್ನೆಲ್ಲ ತಾವೇ ಕಿತ್ತೆಸೆದು ಸಭೆಯಲ್ಲಿ ಕುಳಿತಿದ್ದರು. ಆಮೇಲೆ ದುಶ್ಶಾಸನನು ಆ ಸಭಾಮಧ್ಯದಲ್ಲಿ ದ್ರೌಪದಿಯ ಸೀರೆಯ ಸೆರಗನ್ನು ಹಿಡಿದು, ಬಲಾತ್ಕಾರದಿಂದೆಳೆಯುವುದಕ್ಕೆ ಆರಂಭಿಸಿದನು. ಹೀಗೆ ದುಶ್ಶಾಸನನು ಬಲಾತ್ಕಾರದಿಂದ ಸೀರೆಯನ್ನೆಳೆಯುತ್ತಿರುವಾಗ, ದ್ರೌಪದಿಯು ಮಹಾದುಃಖದಿಂದ ತನ್ನಲ್ಲಿ

ತಾನು "ಇಂತಹ ಮಹಾವಿಪತ್ತು ಬಂದೊದಗಿದಾಗ, ಭಗವಂತನಾದ ಶ್ರೀಹರಿಯನ್ನು ಸ್ಮರಿಸಬೇಕೆಂದು ಪೂರ್ವದಲ್ಲಿ ಮಹಾತ್ಮನಾದ ವಸಿಷ್ಠನ ವಾಕ್ಯವುಂಟೆಂದು ಕೇಳಿಬಲ್ಲೆನು. ಈಗ ನಾನೂ ಹಾಗೆಯೇ ಮಾಡುವೆನು" ಎಂದು ನಿಶ್ಚಯಿಸಿಕೊಂಡು, ಶರಣಾಗತವತ್ಸಲನಾದ ಆ ಶ್ರೀಕೃಷ್ಣನನ್ನು ಸ್ಮರಿಸಿ, ಈ ಕೆಳಗಿನ ಶ್ಲೋಕಗಳನ್ನು ಹೇಳಿ ಮೊರೆಯಿಟ್ಟಳು.

**"ಶಂಖಚಕ್ರಗದಾಪಾಣೇ! ದ್ವಾರಕಾನಿಲಯಾಚ್ಯುತ!**
**ಗೋವಿಂದ! ಪುಂಡರೀಕಾಕ್ಷ! ರಕ್ಷ ಮಾಂ ಶರಣಾಗತಾಂ!**
**ಹಾ ಕೃಷ್ಣ ದ್ವಾರಕಾವಾಸಿ! ಕ್ವಾಸಿ ಯಾದವನಂದನ!**
**ಇಮಾಮವಸ್ಥಾಂ ಸಂಪ್ರಾಪ್ತಾಮನಾಥಾಂ ಕಿಮುಪೇಕ್ಷಸೇ"**

ಓ ಶಂಖಚಕ್ರಗದಾಪಾಣೀ! ದ್ವಾರಕಾನಿಲಯಾ! ಅಚ್ಯುತಾ! ಗೋವಿಂದಾ! ಪುಂಡರೀಕಾಕ್ಷಾ! ಮರೆಹೊಕ್ಕ ನನ್ನನ್ನು ರಕ್ಷಿಸು. ಹಾ ಕೃಷ್ಣಾ! ದ್ವಾರಕಾವಾಸೀ! ಯದುಕುಲನಂದನಾ! ಎಲ್ಲಿರುವೆ? ಇಂತಹ ದುರವಸ್ಥೆಗೆ ಗುರಿಯಾಗಿ ದಿಕ್ಕಿಲ್ಲದ ನನ್ನನ್ನು ಹೀಗೇಕೆ ಉಪೇಕ್ಷಿಸುವೆ! ಹೇ! ಗೋಪೀಜನ ಪ್ರಿಯಾ! ಕೃಷ್ಣಾ! ಕೇಶವಾ! ಕೌರವರು ನನ್ನನ್ನು ಅವಮಾನಗೊಳಿಸುತ್ತಿರುವುದು ಇನ್ನೂ ನಿನಗೆ ತಿಳಿಯಲಿಲ್ಲವೇ? ಹೇ, ನಾಥಾ! ಹೇ ರಮಾನಾಥಾ! ವ್ರಜನಾಥಾ! ದುಃಖನಾಶಕಾ! ಓ ಜನಾರ್ದನಾ! ಕೌರವರ ಕ್ರೌರ್ಯವೆಂಬ ಸಮುದ್ರದಲ್ಲಿ ಮುಳುಗಿಹೋಗುತ್ತಿರುವ ನನ್ನನ್ನು ಉದ್ಧರಿಸು. ಓ ಕೃಷ್ಣಾ! ಕೃಷ್ಣಾ! ಮಹಾಯೋಗಿ! ವಿಶ್ವಾತ್ಮಕಾ! ವಿಶ್ವಭಾವನಾ! ಕೌರವರ ನಡುವೆ ಕಷ್ಟಕ್ಕೆ ಸಿಕ್ಕಿ, ನಿನ್ನಲ್ಲಿ ಶರಣಾಗತಳಾಗಿರುವ ನನ್ನನ್ನು ರಕ್ಷಿಸು."

ಹೀಗೆಂದು ದ್ರೌಪದಿಯು ಲೋಕೇಶ್ವರನಾದ ಕೃಷ್ಣನನ್ನು ಸ್ಮರಿಸಿ ಮೊರೆಯಿಡುತ್ತ, ಮುಖವನ್ನು ಮುಚ್ಚಿಕೊಂಡು ರೋದಿಸುತಿದ್ದಳು. ಇಷ್ಟರಲ್ಲಿಯೇ ದುಶ್ಶಾಸನನು ಬಲಾತ್ಕಾರದಿಂದ ಎಳೆಯುತಿದ್ದ ಆ ದ್ರೌಪದಿಯ ವಸ್ತ್ರವು, ಶ್ರೀಕೃಷ್ಣನ ಅನುಗ್ರಹದಿಂದ ಒಂದರಮೇಲೊಂದರಂತೆ ಮೇಲೆ ಮೇಲೆ ವೃದ್ಧಿಯಾಗುತ್ತಲೇ ಇದ್ದಿತು. ದ್ರೌಪದಿಯು ಉಟ್ಟಿದ್ದ ವಸ್ತ್ರ




ಪುಟ ೩೬೭. ದ್ರೌಪದಿಯ ವಸ್ತ್ರಾಪಹರಣವು. ದುಶ್ಶಾಸನನು ದ್ರೌಪದಿಯ ಸೀರೆಯನ್ನೆಳೆದು ಕೈಸೋತು ಕೆಳಗೆ ಬಿದ್ದುದು.

ದಂತೆಯೇ ನಾನಾಬಣ್ಣವುಳ್ಳ ವಸ್ತ್ರಗಳೂ, ಬಿಳಿಯ ದುಕೂಲಗಳೂ, ಆ ದುಶ್ಶಾಸನನು ಎಳೆದಹಾಗೆಲ್ಲಾ ಒಂದರಮೇಲೊಂದರಂತೆ ನೂರಾರುಬಟ್ಟೆಗಳು ಬರುತ್ತಲೇ ಇದ್ದುವು. ಓ ಜನಮೇಜಯರಾಜಾ! ಆ ದ್ರೌಪದಿಯು ತನ್ನ ಧರ್ಮವನ್ನು ಬಿಡದೆ ಕಾಪಾಡುತ್ತಿದ್ದುದರ ಫಲದಿಂದ, ಈ ಆಶ್ಚರ್ಯಸಂಭವವು ನಡೆಯಿತು. ಈ ಅದ್ಭುತವನ್ನು ನೋಡಿ ಆ ಸಭೆಯಲ್ಲಿ ಒಂದು ದೊಡ್ಡ ಕೋಲಾಹಲಶಬ್ದವು ಹೊರಟಿತು. ಅಲ್ಲಿದ್ದ ರಾಜರೆಲ್ಲರೂ ಆಶ್ಚರ್ಯಪಟ್ಟು ದ್ರೌಪದಿಯ ಮಹಿಮೆಯನ್ನು ಕೊಂಡಾಡುತ್ತ, ದುಶ್ಶಾಸನನನ್ನು ನಿಂದಿಸುತಿದ್ದರು. ಕೌರವರನ್ನು ಎಲ್ಲರೂ ಛೀ! ಛೀ! ಎಂದು ಅವಾಚ್ಯವಾಗಿ ಬೈಯ್ಯಲಾರಂಭಿಸಿದರು. ಇಷ್ಟರಲ್ಲಿ ದುಶ್ಶಾಸನನಿಗಾದರೋ ಆ ಸೀರೆಯನ್ನೆಳೆದೆಳೆದು ಕೈಗಳೆಲ್ಲಾ ಸೋತುಹೋದುವು. ಶ್ರಮವೊಂದು, ಬಲವಾದ ನಾಚಿಕೆಯೊಂದು, ಇವೆರಡರಿಂದ ಮಂಕುಹಿಡಿದಂತೆ ಅವನು ಅಲ್ಲಿಯೇ ನೆಲದಮೇಲೆ ಕುಳಿತುಬಿಟ್ಟನು. ಆಗ ಸಭಾಮಧ್ಯದಲ್ಲಿ ಭೀಮನು ಮೇಲೆದ್ದು, ಕೋಪದಿಂದ ತುಟಿಗಳು ನಡುಗುತ್ತಿರಲು, ಕೈಗಳನ್ನು ಹಿಸುಕುತ್ತ, ಎಲ್ಲರಿಗೂ ಕೇಳುವಂತೆ ಹೀಗೆಂದು ಪ್ರತಿಜ್ಞೆಮಾಡಿದನು. "ಎಲೈ ರಾಜರೆ! ಕೇಳಿರಿ! ಹಿಂದೆ ಇದುವರೆಗೆ ಯಾರೂ ಕೇಳದಿದ್ದ ನನ್ನ ಮಾತನ್ನು ಕೇಳಿರಿ! ಈಗ ನಾನು ಮಾಡುವ ಪ್ರತಿಜ್ಞೆಯನ್ನು ನಾನು ನೆರವೇರಿಸದಿದ್ದರೆ, ಆಗ ನನ್ನ ಪೂರ್ವಿಕರಾದ ಪಿತೃಪಿತಾಮಹಾದಿಗಳ ಗತಿಗೆ ನಾನು ಪಾತ್ರನಾಗಲಾರೆನು. ಪಾಪಿಯೂ, ದುರಾತ್ಮನೂ, ಭರತಕುಲಾಧಮನೂ ಆದ ಈ ದುಶ್ಶಾಸನನ ಎದೆಯನ್ನು ಸೀಳಿ, ಇವನ ರಕ್ತವನ್ನು ನಾನು ಕುಡಿಯದೆ ಹೋದರೆ, ನನ್ನ ಪೂರ್ವಿಕರ ಗತಿಗೆ ನಾನು ಹೋಗಲಾರೆನು" ಎಂದನು. ಭಯಂಕರವಾಗಿ ಆರ್ಭಟಿಸಿ ಹೇಳಿದ ಈ ಭೀಮನ ಪ್ರತಿಜ್ಞೆಯನ್ನು ಕೇಳಿ ಸಭ್ಯರೆಲ್ಲರೂ, "ಭಲೆ! ಶಭಾಸ್" ಎಂದು ಭೀಮನನ್ನು ಕೊಂಡಾಡಿ ದುಶ್ಶಾಸನನನ್ನು ನಿಂದಿಸುತಿದ್ದರು. ಆ ಸಭೆಯಲ್ಲಿದ್ದ ಸಜ್ಜನರೆಲ್ಲರೂ ಧೃತರಾಷ್ಟ್ರನನ್ನು ಬಯ್ಯುತ್ತ ದ್ರೌಪದಿಯು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೌರವರಲ್ಲಿ ಯಾರೂ ಹೇಳಲಾರದೆ ಹೋದರೇ? 'ಛೀ! ಛೀ!' ಎಂದು ಅವರನ್ನು ನಿಂದಿಸತೊಡಗಿದರು. ಇಷ್ಟರಲ್ಲಿ ಸಮಸ್ತಧರ್ಮಗಳನ್ನೂ ಬಲ್ಲವನಾದ ವಿದುರನು ಮೇಲೆದ್ದು

ಕೈಯೆತ್ತಿ ಆ ಸಭೆಯವರ ಕೂಗಾಟವನ್ನು ನಿಲ್ಲಿಸಿ ಹೀಗೆಂದು ಹೇಳುವನು. "ಓ ಸದಸ್ಯರೇ! ದ್ರೌಪದಿಯು ಬಹಳ ಸೂಕ್ಷ್ಮಧರ್ಮದ ಪ್ರಶ್ನೆಯನ್ನು ಕೇಳಿರುವಳು. ಅನಾಥೆಯಂತೆ ನಮ್ಮ ಮುಂದೆ ರೋದಿಸುತ್ತಿರುವಳು. ಅವಳು ಕೇಳಿದ ಪ್ರಶ್ನೆಗೆ ನೀವು ಯಾರೂ ಉತ್ತರವನ್ನು ಹೇಳದೆ, ಅವಳ ಪರಿಭವವನ್ನು ಕಣ್ಣಾರೆ ನೋಡುತ್ತಿರುವುದು ಧರ್ಮಕ್ಕೆ ಹಾನಿಯಲ್ಲವೆ? ಅವಳು ಕೇಳಿದ ಪ್ರಶ್ನವು ಬೆಂಕಿಯಂತೆ ಈ ಸಭೆಯನ್ನು ದಹಿಸುತ್ತಿದೆ. ಈಗ ಸಭೆಯಲ್ಲಿರುವವರು ಸತ್ಯಧರ್ಮಗಳೆಂಬ ಜಲಸೇಚನದಿಂದ ಅದನ್ನು ಆರಿಸಬೇಕು. ಆದುದರಿಂದ ವಿವೇಕಿಯಾದ ಮನುಷ್ಯನು ಸತ್ಯವನ್ನು ಹಿಡಿದು ಧರ್ಮಯುಕ್ತವಾದ ಆ ಪ್ರಶ್ನೆಗೆ ಉತ್ತರವನ್ನು ಹೇಳಿಯೇ ತೀರಬೇಕು. ಕಾಮಕ್ರೋಧಗಳನ್ನು ಜಯಿಸಿದವರೇ ಆ ಪ್ರಶ್ನೆಗೆ ಉತ್ತರವನ್ನು ಹೇಳಬಲ್ಲವರು. ಇಲ್ಲಿ ವಿಕರ್ಣನೊಬ್ಬನು ಮಾತ್ರ ತನ್ನ ವಿವೇಕಬುದ್ಧಿಗೆ ತಕ್ಕಂತೆ ಉತ್ತರವನ್ನು ಹೇಳಿರುವನು. ನೀವೂ ನಿಮ್ಮ ಬುದ್ಧಿಗೆ ತೋರಿದಂತೆ ಉತ್ತರವನ್ನು ಹೇಳಿರಿ! ಸಭೆಯಲ್ಲಿ ಇಂತಹ ವಿಚಾರವು ಬಂದಾಗ, ಧರ್ಮಾಧರ್ಮಗಳನ್ನು ತಿಳಿದವನು ಅದಕ್ಕೆ ಉತ್ತರವನ್ನು ಹೇಳದೆ ಸುಮ್ಮನಿದ್ದರೆ, ಸುಳ್ಳುಹೇಳಿದ ಪಾಪದಿಂದ ಅವನು ಅನರ್ಥಕ್ಕೆ ಪಾತ್ರನಾಗುವನು. ಧರ್ಮಜ್ಞನು ಇಂತಹ ವಿಚಾರಗಳಲ್ಲಿ ತನ್ನ ಮನಸ್ಸಿಗೆ ವಿರೋಧವಾಗಿ ಸುಳ್ಳನ್ನೇ ಆಡಿದರೆ, ಅವನು ಅಸತ್ಯದ ಫಲವನ್ನು ಪೂರ್ಣವಾಗಿಯೇ ಅನುಭವಿಸುವನು. ಈ ವಿಷಯದಲ್ಲಿ ಪ್ರಹ್ಲಾದನಿಗೂ, ಆಂಗೀರಸನೆಂಬ ಮಹರ್ಷಿಗೂ ನಡೆದ ಸಂವಾದವನ್ನು ಕುರಿತು ಹಿರಿಯರು ಹೇಳಿದ ಒಂದು ಇತಿಹಾಸವುಂಟು. ಅದನ್ನು ತಿಳಿಸುವೆನು ಕೇಳಿರಿ.

ಹಿಂದೆ ಪ್ರಹ್ಲಾದನೆಂಬ ದಾನವೇಂದ್ರನೊಬ್ಬನಿದ್ದನು. ಅವನ ಮಗನಾದ ವಿರೋಚನನೆಂಬವನು, ಒಂದು ಕನ್ಯೆಗಾಗಿ ಆಂಗೀರಸನ ಮಗನಾದ ಸುಧನ್ವನೆಂಬವನೊಡನೆ ಪಂಥವನ್ನು ಹೂಡಿದನು. ಅವರಿಬ್ಬರೂ ಆ ಕನ್ಯೆಯಮೇಲಿನ ಆಸೆಯಿಂದ, "ನಾನು ದೊಡ್ಡವನು! ತಾನು ದೊಡ್ಡವನು" ಎಂದು ಪಂಥಮಾಡಿಕೊಂಡು, ತಮ್ಮ ಪ್ರಾಣಗಳನ್ನೇ ಆ ಪಂಥಕ್ಕೆ ಪಣವಾಗಿಟ್ಟರು. ಅವರಲ್ಲಿ ಯಾವನು ದೊಡ್ಡವನೆಂಬ ವಿಷಯವಾಗಿ

ವಿವಾದವು ಪ್ರಬಲವಾಯಿತು. ಇವರಿಬ್ಬರೂ ಪ್ರಹ್ಲಾದನಬಳಿಗೆ ಹೋಗಿ, "ನಮ್ಮಲ್ಲಿ ಯಾವನು ದೊಡ್ಡವನೆಂಬುದನ್ನು ನಿರ್ಣಯಿಸಿ ಹೇಳಬೇಕು. ಕಪಟವಿಲ್ಲದೆ ಸರಿಯಾದ ಉತ್ತರವನ್ನು ತಿಳಿಸು" ಎಂದರು. ಆಗ ಪ್ರಹ್ಲಾದನಿಗೆ ಇತ್ತಲಾಗಿ ಮಗನಮೇಲಿನ ಮೋಹವೊಂದು! ಅತ್ತಲಾಗಿ ಸುಧನ್ವನ ಭಯವೊಂದು! ಇವೆರಡರಿಂದ ಅವನು ಮಾತಾಡಲಾರದೆ, ಮೌನದಿಂದಿದ್ದನು. ಆಗ ಸುಧನ್ವನು ಕುಪಿತನಾಗಿ, ಬ್ರಹ್ಮದಂಡದಂತೆ ಜ್ವಲಿಸುತ್ತ, ಪ್ರಹ್ಲಾದನನ್ನು ನೋಡಿ, "ಓ ಪ್ರಹ್ಲಾದಾ! ಈಗ ನೀನು ಯಾವ ಮಾತನ್ನೂ ಆಡದೆ ಮೌನದಿಂದಿದ್ದರೂ, ಸುಳ್ಳು ಹೇಳಿದರೂ ಎರಡಕ್ಕೂ ಫಲವೊಂದೇ! ಇಂತವರನ್ನು ಇಂದ್ರನು ತನ್ನ ವಜ್ರಾಯುಧದಿಂದ ಸಹಸ್ರಭಾಗವಾಗಿ ಭೇದಿಸುವನು" ಎಂದನು. ಆಗ ಪ್ರಹ್ಲಾದನು, ಭಯದಿಂದ ಗಾಳಿಗಿದಿರಾದ ಅರಳಿಯೆಲೆಯಂತೆ ನಡುಗುತ್ತ, ಮಹಾತೇಜಸ್ವಿಯಾದ ಕಶ್ಯಪನಲ್ಲಿಗೆ ಹೋಗಿ, "ಓ ಮಹಾತ್ಮಾ! ದೇವಾಸುರ ಬ್ರಾಹ್ಮಣ ಧರ್ಮಗಳೆಲ್ಲವನ್ನೂ ನೀನು ಚೆನ್ನಾಗಿ ಬಲ್ಲವನು. ಈಗ ಬಂದೊದಗಿರುವ ಒಂದು ಧರ್ಮಸೂಕ್ಷ್ಮವನ್ನು ನನಗೆ ತಿಳಿಸಬೇಕು. ತನಗೆ ತಿಳಿದೂ ಪ್ರಶ್ನೆಗೆ ಉತ್ತರ ಹೇಳದೆ ಮೌನದಿಂದಿರತಕ್ಕವನಿಗೂ, ಸುಳ್ಳಾಗಿ ಉತ್ತರ ಹೇಳತಕ್ಕವನಿಗೂ, ಮರಣಾನಂತರದಲ್ಲಿ ಉಂಟಾಗತಕ್ಕ ಲೋಕಗಳಾವುವು? ಅವುಗಳಲ್ಲಿರುವ ತಾರತಮ್ಯವೇನು? ಇದನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ಕಶ್ಯಪನು "ಯಾವನು ವಿಷಯವನ್ನು ತಿಳಿದಿದ್ದಾಗಲೂ, ಕಾಮದಿಂದಲೋ, ಕ್ರೋಧದಿಂದಲೋ, ಭಯದಿಂದಲೋ ಪ್ರಶ್ನೆಗಳಿಗೆ ಉತ್ತರವನ್ನು ಹೇಳದೆ, ಮರೆಮಾಚಿ ಮೌನದಿಂದಿರುವನೋ, ಅವನು ಸಹಸ್ರ ವರುಣಪಾಶಗಳನ್ನು ತನ್ನಮೇಲೆ ಬಿಗಿದುಕೊಳ್ಳುವನು. ಸಾಕ್ಷಿ ಹೇಳುವುದಕ್ಕಾಗಿ ಬಂದ ಯಾವನು, ತಾನು ಕಣ್ಣಾರೆ ಕಂಡುದನ್ನು ಬಾಯಿಬಿಟ್ಟು ಹೇಳಲಾರದೆ, ದನದ ಕಿವಿಗಳಂತೆ (ಅಡ್ಡಗೋಡೆಯ ಮೇಲಿನ ದೀಪದಂತೆ) ಉಭಯಪಕ್ಷಕ್ಕೂ ತೂಗಾಡುವ ಸಾಕ್ಷ್ಯವನ್ನು ಹೇಳುವನೋ, ಅವನೂ ಸಾವಿರ ವರುಣಪಾಶಗಳಿಂದ ಬಿಗಿಯಲ್ಪಡುವನು. ಅಂತವನಿಗೆ ಒಂದೊಂದು ಸಂವತ್ಸರವು ಪೂರ್ಣವಾದಮೇಲೆ ಒಂದೊಂದು ಪಾಶವು ಬಿಟ್ಟುಹೋಗುವುದು. ಆದುದರಿಂದ ತಿಳಿದವನು ತನಗೆ ತಿಳಿದು

ದನ್ನು ಸತ್ಯವಾಗಿಯೇ ನುಡಿಯಬೇಕು. ಎಲ್ಲಾ ಧರ್ಮಗಳಿಗಿಂತಲೂ ಸತ್ಯವೇ ಮುಖ್ಯವು. ಸಭೆಯಲ್ಲಿ ಧರ್ಮವು ಅಧರ್ಮದಿಂದ ಮೆಟ್ಟಲ್ಪಡುವಾಗ, ಆ ಸಭೆಯೊಳಗಿನ ಸಭ್ಯರು ಆ ಧರ್ಮಕ್ಕೆ ಬಂದೊದಗಿದ ಸಂಕಟವನ್ನು ಕಿತ್ತುಹಾಕದಿದ್ದರೆ, ಆಗ ಆ ಶಲ್ಯವು ಆ ಸಭ್ಯರನ್ನೇ ಚುಚ್ಚುವುದು. ಆ ಸಭಿಕರಲ್ಲಿ ಮುಖ್ಯನಾದವನು ಅರ್ಧಪಾಪಕ್ಕೆ ಗುರಿಯಾಗುವನು. ಇತರ ಸಭಿಕರಿಗೆ ಕಾಲುಭಾಗವೂ, ಮಾಡಿದವನಿಗೆ ಇನ್ನುಳಿದ ಕಾಲುಭಾಗವೂ ಸೇರುವುದು. ನಿಂದಿಸಬೇಕಾದವರನ್ನು ನಿಂದಿಸಿದಾಗಲೇ, ಸಭ್ಯರಲ್ಲಿ ಪ್ರಧಾನನೂ, ಇತರ ಸಭ್ಯರೂ ಪಾಪಮುಕ್ತರಾಗುವರು. ಆಗ ಆ ಪಾಪಕ್ಕೆಲ್ಲ ಅದನ್ನು ಮಾಡಿದವನೊಬ್ಬನೇ ಪೂರ್ಣಭಾಗಿಯಾಗುವನು. ಪ್ರಹ್ಲಾದಾ! ಧರ್ಮವನ್ನು ಕೇಳಿದವರಿಗೆ ಯಾವನು ಅಸತ್ಯವಾಗಿ ಉತ್ತರವನ್ನು ಹೇಳುವನೋ, ಅವನು ತನ್ನ ಹಿಂದಿನ ಏಳುತಲೆಯವರ ಮತ್ತು ಮುಂದಿನ ಏಳು ತಲೆಯವರ ಸತ್ಕರ್ಮಫಲಗಳನ್ನೆಲ್ಲ ಕೆಡಿಸುವನು. ಓ ದಾನವೇಂದ್ರಾ! ಹಣವನ್ನು ಕಳೆದುಕೊಂಡವನಿಗೂ, ಮಗನು ಸತ್ತವನಿಗೂ, ಸಾಲದಲ್ಲಿ ಸಿಕ್ಕಿ ಸಂಕಟಪಡುವವನಿಗೂ, ಉದ್ದಿಷ್ಟಕಾರ್ಯವು ಕೆಟ್ಟುಹೋದವನಿಗೂ, ಪತಿಯನ್ನು ಕಳೆದುಕೊಂಡ ಹೆಂಗಸಿಗೂ, ರಾಜನ ಕೈಗೆ ಸಿಕ್ಕಿದ ಅಪರಾಧಿಗೂ, ಸಂತಾನವಿಲ್ಲದ ಗೃಹಿಣಿಗೂ, ಹುಲಿಯ ಬಾಯಿಗೆ ಸಿಕ್ಕಿಬಿದ್ದವನಿಗೂ, ಸವತಿಯರ ಕಾಟಕ್ಕೆ ಸಿಕ್ಕಿದವಳಿಗೂ, ಸುಳ್ಳುಸಾಕ್ಷಿಗಳಿಂದ ಕೆಟ್ಟುಹೋದವನಿಗೂ ಉಂಟಾಗುವ ಈ ದುಃಖಗಳೆಲ್ಲವೂ ಸಮಾನವೇ ಎಂದು ದೇವತೆಗಳ ಹೇಳಿಕೆಯುಂಟು. ಸುಳ್ಳಾಡಿದವನು ಈಮೇಲೆ ಕಾಣಿಸಿದ ಎಲ್ಲಾ ದುಃಖಗಳಿಗೂ ಭಾಗಿಯಾಗುವನು. ಕಣ್ಣಾರೆ ನೋಡಿದ, ಮತ್ತು ಕಿವಿಯಾರೆ ಕೇಳಿದ ವಿಷಯಗಳನ್ನು ಚೆನ್ನಾಗಿ ನೆನಪಿನಲ್ಲಿಟ್ಟು ಸತ್ಯವಾಗಿ ಹೇಳುವವನೇ ಸಾಕ್ಷಿಯೆನಿಸುವನು. ಆದುದರಿಂದ ಸತ್ಯವನ್ನು ನುಡಿಯುವ ಸಾಕ್ಷಿಯು ಮಾತ್ರವೇ ತನ್ನ ಧರ್ಮಾರ್ಥಗಳನ್ನು ಕೆಡಿಸಿಕೊಳ್ಳಲಾರನು" ಎಂದನು.

ಎಲೈ ಸಭ್ಯರೇ! ಕಶ್ಯಪನು ಹೇಳಿದ ಈ ಧರ್ಮಸೂಕ್ಷ್ಮವನ್ನು ಕೇಳಿ ಪ್ರಹ್ಲಾದನು ತನ್ನ ಮಗನನ್ನು ಕರೆದು "ಪುತ್ರಾ! ನಿನಗಿಂತಲೂ ಸುಧನ್ವನೇ ಶ್ರೇಷ್ಠನು. ನನಗಿಂತಲೂ ಅಂಗೀರಸನು ಮೇಲೆನಿಸಿರುವನು.

ನಿನ್ನ ತಾಯಿಗಿಂತಲೂ ಸುಧನ್ವನ ತಾಯಿಯೇ ಉತ್ತಮಳು. ಆದುದ ದರಿಂದ, ವಿರೋಚನಾ! ಈಗ ನೀನು ನಿನ್ನ ಪ್ರಾಣಗಳನ್ನು ಒತ್ತೆಯಿಟ್ಟಿರು ವುದರಿಂದ ಆ ಸುಧನ್ವನೇ ನಿನ್ನ ಪ್ರಾಣಗಳಿಗೆ ಅಧಿಕಾರಿ'' ಎಂದನು. ಆಗ ಸುಧನ್ವನು ಪ್ರಹ್ಲಾದನ ಸತ್ಯಕ್ಕೆ ಮೆಚ್ಚಿ, ಅವನನ್ನು ಕುರಿತು "ಪ್ರಹ್ಲಾದಾ! ನೀನು ಪುತ್ರನಲ್ಲಿರುವ ಸ್ನೇಹವನ್ನು ತೊರೆದು, ಧರ್ಮದಲ್ಲಿ ನೆಲೆ ಗೊಂಡುದುದರಿಂದ, ನಾನು ಇವನ ಪ್ರಾಣಗಳನ್ನು ತೆಗೆಯದೆ ಬಿಟ್ಟುಬಿಡು ವೆನು. ಇವನು ನೂರಾರು ವರ್ಷಗಳು ಬದುಕಲಿ'' ಎಂದು ಕಳುಹಿಸಿ ಬಿಟ್ಟನು.

"ಓ ಸಭಾಸದರೇ! ನಿವೇಲ್ಲರೂ ಇಂತಹ ಉತ್ತಮಧರ್ಮಸೂಕ್ಷ್ಮ ವನ್ನು ಚೆನ್ನಾಗಿ ಯೋಚಿಸಿ, ದ್ರೌಪದಿಯ ಪ್ರಶ್ನೆಗೆ ಸರಿಯಾದ ಉತ್ತರ ವೇನೆಂಬುದನ್ನು ನಿಶ್ಚಯಿಸಿ ಹೇಳಿರಿ'' ಎಂದನು. ಆಗಲೂ ರಾಜರೆಲ್ಲರೂ ಮಾತಾಡಲಾರದೆ ಸುಮ್ಮನಿದ್ದರು. ಆಗ ಕರ್ಣನು ದುಶ್ಶಾಸನನನ್ನು ಕುರಿತು "ದುಶ್ಶಾಸನಾ! ಈ ದಾಸಿಯನ್ನು ನಮ್ಮ ಅರಮನೆಗೆ ಕರೆದುಕೊಂಡು ಹೋಗು'' ಎಂದನು. ಆಗ ಲಜ್ಜಾವಶಳಾಗಿ, ದುಃಖದಿಂದ ನಡುಗುತ್ತ, ಪಾಂಡವರನ್ನು ಕುರಿತು ಮೊರೆಯಿಡುತ್ತಿರುವ ದ್ರೌಪದಿಯನ್ನು ದುಶ್ಶಾಸ ನನು ಸಭಾಮಧ್ಯದಲ್ಲಿ ಬಲಾತ್ಕಾರದಿಂದ ತಿರುಗಿ ಎಳೆಯಲಾರಂಭಿಸಿದನು

ಇದು ತೊಂಭತ್ತನೆಯ ಅಧ್ಯಾಯವು.

---

ದ್ರೌಪದಿಯ ವಾಕ್ಯವು ಧರ್ಮರಾಜನೇ ದ್ರೌಪದಿಯ ಮಾತಿಗೆ ಉತ್ತರವನ್ನು ಹೇಳಬೇಕೆಂದು ಭೀಷ್ಮನು ತಿಳಿಸಿದುದು.

ಓ ಜನಮೇಜಯರಾಜಾ! ಕೇಳು! ಆಗ ದ್ರೌಪದಿಯು "ಅಯ್ಯೋ! ಈ ದುಶ್ಶಾಸನನು ಬಲಾತ್ಕಾರದಿಂದ ಎಳೆಯುತ್ತಿರುವನು. ಅಬಲೆಯಾದ ನಾನು ಇಂತಹ ದುರವಸ್ಥೆಗೀಡಾದೆನು. ಈ ಸಭೆಯಲ್ಲಿರುವ ಕುರುವಂಶ ದವರಿಗೆಲ್ಲಾ ವಂದಿಸುವೆನು. ಈ ಜೂಜಾಟದಲ್ಲಿ ನನಗೇನೂ ಸಂಬಂಧ

ವಿಲ್ಲ. ಈ ಜೂಜನ್ನು ನಾನು ಆಡಿದವಳಲ್ಲ. ಇದಕ್ಕೆ ಮೊದಲು ಇಲ್ಲಿ ನಡೆದ ಕಾರ್ಯದಲ್ಲಿ ನನಗೇನೂ ಸಂಬಂಧವಿಲ್ಲದುದರಿಂದ, ನಾನು ಯಾವ ವಿಧದಲ್ಲಿಯೂ ಅಪರಾಧಿನಿಯಲ್ಲ''ವೆಂದು ಹೇಳುತ್ತ, ಆ ದುಶ್ಶ್ಯಾಸನನ ಎಳೆದಾಟದಿಂದ ಬಹಳವಾಗಿ ಪೀಡಿಸಲ್ಪಟ್ಟು ಕೆಳಗೆ ಬಿದ್ದಳು. ಇಂತಹ ದುಃಖಕ್ಕೂ, ಅವಮಾನಕ್ಕೂ ಅರ್ಹಳಲ್ಲದ ಆ ದ್ರೌಪದಿಯು ಆ ಸಭೆಯವರ ಮುಂದೆ ಹೀಗೆಂದು ವಿಲಪಿಸುವಳು. "ಎಲೈ ಸದಸ್ಯರೇ! ಹಿಂದೆ ನನ್ನ ಸ್ವಯಂವರಕಾಲದಲ್ಲಿ, ಆ ರಂಗಮಂಟಪಕ್ಕೆ ಬಂದು ಸೇರಿದ್ದ ರಾಜರಿಗೆ ಹೊರತು ನಾನು ಬೇರೆಕಾಲದಲ್ಲಿ ಬೇರೆಯವರ ಕಣ್ಣಿಗೆ ಬಿದ್ದವಳಲ್ಲ. ಈಗ ನಾನು ಬಲಾತ್ಕಾರದಿಂದ ಈ ಸಭೆಗೆ ಸೆಳೆಯಲ್ಪಟ್ಟೆನು. ಹಿಂದೆ ವಾಯುವಾಗಲಿ, ಸೂರ್ಯನಾಗಲಿ ನೋಡದ ನನ್ನನ್ನು ಈ ದುರಾತ್ಮನು ಈ ಸಭಾಮಧ್ಯಕ್ಕೆ ಸೆಳೆದು, ಈ ಜನಗಳ ಕಣ್ಣಿಗೆಲ್ಲ ಬೀಳುವಂತೆ ಮಾಡಿದನು. ಮನೆಯಲ್ಲಿ ನನ್ನನ್ನು ಗಾಳಿಯು ಮುಟ್ಟಿದರೂ ಸಹಿಸದಿದ್ದ ಪಾಂಡವರು, ಈಗ ಈ ದುರಾತ್ಮನು ನನ್ನನ್ನು ಮುಟ್ಟಿ ಸೆಳೆದಾಡುವುದನ್ನು ನೋಡಿಯೂ ಸಹಿಸಿಕೊಂಡಿರುವರು. ಅಯ್ಯೋ! ಮಹಾತ್ಮರಾದ ಕುರುವೃದ್ಧರೆಲ್ಲರೂ ಕೂಡ, ತಮ್ಮ ಸೊಸೆಯೂ, ಮಗಳೂ ಆದ ನನಗೆ ಆಗುವ ಈ ಅವಮಾನವನ್ನು ನೋಡಿ ಸುಮ್ಮನಿರಬೇಕಾದರೆ, ಇದು ಕಾಲವೈಪರೀತ್ಯವೇ ಹೊರತು ಬೇರೆಯಲ್ಲ. ಅಬಲೆಯೂ, ಪತಿವ್ರತೆಯೂ ಆದ ನನಗೆ ಇಂತಹ ಪರಿಭವವುಂಟಾಗಿ, ನಾನು ರಾಜಸಭಾಮಧ್ಯಕ್ಕೆ ಸೆಳೆಯಲ್ಪಟ್ಟಮೇಲೆ, ಇದಕ್ಕಿಂತಲೂ ನೀಚಕಾರ್ಯವೇನಿರುವುದು? ಇನ್ನು ಇಲ್ಲಿ ಧರ್ಮವೆಲ್ಲಿಯದು? ಧರ್ಮವತಿಯಾದ ಸ್ತ್ರೀಯನ್ನು ಎಂತಹ ಸ್ಥಿತಿಯಲ್ಲಿಯೂ ಪೂರ್ವಿಕರು ಸಭಾಮಧ್ಯಕ್ಕೆ ಕರೆತರುವುದಿಲ್ಲವೆಂದು ನಾನು ಕೇಳಿದ್ದೆನು. ಕೌರವರಲ್ಲಿ ಆ ಸನಾತನಧರ್ಮವು ನಷ್ಟವಾಯಿತೆಂದು ತೋರುತ್ತದೆ. ಆಯ್ಯೋ! ಪಾಂಡವರ ಭಾರ್ಯೆಯಾಗಿ, ವೀರನಾದ ಧೃಷ್ಟದ್ಯುಮ್ನನ ತಂಗಿಯಾಗಿ, ಶ್ರೀಕೃಷ್ಣನ ಸಖಿಯಾಗಿ, ಪತಿವ್ರತೆಯೆನಿಸಿಕೊಂಡ ನಾನು ಈ ರಾಜಸಭೆಗೆ ಸೆಳೆಯಲ್ಪಡಬಹುದೆ? ಎಲೈ ಕುರುವೃದ್ಧರೇ! ಧರ್ಮರಾಜನ ಭಾರ್ಯೆಯಾದ ಈ ನನ್ನನ್ನು ನೀವು ಈ ಜೂಜಾಟದ ಕಾರಣದಿಂದ ಕೌರವರಿಗೆ ದಾಸಿಯೆಂದಾದರೂ ಹೇಳಿರಿ! ದಾಸಿಯಲ್ಲವೆಂದಾದರೂ ನಿರ್ಣಯಿಸಿರಿ!

ನೀವು ಹೇಳಿದಂತೆ ನಡೆಯುವುದಕ್ಕೆ ಸಿದ್ಧಳಾಗಿರುವೆನು. ಆದರೆ, ಕುರುಕುಲದ ಕೀರ್ತಿಯನ್ನೇ ಕೆಡಿಸತಕ್ಕ ಈ ಅಲ್ಪನು, ನನ್ನ ತುರುಬನ್ನು ಹಿಡಿದು, ಈ ಸಭಾಮಧ್ಯದಲ್ಲಿ ಸೆಳೆದಾಡುವುದು ಯಾವ ಧರ್ಮವೋ ಹೇಳಿರಿ? ಅದನ್ನು ನಾನು ಎಷ್ಟು ಹೊತ್ತಿನವರೆಗೆ ತಾನೇ ಸಹಿಸಲಿ? ಎಲೈ ವೃದ್ಧರೇ! ನಾನು ಈ ಕೌರವರಿಂದ ಜಯಿಸಲ್ಪಟ್ಟೆನೋ, ಜಯಿಸಲ್ಪಡಲಿಲ್ಲವೋ, ನಿಮಗೆ ತೋರಿದ ನ್ಯಾಯವನ್ನು ಹೇಳಿಬಿಡಿರಿ. ನೀವು ಹೇಳಿದಂತೆ ನಾನು ನಡೆದುಕೊಳ್ಳುವೆನು" ಎಂದಳು.

ಆಗ ಭೀಷ್ಮನು "ಎಲೌ ಕಲ್ಯಾಣಿ! ನಾನು ಮೊದಲೇ ಹೇಳಿದೆನು. ಲೋಕದಲ್ಲಿ ಧರ್ಮಸೂಕ್ಷ್ಮವನ್ನು ಸರಿಯಾಗಿ ತಿಳಿಯುವುದು ಮಹಾಪ್ರಾಜ್ಞರೆನಿಸಿದ ಮಹಾತ್ಮರಿಗೂ ಸಾಧ್ಯವಲ್ಲ. ಲೋಕದಲ್ಲಿ ಬಲಾಢ್ಯನು ಯಾವುದನ್ನು ಧರ್ಮವೆಂದೆಣಿಸುವನೋ, ಅದೇ ಧರ್ಮದ ನೆಲೆಯಲ್ಲಿ ನಿಲ್ಲುವುದು. ಅದಕ್ಕೆ ವ್ಯತಿರಿಕ್ತವಾದುದು ನಿರಾಕರಿಸಲ್ಪಡುವುದು. ಐಶ್ವರ್ಯವಂತನು ಅಧರ್ಮವನ್ನೇ ಧರ್ಮವೆಂದು ಹೇಳಿದರೂ ಹಾಗಲ್ಲವೆಂದು ನಿಷೇಧಿಸುವುದಕ್ಕೆ ಸಾಧ್ಯವಾಗದು. ಈಗಿನ ಧರ್ಮವು ಅತಿಸೂಕ್ಷ್ಮವಾದುದು. ಎಲ್ಲರಿಗೂ ತಿಳಿಯುವುದಕ್ಕೆ ಅಶಕ್ಯವಾದುದು. ಬಹಳ ಮುಖ್ಯವಾದುದು. ಆದುದರಿಂದ ನಿನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳುವುದಕ್ಕೆ ನನಗೂ ತೋರದಿದೆ. ಆದರೆ, ಓ ದ್ರೌಪದೀ! ಕುರುಕುಲಕ್ಕೆ ಶೀಘ್ರದಲ್ಲಿಯೇ ನಾಶವುಂಟಾಗುವುದು ಸಿದ್ಧವು. ಅದಕ್ಕನುಕೂಲವಾಗಿಯೇ ಈಗ ಕೌರವರೂ ಲೋಭಮೋಹಗಳನ್ನು ಹಿಡಿದು, ಅಮಾರ್ಗದಲ್ಲಿ ಪ್ರವರ್ತಿಸುತ್ತಿರುವರು. ಅಂತಹ ಕುರುವಂಶದವರಾದ ನಮಗೆ ನೀನು ಸೊಸೆಯೆನಿಸಿಕೊಂಡಿರುವೆ. ಉತ್ತಮಕುಲದವರು ಎಷ್ಟೇ ಕಷ್ಟಕ್ಕೊಳಗಾದರೂ ಧರ್ಮವನ್ನು ಬಿಟ್ಟು ಹೋಗಬಾರದು. ಪಾಂಚಾಲಿ! ಇಷ್ಟು ದುಃಖಕ್ಕೀಡಾದರೂ, ಧರ್ಮಕ್ಕೆ ಬದ್ಧಳಾಗಿರುವ ನಿನ್ನ ಶೀಲವು ನಿನ್ನಂತವಳಿಗೇ ಯೋಗ್ಯವು. ವೃದ್ಧರೂ, ಧರ್ಮಜ್ಞರೂ ಆದ ಈ ದ್ರೋಣಾದಿಗಳೆಲ್ಲರೂ ಉಸಿರಿಲ್ಲದವರಂತೆ ತಲೆಯನ್ನು ಬಗ್ಗಿಸಿ, ಶರೀರಮಾತ್ರದಿಂದ ಕುಳಿತಿರುವರು. ಇಲ್ಲಿ ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುವವರಿಲ್ಲವೆಂದೇ ನನ್ನ ಅಭಿಪ್ರಾ

ಯುವು. ಈಗ ನೀನು ಜೂಜಿನಲ್ಲಿ ಸೋಲಿಸಲ್ಪಟ್ಟೆಯೋ, ಇಲ್ಲವೋ ಎಂಬುದನ್ನು ಧರ್ಮರಾಜನೇ ಹೇಳಲಿ" ಎಂದನು.

ಇದು ತೊಂಭತ್ತೊಂದನೆಯ ಅಧ್ಯಾಯವು.

ದುರ್ಯೋಧನನು ದ್ರೌಪದಿಗೆ ತನ್ನ ತೊಡೆಯನ್ನು ತಟ್ಟಿ ತೋರಿಸಲು, ಭೀಮನು ಆ ತೊಡೆಯನ್ನು ಮುರಿಯುವುದಾಗಿ ಪ್ರತಿಜ್ಞೆಮಾಡಿದುದು. ಅರ್ಜುನಾದಿಗಳು ಕರ್ಣಾದಿಗಳನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದುದು. ದ್ರೌಪದಿಯು ದುರ್ಯೋಧನನಿಗೆ ಶಾಪಕೊಡಲು ಅಂತರಿಕ್ಷದಿಂದ ಪುಷ್ಪವೃಷ್ಟಿಯಾದುದು.

ಓ ಜನಮೇಜಯರಾಜಾ! ಹೀಗೆ ದೈನ್ಯದಿಂದ ಕುರರಪಕ್ಷಿಯಂತೆ ವಿಧವಿಧವಾಗಿ ಗೋಳಿಡುತ್ತಿರುವ ಆ ದ್ರೌಪದಿಯ ಮಾತನ್ನು ಕೇಳಿಯೂ, ಆ ಸಭೆಯಲ್ಲಿದ್ದ ರಾಜರಲ್ಲಿ ಯಾರೊಬ್ಬರಾದರೂ ಸರಿಯೆಂದಾಗಲಿ, ತಪ್ಪೆಂದಾಗಲಿ ಹೇಳದೆ ದುರ್ಯೋಧನನಿಗೆ ಹೆದರಿ ಮೌನದಿಂದಿದ್ದರು. ಹೀಗೆ ಆ ರಾಜಸಭೆಯೆಲ್ಲವೂ ಬಾಯಿತೆರೆಯದೆ ಸುಮ್ಮನಿರುವುದನ್ನು ನೋಡಿ ದುರ್ಯೋಧನನಿಗೆ ಮತ್ತಷ್ಟು ಉತ್ಸಾಹವು ಹೆಚ್ಚಿತು. ದುಃಖಿತೆಯಾದ ದ್ರೌಪದಿಯ ಕಡೆಗೆ ನೋಡಿ ನಗುತ್ತ ದುರ್ಯೋಧನನು "ಎಲೆ ಯಾಜ್ಞಸೇನಿ! ನಿನ್ನ ಪ್ರಶ್ನೆಗಳನ್ನು ಕೇಳಿದೆವು. ನೀನು ಒಳ್ಳೇ ಧೈರ್ಯವುಳ್ಳವಳೆಂದೂ ತಿಳಿಯಿತು. ನಿನ್ನ ಧರ್ಮಾಧರ್ಮದ ತೀರ್ಮಾನಗಳೆಲ್ಲಾ ನಿನ್ನ ಪತಿಗಳಾದ ಭೀಮಾರ್ಜುನ ನಕುಲ ಸಹದೇವರಿಗೇ ಇರಲಿ! ನಿನ್ನ ವಿಷಯದಲ್ಲಿ ಯುಧಿಷ್ಠಿರನಿಗೆ ಸ್ವಾತಂತ್ರ್ಯವುಂಟೇ ಇಲ್ಲವೇ ಎಂಬುದನ್ನು, ಇಲ್ಲಿನ ಸಜ್ಜನರಮುಂದೆ ಇವರೇ ಸಕಾರಣವಾಗಿ ನಿರೂಪಿಸಿ ಹೇಳಲಿ. ಇವರು ನಾಲ್ವರೂ ಏಕವಾಕ್ಯದಿಂದ ಧರ್ಮರಾಜನನ್ನು ಅಸತ್ಯವಾದಿಯನ್ನಾಗಿ ಮಾಡಿದರೆ, ಒಡನೆಯೇ ನೀನು ದಾಸ್ಯದಿಂದ ಬಿಡಿಸಲ್ಪಡುವೆ. ಹಾಗಿಲ್ಲವೇ ಈ ಧರ್ಮರಾಜನೇ ಇದರ ನಿರ್ಣಯವನ್ನು ಹೇಳಿದರೂ ನನಗೆ ಸಮ್ಮತವೇ! ಇವನು ಧರ್ಮದಲ್ಲಿಯೇ ನೆಲೆಗೊಂಡವನೆಂದೂ, ಇಂದ್ರಸಮಾನ

ನೆಂದೂ, ಮಹಾತ್ಮನೆಂದೂ ಹೆಸರುಗೊಂಡವನು. ನಿನ್ನಮೇಲೆ ಅವನಿಗೆ ಅಧಿಕಾರವುಂಟೇ ಇಲ್ಲವೇ ಎಂಬುದನ್ನು ಅವನಾದರೂ ಹೇಳಲಿ! ಅವನು ಹೇಳಿದುದಕ್ಕೆ ನಾನು ಸಮ್ಮತಿಸುವೆನು. ಅವನು ಹೇಳಿದಂತೆ ನೀನು ದಾಸ್ಯವನ್ನೋ, ಸ್ವಾತಂತ್ರ್ಯವನ್ನೋ ಪಡೆಯುವಳಾಗು. ಎಲೆ ದ್ರೌಪದೀ! ಈ ಸಭೆಯಲ್ಲಿ ಕೌರವರೆಲ್ಲರೂ ನಿನ್ನ ಕಷ್ಟವನ್ನು ನೋಡಿಯೂ ಬಾಯೆತ್ತದೆ ಸುಮ್ಮನಿರುವುದೇಕೆಂದು ಬಲ್ಲೆಯಾ? ನಿನ್ನ ಪತಿಗಳು ಅಲ್ಪಭಾಗ್ಯರೆಂಬುದನ್ನೂ, ಅವರಿಗೆ ಸ್ವಾತಂತ್ರ್ಯವೇನೂ ಇಲ್ಲವೆಂಬುದನ್ನೂ ಇವರು ಚೆನ್ನಾಗಿ ಬಲ್ಲರು. ಅದರಿಂದಲೇ ಸುಮ್ಮನಿರುವರು" ಎಂದನು. ಆಗ ಕೌರವನ ಕಡೆಯವರೆಲ್ಲರೂ "ಭಲೆ! ಭಲೆ" ಎಂದು ದುರ್ಯೋಧನನ ಮಾತಿಗೆ ಮೆಚ್ಚಿ ಕೂಗುತ್ತ, ಸಂತೋಷದಿಂದ ತಮ್ಮ ಉತ್ತರೀಯಗಳನ್ನು ಮೇಲೆಹಾರಿಸುತಿದ್ದರು. ಮತ್ತೊಂದು ಕಡೆಯಲ್ಲಿ "ಹಾ, ಹಾ!" ಎಂಬ ಆರ್ತಧ್ವನಿಯೂ ಹೊರಟಿತು. ಎಲ್ಲರೂ ಯುಧಿಷ್ಠಿರನು ಏನುತ್ತರವನ್ನು ಹೇಳುವನೋ ಎಂದು ಅವನ ಮುಖವನ್ನೇ ನೋಡುತಿದ್ದರು. ಕೆಲವರು ಭೀಮಾರ್ಜುನರಾಗಲಿ, ನಕುಲ ಸಹದೇವರಾಗಲಿ ಏನು ಹೇಳುವರೋ ಎಂದು ಕುತೂಹಲದಿಂದ ಬಗ್ಗಿಬಗ್ಗಿ ನೋಡುತಿದ್ದರು. ಈ ಗದ್ದಲವೆಲ್ಲವೂ ಅಡಗಿದಮೇಲೆ ಭೀಮನು, ಚಂದನಾನುಲೇಪಿತವಾದ ಮತ್ತು ಸುಂದರವಾದ ತೋಳನ್ನು ಮೇಲಕ್ಕೆತ್ತಿ ಗಟ್ಟಿಯಾಗಿ "ಎಲೈ ಸಭಾಸದರೇ! ನಮ್ಮೆಲ್ಲರಿಗೂ ಜ್ಯೇಷ್ಠನಾದ ಧರ್ಮರಾಜನು, ನಮಗೆ ಪ್ರಭುವಾಗಿಲ್ಲದಿದ್ದಪಕ್ಷದಲ್ಲಿ, ನಾವು ಇದುವರೆಗೆ ಈ ಕೌರವವಂಶವನ್ನೇ ಉಳಿಸುತ್ತಿರಲಿಲ್ಲ. ನಮ್ಮ ಪುಣ್ಯಕ್ಕೂ, ತಪಸ್ಸಿಗೂ, ಪ್ರಾಣಗಳಿಗೂ ಈತನೇ ಪ್ರಭು. ಅವನು ತನ್ನನ್ನು ಸೋತಹಾಗೆ ತಿಳಿದರೆ, ಆಗ ನಾವೂ ಸೋತವರೇ! ಇದು ನಿಶ್ಚಯವು. ಹಾಗಿಲ್ಲದಿದ್ದಪಕ್ಷದಲ್ಲಿ, ಈ ಪಾಂಚಾಲಿಯ ತುರುಬಿಗೆ ಕೈಯಿಕ್ಕಿದಮೇಲೆ, ಭೂಮಿಯಲ್ಲಿ ಕಾಲಿಟ್ಟು ನಡೆಯುವ ಯಾವ ಮನುಷ್ಯನು ತಾನೇ ನಮ್ಮ ಕೈಯಿಂದ ಬದುಕಿಹೋಗುವನು? ಎಲೈ ರಾಜರೇ! ಕೋಟೆಯ ಬಾಗಿಲ ಅಗುಳಿಯಂತೆ ದುಂಡಗೆ ಉಬ್ಬಿ ನೀಡಿದ ಈ ನನ್ನ ತೋಳುಗಳನ್ನು ನೋಡಿರಿ! ಈ ಎರಡು ತೋಳುಗಳ ನಡುವೆ ಸಿಕ್ಕಿಬಿದ್ದಮೇಲೆ, ಇಂದ್ರನಾದರೂ ತಪ್ಪಿಸಿಕೊಂಡು ಹೋಗಲಾರನು. ನಾನು ಧರ್ಮ

ಪಾಶಕ್ಕೆ ಕಟ್ಟುಬಿದ್ದಿರುದರಿಂದಲೂ, ಅಣ್ಣನಲ್ಲಿ ಗೌರವದಿಂದಲೂ, ನನ್ನ ತಮ್ಮನಾದ ಅರ್ಜುನನು ತಡೆಯುವುದರಿಂದಲೂ, ಈ ಸಂಕಟಕ್ಕೆ ಒಳಗಾಗಿಯೂ ಸುಮ್ಮನಿರುವೆನು. ಈ ಧರ್ಮರಾಜನುಮಾತ್ರ ಈಗ ಅನುಮತಿಯನ್ನು ಕೊಟ್ಟರೆ ಸಾಕು. ಸಿಂಹವು ಅಲ್ಪಮೃಗಗಳನ್ನು ಹೇಗೋ ಹಾಗೆ, ಪಾಪಿಗಳಾದ ಈ ಕೌರವರನ್ನೆಲ್ಲ ಈಗಲೇ ನನ್ನ ಅಂಗೈಗಳಿಂದ ಅರೆದುಬಿಡುತಿದ್ದೆನು" ಎಂದನು. ಆಗ ಭೀಷ್ಮನೂ, ದ್ರೋಣನೂ, ವಿದುರನೂ, ಆ ಭೀಮನನ್ನು ನೋಡಿ "ಭೀಮಸೇನಾ! ನೀನು ಹೇಳಿದುದೆಲ್ಲವೂ ನಿನಗೆ ಸಾಧ್ಯವೇ. ಆದರೂ ನೀನು ಈಗ ದುಡುಕಬಾರದು" ಎಂದರು. ಆಮೇಲೆ ದುರ್ಯೋಧನನ ಪಕ್ಕದಲ್ಲಿದ್ದ ಕರ್ಣನು ದ್ರೌಪದಿಯನ್ನು ನೋಡಿ "ದ್ರೌಪದೀ! ಯಜಮಾನನ ಕೈಕೆಳಗಿನ ಸೇವಕನು, ತಂದೆಯ ಕೈಕೆಳಗಿನ ಮಗನು, ಪುರುಷನ ಕೈಹಿಡಿದ ಹೆಂಗಸು, ಈ ಮೂವರೂ ತಮಗೆ ಸ್ವಾತಂತ್ರ್ಯವಿಲ್ಲದವರು. ಯಾವ ಸ್ವತ್ತಿಗೂ ಅಧಿಕಾರವಿಲ್ಲದವರು. ದಾಸ್ಯದಲ್ಲಿ ಸಿಕ್ಕಿ, ಮೊದಲೇ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡ ದಾಸರಿಗೆ ನೀನು ಪತ್ನಿಯಾಗಿರುವೆ. ದಾಸನ ಧನಕ್ಕೆಲ್ಲ ಅವನ ಯಜಮಾನನಿಗೇ ಅಧಿಕಾರವು. ಆದುದರಿಂದ ಈಗ ನಿನಗೆ ಈ ದುರ್ಯೋಧನನು ಹೊರತು ಬೇರೆ ನಾಥರಿಲ್ಲ. ನೀನು ಒಳಗೆ ಹೋಗಿ, ದುರ್ಯೋಧನನ ದಾಸಿಯರೊಡನೆ ಸೇರಿ ಕೆಲಸಮಾಡು. ಈಗ ಇದೇ ನಿನ್ನ ಕರ್ತವ್ಯವು. ನೀನು ಅಲ್ಲಿ ಮಾಡಬೇಕಾದ ಕೆಲಸವೇನೆಂಬುದನ್ನು ಕುರಿತು ಆಮೇಲೆ ನಿರ್ಣಯಿಸುವೆವು. ಈಗ ನಿನಗೆ ಧೃತರಾಷ್ಟ್ರಪುತ್ರರೇ ನಿಯಾಮಕರಲ್ಲದೆ ಪಾಂಡವರಲ್ಲ. ಇನ್ನುಮೇಲಾದರೂ ನೀನು ಯಾವನನ್ನು ವರಿಸಿದರೆ ಹೀಗೆ ಜೂಜಾಟದಲ್ಲಿ ಪಂಥಕ್ಕೊಡ್ಡಿ ನಿನಗೆ ದಾಸ್ಯವನ್ನುಂಟುಮಾಡುವುದಿಲ್ಲವೋ, ಅಂತಹ ಬೇರೆ ಯಾವನನ್ನಾದರೂ ಹುಡುಕಿ ನಿನ್ನ ಪತಿಯನ್ನಾಗಿ ವರಿಸು. ನಿನ್ನಮೇಲೆ ನಿನ್ನ ಪತಿಗಳಿಗೆ ಅಧಿಕಾರವು ತಪ್ಪಿಹೋಯಿತು. ಇನ್ನು ನಿನಗೆ ಪತಿಗಳಿಲ್ಲ. ದಾಸಿಯಾದವಳು ತನ್ನ ಇಷ್ಟಬಂದ ಪುರುಷನನ್ನು ಇಟ್ಟುಕೊಳ್ಳುವುದರಲ್ಲಿ ತಪ್ಪಿಲ್ಲ. ಇದನ್ನು ಚೆನ್ನಾಗಿ ತಿಳಿದುಕೋ. ಯಾಜ್ಞಸೇನೀ! ನಿನ್ನ ಪತಿಗಳೈವರೂ ಸೋತಿರುವರು. ನೀನೂ ದಾಸಿಯಾದೆ. ಪರಾಜಿತರಾದ ನಿನ್ನ ಪತಿಗಳು ಇನ್ನುಮೇಲೆ ನಿನ್ನ ಭಾಗಕ್ಕೆ

ಇಲ್ಲವೆಂದೇ ತಿಳಿ. ಪಾಂಚಾಲಪುತ್ರಿಯಾದ ನಿನ್ನನ್ನು ಸಭಾಮಧ್ಯಕ್ಕೆಳೆದು, ಜೂಜಿಗೆ ಪಂಥವಾಗಿಟ್ಟ ಧರ್ಮರಾಜನು, ತನ್ನ ಜನ್ಮದ ಪ್ರಯೋಜನವನ್ನೂ, ಪರಾಕ್ರಮವನ್ನೂ, ಪೌರುಷವನ್ನೂ ತಿಳಿಯಲಾರನೇನು?'' ಎಂದನು.

ಜನಮೇಜಯರಾಜಾ! ಭೀಮನಿಗೆ ಈ ಮಾತುಗಳು ದುಸ್ಸಹವಾದುವು. ಧರ್ಮಪಾಶಕ್ಕೆ ಕಟ್ಟುಬಿದ್ದು, ಅಣ್ಣನನ್ನೇ ಅನುಸರಿಸುವ ಸ್ವಭಾವವುಳ್ಳ ಆತನು, ಕರ್ಣನನ್ನು ಕಣ್ಣುಗಳಿಂದಲೇ ದಹಿಸಿಬಿಡುವಂತೆ ನೋಡುತ್ತ, ದೊಡ್ಡದಾಗಿ ನಿಟ್ಟುಸಿರನ್ನು ಬಿಟ್ಟು, ಧರ್ಮರಾಜನಕಡೆಗೆ ತಿರುಗಿ "ಅಣ್ಣಾ! ನಾನು ಈ ಸೂತಕುಲದವನಮೇಲೆ ಕೋಪಿಸಿ ಫಲವಿಲ್ಲ. ನಾವು ದಾಸರಾದಮೇಲೆ ದಾಸವೃತ್ತಿಯನ್ನೇ ಅನುಸರಿಸಬೇಕು. ಈ ದ್ರೌಪದಿಯನ್ನು ನೀನು ಪಂಥಕೊಡ್ಡಿದುದರಿಂದಲೇ ಇವರು ನಮ್ಮನ್ನು ಕುರಿತು ಇಂತಹ ಹೀನವಾಕ್ಯಗಳನ್ನಾಡುತ್ತಿರುವರು'' ಎಂದನು. ಈ ಭೀಮನ ಮಾತುಗಳು ದುರ್ಯೋಧನನಿಗೆ ಮತ್ತಷ್ಟು ಉತ್ತೇಜಕವಾಯಿತು. ಈ ಮಾತುಗಳನ್ನೆಲ್ಲ ಕೇಳಿಕೊಂಡು ಪ್ರಜ್ಞೆಯಿಲ್ಲದವನಂತೆ ಕುಳಿತಿದ್ದ ಧರ್ಮರಾಜನನ್ನು ನೋಡಿ ದುರ್ಯೋಧನನು "ಯುಧಿಷ್ಠಿರಾ! ನಿನ್ನ ನಾಲ್ವರು ತಮ್ಮಂದಿರೂ ನಿನ್ನ ತೀರ್ಮಾನಕ್ಕಾಗಿ ಇದಿರುನೋಡುತ್ತಿರುವರು. ಈಗಿನ ಪ್ರಶ್ನೆಗೆ ನೀನು ಏನುತ್ತರವನ್ನು ಹೇಳುವೆಯೋ ಹೇಳು. ದ್ರೌಪದಿಯು ಆಟದಲ್ಲಿ ನನ್ನಿಂದ ಜಯಿಸಲ್ಪಟ್ಟಳೇ ಇಲ್ಲವೇ? ಎಂಬುದನ್ನು ತಿಳಿಸಿಬಿಡು. ಇಲ್ಲವೆಂದು ನಿನಗೆ ತೋರಿದರೆ, ಅದನ್ನಾದರೂ ಬಾಯಿಬಿಟ್ಟು ಹೇಳಿಬಿಡು'' ಎಂದನು.

ಓ ಜನಮೇಜಯರಾಜಾ! ಐಶ್ವರ್ಯಮದದಿಂದ ಕೊಬ್ಬಿ ಬುದ್ಧಿಗೆಟ್ಟ ಆ ದುರ್ಯೋಧನನು, ಇಷ್ಟುಮಾತ್ರವೇ ಹೇಳಿ ದ್ರೌಪದಿಯ ಕಡೆಗೆ ತಿರುಗಿ ಅವಳನ್ನು ನೋಡಿ ನಕ್ಕನು. ಮತ್ತು ಭೀಮನನ್ನು ಹೀಗಳೆಯುವುದಕ್ಕೆ ಇದೇ ತಕ್ಕ ಸಮಯವೆಂದು ಕರ್ಣನೊಡನೆ ಸರಸವಾಡುತ್ತ, ತನ್ನ ತೊಡೆಯಮೇಲಿನ ಬಟ್ಟೆಯನ್ನೋಸರಿಸಿ, ಬಾಳೆಯ ಕಂಬಕ್ಕೂ, ಆನೆಯ ಸುಂಡಿಲಿಗೂ ಸಮಾನವಾಗಿ, ವಜ್ರದಂತೆ ದೃಢವಾದ ತನ್ನ ಎಡತೊಡೆ

ಯನ್ನು ಕೈಯಿಂದ ತಟ್ಟಿ, ದ್ರೌಪದಿಗೆ ತೋರಿಸುತ್ತ ಅವಳನ್ನು ನೋಡಿ ನಗುತಿದ್ದನು. ಇದನ್ನು ನೋಡಿ ಭೀಮನಿಗೆ ದುಸ್ಸಹವಾದ ಕೋಪದಿಂದ ಕಣ್ಣುಗಳು ಕೆರಳಿದುವು. ಆಗ ಅವನು ಆ ಸಭೆಯವರೆಲ್ಲರೂ ಕೇಳುತ್ತಿರುವಹಾಗೆ ಗಟ್ಟಿಯಾಗಿ ಕೂಗಿ "ಎಲ ದುರಾತ್ಮಾ! ದುರ್ಯೋಧನಾ! ನಿನ್ನ ಇದೇ ತೊಡೆಯನ್ನು ವೃಕೋದರನು (ನಾನು) ಯುದ್ಧದಲ್ಲಿ ಗದೆಯಿಂದ ಮುರಿಯದಿದ್ದರೆ, ಅವನಿಗೆ ಸತ್ತಮೇಲೆಯೂ ಪಿತೃಗಳೊಡನೆ ಸಾಲೋಕ್ಯವು ಲಭಿಸದಿರಲಿ!" ಎಂದನು. ಆಗ ಕೋಪಾವೇಶದಲ್ಲಿದ್ದ ಭೀಮನ ಶರೀರದಲ್ಲಿ ಕಾಡುಗಿಚ್ಚಿನಿಂದುರಿಯುವ ಮರದ ಪೊಟ್ಟರೆಗಳಿಂದ ಬೆಂಕಿಯ ಜ್ವಾಲೆಗಳು ಹೊರಡುವಂತೆ, ಎಲ್ಲಾ ಇಂದ್ರಿಯದ್ವಾರಗಳಿಂದಲೂ ಉರಿಯು ಕೆದರಲಾರಂಭಿಸಿದುವು. ಆಗ ವಿದುರನು ಆ ಸಭೆಯನ್ನು ನೋಡಿ "ಎಲೈ ಪ್ರತೀಪವಂಶದ ರಾಜರೇ! ಎಂತಹ ಮಹಾಭಯವು ಪ್ರಾಪ್ತವಾಯಿತೋ ನೋಡಿರಿ! ಭೀಮನಿಂದ ಈ ಅನರ್ಥಗಳೆಲ್ಲ ಸಂಭವಿಸುವುದೇ ನಿಶ್ಚಯವು. ಭರತವಂಶಕ್ಕೆ ಸಂಭವಿಸಿದ ಈ ಅಪಕೀರ್ತಿಯು, ಪ್ರಾರಬ್ಧ ಪಾಪಕ್ಕೆ ಫಲವಾಗಿ ದೈವದಿಂದಲೇ ಉಂಟಾಗಿದೆಯೆಂಬುದು ನಿಜವು. ಧೃತರಾಷ್ಟ್ರಪುತ್ರಾ! ಸಾಧ್ವಿಯಾದ ಹೆಂಗಸನ್ನು ಸಭೆಗೆ ಎಳೆದುತಂದು, ಅವಳೊಡನೆ ವಿವಾದಹೂಡುವುದು ದ್ಯೂತಕ್ಕಿಂತಲೂ ಕ್ರೂರವಾದ ನೀಚಕಾರ್ಯವು. ಇದರಿಂದ ನಿಮ್ಮ ಯೋಗಕ್ಷೇಮಗಳೆರಡೂ ಕೆಟ್ಟುವು. ಕೌರವರು ಕೇವಲ ಪಾಪಾಲೋಚನೆಗಳನ್ನು ಮಾಡುತ್ತಿರುವರು. ಓ ಸಭಾಸದರೇ! ಧರ್ಮವು ಕೆಟ್ಟರೆ ಸಭೆಯೆಲ್ಲವೂ ಕೆಟ್ಟಹಾಗೆಯೇ! ಈಗ ಜೂಜಾಡಿದ ಧರ್ಮರಾಜನು, ತನ್ನನ್ನು ತಾನಿಟ್ಟು ಸೋಲುವುದಕ್ಕೆ ಮೊದಲೇ ಇವಳನ್ನು ಪಂಥಕ್ಕಿಟ್ಟು ಸೋತಿದ್ದರೆ, ಆಗ ಅವಳು ಅವನ ಸ್ವತ್ತಾಗಿರುತ್ತಿದ್ದಳು. ಈಗ ನಡೆದುದು ಹಾಗಲ್ಲ. ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡವನು ಒಂದು ವಸ್ತುವನ್ನು ಪಂಥಕ್ಕಿಟ್ಟು ಆಡಿದಾಗ, ಅದನ್ನು ಜಯಿಸುವುದು ಸ್ವಪ್ನದಲ್ಲಿ ಜಯಿಸಿದ ಧನಕ್ಕೆ ಸಮಾನವೇ ಎಂದು ನನಗೆ ತೋರುತ್ತಿದೆ. ಕೌರವರೇ! ಈ ಶಕುನಿಯ ಮಾತನ್ನು ಕೇಳಿ ಧರ್ಮವನ್ನು ಬಿಟ್ಟು ಕೆಟ್ಟುಹೋಗಬೇಡಿರಿ" ಎಂದನು. ಆಮೇಲೆ ದುರ್ಯೋಧನನು "ದ್ರೌಪದೀ! ಭೀಮಾರ್ಜುನರು ಮೊದಲಾದ ನಿನ್ನ ಇತರ

ಪತಿಗಳಾದರೂ ಈಗ ಯುಧಿಷ್ಠಿರನಿಗೆ ನೀನು ಅಧೀನಳಲ್ಲವೆಂದು ತಮ್ಮ ಬಾಯಿಂದ ನುಡಿಯಲಿ! ಒಡನೆಯೇ ದಾಸ್ಯದಿಂದ ನಿನ್ನನ್ನು ಬಿಡಿಸುವೆನು'' ಎಂದನು. ಆಗ ಅರ್ಜುನನು "ದುರ್ಯೋಧನಾ! ನಮ್ಮಣ್ಣನು ತನ್ನನ್ನು ಸೋಲುವುದಕ್ಕೆ ಮೊದಲು ನಮ್ಮೆಲ್ಲರಿಗೂ ಪ್ರಭುವಾಗಿದ್ದನೆಂಬುದು ನಿಜವೇ! ಅವನು ತನ್ನನ್ನಿಟ್ಟು ಸೋತಮೇಲೆ ಅವನು ಯಾರಿಗೆ ಪ್ರಭುವೆಂಬುದನ್ನು ನೀನೇ ಯೋಚಿಸಿ ನೋಡಬಹುದು'' ಎಂದನು. ಇಷ್ಟರಲ್ಲಿ ಕರ್ಣನು ಮೇಲೆದ್ದು ದುಶ್ಶಾಸನನನ್ನು ಕರೆಯುತ್ತ "ದುಶ್ಶಾಸನಾ! ನಾನು ಹೇಳುವುದನ್ನು ಕೇಳು. ಸುಮ್ಮನೆ ಇಲ್ಲಿ ಇವರೊಡನೆ ಶುಷ್ಕವಾದಗಳಿಂದ ಕಾಲವನ್ನು ಕಳೆಯುತ್ತಿರುವುದೇಕೆ? ಈ ದ್ರುಪದಪುತ್ರಿಯನ್ನು ನೀನು ಇಲ್ಲಿಂದ ಕರದುಕೊಂಡು ಹೊರಟುಹೋಗು. ಮಿತ್ರ ದುರ್ಯೋಧನಾ! ಆವಳನ್ನು ನೀನು ದಾಸಿಯೆಂದೇ ಭಾವಿಸಿ ನಿನ್ನ ಇಷ್ಟಬಂದಂತೆ ಅನುಭವಿಸಬಹುದು'' ಎಂದನು. ಆಗ ಶಕುನಿಯು "ಭಲೆ! ಭಲೆ! ಕರ್ಣಾ! ಒಳ್ಳೇ ಸಾರವಾದ ಮಾತನ್ನಾಡಿದೆ! ಅವಳನ್ನು ಇವನು ಇಷ್ಟಬಂದಂತೆ ಅನುಭವಿಸಬಹುದೆಂದು ಹೇಳಿದುದು ಸಾರವಾದ ಮಾತು'' ಎಂದನು. ಒಡನೆಯೇ ದುಶ್ಶಾಸನನು ದ್ರೌಪದಿಯನ್ನು ಬಲಾತ್ಕಾರದಿಂದ ದುರ್ಯೋಧನನ ಮನೆಗೆ ಕರೆದುಕೊಂಡು ಹೋಗುವುದಕ್ಕಾಗಿ ಬಂದು ಹಿಡಿದೆಳೆದನು. ಆಗ ಪಾಂಚಾಲಿಯು 'ಗೊಳೋ' ಎಂದು ವಿಲಪಿಸುತ್ತ "ಅಯ್ಯೋ! ನನ್ನನ್ನು ಕಾಪಾಡುವವರಿಲ್ಲವೆ? ಭೀಷ್ಮಾಚಾರ್ಯ! ದ್ರೋಣಾಚಾರ್ಯ! ಕೃಪಾಚಾರ್ಯ! ಅಶ್ವತ್ಥಾಮಾ! ಧರ್ಮವತ್ಸಲನಾದ ಓ ವಿದುರಾ! ನನ್ನನ್ನು ರಕ್ಷಿಸಿರಿ. ಧೃತರಾಷ್ಟ್ರಮಹಾರಾಜಾ! ನಿನ್ನ ಸೊಸೆಯನ್ನು ರಕ್ಷಿಸು. ದೇವಿ ಗಾಂಧಾರೀ! ನೀನು ಎಲ್ಲವನ್ನೂ ತಿಳಿದವಳಲ್ಲವೆ? ಇಲ್ಲಿ ನನ್ನ ಸ್ಥಿತಿಯನ್ನು ನೀನು ಕಣ್ಣಾರೆ ನೋಡಿದೆಯಲ್ಲವೆ. ಈ ಭಯದಿಂದ ನನ್ನನ್ನು ರಕ್ಷಿಸು. ಕುಂತೀ! ಎಲೌ ವೀರಮಾತೆ! ನನ್ನ ಸ್ಥಿತಿಯನ್ನು ಕಾಣೆಯಾ? ದುರಾತ್ಮರಿಂದ ಅವಮಾನಿತಳಾಗುವ ನನ್ನನ್ನು ಕಾಪಾಡು. ನಾನು ಇಷ್ಟು ವಿಲಪಿಸಿದರೂ, ಒಬ್ಬರಾದರೂ ಬಾಯಿಬಿಡದಿದ್ದರೆ ನಾನು ಈ ದುರ್ಯೋಧನನ ಕೈಯಲ್ಲಿ ಸಿಕ್ಕಿ ಕೆಟ್ಟುಹೋಗುವೆನಲ್ಲ. ಆ ಪಾಂಡುಮಹಾರಾಜನು, ಇಂದ್ರ ಯಮ ವಾಯುಗಳು, ಅಶ್ವಿನೀದೇವತೆಗಳು, ಇವರಾದರೂ

ಸೊಸೆಯಾದ ನನ್ನನ್ನು ರಕ್ಷಿಸದೆ ಹೋದರೆ, ಪತಿವ್ರತೆಯೂ, ಭಾಗ್ಯಹೀನೆಯೂ ಆದ ನಾನು ಹೇಗೆ ಬದುಕಿರಲಿ? ಅಯ್ಯೋ ಕಷ್ಟವೇ" ಎಂದಳು. ಆಗ ವಿದುರನು "ರಾಜಕುಮಾರೀ! ನೀನು ಹೇಳಿದುದನ್ನೆಲ್ಲ ಕೇಳುತ್ತಲೇ ಇರುವೆನು. ಪಾಂಡವರೇನೂ ಮಾತಾಡುವುದಿಲ್ಲ. ಪಾಪಿಯಾದ ಈ ದುರ್ಯೋಧನನಿಗೆ ಈಗ ನಾನಾಡುವ ಮಾತನ್ನು ನೀನೇ ಕೇಳಬಹುದು. ದುರ್ಯೋಧನನೂ, ಇವನ ಅನುಚರರೂ, ಪರಮ ದುಷ್ಟರು. ಧೃತರಾಷ್ಟ್ರನೂ ಮಕ್ಕಳೊಡನೆ ಸೇರಿ ಕಪಟವನ್ನೇ ಮಾಡುತ್ತಿರುವನು. ಪಾಪಿಯಾದ ದುರ್ಯೋಧನನು ನಾನು ಹೇಳಿದ ಮಾತನ್ನಾದರೂ ಕೇಳುವನೆಂಬ ನಿಶ್ಚಯವೇನು?" ಎಂದು ಹೇಳಿ, ಆಮೇಲೆ ದುರ್ಯೋಧನನನ್ನು ಕುರಿತು "ಕುಮಾರಾ! ದ್ರೌಪದಿಯನ್ನು ಪೀಡಿಸಬೇಡ. ಮುಂದಿನ ಅನರ್ಥವನ್ನು ನೀನು ಕಾಣದಿರುವೆ. ಮಹಾರಾಜಾ! ನೀನು ಇದಕ್ಕೆಲ್ಲ ಅವಕಾಶಕೊಟ್ಟರೆ ಇದೇ ಕಾರಣವನ್ನು ಹಿಡಿದು ಪಾಂಡವರು ನಿನ್ನ ಪುತ್ರರೆಲ್ಲರನ್ನೂ ಅವರ ಪರಿವಾರಗಳೊಡನೆ ನಾಶಮಾಡಿಬಿಡುವರು. ನಿನ್ನ ಮಕ್ಕಳನ್ನು ನಿವಾರಿಸು. ಅವರ ನಾಶವನ್ನು ನೀನು ಕೋರಬೇಡ" ಎಂದನು. ಈ ಮಾತಿಗೆ ಧೃತರಾಷ್ಟ್ರನೂ ಪ್ರತ್ಯುತ್ತರವನ್ನು ಕೊಡಲಿಲ್ಲ. ದೈವದಿಂದ ಬುದ್ಧಿಗೆಟ್ಟ ಪಾಪಿ ದುರ್ಯೋಧನನಾದರೋ, ವಿದುರನ ಮಾತಿಗೆ ಲಕ್ಷ್ಯಕೊಡದೆ ಗರ್ವಾತಿಶಯದಿಂದ ದ್ರೌಪದಿಯನ್ನು ಓರೆನೋಟದಿಂದ ನೋಡುತ್ತ, ಅವಳಿಗೆ ತನ್ನ ತೊಡೆಯನ್ನು ತಟ್ಟಿತಟ್ಟಿ ತೋರಿಸುತ್ತಿದ್ದನು. ಇದನ್ನು ನೋಡುತ್ತಿದ್ದ ಭೀಮನು, ಈ ಅವಮಾನವನ್ನು ಸಹಿಸಲಾರದೆ ಕೆಂಪೇರಿದ ಕಣ್ಣುಗಳನ್ನಗಲಿಸಿ, ಕೋಪದಿಂದ ಆ ಸಭೆಯಲ್ಲಿ ಹೀಗೆಂದು ಹೇಳುವನು.

"ಎಲೈ! ಈ ಸಭಾಮಧ್ಯದಲ್ಲಿ ನಾನು ಸಾರಿಸಾರಿ ಹೇಳುವೆನು. ಈ ದುರಾತ್ಮನಾದ ದುರ್ಯೋಧನನನ್ನು ನಾನು ಕೊಲ್ಲುವೆನು. ಧನಂಜಯನು ಕರ್ಣನನ್ನು ಕೊಲ್ಲುವನು. ಮೋಸದ ಜೂದಾಳಿಯಾದ ಶಕುನಿಯನ್ನು ಸಹದೇವನು ಕೊಲ್ಲುವನು. ಇದು ಸತ್ಯವು. ಮುಂದೆ ಯುದ್ಧವು ನಡೆಯುವಾಗ, ದೇವತೆಗಳು ಈ ನಮ್ಮ ಪ್ರತಿಜ್ಞೆಗಳನ್ನು ಸತ್ಯವಾಗಿಯೇ ಮಾಡುವರು. ನನ್ನ ಗದೆಯಿಂದ ಈ ದುರ್ಯೋಧನನನ್ನು ಕೊಂದು ಕೆಡಹಿ,

ಇವರೆಲ್ಲರ ಮುಂದೆ ಇವನ ತಲೆಯನ್ನು ನನ್ನ ಕಾಲಿಂದ ಮೆಟ್ಟುವೆನು. ಈ ದುರಾತ್ಮನಾದ ದುಶ್ಶಾಸನನ ಎದೆಯನ್ನು ಸೀಳಿ, ಸಿಂಹದಂತೆ ಅವನ ರಕ್ತವನ್ನು ಕುಡಿಯುವೆನು" ಎಂದನು. ಆಗ ಅರ್ಜುನನು "ಭೀಮ ಸೇನಾ! ನಿನ್ನಲ್ಲಿ ವೈರವನ್ನು ಬೆಳೆಸಿದವರು ಭೂಮಿಯಲ್ಲಿ ಬದುಕುವುದೆಂದ ರೇನು? ಮನೆಯಲ್ಲಿ ಸುಖವಾಗಿ ಕುಳಿತವರು ಮುಂದಿನ ಮಹಾಭಯವನ್ನ ರಿಯರು. ಸತ್ಪುರುಷರ ಪ್ರತಿಜ್ಞೆಯು ಬರೀ ಮಾತಿನಿಂದ ತಿಳಿಯಲಾ ರದು. ಅವರು ಕ್ಷತ್ರಧರ್ಮವನ್ನು ಹಿಡಿದು ಯುದ್ಧಕ್ಕೆ ಬಂದಾಗ ಅದರ ಫಲವು ತಿಳಿಯುವುದು. ಈ ದುರ್ಯೋಧನನು, ಕರ್ಣನು, ಶಕುನಿ, ನೀಚ ನಾದ ಈ ದುಶ್ಶಾಸನನು, ಈ ನಾಲ್ವರ ರಕ್ತವನ್ನೂ ಆಗ ಈ ಭೂಮಿಯು ಕುಡಿಯುವುದು. ನಮ್ಮಲ್ಲಿ ಅಸೂಯೆಯಿಂದ ಹರಟುತ್ತಿರುವ ಈ ಕರ್ಣ ನನ್ನು ನೀನು ನಿಯಮಿಸಿದಂತೆ ನಾನೇ ಯುದ್ಧದಲ್ಲಿ ಕೊಲ್ಲುವೆನು. ಅವನ ಅನುಚರರನ್ನೂ ಕೊಲ್ಲುವೆನು. ಇವನ ಮಾತಿಗಾಗಿ ಸಂತೋಷ ಪಡುತ್ತಿರುವ ಈ ದುರಾತ್ಮರ ಕಣ್ಣಮುಂದೆಯೇ ಇವರನ್ನು ಕೊಲ್ಲುವೆನು. ಅಲ್ಲದೆ ಬುದ್ಧಿಗೆಟ್ಟು ನನ್ನನ್ನು ವಿರೋಧಿಸುವವರೆಲ್ಲರೂ ನನ್ನ ಬಾಣಗಳಿಗೆ ಬಲಿಯಾಗಿ ಯಮಪುರಿಗೆ ಹೋಗುವರು. ಈ ನನ್ನ ಮಾತು ಅಸತ್ಯವಾ ದರೆ, ಹಿಮಾಲಯವಾದರೂ ತಾನಿದ್ದ ಕಡೆಯಿಂದ ಕದಲುವುದು! ಸೂ ರ್ಯನೂ ಕಾಂತಿಹೀನನಾಗುವನು! ಚಂದ್ರನಲ್ಲಿ ಶೈತ್ಯವೂ ನಷ್ಟವಾಗು ವುದು" ಎಂದನು. ಆಮೇಲೆ ಸಹದೇವನು ಮೇಲೆದ್ದು ನಿಂತು, ಕೋಪ ದಿಂದ ಕೆಂಪೇರಿದ ಕಣ್ಣುಗಳೊಡನೆ ನಿಟ್ಟುಸಿರುಬಿಡುತ್ತ, ತನ್ನ ತೋಳನ್ನು ಮೇಲಕ್ಕೆತ್ತಿ "ಎಲಾ ಶಕುನೀ! ಗಾಂಧಾರಕುಲದ ಕೀರ್ತಿಯನ್ನೇ ಕೆಡಿ ಸಿದ ಎಲ ನೀಚಾ! ನೀನು ಯಾವುದನ್ನು ದಾಳಗಳೆಂದು ತಿಳಿದಿರುವೆಯೋ ಅವು ದಾಳಗಳಲ್ಲ! ಅವು ಕ್ರೂರಬಾಣಗಳೆಂದು ತಿಳಿ! ಅಣ್ಣನಾದ ಭೀಮ ನು ಹೇಳಿದಂತೆಯೇ ನಿನ್ನ ವಿಷಯದಲ್ಲಿ ನನ್ನ ಕರ್ತವ್ಯವನ್ನು ನಾನು ಮಾಡುವೆನು. ನೀನು ಕ್ಷತ್ರಧರ್ಮವನ್ನು ಹಿಡಿದು ಯುದ್ಧಕ್ಕೆಮಾತ್ರ ಬಂದು ನಿಂತರೆ ಸಾಕು! ನಿನ್ನನ್ನು ನಿನ್ನ ಪರಿವಾರಗಳೊಡನೆ ತೀರಿಸಿಬಿಡು ವುದು ನಿಶ್ಚಯವು. ಈಗಲೇ ನೀನು ಮಾಡಬೇಕೆಂದಿರುವ ಕಾರ್ಯಗಳನ್ನೆಲ್ಲ ಮಾಡಿ ಮುಗಿಸಿಬಿಡು" ಎಂದನು. ಆಮೇಲೆ ಆ ಸಭೆಯನ್ನೆಲ್ಲ ತನ್ನ

ರೂಪದಿಂದ ಮೋಹಗೊಳಿಸತಕ್ಕ ನಕುಲನು ಮೇಲೆದ್ದು "ಎಲೈ ಸದಸ್ಯರೇ! ಕೇಳಿರಿ! ಈ ದ್ಯೂತಸಭೆಯಲ್ಲಿ ದ್ರೌಪದಿಯನ್ನು ಕುರಿತು ಈ ಕೌರವರು ಯಾವ ಕಠಿಣವಾಕ್ಯಗಳನ್ನಾಡಿದರೋ, ಅದಕ್ಕೆ ಫಲವನ್ನು ನಾನು ತೋರಿಸುವೆನು. ಕಾಲಪ್ರೇರಿತರಾಗಿ ಇಂತಹ ದುಷ್ಕಾರ್ಯವನ್ನು ನಡೆಸಿದ ಈ ಧೃತರಾಷ್ಟ್ರಪುತ್ರರನ್ನು ಬಹಳಮಟ್ಟಿಗೆ ನಾನೇ ಯಮಪುರಿಗೆ ಸೇರಿಸುವೆನು. ಶಕುನಿಯ ಪ್ರಿಯಪುತ್ರನಾದ ದುರಾತ್ಮನಾದ ಉಲೂಕನನ್ನೂ ನಾನೇ ಯುದ್ಧದಲ್ಲಿ ಕೊಲ್ಲುವೆನು. ಧರ್ಮರಾಜಾಜ್ಞೆಯಿಂದ ದ್ರೌಪದಿಯ ಮನಃಪ್ರೀತಿಗಾಗಿ ಶೀಘ್ರದಲ್ಲಿಯೇ ಈ ಭೂಮಿಯಲ್ಲಿ ಧೃತರಾಷ್ಟ್ರನ ಮಕ್ಕಳಾರೂ ಇಲ್ಲದಂತೆಯೇ ಮಾಡುವೆನು" ಎಂದನು. ಆಮೇಲೆ ದ್ರೌಪದಿಯು "ಎಲ ದುರಾತ್ಮಾ! ದುರ್ಯೋಧನಾ! ನೀನು ಯಾವ ತೊಡೆಯನ್ನು ತಟ್ಟಿ ನನಗೆ ತೋರಿಸಿದೆಯೋ, ಯಾವ ತೊಡೆಯನ್ನು ನೋಡಿ ಆನಂದಪಡುತ್ತಿರುವೆಯೋ, ಆ ತೊಡೆಯಲ್ಲಿಯೇ ನಿನಗೆ ಮರಣವು. ನನ್ನನ್ನು ಅವಮಾನಗೊಳಿಸಿದ ನಿನ್ನ ತಮ್ಮನ ರಕ್ತವನ್ನು ವೃಕೋದರನು ಕುಡಿಯುವುದು ನಿಶ್ಚಯವು. ಅರ್ಜುನನು ಪಾಪಿಷ್ಠನಾದ ಈ ಕರ್ಣನನ್ನೂ, ಸಹದೇವನು ಕಪಟಬುದ್ಧಿಯುಳ್ಳ ಈ ಶಕುನಿಯನ್ನೂ ಕೊಲ್ಲುವುದೂ ನಿಶ್ಚಯವೇ" ಎಂದಳು.

ಓ ಜನಮೇಜಯರಾಜಾ! ದ್ರೌಪದಿಯು ಈ ಮಾತನ್ನು ಹೇಳಿ ಮುಗಿಸುವಷ್ಟರಲ್ಲಿಯೇ, ಅವಳಮೇಲೆ ಆಕಾಶದಿಂದ ದೊಡ್ಡ ಪುಷ್ಪವೃಷ್ಟಿಯು ಕರೆಯಿತು. ಪಾಂಡವರ ಪ್ರತಿಜ್ಞೆಯನ್ನು ಕೇಳಿದಮೇಲೆ, ಸಭೆಯಲ್ಲಿದ್ದವರಾರೂ ಯಾವ ಮಾತನ್ನೂ ಆಡಲಿಲ್ಲ. ಅರ್ಜುನನ ಭಯದಿಂದ ಆ ಸಭೆಯು ನಿಶ್ಶಬ್ದವಾಗಿ ಕುಳಿತಿದ್ದಿತು.

ಇದು ತೊಂಭತ್ತೆರಡನೆಯ ಅಧ್ಯಾಯವು.



ಕೋಪಗೊಂಡ ಅರ್ಜುನನನ್ನು ಯುಧಿಷ್ಠಿರನು ತಡೆದುದು. ಧೃತರಾಷ್ಟ್ರನು ತನ್ನಿಂದ ವರವನ್ನು ಕೇಳುವಂತೆ ದ್ರೌಪದಿಗೆ ಹೇಳಲು, ದ್ರೌಪದಿಯು ತನ್ನ ಪತಿಗಳನ್ನು ದಾಸ್ಯದಿಂದ ಬಿಡಿಸಬೇಕೆಂದು ಕೇಳಿದುದು.

ಓ ಜನಮೇಜಯರಾಜಾ! ದ್ರೌಪದಿಯ ಮಾತನ್ನು ಕೇಳಿ ಅರ್ಜುನನಿಗೆ ಮಹತ್ತಾದ ಕೋಪವುಂಟಾಯಿತು. ಆ ಕೋಪದಿಂದ ಅವನು ಸಭೆಯವರನ್ನು ನೋಡಿ, "ಅಣ್ಣನಾದ ಯುಧಿಷ್ಠಿರನೇನೋ ನನ್ನನ್ನು ತಡೆಯಬಹುದು! ಇರಲಿ!" ಎಂದು ಹೇಳುತ್ತ, ಕೋಪದಿಂದ ತನ್ನ ಧನುಸ್ಸನ್ನು ಕೈಗೆತ್ತಿಕೊಂಡು, ಥಟ್ಟನೆ ತನ್ನ ಆಸನದಿಂದ ಮೇಲೆದ್ದು, ಶತ್ರುಗಳನ್ನೆಲ್ಲ ದುರದುರನೆ ನೋಡಿದನು. ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು, ಆಗಲೇ ಎಲ್ಲರನ್ನೂ ಕೊಂದುಬಿಡಬೇಕೆಂದು ಮೇಲೆದ್ದು ನಿಂತ ಅರ್ಜುನನ ಆಕೃತಿಯು, ಅಲ್ಲಿ ನೋಡುತ್ತಿದ್ದ ಎಲ್ಲಾ ರಾಜರಿಗೂ ಪ್ರಳಯಕಾಲದಲ್ಲಿ ಲೋಕಗಳನ್ನೆಲ್ಲ ದಹಿಸುವ ಕಾಲಾಗ್ನಿಯಂತೆಯೂ, ದಕ್ಷಯಾಗದಲ್ಲಿ ಪಶುಗಳನ್ನೆಲ್ಲ ಕೊಲ್ಲಲು ಕೋಪಗೊಂಡ ರುದ್ರನಂತೆಯೂ ಕಾಣಿಸಿತು. ಜನರೆಲ್ಲರೂ ಭಯದಿಂದ ತತ್ತಳಿಸುತಿದ್ದರು. ಭೂಮಿಯು ನಡುಗಿತು. ಅಂತರಿಕ್ಷಸಂಚಾರಿಗಳಾದ ಭೂತಗಳೆಲ್ಲವೂ ಅಂಜಿದುವು. ಸೂರ್ಯನ ಕಾಂತಿಯು ಕಂದಿತು. ಗಾಳಿಯು ನಿಂತುಹೋಯಿತು. ಚಂದ್ರನಕ್ಷತ್ರಗಳೂ, ಆಕಾಶವೂ, ದಿಕ್ಕುಗಳೂ ಕಾಂತಿಹೀನವಾದುವು. ಚರಾಚರಾತ್ಮಕವಾದ ಸಮಸ್ತಲೋಕವೂ ಕಲಗಿಹೋಯಿತು. ಮೇಲೆದ್ದ ಅರ್ಜುನನು ಆಗಲೇ ಉದಿಸಿದ ಸೂರ್ಯನಂತೆ ಆ ಸಭೆಯಲ್ಲಿ ಕಾಣಿಸಿದನು. ಕೋಪದಿಂದ ಕಾಲಾಂತಕನಂತೆ ಮೇಲೆದ್ದು ನಿಂತ ಅರ್ಜುನನನ್ನು ನೋಡಿ ಭೀಮನಿಗೆ ಅತ್ಯಂತ ಸಂತೋಷವಾಯಿತು. ಅವನೂ ಯುದ್ಧಕ್ಕಾಗಿಯೇ ನಿಶ್ಚಯಿಸಿಬಿಟ್ಟನು. ಹಾವುಗಳನ್ನು ಕೊಲ್ಲಬಂದ ಗರುಡನಂತೆ, ಶತ್ರುಗಳನ್ನೆಲ್ಲ ಸಂಹರಿಸುವ ಪ್ರಯತ್ನದಿಂದೆದ್ದು ನಿಂತ ಅರ್ಜುನನನ್ನು ಕಂಡು, ಪುರವಾಸಿಗಳೆಲ್ಲರೂ ಏನನರ್ಥವೋ ಎಂದು ತತ್ತಳಿಸುತಿದ್ದರು. ಅರ್ಜುನನು ಹೀಗೆ ಕೋಪದಿಂದ ಶತ್ರುಗಳಮೇಲೆ ಹಾರಿಬೀಳುವಷ್ಟರಲ್ಲಿ, ದಯಾಸ್ವಭಾವವುಳ್ಳ ಧರ್ಮರಾಜನು ಓಡಿಬಂದು, ಇಂದ್ರನು ಉಪೇಂದ್ರನನ್ನು ನಿವಾರಿಸುವಂತೆ ಅರ್ಜು

ನನನ್ನು ತಡೆದು ನಿಲ್ಲಿಸಿ, “ಅರ್ಜುನಾ! ಸಾಹಸವನ್ನು ಮಾಡಬೇಡ. ನಮ್ಮ ಕೀರ್ತಿಯನ್ನು ಕೆಡಿಸಿಕೊಳ್ಳಬೇಡ. ಪಾಪಿಗಳಾದ ಈ ಜೂದಾಳಿಗಳನ್ನು ನಾನು ದೃಷ್ಟಿಯಿಂದಲೇ ದಹಿಸಬಲ್ಲೆನು. ಆದರೆ ಅಸತ್ಯಕ್ಕೆ ಹೋಗಬಾರದೆಂದು ನನ್ನ ಕೋಪವು ನನ್ನಲ್ಲಿಯೇ ಅಡಗಿಹೋಗುವುದು. ಈಗ ಲೋಕಕ್ಷೇಮಕ್ಕಾಗಿ, ನಿನ್ನ ಕೋಪವನ್ನಡಗಿಸಿಡು” ಎಂದನು. ಈ ಮಾತನ್ನು ಕೇಳಿದೊಡನೆ ಅರ್ಜುನನ ಕೋಪವು ಅಡಗಿಹೋಯಿತು. ಅರ್ಜುನನ ಕೋಪಕ್ಕಾಗಿ ಭಯಪಟ್ಟಿದ್ದ ಜನವೆಲ್ಲ ಅವನ ತಾಳ್ಮೆಯನ್ನು ನೋಡಿ, ಸಂತೋಷಗೊಂಡಿತು. ಆದರೆ ಭೀಮನಿಗೆಮಾತ್ರ ಇದು ಸಹಿಸಲಿಲ್ಲ. ಅವನು ಮನಸ್ಸಿನಲ್ಲಿ ಕೊರಗುತ್ತಿದ್ದನು. ಸಭೆಯೆಲ್ಲವೂ ನಿಶ್ಶಬ್ದವಾಗಿದ್ದಿತು. ಇಷ್ಟರಲ್ಲಿಯೇ ಧೃತರಾಷ್ಟ್ರನ ಅರಮನೆಯ ಕಡೆಯಿಂದ ವಿಕಾರಧ್ವನಿಗಳು ಕೇಳಿಸಿದುವು. ಅವನ ಅಗ್ನಿಶಾಲೆಯಲ್ಲಿ ನರಿಯು ದೊಡ್ಡ ಧ್ವನಿಯಿಂದ ಊಳಿಟ್ಟಿತು. ಕತ್ತೆಗಳೂ, ಕ್ರೂರಪಕ್ಷಿಗಳೂ, ಭಯಂಕರವಾಗಿ ನರಿಗಳ ಕೂಗಿಗೆ ಪ್ರತಿಧ್ವನಿಯನ್ನು ಕೊಡುತ್ತಿದ್ದುವು. ಈ ಅಮಂಗಳಧ್ವನಿಯನ್ನು ಕೇಳಿ ತತ್ವಜ್ಞನಾದ ವಿದುರನೂ, ಗಾಂಧಾರಿಯೂ, ಭೀಷ್ಮ, ದ್ರೋಣ, ಕೃಪರೂ, “ಅಮಂಗಳವು ಶಾಂತವಾಗಲಿ! ಶಾಂತವಾಗಲಿ!” ಎಂದು ಹೇಳುತ್ತಿದ್ದರು. ಆಮೇಲೆ ಗಾಂಧಾರಿಯೂ, ವಿದುರನೂ ಈ ಉತ್ಪಾತಗಳನ್ನು ಧೃತರಾಷ್ಟ್ರನಿಗೆ ತಿಳಿಸಿದರು. ಆಗ ಧೃತರಾಷ್ಟ್ರನು ದುರ್ಯೋಧನನನ್ನು ನೋಡಿ “ಅಯ್ಯೋ ಪಾಪೀ! ಬುದ್ಧಿಗೆಟ್ಟವನೇ! ಅನ್ಯಾಯವಾಗಿ ಕುಲವನ್ನೇ ಕೆಡಿಸಿದೆಯಲ್ಲಾ! ಇಂತಹ ಕೌರವಸಭೆಯಲ್ಲಿ ಮತ್ತೊಬ್ಬರ ಹೆಂಗಸನ್ನು, ಅದರಲ್ಲಿಯೂ ಧರ್ಮಪತ್ನಿಯಾದ ದ್ರೌಪದಿಯನ್ನು ಕುರಿತು ಆಡಬಾರದ ಮಾತುಗಳನ್ನಾಡಿದೆಯಲ್ಲಾ! ನೀನು ಕೆಟ್ಟೆ” ಎಂದನು. ಹೀಗೆಂದು ಹೇಳಿ ಧೃತರಾಷ್ಟ್ರನು, ಆಗಲಾದರೂ ತನ್ನ ಮಕ್ಕಳಿಗೆ ಹಿತವನ್ನುಂಟುಮಾಡಬೇಕೆಂಬ ದೂರದೃಷ್ಟಿಯಿಂದ, ದ್ರೌಪದಿಯನ್ನು ಸಮಾಧಾನಪೂರ್ವಕವಾಗಿ ಕರೆದು “ಪಾಂಚಾಲೀ! ನೀನು ಮಹಾಪತಿವ್ರತೆ! ಧರ್ಮದಲ್ಲಿಯೇ ನೆಲೆಗೊಂಡವಳು. ನನ್ನ ಸೊಸೆಯರೆಲ್ಲರಿಗಿಂತಲೂ ನೀನು ಮೇಲಾದವಳು. ಈಗ ನಿನಗೆ ನನ್ನಿಂದ ಯಾವ ವರವು ಬೇಕಾದರೂ ಕೇಳು. ಕೊಡುವೆನು” ಎಂದನು. ಆಗ ದ್ರೌಪದಿಯು “ಮಹಾತ್ಮಾ! ನೀನು

ವರವನ್ನು ಕೊಡುವುದಾದರೆ ಕೇಳುವೆನು; ಧರ್ಮವನ್ನೇ ಹಿಡಿದು ನಡೆಯುತ್ತಿರುವ ಶ್ರೀಮಂತನಾದ ಯುಧಿಷ್ಠಿರನು ನಿಮಗೆ ದಾಸನಲ್ಲದಂತೆ ಮಾಡು. ನನ್ನ ಮಗನಾದ ಪ್ರತಿವಿಂಧ್ಯನು ಇನ್ನೂ ಬಾಲನು. ಒಳ್ಳೇ ಘನತೆಯುಳ್ಳವನು. ಅವನ ಸ್ವಭಾವವನ್ನು ತಿಳಿಯದ ಇತರ ಬಾಲರು ಅವನನ್ನು 'ದಾಸಪುತ್ರಾ!' ಎಂದು ಕರೆಯದಂತೆ ಮಾಡು. ಸಾಮಾನ್ಯ ಮನುಷ್ಯರಂತಲ್ಲದೆ ರಾಜಕುಮಾರನಾಗಿ ಹುಟ್ಟಿದ ಅವನು, ತನ್ನ ಗೌರವಕ್ಕೆ ವಿರುದ್ಧವಾಗಿ ತಾನು ದಾಸಪುತ್ರನೆಂಬುದನ್ನು ತಿಳಿದರೆ ಆಗಲೇ ಪ್ರಾಣವನ್ನು ಬಿಡುವನು" ಎಂದಳು. ಅದಕ್ಕಾ ಧೃತರಾಷ್ಟ್ರನು "ಭದ್ರೆ! ಹಾಗೆಯೇ ಆಗಲಿ! ನೀನು ಹೇಳಿದಂತೆ ಅವನ ದಾಸ್ಯವನ್ನು ಬಿಡಿಸುವೆನು. ಮತ್ತೊಂದು ವರವನ್ನು ಕೇಳು. ಒಂದು ವರವನ್ನು ಕೊಡುವುದರಲ್ಲಿ ನನಗೆ ತೃಪ್ತಿಯಿಲ್ಲ. ನನ್ನ ಮನಸ್ಸೇ ನಿನಗೆ ವರಗಳನ್ನು ಕೊಡಲು ಪ್ರೇರಿಸುತ್ತಿರುವುದು. ಆಗ ದ್ರೌಪದಿಯು "ಮಹಾರಾಜಾ! ಹಾಗಿದ್ದರೆ ಭೀಮಾರ್ಜುನ ನಕುಲಸಹದೇವರೂ ದಾಸರೆನಿಸಿಕೊಳ್ಳದೆ ತಮ್ಮ ರಥಚಾಪಗಳೊಡನೆ ಕೂಡಿ ತಮ್ಮಿಷ್ಟಕ್ಕೆ ಸ್ವತಂತ್ರರಾಗಿರಬೇಕೆಂದು ಬೇಡುವೆನು" ಎಂದಳು. ಆಗ ಧೃತರಾಷ್ಟ್ರನು "ಮಹಾಭಾಗೆ! ಅದೂ ಆಗಲಿ! ಇಷ್ಟರಲ್ಲಿಯೇ ಪೂರ್ಣವಾಗುವುದಿಲ್ಲ. ಮೂರನೆಯದೊಂದು ವರವನ್ನು ಕೇಳು; ಕೊಡುವೆನು" ಎಂದನು. ಅದಕ್ಕಾ ದ್ರೌಪದಿಯು "ಮಹಾತ್ಮಾ! ಅತ್ಯಾಸೆಯು ಧರ್ಮವನ್ನು ಕೆಡಿಸುವುದು. ನನಗೆ ಅದು ಸಮ್ಮತವಲ್ಲ. ನನಗೆ ಎರಡು ವರಗಳೇ ಸಾಕು. ಮೂರನೆಯ ವರವನ್ನು ನಾನು ಕೇಳಬಾರದು. ಏಕೆಂದರೆ, ವೈಶ್ಯನಿಗೆ ಒಂದೇ ವರವು; ಕ್ಷತ್ರಿಯಸ್ತ್ರೀಯರಿಗೆ ಎರಡು ವರಗಳು; ರಾಜನಿಗೆ ಮೂರು ವರಗಳು; ಬ್ರಾಹ್ಮಣನಿಗೆ ನೂರು ವರಗಳು! ಹೀಗೆ ಕೇಳತಕ್ಕ ವಿಧಿಯುಂಟು. ನನ್ನ ಪತಿಗಳು ತಮ್ಮ ಪಾಪಫಲದಿಂದ ಕಷ್ಟಕ್ಕೆ ಸಿಕ್ಕಿ, ಈಗಲೇ ಅದರ ಪಾರವನ್ನು ಮುಟ್ಟಿದರು. ಇನ್ನುಮೇಲೆ ಇವರು ತಮ್ಮ ಪುಣ್ಯಕರ್ಮದಿಂದ ಶುಭವನ್ನು ಹೊಂದುವರು" ಎಂದಳು.

ಇದು ತೊಂಭತ್ತುಮೂರನೆಯ ಅಧ್ಯಾಯವು.



ಕರ್ಣನು ಪರಿಹಾಸ್ಯಕ್ಕಾಗಿ ಹೇಳನಮಾಡಲು, ಭೀಮನು ಕೋಪದಿಂದೆದ್ದುದು. ಧರ್ಮರಾಜನು ಅವನನ್ನು ತಡೆದುದು.

ಇವನ್ನೆಲ್ಲ ನೋಡುತ್ತಿದ್ದ ಕರ್ಣನು ಪಾಂಡವರನ್ನು ಹಾಸ್ಯಮಾಡುವ ನೆವದಿಂದ “ ರೂಪವತಿಯರೆಂದು ಲೋಕದಲ್ಲಿ ಪ್ರಖ್ಯಾತಿಹೊಂದಿದ ಸ್ತ್ರೀಯರನೇಕರನ್ನು ನಾವು ಕೇಳಿಬಲ್ಲೆವು. ಅಂತಹ ಸ್ತ್ರೀಯರಲ್ಲಿ ಯಾವಳೊಬ್ಬಳಿಗೂ ಇಂತಹ ಕಾರ್ಯಪ್ರಸಕ್ತಿಯುಂಟಾದುದನ್ನು ನಾವು ಕೇಳಿದುದೇ ಇಲ್ಲ. ಆಹಾ! ಕೌರವರೆಲ್ಲ ಪಾಂಡವರಮೇಲೆ ಇಷ್ಟು ಕೋಪಾವೇಶದಲ್ಲಿರುವಾಗ, ಈ ದ್ರೌಪದಿಯಿಂದ ಪಾಂಡವರಿಗೆ ದಾಸ್ಯಮೋಚನವಾಯಿತು. ತೆಪ್ಪವೇನೂ ಇಲ್ಲದ ನಡುನೀರಿನಲ್ಲಿ ಮುಳುಗಿಹೋಗುತಿದ್ದ ಪಾಂಡವರಿಗೆ ಈ ಪಾಂಚಾಲಿಯು ದಡಕ್ಕೆ ತಂದು ಸೇರಿಸತಕ್ಕ ದೊಡ್ಡ ನಾವೆಯಾದಳು. ಪುರುಷರೆಂದು ಹೇಳಿಸಿಕೊಳ್ಳತಕ್ಕ ಪಾಂಡವರಿಗೆ ಒಬ್ಬ ಹೆಂಗಸು ದಿಕ್ಕಾಗಿ ಬಂದಳು ” ಎಂದನು ಈ ಮಾತನ್ನು ಕೇಳಿ ಭೀಮನು ಸಹಿಸಲಾರದೆ “ ಈ ಸೂತಾಧಮನು ಪಾಂಡವರಿಗೆ ಹೆಂಗಸೇ ಗತಿ ” ಯೆಂದು ಹೇಳಿದನು. ಧನಂಜಯಾ! ಸಂತಾನವೂ, ಪುಣ್ಯಕರ್ಮವೂ, ವಿದ್ಯೆಯೂ ಸೇರಿದ ಈ ಮೂರು ಜ್ಯೋತಿಗಳ ಸಮುದಾಯವೇ ಪುರುಷನೆನಿಸುವನೆಂದು ದೇವಲನ ನೀತಿವಾಕ್ಯವು. ಇದಕ್ಕಾಗಿಯೇ ಪ್ರಜೆಗಳು ಸೃಷ್ಟಿಸಲ್ಪಟ್ಟಿರುವರು. ಅಶುಚಿಯಾದ ಈ ದೇಹವು ಪ್ರಾಣದಿಂದಗಲಿದ ಮೇಲೆ, ಬಂಧುಗಳೆಲ್ಲರೂ ಇದನ್ನು ಹೊರಗೆ ಬಿಸುಡುವಾಗ, ಮೇಲೆ ಹೇಳಿದ ಮೂರೇ ಅವನಿಂದ ಉಪಯುಕ್ತವಸ್ತುಗಳಾಗಿ ನಿಲ್ಲುವುವು. ಈಗ ನಮ್ಮ ಪತ್ನಿಯನ್ನು ಪರಪುರುಷನು ಮುಟ್ಟಿದುದರಿಂದ, ನಮ್ಮ ಒಂದು ಜ್ಯೋತಿಯೇ ನಷ್ಟವಾದಂತಲ್ಲವೆ? ಪರಪುರುಷಸ್ಪರ್ಶದಿಂದ ದೂಷಿತಳಾದ ಪತ್ನಿಯಲ್ಲಿ ಹುಟ್ಟಿದುದು ಹೇಗೆತಾನೇ ಸಂತತಿಯೆನಿಸುವುದು ” ಎಂದನು. ಅದಕ್ಕಾ ಅರ್ಜುನನು “ ನೀಚನು ಪರುಷವಾಕ್ಯವನ್ನಾಡಿದರೂ, ಏನೂ ಬೊಗುಳದೆ ಸುಮ್ಮನಿದ್ದರೂ, ಅವರಿಗೆ ಪ್ರತ್ಯುತ್ತರವನ್ನು ಹೇಳದಿರುವುದೇ ಉತ್ತಮರ ಲಕ್ಷಣವು. ಪ್ರಾಜ್ಞರೆನಿಸಿ ಆತ್ಮಗೌರವವುಳ್ಳ ಸಜ್ಜನರು, ಪರರು ಮಾಡಿದ ಸತ್ಕಾರ್ಯಗಳನ್ನು ಮಾತ್ರ ಗಮನಿಸುವರೇ ಹೊರತು, ಇತರರು

ತಮ್ಮಲ್ಲಿ ವೈರವನ್ನೇ ಮಾಡಿದರೂ ಅದನ್ನು ಮನಸ್ಸಿಗೆ ತಂದುಕೊಳ್ಳುವುದಿಲ್ಲ. ಯಾವನು ಹೇಗೆ ಬೇಕಾದರೂ ಬೊಗುಳಲಿ! ಸುಮ್ಮನಿರು" ಎಂದನು. ಆಗ ಭೀಮನು ಧರ್ಮರಾಜನಕಡೆಗೆ ತಿರುಗಿ "ಅಣ್ಣಾ! ಇಲ್ಲಿ ಒಂದಾಗಿ ಕೂಡಿರುವ ಈ ವೈರಿಗಳನ್ನೆಲ್ಲ ಇಲ್ಲಿಯೇ ನಿರ್ಮೂಲವಾಗಿ ಹತಮಾಡಿಬಿಡಲೆ? ಅಥವಾ ಇಲ್ಲಿಂದ ಹೊರಗೆ ಹೋದಮೇಲೆ ಆ ಕಾರ್ಯವನ್ನು ನಡೆಸಲೆ? ಇಲ್ಲಿ ನಮಗೆ ಬರೀ ವಿವಾದಗಳಿಂದಲೂ, ಬಾಯಿಮಾತುಗಳಿಂದಲೂ ಫಲವಿಲ್ಲ. ಈಗಲೇ ಇವರನ್ನೆಲ್ಲ ತೀರಿಸಿಬಿಡುವೆನು. ಇನ್ನು ನೀನೇ ರಾಜ್ಯವನ್ನಾಳುತ್ತಿರು" ಎಂದು ಹೇಳಿ, ಮೃಗಗಳ ಗುಂಪನ್ನು ಸಿಂಹವು ಹೇಗೋ ಹಾಗೆ, ಆ ಕೌರವರನ್ನೆಲ್ಲ ದುರದುರನೆ ನೋಡಿದನು. ಧರ್ಮರಾಜನು ಎಷ್ಟೆಷ್ಟು ಸಮಾಧಾನವನ್ನು ಹೇಳಿದರೂ ಭೀಮನು ಒಳಗೊಳಗೆ ಸಂಕಟದಿಂದ ಕುದಿಯುತ್ತಲೇ ಇದ್ದನು. ಕರ್ಣಾದಿಗಳ ವಿಷಯದಲ್ಲಿ ಕೋಪದಿಂದುರಿಯುತಿದ್ದ ಭೀಮನ ಕಣ್ಣು, ಕಿವಿ, ಮೊದಲಾದ ಎಲ್ಲಾ ಇಂದ್ರಿಯದ್ವಾರಗಳಿಂದಲೂ ಹೊಗೆಯೊಡನೆ ಕೋಪಾಗ್ನಿಜ್ವಾಲೆಯು ಉರಿಯು ಹೊರಡುತ್ತಿತ್ತು. ಹುಬ್ಬುಗಂಟುಗಳಿಂದ ಭಯಂಕರವಾದ ಆ ಭೀಮನ ಮುಖವು ಕಾಲಮೃತ್ಯುವಿನ ಮುಖದಂತೆ ಕಾಣಿಸಿತು. ಆಗ ಧರ್ಮರಾಜನು ಭೀಮನನ್ನು ಕೈಹಿಡಿದು ತಡೆದು "ಭೀಮಾ! ಬೇಡ! ಬೇಡ! ಸುಮ್ಮನಿರು" ಎಂದನು. ಹೀಗೆ ಭೀಮನನ್ನು ಸಮಾಧಾನಪಡಿಸಿ ಧರ್ಮರಾಜನು ತನ್ನ ತಂದೆಯಾದ ಧೃತರಾಷ್ಟ್ರನಬಳಿಗೆ ಬಂದು ನಿಂತನು.

ಇದು ತೊಂಭತ್ತುನಾಲ್ಕನೆಯ ಅಧ್ಯಾಯವು.



(ಧೃತರಾಷ್ಟ್ರನ ಅನುಜ್ಞೆಯಿಂದ ಧರ್ಮರಾಜನು ತನ್ನ ಸಹೋದರರೊಡನೆ ಇಂದ್ರಪ್ರಸ್ಥಕ್ಕೆ ಹೊರಟುದು.)

ಯುಧಿಷ್ಠಿರನು ಧೃತರಾಷ್ಟ್ರನಲ್ಲಿಗೆ ಬಂದು "ಜನಕಾ! ಇನ್ನು ನಾವು ಮಾಡಬೇಕಾದುದೇನು? ನೀನು ನಮಗೆ ಪ್ರಭು. ಯಾವಾಗಲೂ ನಾವು ನಿನ್ನ ಆಜ್ಞಾಧೀನರಾಗಿಯೇ ಇರತಕ್ಕವರು. ಮುಂದಿನ ಕಾರ್ಯವನ್ನಾಜ್ಞಾಪಿಸು" ಎಂದನು. ಆಗ ಧೃತರಾಷ್ಟ್ರನು "ವತ್ಸಾ! ಅಜಾತ

ಶತ್ರೂ! ನಿನಗೆ ಶುಭವಾಗಲಿ. ನೀವು ನಿರಪಾಯವಾಗಿ ಹೋಗಿಬನ್ನಿರಿ. ನಿಮಗೆ ಕ್ಷೇಮವಾಗಲಿ! ನೀವು ಈಗ ಸೋತಿರುವ ಸಮಸ್ತಭಾಗ್ಯಗಳೊಡನೆ ಹೋಗಿ, ನಿಮ್ಮ ಭಾಗ್ಯವನ್ನನುಭವಿಸಿರಿ! ಧರ್ಮರಾಜಾ! ನಾನು ಹೇಳುವು ದೆಲ್ಲ ನಿಮ್ಮ ಹಿತಕ್ಕೂ, ಶ್ರೇಯಸ್ಸಿಗೂ ಸಾಧನವೆಂದೇ ತಿಳಿಯಿರಿ! ಯುಧಿ ಷ್ಠಿರಾ! ನೀನು ಧರ್ಮಗಳ ಸೂಕ್ಷ್ಮಗತಿಗಳೆಲ್ಲವನ್ನೂ ಚೆನ್ನಾಗಿ ಬಲ್ಲವನು. ವಿನೀತನು; ಪ್ರಾಜ್ಞನು; ವೃದ್ಧರಲ್ಲಿ ಸೇವೆಮಾಡಿದವನು; ಬುದ್ಧಿಯಿದ್ದಲ್ಲಿ ಶಾಂತಿಯಿರಬೇಕು. ಆದುದರಿಂದ ನೀನು ಶಾಂತಿಯನ್ನು ವಹಿಸು. ಮರ ವಿಲ್ಲದ ಕಡೆಯಲ್ಲಿ ಆಯುಧಗಳು ಬೀಳಲಾರವು. ಅವು ಮರವಿದ್ದಲ್ಲಿಯೇ ಬೀಳುವುವು. ಹಾಗೆಯೇ ತಾಳ್ಮೆಯಿದ್ದವನಲ್ಲಿಯೇ ಜನರು ವೈರವನ್ನು ತೋರಿಸುವರು. ಹಾಗಿದ್ದರೂ, ಆ ವೈರವನ್ನೂ, ದೋಷವನ್ನೂ ಮನಸ್ಸಿಗೆ ತಂದುಕೊಳ್ಳದೆ ಯಾರು ಇತರರನ್ನು ವಿರೋಧಿಸುವುದಿಲ್ಲವೋ ಅವರೇ ಉ ತ್ತಮ ಪುರುಷರು. ಸಜ್ಜನರು ಇತರರು ಮಾಡಿದ ಒಳ್ಳೆಯದನ್ನು ಗ್ರಹಿ ಸುವರೇ ಹೊರತು, ಕೆಡುಕನ್ನು ಮನಸ್ಸಿಗೆ ತಂದುಕೊಳ್ಳುವುದಿಲ್ಲ. ಮತ್ತೊ ಬ್ಬರಿಗೆ ಉಪಕಾರವನ್ನು ಮಾಡುವಾಗ, ಅವರಿಂದ ಪ್ರತ್ಯುಪಕಾರವನ್ನು ನಿರೀಕ್ಷಿಸುವುದಿಲ್ಲ. ನರಾಧಮರಾದರೋ ಮಾತಾಡುತ್ತಿರುವಾಗಲೇ ಇದ್ದ ಕ್ಕಿದ್ದಹಾಗೆ ಪರುಷವಾಕ್ಯವನ್ನಾರಂಭಿಸುವರು. ತಾವು ಮೊದಲು ದುಡು ಕಿಹೋಗದೆ, ಇತರರು ತಮ್ಮಮೇಲೆ ದುಡುಕಿ ಕಠಿಣವಾಕ್ಯವನ್ನಾಡಿದ ಮೇಲೆ ಅವರಿಗೆ ಪ್ರತಿಯಾಗಿ ಪರುಷವಾಕ್ಯಗಳನ್ನಾಡುವವರು ಮಧ್ಯ ಮರು. ಉತ್ತಮರು ತಮ್ಮ ವಿಷಯವಾಗಿ ಇತರರು ಕಠಿನವಾಕ್ಯಗಳನ್ನಾ ಡಿದರೂ, ಅವರು ಮಾತಾಡದೆ ಮನಸ್ಸಿನಲ್ಲಿಯೇ ಅಡಗಿಸಿಟ್ಟುಕೊಂಡಿ ದ್ದರೂ, ತಾವು ದುಡುಕಿ ಮಾತಾಡಲಾರರು. ಪ್ರಾಜ್ಞರೂ, ಆತ್ಮಸ್ವರೂಪ ವನ್ನು ತಿಳಿದವರೂ ಆದ ಸತ್ಪುರುಷರು, ತಮಗೆ ಪರರಿಂದಾದ ಉಪಕಾರಗ ಳನ್ನಲ್ಲದೆ ಅಪಕಾರಗಳನ್ನೆಣಿಸಲಾರರು. ಸಾಧುಗಳು ಆರ್ಯರ ನಡತೆಗ ಳನ್ನು ಮೀರುವವರಲ್ಲ. ಯಾವಾಗಲೂ ಪ್ರಿಯದರ್ಶನವುಳ್ಳವರು. ಅಂತಹ ಆರ್ಯರ ನಡತೆಯು ಈಗ ನಿನ್ನಲ್ಲಿ ಚೆನ್ನಾಗಿ ಕಂಡುಬಂದಿತು. ಅಪ್ಪಾ! ಯುಧಿಷ್ಠಿರಾ! ದುರ್ಯೋಧನನು ನಿಮ್ಮ ವಿಷಯದಲ್ಲಿ ಮಾಡಿದ ಕ್ರೌರ್ಯ ವನ್ನು ನೀನು ಮನಸ್ಸಿನಲ್ಲಿಡಬೇಡ! ನಿನ್ನ ತಾಯಿಯಾದ ಗಾಂಧಾರಿ

ಯನ್ನೂ, ವೃದ್ಧನೂ ಕಣ್ಣಿಲ್ಲದ ಕುರುಡನೂ ಆದ ನನ್ನನ್ನೂ ನೋಡು. ಕುಮಾರಾ! ಈಗ ನಾನು ನನ್ನ ಮಕ್ಕಳ ಮತ್ತು ಅವರ ಮಿತ್ರರ ಬಲಾಬಲವನ್ನು ಪರೀಕ್ಷಿಸಿ ನೋಡಬೇಕೆಂಬುದಕ್ಕಾಗಿಯೇ ನಾನೂ ಈ ದ್ಯೂತವನ್ನು ತಡೆಯದೆ ಉಪೇಕ್ಷಿಸಿದೆನು. ಈ ಕೌರವರೆಲ್ಲರಿಗೂ ನೀನು ನಿಯಾಮಕನಾಗಿ ಸಮಸ್ತ ಶಾಸ್ತ್ರಗಳನ್ನೂ ಬಲ್ಲ ಧೀಮಂತನಾದ ವಿದುರನು ಮಂತ್ರಿಯಾಗಿಯೂ ಇದ್ದರೆ, ನನ್ನ ಮಕ್ಕಳ ವಿಷಯದಲ್ಲಿ ನನ್ನ ಚಿಂತೆಗೆ ಕಾರಣವೇನಿದೆ? ಧರ್ಮಪುತ್ರಾ! ನಿನ್ನಲ್ಲಿ ಧರ್ಮವೂ, ಅರ್ಜುನನಲ್ಲಿ ಧೈರ್ಯವೂ, ಭೀಮನಲ್ಲಿ ಪರಾಕ್ರಮವೂ, ನಕುಲಸಹದೇವರಲ್ಲಿ ಶುದ್ಧವಾದ ಗುರುಶುಶ್ರೂಷೆಯೂ ನೆಲೆಗೊಂಡಿರುವುವು. ಇನ್ನು ನಿಮಗೆ ಯಾವ ಭಾಗದಲ್ಲಿ ಕೊರತೆಯುಂಟು? ಅಜಾತಶತ್ರೂ! ನಿನಗೆ ಮಂಗಳವಾಗಲಿ! ಇನ್ನು ಖಾಂಡವಪ್ರಸ್ಥಕ್ಕೆ ಹೋಗಿ ಸೇರು. ನಿನ್ನ ಜ್ಞಾತಿಗಳಾದ ಕೌರವರಲ್ಲಿ ನಿನಗೆ ಸಹೋದರಪ್ರೀತಿಯಿರಲಿ! ನಿನ್ನ ಮನಸ್ಸು ಧೈರ್ಯದಲ್ಲಿಯೇ ನೆಲೆಗೊಂಡಿರಲಿ" ಎಂದನು. ಆಮೇಲೆ ಧರ್ಮರಾಜನು ಸತ್ಪುರುಷರು ನಡೆಸಬೇಕಾದ ಮರ್ಯಾದೆಯನ್ನೆಲ್ಲ ನಡೆಸಿ, ತನ್ನ ಸಹೋದರರೊಡನೆ ಅಲ್ಲಿಂದ ಹೊರಟುಬಿಟ್ಟನು. ಆ ಐದುಮಂದಿ ಪಾಂಡವರೂ ದ್ರೌಪದಿಯೊಡನೆ ಸಂತೋಷದಿಂದ ರಥಾರೂಢರಾಗಿ ಹೊರಟು ಇಂದ್ರಪ್ರಸ್ಥವನ್ನು ಸೇರಿದರು.

ಇದು ತೊಂಭತ್ತೈದನೆಯ ಅಧ್ಯಾಯವು.

**ಇಲ್ಲಿಗೆ ದ್ಯೂತಪರ್ವವು ಮುಗಿದುದು.**

# ಅನುದ್ಯೂತಪರ್ವವು.

{ ತಿರುಗಿ ದುರ್ಯೋಧನನು ತಂದೆಯಬಳಿಗೆ ಬಂದು ದುರ್ಯೋಧನೆಮಾಡತೊಡಗಿದುದು. ಕಾರ್ತವೀರ್ಯಾರ್ಜುನನ **ಉಪಾಖ್ಯಾನವು.** }

ಜನಮೇಜಯನು ವೈಶಂಪಾಯನನನ್ನು ಕುರಿತು, "ಮುನೀಂದ್ರಾ! ಧೃತರಾಷ್ಟ್ರನು ಪಾಂಡವರಿಗೆ ಅವರ ಎಲ್ಲಾ ಧನರತ್ನಗಳೊಡನೆ ಇಂದ್ರಪ್ರ

ಸ್ಥಕ್ಕೆ ಹೋಗಲು ಅನುಮತಿಕೊಟ್ಟುದನ್ನು ತಿಳಿದು ಕೌರವರು ಸುಮ್ಮನಿದ್ದರೇ? ಆಗ ದುರ್ಯೋಧನಾದಿಗಳ ಮನಸ್ಸು ಹೇಗಿದ್ದಿತು?'' ಎಂದನು. ಅದಕ್ಕಾ ವೈಶಂಪಾಯನನು ''ರಾಜೇಂದ್ರಾ! ಕೇಳು! ಪಾಂಡವರು ತಿರುಗಿ ತಮ್ಮ ಸಕಲೈಶ್ವರ್ಯಗಳನ್ನೂ ಪಡೆದುಕೊಂಡುಹೋಗುಗುವುದಕ್ಕೆ ಧೃತರಾಷ್ಟ್ರನು ಅನುಮತಿಸಿದೊಡನೆ, ದುಶ್ಶಾಸನನು ತನ್ನ ದುರ್ಮಂತ್ರಿಗಳೊಡನೆ ಕುಳಿತಿದ್ದ ದುರ್ಯೋಧನನ ಬಳಿಗೆ ಓಡಿಬಂದು, ಬಹಳ ದುಃಖದೊಡನೆ ''ಅಣ್ಣಾ! ದುರ್ಯೋಧನಾ! ನಾವು ಕಷ್ಟಪಟ್ಟು ಸಂಪಾದಿಸಿದುದನ್ನೆಲ್ಲ ಆ ಮುದುಕನು ನಾಶಮಾಡುತ್ತಲೇ ಬರುವನು. ನಾವು ವಶಮಾಡಿಕೊಂಡಿದ್ದ ಧನವನ್ನೆಲ್ಲ ನಮ್ಮ ತಂದೆಯು ನಮ್ಮ ಶತ್ರುಗಳಿಗೇ ಒಪ್ಪಿಸಿ ಕಳುಹಿಸಿದನು. ಆದುದರಿಂದ, ಈಗಲೇ ನಾವೆಲ್ಲರೂ ಸೇರಿ ಯುದ್ಧವನ್ನು ಹೂಡಬೇಕು'' ಎಂದನು. ಆಗ ದುರ್ಯೋಧನ ಕರ್ಣ ಶಕುನಿಗಳು ಮೂವರೂ ಮಂತ್ರಾಲೋಚನೆ ಮಾಡಿಕೊಂಡು, ಆತುರದಿಂದ ಧೃತರಾಷ್ಟ್ರನ ಬಳಿಗೆ ಬಂದು, ಅವನನ್ನು ಮರುಳುಗೊಳಿಸುವ ಮಾತುಗಳಿಂದ ''ಜನಕಾ! ಬೃಹಸ್ಪತಿಯು ಇಂದ್ರನಿಗೆ ಹೇಳಿದ ಒಂದು ನೀತಿಯನ್ನು ನೀನು ಕೇಳಲಿಲ್ಲವೇನು? ಶತ್ರುಗಳನ್ನು ಸರ್ವೋಪಾಯಗಳಿಂದಲೂ ಕೊಂದೇಬಿಡಬೇಕು. ಬಿಟ್ಟರೆ ಆ ಶತ್ರುಗಳೇ ಪ್ರಬಲರಾಗಿ, ಯುದ್ಧದಿಂದಲೋ, ಇತರ ಬಲದಿಂದಲೋ ದೊಡ್ಡ ಅನರ್ಥವನ್ನುಂಟುಮಾಡುವರು'' ಎಂದು ಹೇಳಿರುವನು. ನಾವು ಪಾಂಡವರ ಧನವನ್ನೆಲ್ಲ ಅಪಹರಿಸಿ, ಅದರಿಂದ ಎಲ್ಲಾ ರಾಜರನ್ನೂ ಸಂತೋಷಗೊಳಿಸಿ ನಮ್ಮ ವಶಮಾಡಿಕೊಂಡು, ಆಮೇಲೆ ಪಾಂಡವರೊಡನೆ ಯುದ್ಧವನ್ನು ಹೂಡಬೇಕೆಂದು ನಿಶ್ಚಯಿಸಿದ್ದೆವು. ಹೀಗೆ ಮಾಡಿದ್ದರೆ ನಿನಗೆ ಕೆಟ್ಟುಹೋದುದೇನು? ತನ್ನನ್ನು ಕೊಲ್ಲುವುದಕ್ಕಾಗಿ ಕೋಪಗೊಂಡು ಬಂದ ವಿಷಸರ್ಪವನ್ನು ಯಾವ ಮೂಢನು ತಾನೇ ಪ್ರೇಮದಿಂದೆತ್ತಿ ಕೊರಲಿಗೆ ಸುತ್ತಿಕೊಂಡು, ತಲೆಗೂ ಏರಿಸಿಕೊಳ್ಳುವನು? ಈಗ ಪಾಂಡವರೂ ನಮ್ಮ ಭಾಗಕ್ಕೆ ಸರ್ಪದಂತೆಯೇ. ಈಗ ನಮ್ಮಮೇಲೆ ಕೋಪಗೊಂಡ ಪಾಂಡವರು ತಿರುಗಿ ನಮ್ಮ ಆಯುಧಗಳನ್ನೂ, ರಥಗಳನ್ನೂ ಪಡೆದುಕೊಂಡು ಹೋದಮೇಲೆ ನಮ್ಮನ್ನೆಲ್ಲ ನಿರ್ಮೂಲಮಾಡದೆಬಿಡುವರೆ? ಜೂಜಿನಲ್ಲಿ ಎಲ್ಲವನ್ನೂ ಕಳೆದುಕೊಂಡಿದ್ದ ಅರ್ಜುನನು ಈಗ ತನ್ನ

ಕವಚ ತೂಣೀರಗಳನ್ನೆಲ್ಲ ಸಾಗಿಸಿಕೊಂಡುಹೋಗಿರುವನು. ಅವನು ತನ್ನ ಗಾಂಡೀವಧನುಸ್ಸನ್ನು ಕೈಗೆತ್ತಿಕೊಂಡು ಆಗಾಗ ಕೋಪದಿಂದ ನಿಟ್ಟುಸಿರು ಬಿಡುತ್ತಲೇ ಹೋದನು. ಆ ವೃಕೋದರನೂ ಕೂಡ ತನ್ನ ದೊಡ್ಡ ಗದೆಯನ್ನೆತ್ತಿಕೊಂಡು, ತನ್ನ ರಥವನ್ನೇರಿ ಆತುರದಿಂದ ಹೋದನೆಂದು ಕೇಳಿದೆವು. ನಕುಲನೂ ಹಾಗೆಯೇ ತನ್ನ ಕತ್ತಿಯನ್ನೂ, ಗುರಾಣಿಯನ್ನೂ ಅರ್ಧಚಂದ್ರಬಾಣವನ್ನೂ ತೆಗೆದುಕೊಂಡು ಹೋದನಂತೆ. ಸಹದೇವನೂ, ಧರ್ಮರಾಜನೂ ಇಲ್ಲಿಂದ ಹೊರಡುವಾಗ ನಮ್ಮ ವಿಷಯವಾಗಿ, ತಮ್ಮ ಇಂಗಿತಗಳಿಂದ ಏನೋ ಸಂಜ್ಞೆಗಳನ್ನು ಮಾಡಿಕೊಂಡೇ ಹೋದರಂತೆ! ಅವರೆಲ್ಲರೂ ವಿವಿಧ ಶಸ್ತ್ರಾಸ್ತ್ರಗಳಿಂದಲೂ, ಇತರ ಸಾಮಗ್ರಿಗಳಿಂದಲೂ ತುಂಬಿದ ತಮ್ಮತಮ್ಮ ರಥಗಳನ್ನೇರಿ, ತಮಗೆ ವಿರೋಧಿಗಳಾದ ರಥಿಕರನ್ನೆಲ್ಲ ಕೊಲ್ಲುವುದಕ್ಕೆ ತಕ್ಕಷ್ಟು ಸೈನ್ಯಗಳನ್ನೂ ಕೂಡಿಸಿಡುವುದಕ್ಕಾಗಿ ಹೋಗಿರುವರು. ಅಪ್ಪಾ! ನಮ್ಮಿಂದ ಆಗಾಗ ಅವಮಾನಪಟ್ಟ ಆ ಪಾಂಡವರು, ಇನ್ನುಮೇಲೆ ನಮ್ಮನ್ನು ಮನ್ನಿಸಿ ಸುಮ್ಮನೆ ಬಿಡುವರೆಂಬುದು ಸುಳ್ಳು! ಅದರಲ್ಲಿಯೂ ನಾವು ಈಗ ದ್ರೌಪದಿಗೆ ಮಾಡಿದ ಭಂಗವನ್ನೂ ನೋಡಿ, ಆ ಐವರಲ್ಲಿ ಯಾವನುತಾನೇ ಸಹಿಸುವನು? ಕೋಪಗೊಂಡ ಅರ್ಜುನನನ್ನು ಯುದ್ಧದಲ್ಲಿ ಇದಿರಿಸಿ ನಿಲ್ಲುವ ಸಮರ್ಥನಾವನೆಂದು ನಮಗೆ ತೋರಲಿಲ್ಲ! ರಥಿಕೋತ್ತಮರಾದ ಭೀಷ್ಮ ದ್ರೋಣರು, ಕೃಪಾಶ್ವತ್ಥಾಮರು, ಕರ್ಣ ಶಕುನಿಗಳು, ವೃಷಸೇನನು, ವಿಕರ್ಣನು, ಜಯದ್ರಥನು, ಬಾಹ್ಲೀಕ ಸೋಮದತ್ತರು, ಭೂರಿ, ಭೂರಿಶ್ರವಸ್ಸು, ಶಲ್ಯನು, ಮತ್ತು ಶಕುನಿಯ ಮಕ್ಕಳು, ಇನ್ನೂ ಇತರ ಕೌರವರೆಲ್ಲರೂ ಒಂದಾಗಿ ಸೇರಿ ನಿಂತರೂ, ಅರ್ಜುನನಿಗೆ ಸಾಟಿಯಾಗಿ ಯುದ್ಧಮಾಡಲಾರರು. ಲೋಕದಲ್ಲಿ ಅವನಿಗೆ ಸಮಾನನಾದ ಧನುರ್ಧಾರಿಯೇ ಇಲ್ಲವೆನಬಹುದು. ಅರ್ಜುನನಿಗೆ ಎರಡೇ ಕೈಗಳಿದ್ದರೂ, ಅವನು ಸಾವಿರಕೈಗಳುಳ್ಳ ಕಾರ್ತವೀರ್ಯಾರ್ಜುನನಿಗೆ ಸಮಾನನೆನಿಸಿರುವನು" ಎಂದನು. ಆಗ ಧೃತರಾಷ್ಟ್ರನು "ಕುಮಾರಾ! ಅರ್ಜುನನಿಗೆ ಪರಾಕ್ರಮದಲ್ಲಿ ಕಾರ್ತವೀರ್ಯನ ಹೋಲಿಕೆಯನ್ನು ಹೇಳಿದೆಯಲ್ಲವೇ? ಆ ಕಾರ್ತವೀರ್ಯಾರ್ಜುನನೆಂಬವನಾರು? ವಿವರವಾಗಿ ತಿಳಿಸು" ಎಂದನು. ಅದಕ್ಕಾ ದುರ್ಯೋಧನನು

"ಜನಕಾ! ಆ ಮಹಾತ್ಮನ ಚರಿತ್ರವನ್ನು ಹೇಳುವೆನು ಕೇಳು. ಮೊದಲು ಪರಮಾತ್ಮನಿಂದ ಲೋಕಪಿತಾಮಹನಾದ ಚತುರ್ಮುಖಬ್ರಹ್ಮನು ಹುಟ್ಟಿದನು. ಚತುರ್ಮುಖನಿಂದ ಅತ್ರಿಯೂ, ಅವನಿಂದ ಚಂದ್ರನೂ, ಚಂದ್ರನಿಂದ ಬುಧನೂ, ಬುಧನಿಂದ ಪುರೂರವನೂ, ಪರಂಪರೆಯಾಗಿ ಜನಿಸಿದರು. ಪುರೂರವನ ಮಗನು ಆಯು. ಅವನ ಮಗನು ನಹುಷನು. ನಹುಷನ ಮಗನು ಯಯಾತಿ. ಅವನ ಮಗನು ಯದು. ಯದುವಿನಿಂದ ಸಹಸ್ರೌಜಸ್ಸು; ಅವನಿಂದ ಶುಕ್ರದಾಸನು; ಶುಕ್ರದಾಸನಿಂದ ಹೈಹಯನು; ಹುಟ್ಟಿದರು. ಹೈಹಯನ ಮಗನು ಧರ್ಮಸತ್ರನು. ಅವನ ಮಗನು ಕೃತಿ. ಕೃತಿಯ ಮಗನು ಕೃತವೀರ್ಯನು. ಆತನ ಮಗನೇ ಕಾರ್ತವೀರ್ಯಾರ್ಜುನನು. ಮಹಾತ್ಮನೂ, ಬಲಾಢ್ಯನೂ ಆದ ಆ ಕಾರ್ತವೀರ್ಯಾರ್ಜುನನು ಹತ್ತುಸಹಸ್ರವರ್ಷಗಳವರೆಗೆ ಉಗ್ರತಪಸ್ಸನ್ನು ಮಾಡಿದನೆಂದು ಕೇಳಿರುವೆನು. ಅವನು ಸಮುದ್ರದ್ವೀಪಗಳೊಡಗೂಡಿದ ಭೂಮಂಡಲವನ್ನೆಲ್ಲ ತನ್ನ ಶೌರ್ಯದಿಂದ ವಶಮಾಡಿಕೊಂಡಿದ್ದನು. ಅವನು ದುಷ್ಕರವಾದ ತಪಸ್ಸನ್ನು ಮಾಡಿ ಅತ್ರಿಪುತ್ರನಾದ ದತ್ತನಿಂದ ನಾಲ್ಕುವರಗಳನ್ನು ಪಡೆದನು. ತನಗೆ ಸಾವಿರ ತೋಳುಗಳಾಗಬೇಕೆಂಬುದು ಅವನ ಮೊದಲನೆಯ ವರವು. ತಾನು ಅಧರ್ಮದಲ್ಲಿ ಮನಸ್ಸಿಟ್ಟಾಗ ಸತ್ಪುರುಷರಿಂದ ನಿವಾರಿಸಲ್ಪಡಬೇಕೆಂದು ಅವವ ಎರಡನೆಯ ವರವು. ಕ್ಷತ್ರಿಯಧರ್ಮದಿಂದಲೇ ತಾನು ಭೂಮಿಯನ್ನು ಸಂಪಾದಿಸಿ, ಧರ್ಮದಿಂದಲೇ ಪ್ರಜೆಗಳನ್ನು ರಕ್ಷಿಸಬೇಕೆಂಬುದು ಅವನ ಮೂರನೆಯ ವರವು. ತಾನು ಅನೇಕ ಯುದ್ಧಗಳನ್ನು ಮಾಡಿ ಸಾವಿರಾರು ಶತ್ರುಗಳನ್ನು ಕೊಂದಮೇಲೆ ಕೊನೆಗೆ ಯುದ್ಧದಲ್ಲಿ ತನಗಿಂತಲೂ ಬಲಾಢ್ಯನಾದವನಿಂದಲೇ ತನಗೆ ಸಾವಾಗಬೇಕೆಂಬುದು ಅವನ ನಾಲ್ಕನೆಯ ವರವು. ಅವನು ಯುದ್ಧಮಾಡುವುದಕ್ಕೆ ನಿಂತೊಡನೆ, ಅವನಿಗೆ ಸಾವಿರತೋಳುಗಳೂ, ರಥವೂ, ಧ್ವಜವೂ ಒದಗುತ್ತಿದ್ದುವೆಂದೂ ನಾವು ಕೇಳಿರುವೆವು. ಅವನು ಸಪ್ತದ್ವೀಪಸಮೇತವಾದ ಪೃಥಿವಿಯನ್ನೆಲ್ಲ ಜಯಿಸಿ ಸಪ್ತದ್ವೀಪಾಧಿಪತಿಯೆನಿಸಿದ್ದನು. ಹಲವು ಯಾಗಗಳನ್ನು ನಡೆಸಿ ಅನೇಕ ಸಂವತ್ಸರಗಳವರೆಗೆ ಭೂಮಿಯನ್ನಾಳಿದನು. ಮಾಹಿಷ್ಮತಿಯು ಅವನ ರಾಜಧಾನಿ! ಅವನು ಒಮ್ಮೆ ತನ್ನ

ಪತ್ನಿಯೊಡನೆ ಜಲಕ್ರೀಡಾರ್ಥವಾಗಿ ನರ್ಮದಾನದಿಗೆ ಹೋದನು. ಅವನು ಜಲಕ್ರೀಡೆಯನ್ನಾಡುತ್ತಿರುವಾಗಲೇ ಲಂಕಾಧಿಪತಿಯಾದ ರಾವಣನೂ ಅನೇಕರಾಕ್ಷಸಪರಿವಾರಗಳೊಡನೆ ಅಲ್ಲಿಗೆ ಬಂದನು. ರಾವಣನೋ ಮಹಾಬಲಾಢ್ಯನಾದ ರಾಕ್ಷಸನು! ಬಹಳ ಮುಂಗೋಪವುಳ್ಳವನು. ವರಬಲದಿಂದ ಕೊಬ್ಬಿದ ಆ ರಾವಣನು, ನರ್ಮದೆಯಲ್ಲಿದ್ದ ಕಾರ್ತವೀರ್ಯನನ್ನು ಕಂಡು ಮಹಾಕೋಪದಿಂದ ಅವನನ್ನು ನಿರಾಕರಿಸಿ ಮಾತಾಡಿದನು. ಒಡನೆಯೇ ರಾವಣಾರ್ಜುನರಿಬ್ಬರಿಗೂ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ಕಾರ್ತವೀರ್ಯಾರ್ಜುನನು ರಾವಣನನ್ನು ಜಯಿಸಿ, ತನ್ನ ಬಿಲ್ಲಿನ ನಾಣಿನಿಂದಲೇ ಅವನನ್ನು ಬಿಗಿದು ಕಟ್ಟಿ, ತನ್ನ ನಗರಕ್ಕೆ ಸೆರೆಹಿಡಿದುಕೊಂಡು ಹೋದನು. ರಾವಣನ ತಂದೆಯಾದ ಪುಲಸ್ತ್ಯಮುನಿಯು, ರಾವಣನು ಬದ್ಧನಾಗಿರುವುದನ್ನು ಕೇಳಿ ಮಾಹಿಷ್ಮತಿಗೆ ಬಂದು, ಕಾರ್ತವೀರ್ಯನಿಗೆ ಹೇಳಿ ರಾವಣನ ಬಂಧವನ್ನು ಬಿಡಿಸಿದನು. ಆಮೇಲೆ ಮತ್ತೊಮ್ಮೆ ಕಾರ್ತವೀರ್ಯನು ಸಮುದ್ರತೀರಕ್ಕೆ ವಿನೋದಾರ್ಥವಾಗಿ ಹೋದನು. ಅಲ್ಲಿ ತನ್ನ ಬಲದ ಕೊಬ್ಬಿನಿಂದ ಸಮುದ್ರರಾಜನಮೇಲೆ ತನ್ನ ತೀಕ್ಷ್ಣಬಾಣಗಳನ್ನು ಬಿಡತೊಡಗಿದನು. ಆಗ ಸಮುದ್ರನೇ ಪ್ರತ್ಯಕ್ಷವಾಗಿ ಬಂದು ಆ ಅರ್ಜುನನಿಗೆ ನಮಸ್ಕರಿಸಿ, "ರಾಜೇಂದ್ರಾ! ನೀನು ಬಾಣಗಳನ್ನು ಬಿಡಬೇಡ! ನಿನಗೆ ನನ್ನಿಂದಾಗಬೇಕಾದ ಕಾರ್ಯವೇನು ಹೇಳು! ನಡೆಸಿಕೊಡುವೆನು. ನಿನ್ನ ಬಾಣದಿಂದ ನನ್ನಲ್ಲಿ ಸೇರಿಕೊಂಡಿರುವ ಪ್ರಾಣಿಗಳೆಲ್ಲವೂ ಸಾಯುತ್ತಿರುವುವು. ಅವುಗಳಿಗೆ ನೀನು ಅಭಯವನ್ನು ಕೊಡಬೇಕು" ಎಂದನು. ಆಗ ಕಾರ್ತವೀರ್ಯನು "ಓ ಸಮುದ್ರರಾಜಾ! ನೀನು ನನ್ನೊಡನೆ ಯುದ್ಧಕ್ಕೆ ಬಂದು ನಿಲ್ಲಬೇಕು. ಇಲ್ಲವಾದರೆ ನಿನ್ನನ್ನು ಬಾಧಿಸುವುದೇ ನಿಶ್ಚಯವು. ಬೇಗನೆ ಬಂದು ನಿಲ್ಲು!" ಎಂದನು.

ಆಗ ಸಮುದ್ರನು "ಓ ವೀರಾಗ್ರಣೀ! ಲೋಕದಲ್ಲಿ ನಿನ್ನೊಡನೆ ಯುದ್ಧಮಾಡಬಲ್ಲ ವೀರಾಗ್ರೇಸರರು ಎಷ್ಟೋ ಮಂದಿಯುಂಟು. ಅವರಲ್ಲಿ ಯಾವನಾದರೂ ಒಬ್ಬನೊಡನೆ ಯುದ್ಧಮಾಡಬಾರದೆ?" ಎಂದನು. ಅದಕ್ಕಾ ಅರ್ಜುನನು "ನನಗೆ ಸಮಾನವಾಗಿ ನಿಂತು ಆಯುಧವನ್ನು ಹಿಡಿದು

ಯುದ್ಧಮಾಡತಕ್ಕವರಾರಾದರೂ ಇದ್ದರೆ ಅವರಲ್ಲಿ ಒಬ್ಬನ ಹೆಸರನ್ನು ಹೇಳು! ಅವನೊಡನೆ ನಾನು ಯುದ್ಧವನ್ನು ಮಾಡಲೇಬೇಕು" ಎನಲು, ಸಮುದ್ರನು "ರಾಜಾ! ಜಮದಗ್ನಿಯೆಂಬ ಮಹರ್ಷಿಯನ್ನು ನೀನೂ ಕೇಳಿರಬಹುದು. ಅವನ ಮಗನು ನಿನ್ನೊಡನೆ ಬೇಕಾದಹಾಗೆ ಯುದ್ಧ ಮಾಡಬಲ್ಲನು" ಎಂದನು. ಮೊದಲೇ ಇದೇ ವಿಚಾರವಾಗಿ ನಾರದನಿಂದ ಕೇಳಿ ಕೋಪಗೊಂಡಿದ್ದ ಅರ್ಜುನನಿಗೆ, ಈಗ ಸಮುದ್ರರಾಜನ ಮಾತನ್ನು ಕೇಳಿದಮೇಲೆ, ಆ ಕೋಪವು ಇಮ್ಮಡಿಯಾಯಿತು. ಒಡನೆಯೇ ಪರಶುರಾಮಾಶ್ರಮಕ್ಕೆ ಹೊರಟು ಬಂದು, ಅಲ್ಲಿ ನಿರ್ಭಯವಾಗಿ ತನ್ನ ಇಷ್ಟಬಂದಂತೆ ಅಕ್ರಮಗಳನ್ನು ಮಾಡತೊಡಗಿದನು. ಅಲ್ಲಿದ್ದ ಪರಶುರಾಮನಿಗೂ ಬಹಳ ತೊಂದರೆಯನ್ನು ಕೊಟ್ಟನು. ಇದನ್ನೆಲ್ಲ ನೋಡಿ ಮಹಾತೇಜಸ್ವಿಯಾದ ಪರಶುರಾಮನು ಕೋಪಾಗ್ನಿಯಿಂದ ಜ್ವಲಿಸುತ್ತ, ಸೂರ್ಯನು ತನ್ನ ತೇಜಸ್ಸಿನಿಂದ ತಪಿಸುವಂತೆ ಕಾರ್ತವೀರ್ಯನ ಸೈನ್ಯಗಳನ್ನೆಲ್ಲ ತನ್ನ ವೀರ್ಯದಿಂದ ದಹಿಸುತ್ತ ಹೊರಟುಬಂದನು. ರಾಮಾರ್ಜುನರಿಬ್ಬರೂ ವೃತ್ರ ವಾಸವರಂತೆ ಘೋರಯುದ್ಧವನ್ನು ಮಾಡಿದರು. ಕೊನೆಗೆ ಪರಶುರಾಮನು ತನ್ನ ಆಯುಧವಾದ ಕೊಡಲಿಯಿಂದ ಮರಗಳ ಕೊಂಬೆಗಳನ್ನು ಕಡಿದು ಕೆಡಹುವಂತೆ, ಕಾರ್ತವೀರ್ಯನ ಸಾವಿರ ತೋಳುಗಳನ್ನೂ ಕತ್ತರಿಸಿಬಿಟ್ಟನು. ಕಾರ್ತವೀರ್ಯನು ಹತನಾಗಿ ಬಿದ್ದುದನ್ನು ನೋಡಿ, ಅವನ ಕಡೆಯ ಬಂಧುಮಿತ್ರರೆಲ್ಲರೂ ಕತ್ತಿಗಳನ್ನೂ, ಶಕ್ತ್ಯಾಯುಧಗಳನ್ನೂ ಹಿಡಿದು ಗುಂಪಾಗಿ ಬಂದು ರಾಮನನ್ನು ಇದಿರಿಸಿದರು. ರಾಮನು ರಥಾರೂಢನಾಗಿ ಬಿಲ್ಲನ್ನು ಹಿಡಿದು ದಿವ್ಯಾಸ್ತ್ರಗಳಿಂದ ಆ ರಾಜರನ್ನೆಲ್ಲ ನಿಗ್ರಹಿಸಿಬಿಟ್ಟನು. ಆಗ ಅನೇಕರಾಜರು ಸಿಹ್ಮವನ್ನು ಕಂಡ ಮೃಗಗಳಂತೆ ರಾಮನಿಗೆ ಹೆದರಿ ಓಡಿಹೋಗಿ, ಪರ್ವತಗುಹೆಗಳಲ್ಲಿ ಅವಿತುಕೊಂಡರು. ಅವರು ಭಯದಿಂದ ಅಲ್ಲಲ್ಲಿಯೇ ಅಡಗಿ ಕರ್ಮಭ್ರಷ್ಟರಾದರು. ಅವರಿಗೆ ಬ್ರಾಹ್ಮಣರನ್ನು ಕಂಡು ಮಾತಾಡುವುದಕ್ಕಾಗಲಿ, ಅವರ ಮೂಲಕವಾಗಿ ತಮ್ಮ ವಿಹಿತಕರ್ಮಗಳನ್ನು ಮಾಡಿಸುವುದಕ್ಕಾಗಲಿ, ಅವಕಾಶವಿಲ್ಲದುದರಿಂದ, ವೃಷಲ (ಶೂದ್ರ) ರೆನಿಸಿಕೊಂಡರು. ಅವರಿಂದಲೇ ಮೊದಲು ಕ್ಷತ್ರಿಯಧರ್ಮದಲ್ಲಿದ್ದ ದ್ರವಿಡರು, ಕಾಚರು, ಪುಂಡ್ರರು, ಶಬರರು, ಮೊದಲಾದ

ವರೆಲ್ಲ ಧರ್ಮಭ್ರಷ್ಟರಾಗಿ ವೃಷಲರೆಂದು ಕರೆಯಲ್ಪಡುವರು. ಆಗ ಅನೇಕ ರಾಜರು ಪರಶುರಾಮನಿಂದ ಹತರಾಗಿ ಕ್ಷತ್ರಿಯಕುಲವು ಬಹಳ ಮಟ್ಟಿಗೆ ನಷ್ಟವಾದಮೇಲೆ, ಆ ಕ್ಷತ್ರಿಯಸ್ತ್ರೀಯರಲ್ಲಿ ಬ್ರಾಹ್ಮಣರಿಂದ ಕೆಲವು ರಾಜಸಂತತಿಗಳು ಹುಟ್ಟಿದುವು. ಪರಶುರಾಮನು ಅವರಲ್ಲಿಯೂ ಅನೇಕರನ್ನು ಕೊಂದನು. ಹೀಗೆ ಕ್ಷತ್ರಿಯಕುಲವು ತಲೆಯೆತ್ತದಹಾಗೆ ರಾಮನು ಇಪ್ಪತ್ತೊಂದಾವರ್ತಿ ಕೊಲ್ಲುತ್ತ ಬಂದಮೇಲೆ, ಕೊನೆಗೆ ಅವನಿಗೆ ಕೇಳಿಸುವಂತೆ ಒಂದು ಅಶರೀರವಾಣಿಯು, ಬಹಳ ಮೃದುಮದುರವಾಕ್ಯದಿಂದ "ರಾಮಾ! ರಾಮಾ! ಈ ಕಾರ್ಯವನ್ನು ಬಿಡು. ಹೀಗೆ ಬಾರಿ ಬಾರಿಗೂ ಕ್ಷತ್ರಿಯರನ್ನು ಕೊಲ್ಲುತ್ತ ಬರುವುದರಿಂದ ನಿನಗೇನೂ ಫಲವಿಲ್ಲ" ಎಂದಿತು. ಋಚೀಕನೇ ಮೊದಲಾದ ಮಹರ್ಷಿಗಳೂ "ರಾಮಾ! ರಾಮಾ! ಬೇಡ! ಈ ಕೊಲೆಗೆಲಸದಿಂದ ನಿವೃತ್ತನಾಗು" ಎಂದು ಹೇಳಿ ನಿವಾರಿಸಿದರು. ಆದರೇನು? ರಾಮನಿಗೆ ತನ್ನ ತಂದೆಯ ವಧದಿಂದ ಕ್ಷತ್ರಿಯರ ಮೇಲಿದ್ದ ಕೋಪವು ಶಾಂತವಾಗಲೇ ಇಲ್ಲ. ಆ ಋಷಿಗಳ ಮಾತನ್ನೂ ಲಕ್ಷ್ಯಮಾಡದೆ, ಅವನು ಅವರನ್ನು ಕುರಿತು "ನನ್ನನ್ನು ತಡೆಯುವುದಕ್ಕೆ ನೀವಲ್ಲ!" ಎಂದು ಹೇಳಿ ನಿರಾಕರಿಸಿದನು. ಆಗ ಆ ಪರಶುರಾಮನ ಪಿತೃಗಳೇ ಬಂದು ಕಾಣಿಸಿಕೊಂಡು "ರಾಮಾ! ಕ್ಷತ್ರಿಯರನ್ನು ಕೊಲ್ಲಬೇಡ! ಅದರಲ್ಲಿಯೂ ನೀನು ಬ್ರಾಹ್ಮಣನಾಗಿದ್ದು ಇಂತಹ ಕೊಲೆಗೆಲಸವನ್ನು ಮಾಡಬಾರದು" ಎಂದರು. ತನ್ನ ಪಿತೃಗಳ ಮಾತನ್ನು ಕೇಳಿದಮೇಲೆ ಪರಶುರಾಮನ ಕೋಪವು ಶಾಂತವಾಯಿತು. ಅದುಮೊದಲು ಅವನು ಆ ಕ್ರೂರಕಾರ್ಯವನ್ನು ಬಿಟ್ಟು ಸಾವಿರಾರು ಅಶ್ವಮೇಧಗಳು, ನರಮೇಧಗಳು ಮುಂತಾದ ಯಾಗಗಳನ್ನು ನಡೆಸಿ, ತನ್ನ ಸ್ವಾಧೀನವಾಗಿದ್ದ ಸಮುದ್ರಾವೃತವಾದ ಸಮಸ್ತಭೂಮಿಯನ್ನೂ ಕಾಶ್ಯಪನೆಂಬ ಬ್ರಾಹ್ಮಣನಿಗೆ ದಾನಮಾಡಿಬಿಟ್ಟನು. ಜನಕಾ! ಅರ್ಜುನನು ಯುದ್ಧದಲ್ಲಿ ಆ ಪರಶುರಾಮನಿಗೆ ಸಮಾನನು. ಆ ಕಾರ್ತವೀರ್ಯನಿಗೂ ಸಮಾನನು. ಇದರಲ್ಲಿ ಸಂದೇಹವೇ ಇಲ್ಲ. ಯುದ್ಧದಲ್ಲಿ ಆ ಅರ್ಜುನನನ್ನು ಸೋಲಿಸುವುದು ಎಂತವರಿಗೂ ಸಾಧ್ಯವೇ ಅಲ್ಲ" ಎಂದನು.

ಇದು ತೊಂಭತ್ತಾರನೆಯ ಅಧ್ಯಾಯವು.

{ ದುರ್ಯೋಧನನ ದುರ್ಬೋಧನೆಯಿಂದ ಧೃತರಾಷ್ಟ್ರನು ತಿರು
ಗಿ ಪಾಂಡವರನ್ನು ದ್ಯೂತಕ್ಕಾಗಿ ಕರೆದುದು. }

ಜನಕಾ! ನಮ್ಮಿಂದ ಯೋಚಿಸುವುದಕ್ಕೂ ಸಾಧ್ಯವಲ್ಲದ ಅರ್ಜುನನ ದುಷ್ಕರಸಾಹಸಗಳನ್ನು ಹೇಳುವೆನು ಕೇಳು! ದ್ರುಪದನ ಮಗಳ ಸ್ವಯಂವರಕಾಲದಲ್ಲಿ ರಾಜರೆಲ್ಲರೂ ಸೇರಿದ್ದಾಗ ಅರ್ಜುನನು ಮತ್ಸ್ಯಯಂತ್ರವನ್ನು ಭೇಧಿಸಿ ನೀರಿನಲ್ಲಿ ಕೆಡಹಿದನು. ಅಲ್ಲಿ ನೆರೆದಿದ್ದ ರಾಜಸಮೂಹದಲ್ಲಿ ಯಾರಿಂದಲೂ ಬಗ್ಗಿಸುವುದಕ್ಕಾಗದ ಮಹಾಧನುಸ್ಸನ್ನು ಎಲ್ಲಾ ಕ್ಷತ್ರಿಯರೂ ಕಣ್ಣಾರೆ ನೋಡುತಿದ್ದ ಹಾಗೆಯೇ ಸುಲಭವಾಗಿ ಬಗ್ಗಿಸಿ ನಾಣೇರಿಸಿದನು. ಒಡನೆಯೇ ದ್ರೌಪದಿಯು ಸ್ವರ್ಣಮಾಲಿಕೆಯನ್ನು ತಂದು ಅವನ ಕಂಠಕ್ಕೆ ಹಾಕಿ ಅಲಂಕರಿಸಿದಳು. ಇದನ್ನು ನೋಡಿ ಎಲ್ಲಾ ರಾಜರೂ ಕೋಪಗೊಂಡು, ತಮ್ಮ ಸರ್ವಾಯುಧಗಳನ್ನೂ ಹಿಡಿದು ಕರ್ಣನನ್ನು ಮುಂದಿಟ್ಟುಕೊಂಡು ಅರ್ಜುನನನ್ನು ಇದಿರಿಸಿದರು. ಆದರೇನು? ಮಹಾಬಲಾಢ್ಯನಾದ ಪಾರ್ಥನು ತನ್ನ ತೀಕ್ಷ್ಣಬಾಣಗಳಿಂದ ಅವರನ್ನೆಲ್ಲ ತಡೆದು ಜಯಶೀಲನಾದನು. ಕರ್ಣಾದಿಗಳೆಲ್ಲರೂ ಸೋತರು. ದ್ರೌಪದಿಯು ಅವನ ಕೈಸೇರಿದಳು. ಪೂರ್ವದಲ್ಲಿ ಭೀಷ್ಮನು ಅಂಬೆಯನ್ನು ಹೇಗೋ ಹಾಗೆ ಅರ್ಜುನನು ತನ್ನ ವೀರ್ಯಬಲದಿಂದ ಎಲ್ಲಾ ಕ್ಷತ್ರಿಯರನ್ನೂ ಜಯಿಸಿ, ಆ ರಾಜಕನ್ಯೆಯನ್ನು ಸಾಧಿಸಿತಂದು ವಿವಾಹವಾದನು. ಮತ್ತೊಮ್ಮೆ ಅರ್ಜುನನು ತೀರ್ಥಯಾತ್ರೆಗಾಗಿ ಹೋಗಿದ್ದಾಗ, ಉಲೂಪಿಯೆಂಬ ನಾಗಕನ್ಯೆಯನ್ನು ವಿವಾಹವಾದನು. ನಾಗರಲ್ಲಿ ಎಷ್ಟೋಮಂದಿ ಉತ್ತಮವರರಿದ್ದಾಗಲೂ, ಉಲೂಪಿಯು ತಾನಾಗಿಯೇ ಪ್ರಾರ್ಥಿಸಿ ಅವನನ್ನು ವರಿಸಿದಳು. ಆಮೇಲೆ ಅರ್ಜುನನು ಗೋದಾವರಿ, ಕೃಷ್ಣೆ, ಕಾವೇರಿ ಮುಂತಾದ ಪುಣ್ಯನದಿಗಳಲ್ಲಿ ಸ್ನಾನಮಾಡಿ ಪಾಂಡ್ಯದೇಶಕ್ಕೆ ಬಂದು, ಆ ರಾಜನ ಮಗಳನ್ನು ವಿವಾಹವಾದನು. ಅಲ್ಲಿಂದ ದಕ್ಷಿಣದಿಕ್ಕಿಗೆ ತಿರುಗಿ, ಸಮುದ್ರತೀರದಲ್ಲಿ ಅಪ್ಸರಸಿಯರಿಗೆ ನಿವಾಸವಾದ ಕುಮಾರತೀರ್ಥವನ್ನು ಸೇರಿ ಅಲ್ಲಿಂದ ಕನ್ಯಾತೀರ್ಥಕ್ಕೆ ಬಂದನು. ಅಲ್ಲಿ ಶಾಪದಿಂದ ಮೊಸಳೆಗಳಾಗಿದ್ದ ಐದುಮಂದಿ ಕನ್ಯೆಯರನ್ನು ತನ್ನ ಶೌರ್ಯದಿಂದ ಕರೆಗೇರಿಸಿ, ಅವರನ್ನು ಶಾಪದಿಂದ ಬಿಡುಗಡೆ ಹೊಂದಿಸಿದನು. ಅಲ್ಲಿಂದಾಚೆಗೆ ಅವನು

ದ್ವಾರಕೆಗೆ ಬಂದು, ಅಲ್ಲಿ ಕೃಷ್ಣನ ಆಜ್ಞೆಯಿಂದ ಅವನ ತಂಗಿಯಾದ ಸುಭದ್ರೆಯನ್ನು ತನ್ನ ರಥದಮೇಲೆ ಏರಿಸಿಕೊಂಡು ತನ್ನ ನಗರಕ್ಕೆ ಹೊರಟನು. ಇಷ್ಟರಲ್ಲಿಯೇ ಬಲರಾಮಾಜ್ಞೆಯಿಂದ ಪ್ರದ್ಯುಮ್ನ, ಕೃತವರ್ಮ, ಗದ, ಸಾರಣ, ಸಾತ್ಯಕಿ, ಆಹುಕ, ಸಾಂಬ, ಚಾರುಧೇಷ್ಣ, ವಿಶೂರಥರೇ ಮೊದಲಾದ ಅನೇಕಯಾದವರು, ಸುಭದ್ರೆಯನ್ನು ಅರ್ಜುನನು ಕದ್ದುಕೊಂಡು ಹೋದುದಾಗಿ ತಿಳಿದು, ಆನೆ, ಕುದುರೆ, ರಥಗಳು ಮೊದಲಾದ ಸಕಲ ಸೈನ್ಯಸನ್ನಾಹಗಳೊಡನೆ ಅವನನ್ನು ಬೆನ್ನಟ್ಟಿದರು. ಸುಭದ್ರೆಯೊಡನೆ ಅಸಾಹಾಯನಾಗಿ ಪ್ರಯಾಣಮಾಡುತಿದ್ದ ಅರ್ಜುನನನ್ನು ಅವರು ಒಂದು ವನಮಧ್ಯದಲ್ಲಿ ಬಂದು ತಡೆದು, ಎಲ್ಲರೂ ಒಂದಾಗಿ ಅವನನ್ನು ಮುತ್ತಿಕೊಂಡು ಯುದ್ಧವನ್ನಾರಂಭಿಸಿದರು. ಆಗ ಅರ್ಜುನನು ಏಕಾಕಿಯಾಗಿದ್ದರೂ, ತಾನೊಬ್ಬನೇ ಅವರೆಲ್ಲರನ್ನೂ ತನ್ನ ಬಾಣಗಳಿಂದ ಹೊಡೆದೋಡಿಸಿ, ಸುಭದ್ರೆಯೊಡನೆ ಇಂದ್ರಪ್ರಸ್ಥಕ್ಕೆ ಬಂದು ಸೇರಿದನು. ಅದೇ ಪಾರ್ಥನು ಅಗ್ನಿಯ ಪ್ರಾರ್ಥನೆಯಮೇಲೆ ಖಾಂಡವವನವನ್ನು ಅವನ ಆಹಾರಕ್ಕಾಗಿ ಅನುಕೂಲಪಡಿಸಿಕೊಟ್ಟನು. ಅಗ್ನಿಯು ಆ ವನವನ್ನು ಯಥೇಚ್ಛವಾಗಿ ಭಕ್ಷಿಸತೊಡಗಿದಾಗ ಅರ್ಜುನನು ರಥಾರೂಢನಾಗಿ ಧನುರ್ಬಾಣಗಳನ್ನು ಹಿಡಿದು ಕಾಯುತಿದ್ದನು. ಆ ವನವು ಇಂದ್ರನಿಗೆ ಸಂಬಂಧಪಟ್ಟಿದ್ದುದರಿಂದ, ಇಂದ್ರನು ಕೋಪಗೊಂಡು ಬೆಂಕಿಯನ್ನಾರಿಸುವುದಕ್ಕಾಗಿ ಮಹಾಮೇಘಗಳನ್ನು ಬಿಟ್ಟು, ದೊಡ್ಡ ಮಳೆಯನ್ನು ಸುರಿಸಿದನು ಆದರೇನು? ಅರ್ಜುನನು ತನ್ನ ಬಾಣಗಳಿಂದಲೇ ಆ ಮೇಘಗಳನ್ನು ತಡೆದು, ಆ ವನದಲ್ಲಿ ಒಂದು ತೊಟ್ಟು ಮಳೆಹನಿಯಾದರೂ ಬೀಳದಂತೆ ಮಾಡಿದನು. ಇದರಿಂದ ದೇವೇಂದ್ರನಿಗೆ ಇನ್ನೂ ರೇಗಿತು. ಐರಾವತವನ್ನೇರಿ ಅನೇಕ ದೇವಸೈನ್ಯಗಳೊಡನೆ ಸೇರಿ, ಅರ್ಜುನನಮೇಲೆ ಯುದ್ಧಕ್ಕಾಗಿ ಹೊರಟುಬಂದನು. ಆಗ ರುದ್ರರು, ಮರುತ್ತುಗಳು, ವಸುಗಳು ಅಶ್ವಿನೀದೇವತೆಗಳು, ಗಂಧರ್ವರು, ಸಾಧ್ಯರು, ವಿಶ್ವೇದೇವತೆಗಳು, ಮುಂತಾದವರೆಲ್ಲರೂ ಆಯುಧಧಾರಿಗಳಾಗಿ ಅರ್ಜುನನನ್ನು ಕೊಲ್ಲಬೇಕೆಂದೇ ಹಠದಿಂದ ಬಂದರು. ಪ್ರಳಯಕಾಲದಲ್ಲಿ ಕಾಣಿಸುವ ಅನರ್ಥಸೂಚನೆಗಳೆಲ್ಲವೂ ಆಗ ಕಾಣಿಸಿದುವು. ಆ ದೊಡ್ಡ ದೇವಸೇನೆಯು ತನ್ನಮೇಲೆ ಯುದ್ಧಕ್ಕೆ ಬರು

ವುದನ್ನು ನೋಡಿಯೂ ಅರ್ಜುನನು ಸ್ವಲ್ಪವೂ ಅಂಜದೆ, ಕಾಲಯಮನಂತೆ ಅವರನ್ನಿದಿರಿಸಿ ನಿಂತನು. ದೇವತೆಗಳೆಲ್ಲರೂ ಅವನಮೇಲೆ ಏಕಕಾಲದಲ್ಲಿ ಬಾಣವರ್ಷವನ್ನು ಕರೆದರು. ಅರ್ಜುನನು ಗಾಂಡೀವಧಾರಿಯಾಗಿ ನಿಂತು ಅವನ್ನೆಲ್ಲ ತನ್ನ ಬಾಣಗಳಿಂದ ತಡೆದು ತುಂಡುತುಂಡಾಗಿ ಕತ್ತರಿಸಿದುದಲ್ಲದೆ, ತನ್ನ ತೀಕ್ಷ್ಣಬಾಣಗಳಿಂದ ದೇವಸಮೂಹಗಳನ್ನೆಲ್ಲ ಬಹಳವಾಗಿ ನೋಯಿಸಿದನು. ಆಮೇಲೆ ದೇವತೆಗಳಿಗೆ ಅರ್ಜುನನನ್ನು ಜಯಿಸುವುದು ಅಸಾಧ್ಯವೆಂದು ತೋರಿತು. ಅವರ ಆಕ್ರೋಶಗಳೆಲ್ಲ ಅಡಗಿಹೋದುವು. ಅವರೆಲ್ಲರೂ ಐರಾವತಸಹಿತನಾದ ಇಂದ್ರನೊಬ್ಬನನ್ನು ಬಿಟ್ಟು, ದಿಕ್ಕುದಿಕ್ಕಿಗೆ ಪಲಾಯನಮಾಡಿದರು. ಗಂಧರ್ವರೂ, ರುದ್ರರೂ ಪೂರ್ವದಿಕ್ಕಿಗೆ ಓಡಿದರು. ಮರುತ್ತುಗಳು ದಕ್ಷಿಣದಿಕ್ಕಿಗೆ ಓಡಿದರು. ವಸುಗಳೂ, ಅಶ್ವಿನೀದೇವತೆಗಳೂ ಪಶ್ಚಿಮಕ್ಕೆ ಪಲಾಯನಮಾಡಿದರು. ಆದಿತ್ಯರೂ, ವಿಶ್ವೇದೇವತೆಗಳೂ, ಉತ್ತರಾಭಿಮುಖವಾಗಿ ಓಡಿದರು. ಸಾಧ್ಯರು ಮೇಲುಮುಖವಾಗಿ ಹಾರಿಬಿಟ್ಟರು. ಹೀಗೆ ದೇವತೆಗಳೆಲ್ಲರೂ ಅರ್ಜುನನ ಬಾಣಕ್ಕೆ ಭಯಪಟ್ಟು, ಅರ್ಜುನನನ್ನು ಆಗಾಗ ಹಿಂತಿರುಗಿ ನೋಡುತ್ತ, ನಾನಾ ದಿಕ್ಕುಗಳಿಗೆ ಓಡಿಹೋಗುತ್ತಿರುವುದನ್ನು ದೇವೇಂದ್ರನು ನೋಡಿದನು. ಅವನಿಗೆ ಅರ್ಜುನನ ಮೇಲೆ ಮಿತಿಮಿರಿದ ಕೋಪವುಂಟಾಗಿ ಬಾಣಗಳನ್ನು ವರ್ಷಿಸಿದನು. ಆದರೇನು? ಆ ಅರ್ಜುನನು ಮನುಷ್ಯಮಾತ್ರನಾಗಿದ್ದರೂ, ದೇವೇಂದ್ರನನ್ನು ತನ್ನ ಬಾಣಗಳಿಂದ ಬಲವಾಗಿ ಪೀಡಿಸಿದನು. ಆಮೇಲೆ ಇಂದ್ರನು ಅರ್ಜುನನಮೇಲೆ ಶಿಲಾವರ್ಷವನ್ನು ಕರೆದನು. ಅವುಗಳನ್ನೂ ಅರ್ಜುನನು ತನ್ನ ಬಾಣಗಳಿಂದ ತಡೆದನು. ಆಮೇಲೆ ಇಂದ್ರನು ಅರ್ಜುನನ ವೀರ್ಯವನ್ನು ಪರೀಕ್ಷಿಸಬೇಕೆಂದು ಅದೇ ಶಿಲಾವರ್ಷವನ್ನು ಇನ್ನೂ ಪ್ರಬಲವಾಗಿ ಹೆಚ್ಚಿಸಿದನು. ಅರ್ಜುನನು ಅವುಗಳನ್ನೂ ತನ್ನ ಬಾಣಗಳಿಂದ ನಿವಾರಿಸಿ, ಇಂದ್ರನ ಮನಸ್ಸಿಗೆ ಆಶ್ಚರ್ಯವುಂಟಾಗುವಂತೆ ಮಾಡಿದನು. ಆಮೇಲೆ ಇಂದ್ರನು ಮಹಾವೃಕ್ಷಗಳೊಡಗೂಡಿದ ಅಂಗಜವೆಂಬ ಪರ್ವತವೊಂದನ್ನು ತನ್ನ ಎರಡು ಕೈಗಳಿಂದಲೂ ಎತ್ತಿ, ಅರ್ಜುನನ ಮೇಲೆ ಪ್ರಯೋಗಿಸಿದನು. ಅರ್ಜುನನು ಆ ಬೆಟ್ಟವನ್ನು ತನ್ನ ಬಾಣಗಳಿಂದ ಸಹಸ್ರಭಾಗವಾಗಿ ಭೇದಿಸಿ,

ಇಂದ್ರನನ್ನೂ ಐರಾವತದಿಂದ ಕೆಳಕ್ಕೆ ಕೆಡಹಿದನು. ಆಗ ಇಂದ್ರನಿಗೆ ಅರ್ಜುನನನ್ನು ಜಯಿಸುವುದು ತನಗೆ ಸಾಧ್ಯವಿಲ್ಲವೆಂದೇ ತೋರಿತು. ತನ್ನ ಮಗನ ಶೌರ್ಯಕ್ಕೆ ಮೆಚ್ಚಿ ಇಂದ್ರನು ಅವನಲ್ಲಿ ಅತ್ಯಂತ ಪ್ರೀತಿಯನ್ನು ತೋರಿಸಿದನು. ಆಗ ಆ ಯುದ್ಧದಲ್ಲಿ ಅರ್ಜುನನನ್ನು ಜಯಿಸುವ ಸಮರ್ಥನೊಬ್ಬನಾದರೂ ಇರಲಿಲ್ಲ. ಜನಕಾ! ಸಾಕ್ಷಾತ್ತಾಗಿ ಬ್ರಹ್ಮನಾದರೂ ಅವನನ್ನು ಜಯಿಸಲಾರನು. ಅರ್ಜುನನು ತನಗೆ ಇದಿರಾದ ಯಕ್ಷರಾಕ್ಷಸಾದಿಗಳನ್ನೆಲ್ಲಾ ಬಾಣಗಳಿಂದ ಹೊಡೆದೋಡಿಸಿದುದಲ್ಲದೆ, ಅವರಲ್ಲಿ ಅನೇಕರನ್ನು ಆ ಖಾಂಡವವನದಲ್ಲಿ ಉರಿಯುವ ಬೆಂಕಿಗೆ ಆಹುತಿಯನ್ನಾಗಿ ಮಾಡಿದನು. ಅವನನ್ನು ತಡೆಯುವ ಸಮರ್ಥರಾರೂ ಅಲ್ಲಿರಲಿಲ್ಲ. ಹಿಂದೆ ಗರುಡನು ಅಮೃತಕ್ಕಾಗಿ ದೇವತೆಗಳನ್ನು ಜಯಿಸಿದಂತೆ, ಅರ್ಜುನನು ಎಲ್ಲಾ ದೇವತೆಗಳನ್ನೂ ಜಯಿಸಿ ಅಗ್ನಿಯನ್ನು ತೃಪ್ತಿಗೊಳಿಸಿದನು. ಇದರಿಂದ ಅರ್ಜುನನು ಅಪಾರಕೀರ್ತಿಗೆ ಭಾಗಿಯಾದುದಲ್ಲದೆ ಆ ಅಗ್ನಿಯ ಅನುಗ್ರಹದಿಂದ ಒಂದು ದಿವ್ಯರಥವನ್ನೂ, ಧ್ವಜವನ್ನೂ, ದಿವ್ಯಾಶ್ವಗಳನ್ನೂ, ದಿವ್ಯಾಸ್ತ್ರಗಳನ್ನೂ, ಗಾಂಡೀವವೆಂಬ ಉತ್ತಮ ಧನುಸ್ಸನ್ನೂ, ಅಕ್ಷಯಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ, ಇನ್ನೂ ಎಷ್ಟೋ ಲಾಭಗಳನ್ನೂ ಪಡೆದನು.

ಜನಕಾ! ಆ ಅರ್ಜುನನ ಮತ್ತೊಂದು ಸಾಹಸವನ್ನು ಹೇಳುವೆನು ಕೇಳು. ಅರ್ಜುನನು ದಿಗ್ವಿಜಯಕ್ಕಾಗಿ ಉತ್ತರದಿಕ್ಕಿಗೆ ಹೊರಟು ನವವರ್ಷಗಳೊಡಗೂಡಿದ ಜಂಬೂದ್ವೀಪಗಳನ್ನೆಲ್ಲ ತನ್ನ ವಶಮಾಡಿಕೊಂಡನು. ಅನೇಕ ರಾಜರನ್ನು ಜಯಿಸಿ, ಧರ್ಮರಾಜನಿಗೆ ಕಪ್ಪವನ್ನು ಕೊಡುವಂತೆ ಮಾಡಿದನು. ಅಲ್ಲಿಂದ ಎಷ್ಟೋ ರತ್ನಗಳನ್ನು ತಂದು ತನ್ನಣ್ಣನ ರಾಜಸೂಯಯಾಗವನ್ನು ಪೂರ್ತಿಗೊಳಿಸಿದನು. ಹೀಗೆ ಅವನು ಎಷ್ಟೋ ಅಸಾಧ್ಯಕಾರ್ಯಗಳನ್ನು ಮಾಡಿರುವನು. ಮೂರುಲೋಕದಲ್ಲಿಯೂ ಅವನಿಗೆ ಸಾಟಿಯಾದವನಿಲ್ಲ. ದೇವ, ದಾನವ, ಯಕ್ಷ, ರಾಕ್ಷಸ, ಪನ್ನಗರಾಗಲಿ, ಭೀಷ್ಮದ್ರೋಣಾದಿಗಳಾಗಲಿ, ಮಹಾರಥರೆನಿಸಿದ ಕೌರವರಾಗಲಿ, ವೀರರೂ, ಧನುರ್ಧಾರಿಗಳೂ ಆದ ಎಲ್ಲಾ ರಾಜರುಗಳೇ ಆಗಲಿ,

ಒಂದಾಗಿ ಸೇರಿಬಂದರೂ, ಆ ಅರ್ಜುನನನ್ನು ಇದಿರಿಸಲಾರರು. ಅಪ್ಪಾ! ಅಷ್ಟೇಕೆ? ಆ ಅರ್ಜುನನು ನನ್ನ ಹೃದಯದಲ್ಲಿಯೇ ಸದಾ ನೆಲೆಗೊಂಡಿರುವನು. ಆಗಾಗ ಅವನು ನನ್ನ ಕಣ್ಣಿಗೆ ಕಾಣಿಸುತ್ತಲೇ ಇರುವನು. ಅವನನ್ನು ನೆನೆಸಿಕೊಂಡಹಾಗೆಲ್ಲ ನನ್ನ ಮನಸ್ಸು ಭಯದಿಂದ ನಡುಗುತ್ತಿರುವುದು. ತಾತಾ! ಮನೆಮನೆಯಲ್ಲಿಯೂ ಧನುರ್ಬಾಣಗಳನ್ನು ಹಿಡಿದ ಆ ಅರ್ಜುನನು ಪಾಶಹಸ್ತನಾದ ಯಮನಂತೆ ನನ್ನ ಕಣ್ಣಮುಂದೆ ಕಾಣಿಸುತ್ತಿರುವನು. ನನಗಿರುವ ಭಯದಿಂದ ಒಮ್ಮೊಮ್ಮೆ ಸಾವಿರಮಂದಿ ಅರ್ಜುನರು ನನ್ನ ಕಣ್ಣಮುಂದೆ ಕಾಣಿಸುವಂತಿರುವರು. ನನಗೆ ಜಗತ್ತೆಲ್ಲವೂ ಪಾರ್ಥಮಯವಾಗಿಯೇ ತೋರುತ್ತಿರುವುದು. ಶೂನ್ಯಪ್ರದೇಶದಲ್ಲಿಯೂ ಆ ಪಾರ್ಥನೇ! ಕನಸಿನಲ್ಲಿಯೂ ಪಾರ್ಥನೇ! ಸ್ವಪ್ನದಲ್ಲಯೂ ಅವನನ್ನು ಕಂಡಾಗ ನನಗೆ ಪ್ರಜ್ಞೆಯೇ ಹೋದಂತಿರುವುದು. ಯಾವಾಗಲೂ ಅರ್ಜುನನನ್ನೇ ನೆನೆಸಿಕೊಂಡು ಭಯಪಡುತ್ತಿರುವ ನನಗೆ ಅಶ್ವ, ಅಕ್ಷರ, ಅಂಬುಜ ಮೊದಲಾದ ಅಕಾರಾದಿ ಶಬ್ದಗಳು ಕಿವಿಗೆ ಬಿದ್ದರೆ ಕೂಡ ಮನಸ್ಸಿಗೆ ಭೀತಿಯನ್ನು ಹುಟ್ಟಿಸುವುವು. ನಾನು ಅರ್ಜುನನಿಗೆ ಹೊರತು ಬೇರೆ ಯಾರಿಗೂ ಭಯಪಡುವುದಿಲ್ಲ. ಆ ಅರ್ಜುನನು ಯುದ್ಧದಲ್ಲಿ ಪ್ರಹ್ಲಾದನನ್ನಾದರೂ, ಬಲಿಯನ್ನಾದರೂ ಕೊಲ್ಲಬಲ್ಲನು. ಅವನೊಡನೆ ಯುದ್ಧವು ನಮಗೆ ಉಚಿತವೇ ಅಲ್ಲ. ಅವನ ಶಕ್ತಿಯನ್ನು ನಾನು ಬಲ್ಲೆನು. ಅದಕ್ಕಾಗಿಯೇ ಯಾವಾಗಲೂ ಕೊರಗುತ್ತಿರುವೆನು. ಹಿಂದೆ ದಂಡಕಾರಣ್ಯದಲ್ಲಿ ಮಾರೀಚನಿಗೆ ರಾಮನ ಭಯವು ಹೇಗಿತ್ತೋ, ಹಾಗೆಯೇ ಈಗ ನನಗೆ ಅರ್ಜುನನ ಭಯವುಂಟಾಗಿದೆ'' ಎಂದನು.

ಅದಕ್ಕೆ ಧೃತರಾಷ್ಟ್ರನು ''ಕುಮಾರಾ! ಆ ಅರ್ಜುನನ ಮಹಾವೀರ್ಯವನ್ನು ನಾನೂ ಬಲ್ಲೆನು. ಅದರಿಂದಲೇ ಅವನ ವಿಷಯದಲ್ಲಿ ನೀನು ಹೇಗೂ ವಿರೋಧವನ್ನೇ ಮಾಡಬಾರದು. ದ್ಯೂತದಿಂದಾಗಲಿ, ಶಸ್ತ್ರಯುದ್ಧದಿಂದಾಗಲಿ, ಕೊನೆಗೆ ಕೆಟ್ಟಮಾತಿನಿಂದಾದಲಿ ನೀನು ಅವನ ಮನಸ್ಸನ್ನು ನೋಯಿಸಿದರೆ, ಆ ಪಾಂಡವರೊಡನೆ ನಮಗೆ ಯುದ್ಧವೇ ಸಂಭವಿಸುವುದು. ಆದುದರಿಂದ ನೀನು ಅರ್ಜುನನೊಡನೆ ಯಾವಾಗಲೂ

ಸ್ನೇಹವನ್ನು ಬೆಳೆಸು. ಅರ್ಜುನನೊಡನೆ ಸೇರಿದ ಮನುಷ್ಯರಿಗೆ ಮೂರು ಲೋಕದಲ್ಲಿಯೂ ಯಾವ ಭಯವೂ ಇರುವುದಿಲ್ಲ" ಎಂದನು. ಅದಕ್ಕಾ ದುರ್ಯೋಧನನು "ಜನಕಾ! ನಾವು ಧರ್ಮರಾಜನನ್ನು ತಂತ್ರದಿಂದ ಜಯಿಸಿದಂತೆ, ಈಗಲೂ ಆ ತಂತ್ರದಿಂದಲೇ ನಮಗೆ ಜಯವಾಗಬೇಕಲ್ಲದೆ, ಬೇರೆ ಯಾವ ಉಪಾಯದಿಂದಲೂ ನಮಗೆ ಅನುಕೂಲವಾಗಲಾರದು" ಎಂದನು. ಅದಕ್ಕಾ ಧೃತರಾಷ್ಟ್ರನು "ಕುಮಾರಾ! ಕೂಡದು! ಆ ಪಾಂಡವರ ವಿಷಯದಲ್ಲಿಮಾತ್ರ ನಿನ್ನ ತಂತ್ರಗಳು ಬೇಡ. ಇದಕ್ಕೆ ಮೊದಲೇ ನೀನು ಅವರಿಗೆ ವಿರೋಧವಾಗಿ ಎಷ್ಟೋ ತಂತ್ರಗಳನ್ನು ಮಾಡಿದೆ. ಅದರಿಂದೇನಾಯಿತು? ಅದನ್ನೆಲ್ಲ ಅವರು ತಪ್ಪಿಸಿಕೊಂಡರಲ್ಲವೆ? ಆದುದರಿಂದ ನಮ್ಮ ಕುಲಕ್ಕೂ, ನಮ್ಮ ಪ್ರಜೆಗಳಿಗೂ ನೀನು ಕ್ಷೇಮವನ್ನು ಕೋರುವವನಾದರೆ, ಆ ಅರ್ಜುನನೊಡನೆ ಸ್ನೇಹವನ್ನೇ ಬೆಳೆಸು. ನಿನ್ನ ಕಡೆಯವರೆಲ್ಲರನ್ನೂ ಅರ್ಜುನನಲ್ಲಿ ಸ್ನೇಹವನ್ನು ಬೆಳೆಸುವಂತೆ ಮಾಡು" ಎಂದನು. ಈ ಮಾತನ್ನು ಕೇಳಿ ದುರ್ಯೋಧನನಿಗೆ ಸ್ವಲ್ಪ ಮನಸ್ಸು ಕರಗಿದಂತಾಯಿತು. ಸ್ವಲ್ಪ ಹೊತ್ತು ತನಗೆ ತಾನೇ ಆಲೋಚಿಸಿದನು. ಆದರೇನು? ವಿಧಿಪ್ರೇರಿತನಾದ ಆ ದುರ್ಯೋಧನನು ತಿರುಗಿ "ಜನಕಾ! ಆ ಪಾಂಡವರನ್ನು ಈ ದೇಶದಿಂದ ಹೊರಡಿಸುವ ಉಪಾಯವನ್ನೇ ಮಾಡುವೆವು. ಅರಣ್ಯವಾಸವನ್ನೇ ಪಂಥವಾಗಿಟ್ಟುಕೊಂಡು ತಿರುಗಿ ದ್ಯೂತವನ್ನಾರಂಭಿಸಿದರೆ, ಅದರಿಂದ ನಮಗೆ ಮೇಲುಂಟು. ಹೀಗೆ ನಾವು ಅವರನ್ನು ವಶಪಡಿಸಿಕೊಳ್ಳುವುದು ಸಾಧ್ಯವು. ಜೂಜಿನಲ್ಲಿ ಅವರಾಗಲಿ, ನಾವಾಗಲಿ ಯಾರು ಸೋತರೂ ಹನ್ನೆರಡು ವರ್ಷಗಳವರೆಗೆ ಕೃಷ್ಣಾಜಿನವನ್ನುಟ್ಟು ಅರಣ್ಯದಲ್ಲಿದ್ದು, ಹದಿಮೂರನೆಯ ವರ್ಷದಲ್ಲಿ ಯಾರಿಗೂ ತಿಳಿಯದಂತೆ ಅಜ್ಞಾತವಾಸದಲ್ಲಿರಬೇಕು. ಆ ಅಜ್ಞಾತವಾಸದಲ್ಲಿ ಬೇರೆಯವರಿಗೆ ತಿಳಿದರೆ, ತಿರುಗಿ ಹನ್ನೆರಡುವರ್ಷಗಳವರೆಗೆ ವನವಾಸವನ್ನೂ, ಒಂದು ವರ್ಷದ ಅಜ್ಞಾತವಾಸವನ್ನೂ ನಡೆಸಬೇಕು. ಈ ನಿರ್ಣಯದ ಮೇರೆಗೆ ದ್ಯೂತವನ್ನಾಡಿ ಸೋತರೆ, ನಾವಾದರೂ ಕಾಡಿಗೆ ಹೋಗುವೆವು. ಅವರಾದರೂ ಹೋಗಲಿ. ಪಾಂಡವರನ್ನು ತಿರುಗಿ ಆಟಕ್ಕೆ ಕರೆಸು. ಈಗ ನಾವು ಮಾಡಬೇಕಾದ ತಂತ್ರವೇ ಇದು! ಈ ನಮ್ಮ ಮಾವನಿಗೆ ಅನುಕೂ

ಲವಾಗಿ ದಾಳಗಳನ್ನು ಬಿಡುವ ವಿದ್ಯೆ ಚೆನ್ನಾಗಿ ತಿಳಿಯುವುದು. ಆ ಜೂಜಿನಿಂದ ನಾವು ಜಯವನ್ನು ಹೊಂದಿ, ನಮ್ಮ ರಾಜ್ಯದಲ್ಲಿ ಬೇರೂರಿ ನಿಲ್ಲಬಹುದು. ಪಾಂಡವರು ಹದಿಮೂರುವರ್ಷಗಳವರೆಗೆ ಕಾಡಿನಲ್ಲಿಯೇ ಇದ್ದರೆ, ಇತ್ತಲಾಗಿ ರಾಜರೆಲ್ಲರೂ ನಮ್ಮ ವಶವಾಗುವರು. ನಮ್ಮ ಸೈನ್ಯಗಳನ್ನೂ, ಧನವನ್ನೂ ಹೆಚ್ಚಿಸಿಕೊಳ್ಳಬಹುದು. ಆಮೇಲೆ ಅವರು ಯುದ್ಧಕ್ಕೆ ಬಂದರೂ ನಾವು ಸುಲಭವಾಗಿ ಗೆದ್ದು ಬಿಡಬಹುದು. ಆದುದರಿಂದ ನೀನು ಈ ಉಪಾಯಕ್ಕೆ ಸಮ್ಮತಿಸಬೇಕು'' ಎಂದನು. ಈ ಮಾತನ್ನು ಕೇಳಿ ಧೃತರಾಷ್ಟ್ರನ ಮನಸ್ಸು ಅದೇ ದುರ್ಮಾರ್ಗಕ್ಕೆ ತಿರುಗಿತು. ಆಗ ಅವನು "ಕುಮಾರಾ! ಸರಿ! ಹಾಗೆಯೇ ಮಾಡು. ಇಷ್ಟರಲ್ಲಿ ಪಾಂಡವರು ಬಹಳ ದೂರಕ್ಕೆ ಪ್ರಯಾಣಮಾಡಿದ್ದರೂ, ಅವರನ್ನು ಹಿಂದಕ್ಕೆ ಬರಮಾಡು. ಮತ್ತೊಮ್ಮೆ ಜೂಜು ನಡೆಯಲಿ'' ಎಂದನು. ಆಗ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ವಿದುರ, ಸೋಮದತ್ತ, ಬಾಹ್ಲೀಕ, ಯುಯುತ್ಸು, ವಿಕರ್ಣ, ಭೂರಿಶ್ರವಸ್ಸು ಮೊದಲಾದವರೆಲ್ಲರೂ, ಇನ್ನುಮೇಲೆ ಆ ದ್ಯೂತವು ಬೇಡ! ಸಂಧಿಗೆ ಪ್ರಯತ್ನಿಸಿರಿ'' ಎಂದು ಅನೇಕವಿಧವಾಗಿ ನಿವಾರಿಸಿದರು. ಆದರೇನು? ಪುತ್ರಮೋಹದಿಂದ ಧೃತರಾಷ್ಟ್ರನು ಆ ತಪ್ಪುದಾರಿಯನ್ನೇ ಹಿಡಿದು, ಪಾಂಡವರನ್ನು ಕರೆಯುವುದಕ್ಕಾಗಿ ದೂತರನ್ನು ಕಳುಹಿಸಿಬಿಟ್ಟನು. ಆಗ ಧರ್ಮಬುದ್ಧಿಯುಳ್ಳ ಗಾಂಧಾರಿಯು ಧೃತರಾಷ್ಟ್ರನನ್ನು ಕುರಿತು "ಪ್ರಿಯಾ! ನಿನ್ನ ಬುದ್ಧಿಯೇಕೆ ಹೀಗೆ ವಿಪರೀತವಾಯಿತು? ನಮ್ಮ ಮಗನಾದ ಈ ದುರ್ಯೋಧನನು ಹುಟ್ಟಿದೊಡನೆ ನಾಯಿಯಂತೆ ಬೊಗುಳಿದುದನ್ನು ನೋಡಿ, "ಇವನು ನಮ್ಮ ವಂಶವನ್ನೇ ನಾಶಮಾಡುವನು. ಇವನನ್ನು ಈಗಲೇ ಕೊಂದುಬಿಡುವುದು ಉತ್ತಮವು'' ಎಂದು ಬುದ್ಧಿಶಾಲಿಯಾದ ವಿದುರನು ತಿಳಿಸಿದ್ದನು. ಆ ಮಾತು ನಿಜವಾಗುತ್ತಿದೆ. ಎಲೈ ಕೌರವರೇ! ನಮ್ಮ ಕೌರವಕುಲಕ್ಕೆ ಇವನೇ ಕೊನೆಯೆಂದು ತೋರುತ್ತಿದೆ. ನೀವು ವಿವೇಕವಿಲ್ಲದ ಈ ಹುಡುಗನ ಮಾತನ್ನು ಕೇಳಿ ದೋಷಕ್ಕೆ ಗುರಿಯಾಗಿ, ಅಗಾಧವಾದ ಜಲದಲ್ಲಿ ಮುಳುಗಿಹೋಗಬೇಡಿರಿ! ವಂಶಕ್ಷಯಕ್ಕೆ ದಾರಿಕೊಡಬೇಡಿರಿ. ಕಟ್ಟಿದ ಸೇತುವೆಯನ್ನು ಯಾವ ಅವಿವೇಕಿಯು ತಾನೇ ಮುರಿಯುವನು. ಆರಿದ ಬೆಂಕಿಯನ್ನು

ಯಾವನು ತಾನೇ ಉರುಬುವನು? ಈಗ ಶಾಂತರಾದ ಕುಂತೀಪುತ್ರರನ್ನು ತಿರುಗಿ ರೇಗಿಸಬಾರದು. ಪ್ರಿಯಾ! ಯಾವಾಗಲೂ ನಿನ್ನನ್ನು ಮರೆಯದ ಧರ್ಮರಾಜನಿಗಾಗಿ ತಿರುಗಿ ನಾನು ಜ್ಞಾಪಿಸುವೆನು. ಬುದ್ಧಿಗೆಟ್ಟವನನ್ನು ಶಾಸ್ತ್ರವು ಕಟ್ಟೆಡಲಾರದು. ಅವನ ಕ್ಷೇಮವೂ ಹಾಗೆಯೇ ಅವನ ಬುದ್ಧಿಯಂತೆ ಹೋಗುವುದು. ಆದರಲ್ಲಿಯೂ ಸಣ್ಣವರು ದೊಡ್ಡವರ ಬುದ್ಧಿಯನ್ನು ಅನುಸರಿಸಬಾರದು. ನಿನ್ನನ್ನೇ ನಂಬಿದ ನಿನ್ನ ಮಕ್ಕಳಾದ ಪಾಂಡವರಿಗೆ ನೀನೇ ದಿಕ್ಕಾಗಿರಬೇಕು. ಅವರು ನಿನ್ನನ್ನು ಬಿಟ್ಟುಹೋಗುವಹಾಗೆ ಪ್ರತ್ಯೇಕಿಸಬಾರದು. ಕುಲಘಾತುಕನಾದ ಈ ದುರ್ಯೋಧನನನ್ನು ತೊರೆದುಬಿಡುವುದೇ ಉತ್ತಮವೆಂದು ನಾನು ಹೇಳುವೆನು. ಈ ಕೆಲಸವನ್ನು ನೀನು ಮೊದಲೇ ಮಾಡಬೇಕಾಗಿದ್ದರೂ ಪುತ್ರಮೋಹದಿಂದ ಹಾಗೆ ಮಾಡದೆ ಹೋದೆ! ಅದೇ ನಮ್ಮ ಕುಲಕ್ಷಯಕ್ಕೆ ಮೂಲವಾಯಿತೆಂದು ತಿಳಿ. ನೀತಿ ಧರ್ಮ ವಿನಯಗಳಿಂದ ಕೂಡಿದ ನಿನ್ನ ಬುದ್ಧಿಯೇ ನಿನಗಿರಲಿ! ಮಗನ ಬುದ್ಧಿಯನ್ನು ಅನುಸರಿಸಬೇಡ. ಕ್ರೂರತ್ವದಿಂದ ಗಳಿಸಿದ ಐಶ್ವರ್ಯವು ನಿರ್ಮೂಲವಾಗಿ ನಾಶಹೊಂದುವುದೇಹೊರತು ನಿಲ್ಲಲಾರದು. ನೀತಿಯಿಂದ ಬಂದ ಐಶ್ವರ್ಯವು ಪುತ್ರಪೌತ್ರಾದಿಸಂತಾನಕ್ಕೆಲ್ಲ ನಡೆದುಬರುವುದು" ಎಂದಳು. ಆಗ ಧೃತರಾಷ್ಟ್ರನು "ಕುಲಕ್ಷಯವಾದರೂ ಆಗಲಿ! ನನ್ನ ಮುದ್ದುಮಗನ ಮಾತಿಗೆ ನಾನು ವಿರಾರಿ ಹೋಗಲಾರೆನು. ನನ್ನ ಮಕ್ಕಳ ಇಷ್ಟದಂತೆಯೇ ನಡೆಯಲಿ. ಪಾಂಡವರು ತಿರುಗಿ ಬಂದು ಅವರೊಡನೆ ದ್ಯೂತವನ್ನಾಡಿಕೊಳ್ಳಲಿ. ನೀನು ಸುಮ್ಮನಿರು" ಎಂದನು.

ಇದು ತೊಂಭತ್ತೇಳನೆಯ ಅಧ್ಯಾಯವು.



ಬಹುದೂರಕ್ಕೆ ಪ್ರಯಾಣಮಾಡಿದ್ದ ಧರ್ಮರಾಜನನ್ನು ಧೃತರಾಷ್ಟ್ರನು ದೂತನಮೂಲಕವಾಗಿ ಕರೆಸಿದುದು. ತಿರುಗಿ ಶಕುನಿಯು ಧರ್ಮರಾಜನನ್ನು ದ್ಯೂತದಲ್ಲಿ ಸೋಲಿಸಿದುದು.

ಜನಮೇಜಯರಾಜಾ! ಧೃತರಾಷ್ಟ್ರನ ಆಜ್ಞಾನುಸಾರವಾಗಿ ಧರ್ಮರಾಜನನ್ನು ಹಿಂತಿರುಗಿಸಿ ಕರೆತರುವುದಕ್ಕಾಗಿ ಪ್ರತಿಕಾಮಿಯು ಹೋದನು. ಆ ಪ್ರಾತಿಕಾಮಿಯು ಬಹುದೂರಕ್ಕೆ ಹೋಗಿದ್ದ ಧರ್ಮರಾಜನನ್ನು ದಾರಿಯಲ್ಲಿ ಸಂಧಿಸಿ "ಧರ್ಮರಾಜಾ! ತಿರುಗಿ ದ್ಯೂತಸಭೆಯು ನೆರೆದಿದೆ. ಪಗಡೆಯ ಹಾಸನ್ನು ಹರಡಿ ಕಾಯಿಗಳನ್ನೂ ಸಿದ್ಧವಾಗಿಟ್ಟಿದೆ. ನಿನ್ನ ತಂದೆ ಧೃತರಾಷ್ಟ್ರನು ತಿರುಗಿ ನಿಮ್ಮನ್ನು ಆಟಕ್ಕಾಗಿ ಕರೆಯುತ್ತಿರುವನು" ಎಂದನು. ಅದಕ್ಕಾ ಯುಧಿಷ್ಠಿರನು "ಏನೇನು? ತಿರುಗಿ ನಮ್ಮನ್ನು ಆಟಕ್ಕಾಗಿ ಕರೆಯುವರೆ? ಪ್ರಪಂಚದಲ್ಲಿ ಪ್ರಾಣಿಗಳು ದೈವಾಜ್ಞೆಗನುಸಾರವಾಗಿ ಶುಭಾಶುಭಗಳನ್ನು ಹೊಂದುವುವು. ಇವೆರಡೂ ಪ್ರಾಣಿಗಳಿಗೆ ತಪ್ಪಿದುದಲ್ಲ. ತಿರುಗಿಬಂದು ನಾವು ಜೂಜನ್ನಾಡಬೇಕಾದರೆ, ವಿಧಿಯು ನಮ್ಮನ್ನು ಬಿಟ್ಟುದಲ್ಲವೆಂದು ತೋರುತ್ತಿದೆ. ದ್ಯೂತವು ಅನರ್ಥಕಾರಿಯೆಂದು ಚೆನ್ನಾಗಿ ತಿಳಿದಿದ್ದರೂ ವೃದ್ಧನಾದ ತಂದೆಯ ಮಾತನ್ನು ಮಿಾರುವುದಕ್ಕಿಲ್ಲದಿದೆ. ಮಾಡುವುದೇನು? ಆಗಬೇಕಾದುದೇ ಹೀಗೆ! ಲೋಕದಲ್ಲಿ ಚಿನ್ನದ ಜಿಂಕೆಯಿರುವುದು ಅಸಂಭವವೆಂದು ಚೆನ್ನಾಗಿ ತಿಳಿದಿದ್ದರೂ ರಾಮನು ಆ ಮೃಗಕ್ಕೆ ಆಸೆಪಟ್ಟು ಹೋಗಿ ಕಷ್ಟಕ್ಕೆ ಗುರಿಯಾದನಲ್ಲವೆ? ಹಾಗೆಯೇ ವಿಪತ್ತುಗಳು ಬಂದು ಬೀಳುವಾಗ ಪ್ರಾಯಕವಾಗಿ ಮನುಷ್ಯಬುದ್ಧಿಯು ಅದಕ್ಕೆ ತಕ್ಕಂತೆ ಮಾರ್ಪಡುವುದು" ಎಂದು ತನ್ನಲ್ಲಿ ತಾನೇ ಹೇಳಿಕೊಳ್ಳುತ್ತ, ತನ್ನ ಸಹೋದರರೊಡನೆ ಹಿಂತಿರುಗಿಬಿಟ್ಟನು. ಧರ್ಮರಾಜನು ಶಕುನಿಯ ಮೋಸವನ್ನು ಚೆನ್ನಾಗಿ ಬಲ್ಲವನಾಗಿದ್ದರೂ, ತಿರುಗಿ ಜೂಜಾಡುವ ಉದ್ದೇಶದಿಂದ ಹಸ್ತಿನಾವತಿಗೆ ಬಂದು ಸೇರಿದನು. ಆಗ ಸಹೋದರರೈವರೂ ಅವರ ಹಿತೈಷಿಗಳಿಗೆಲ್ಲ ಮನಸ್ಸಂಕಟವಾಗುವಂತೆ ತಿರುಗಿ ಸಭೆಯನ್ನು ಪ್ರವೇಶಿಸಿದರು. ಲೋಕನಾಶಕ್ಕಾಗಿಯೇ ದೈವಚೋದಿತರಾದ ಆ ಪಾಂಡವರು, ಪುನರ್ದ್ಯೂತಕ್ಕಾಗಿ ತಮ್ಮತಮ್ಮ ಅಂತಸ್ಥಿಗೆ ತಕ್ಕಂತೆ ಆಸನಗಳಲ್ಲಿ ಬಂದು ಕುಳಿತರು. ಆಗ ಮಹಾತಂತ್ರಿಯಾದ ಶಕುನಿಯು

ಧರ್ಮರಾಜನನ್ನು ನೋಡಿ "ರಾಜೇಂದ್ರಾ! ನೀನು ಸೋತ ಧನವನ್ನೆಲ್ಲ ವೃದ್ಧರಾಜನು ನಿಮಗೇ ಕೊಟ್ಟು ಕಳುಹಿಸಿದುದೇನೋ ಬಹಳ ಶ್ಲಾಘ್ಯವೇ. ಅದು ನಮ್ಮೆಲ್ಲರಿಗೂ ಸಂತೋಷವು. ಈಗ ಆ ಧನಕನಕಾದಿಗಳ ಪ್ರಸಕ್ತಿಯೇ ನಮಗೆ ಬೇಡ! ಬೇರೊಂದು ವಿಧವಾದ ಪಂಥವನ್ನೊಡ್ಡಿ ಆಡುವೆವು. ಅದೊಂದೇ ಪಂಥವು ಸಾಕು. ಅದೇನೆಂಬುದನ್ನು ಹೇಳುವೆನು ಕೇಳು. ಈ ಆಟದಲ್ಲಿ ನೀನು ನಮ್ಮನ್ನು ಜಯಿಸಿದರೆ, ನಾವು ಜಿಂಕೆಯ ಚರ್ಮವನ್ನುಟ್ಟು ಹನ್ನೆರಡುವರ್ಷಗಳ ವರೆಗೆ ಕಾಡಿನಲ್ಲಿರುವೆವು. ಅದರಿಂದಾಚೆಗೆ ಒಂದು ವರ್ಷ ಕಾಲವನ್ನು ಯಾರಿಗೂ ತಿಳಿಯದಂತೆ ಅಜ್ಞಾತವಾಸದಿಂದ ಕಳೆಯುವೆವು. ಆ ಅಜ್ಞಾತವಾಸಕಾಲದಲ್ಲಿ ನಮ್ಮನ್ನು ನೀವು ಕಂಡುಹಿಡಿದುಬಿಟ್ಟರೆ, ತಿರುಗಿ ಹನ್ನೆರಡು ವರ್ಷಗಳು ವನದಲ್ಲಿರುವೆವು. ನಾವೇ ನಿಮ್ಮನ್ನು ಜಯಿಸಿದರೆ, ನೀವೂ ಅದೇ ನಿರ್ಣಯದಂತೆ ದ್ರೌಪದೀಸಮೇತರಾಗಿ ಹನ್ನೆರಡುವರ್ಷಗಳನ್ನು ವನವಾಸದಲ್ಲಿಯೂ, ಹದಿಮೂರನೆಯ ವರ್ಷವನ್ನು ಅಜ್ಞಾತವಾಸದಲ್ಲಿಯೂ ಕಳೆಯಬೇಕು. ಆ ಒಂದು ವರ್ಷದಲ್ಲಿ ನಿಮ್ಮನ್ನು ನಾವು ಕಂಡುಹಿಡಿದುಬಿಟ್ಟರೆ, ತಿರುಗಿ ನೀವು ಹನ್ನೆರಡುವರ್ಷಗಳು ಕಾಡಿನಲ್ಲಿರಬೇಕು. ಹಾಗಿಲ್ಲದೆ ಅಜ್ಞಾತವಾಸವನ್ನು ಯಾರಿಗೂ ತಿಳಿಯದಂತೆ ಕಳೆದುಬಿಟ್ಟರೆ, ನೀವು ಸುಖವಾಗಿ ನಿಮ್ಮ ರಾಜ್ಯದಲ್ಲಿರಬಹುದು. ಈ ನಿರ್ಣಯದಿಂದ ನಮ್ಮೊಡನೆ ಇದೊಂದಾಟವನ್ನಾಡಿಬಿಡು" ಎಂದನು. ಈ ಕಠಿನನಿರ್ಣಯವನ್ನು ಕೇಳಿ ಸಭೆಯವರೆಲ್ಲರ ಹೃದಯವು ನಡುಗಿತು. ಅಲ್ಲಿದ್ದ ಸಭೆಯವರೆಲ್ಲರೂ ಮಹಾವ್ಯಸನದಿಂದ ತಮ್ಮ ಕೈಗಳನ್ನೆತ್ತಿ ಸಭಾಮಧ್ಯದಲ್ಲಿ "ಅಯ್ಯೋ! ಇದೇನನರ್ಥವು? ಇಲ್ಲಿ ಧರ್ಮರಾಜನ ಬಂಧುಗಳಲ್ಲಿ ಯಾರೂ ಅವನನ್ನು ತಡೆಯುವವರಿಲ್ಲದೆ ಹೋದರೆ? ಛೀ! ಛೀ! ಅಂತವರಿದ್ದೇನು? ಈ ಧರ್ಮರಾಜನು ಇಲ್ಲಿನ ಮೋಸವನ್ನು ಸ್ವಬುದ್ಧಿಯಿಂದ ತಿಳಿದಿರುವನೋ, ತಿಳಿದಿಲ್ಲವೋ?" ಎಂದು ಹಾಹಾಕಾರದೊಡನೆ ಕೂಗಿಕೊಂಡರು. ಆದರೇನು? ಆ ಮಾತುಗಳನ್ನು ಕೇಳಿಯೂ ಧರ್ಮರಾಜನು ಕರೆದಮೇಲೆ ಆಟಕ್ಕೆ ಹಿಂಜರಿಯುವುದು ನನಗೆ ಲಜ್ಜಾಸ್ಪದವೆಂಬ ಸಂಕೋಚವೊಂದು, ಕ್ಷತ್ರಿಯಧರ್ಮಕ್ಕೆ ತಾನು ಕಟ್ಟುಪಟ್ಟವನೆಂಬುದೊಂದು, ಈ ಎರಡು ಕಾರಣಗಳಿಂದ ಆಟವಾಡಬೇಕೆಂದೇ

ನಿರ್ಧರಿಸಿಕೊಂಡನು. ಧರ್ಮರಾಜನು, ಜೂಜು ತನಗೆ ಅನರ್ಥಕಾರಿಯೆಂಬುದನ್ನು ತನ್ನಲ್ಲಿ ತಾನು ತಿಳಿದುಕೊಂಡಿದ್ದರೂ, ಕೌರವರ ಮೂಲನಾಶಕ್ಕಾಗಿಯೇ ಇವೆಲ್ಲ ಏರ್ಪಟ್ಟಿದೆಯೆಂದು ತಿಳಿದು, ಆಟಕ್ಕೆ ಸಿದ್ಧವಾಗಿ ಕುಳಿತು "ಶಕುನೀ! ಕ್ಷತ್ರಧರ್ಮವನ್ನು ಹಿಡಿದ ನನ್ನಂಥವನು ಆಟಕ್ಕೆ ಕರೆಯಲ್ಪಟ್ಟಮೇಲೆ ಹೆದರಿ ಹಿಂಜರಿಯುವದೆಂದರೇನು? ಬಾ! ಆಟವಾಡು" ಎಂದನು. ಆಗ ಶಕುನಿಯು "ಧರ್ಮರಾಜಾ! ಈಗಿನ ಆಟಕ್ಕೆ ಹಿಂದಿನಂತೆ, ಆನೆಗಳು, ಕುದುರೆಗಳು, ದನಕರುಗಳು, ಕುರಿ ಮೇಕೆಗಳು, ಎತ್ತುಗಳು, ಧನ ಕನಕ ರತ್ನಾದಿಗಳು, ದಾಸದಾಸಿಯರು ಇವೊಂದನ್ನೂ ಇಡಬೇಕಾದುದಿಲ್ಲ. ಅವೆಲ್ಲ ನಮ್ಮಲ್ಲಿ ಯಥೇಷ್ಟವಾಗಿರುವುವು. ಹಿಂದೆ ಹೇಳಿದಂತೆ ಸೋತವರಿಗೆ ಹನ್ನೆರಡು ವರ್ಷಗಳು ವನವಾಸವೂ, ಒಂದು ವರ್ಷದ ಅಜ್ಞಾತವಾಸವೂ ನಮ್ಮ ಆಟದ ಪಂದ್ಯವಾಗಿರಲಿ! ನಿಮಗಾದರೂ ಸರಿ! ನಮಗಾದರೂ ಸರಿ! ಇದೊಂದೇ ಪಂಥವಿರಲಿ" ಎಂದನು. ಆಗ ಭೀಷ್ಮ, ದ್ರೋಣ, ವಿದುರ, ಕೃಪಾಶ್ವತ್ಥಾಮರೂ, ಸಂಜಯನೂ, ಯುಯುತ್ಸುವೂ, ವಿಕರ್ಣನೂ, ಭೀಮಾರ್ಜುನ ನಕುಲಸಹದೇವರೂ, ಸೋಮದತ್ತ ಬಾಹ್ಲೀಕರೂ, ಗಾಂಧಾರಿ, ಕುಂತಿ, ದ್ರೌಪದಿ ಮೊದಲಾದ ಸ್ತ್ರೀಯರೂ ಈ ಪಂಥವು ಬೇಡವೆಂದು ಎಷ್ಟೆಷ್ಟು ನಿವಾರಿಸಿದರೂ ಧರ್ಮರಾಜನು ಆಟಕ್ಕೆ ಹಿಂತೆಗೆಯಲಿಲ್ಲ. ದೈವಸಂಕಲ್ಪದಿಂದ ಈ ಮೂಲಕವಾಗಿ ಭೂಭಾರನಿವೃತ್ತಿಗೆ ದಾರಿಯಾಗಬೇಕಾದುದರಿಂದ, ಅತ್ಯಂತವಿವೇಕಿಯಾದ ಧರ್ಮರಾಜನ ಮನಸ್ಸನ್ನುಕೂಡ ಆ ಸ್ವಲ್ಪಹೊತ್ತಿಗೆ ಕಲಿಯು ಬಂದು ಆವರಿಸಿತು. ಅದರಂತೆ ಧರ್ಮರಾಜನು ವನವಾಸವನ್ನೇ ಪಂದ್ಯವನ್ನಾಗಿ ಒಪ್ಪಿ ಕುಳಿತೊಡನೆ, ಶಕುನಿಯು ದಾಳಗಳನ್ನೆತ್ತಿ 'ಇದೋ ಜಯಿಸಿದೆನು' ಎಂದು ಹೇಳುತ್ತ ದಾಳವನ್ನುರುಳಿಸಿ, ಆ ಆಟವನ್ನೂ ಗೆದ್ದುಬಿಟ್ಟನು.

ಇದು ತೊಂಭತ್ತೆಂಟನೆಯ ಅಧ್ಯಾಯವು.



—— { ಪಾಂಡವರ ವನಪ್ರಯಾಣವು. ಆಗಲೂ ಕಠಿನವಾಕ್ಯಗಳಿಂದ ನೋಯಿಸಿದ ಕೌರವರನ್ನು ಕೊಲೆಮಾಡುವುದಾಗಿ ಭೀಮಾದಿಗಳ ಪ್ರತಿಜ್ಞೆ. } ——

ಓ ಜನಮೇಜಯರಾಜಾ! ಕೇಳು! ಪಾಂಡವರು ಹೀಗೆ ಪರಾಜಿತರಾದಮೇಲೆ, ವನವಾಸದ ದೀಕ್ಷೆಯನ್ನು ಕೈಕೊಳ್ಳಬೇಕಾಯಿತು. ಒಡನೆಯೇ ಕೃಷ್ಣಾಜಿನಗಳನ್ನೇ ತಮ್ಮ ಉತ್ತರೀಯಗಳನ್ನಾಗಿ ಅಂಗೀಕರಿಸಿದರು. ರಾಜ್ಯಗಳನ್ನೆಲ್ಲ ಕಳೆದುದುಕೊಂಡು, ಕೃಷ್ಣಾಜಿನಗಳನ್ನುಟ್ಟು, ವನವಾಸಕ್ಕೆ ಹೊರಡಲು ಸಿದ್ಧರಾಗಿದ್ದ ಪಾಂಡವರನ್ನು ನೋಡಿ, ದುಶ್ಶಾಸನನು ನಗುತ್ತ, “ಇನ್ನುಮೇಲೆ ಮಹಾತ್ಮನಾದ ದುರ್ಯೋಧನನ ಆಜ್ಞಾಚಕ್ರವು ನಿರಂಕುಶವಾಗಿ ನಡೆಯುವುದು. ಪಾಂಡವರು ಜೂಜಿನಲ್ಲಿ ಪರಾಜಿತರಾಗಿ ದೊಡ್ಡ ಕಷ್ಟಕ್ಕೆ ಸಿಕ್ಕಿಬಿದ್ದರು. ಈಗಲೇ ದೇವತೆಗಳು ಹಳ್ಳತಿಟ್ಟಿಲ್ಲದ ಸರಿಯಾದ ದಾರಿಯಲ್ಲಿ ಹೋದಂತಾಯಿತು. ಏಕೆಂದರೆ, ಗುಣದಲ್ಲಿಯೂ, ಮನೆತನದಲ್ಲಿಯೂ, ಪಾಂಡವರಿಗಿಂತಲೂ ಹಿರಿಯುವರೆನಿಸಿಕೊಂಡ ನಾವೇ ಈಗ ಬೇರೆ ಎಲ್ಲರಿಗಿಂತಲೂ ಮೇಲೆನಿಸಿರುವೆವು. ಈಗ ಪಾಂಡವರು ಬಹುಕಾಲಕ್ಕೂ ತೀರದ ನರಕದಲ್ಲಿ ಬಿದ್ದು ಮುಳುಗಿಯೇ ಹೋದರು. ಇನ್ನು ಅವರಿಗೆ ಸುಖವಿಲ್ಲ! ಅವರಿಗೆ ರಾಜ್ಯವಿಲ್ಲ! ಅವರು ಅನೇಕ ಸಂವತ್ಸರಗಳವರೆಗೆ ಹೀಗೆಯೇ ನರಳಬೇಕು. ಇದಕ್ಕೆ ಮೊದಲು, ಐಶ್ವರ್ಯದಿಂದ ಬಹಳವಾಗಿ ಕೊಬ್ಬಿ, ಧೃತರಾಷ್ಟ್ರಪುತ್ರರನ್ನು ಹಾಸ್ಯಮಾಡುತ್ತಿದ್ದ ಆ ಪಾಂಡವರೇ ಈಗ ದ್ಯೂತದಲ್ಲಿ ಪರಾಜಿತರಾಗಿ, ಇದ್ದ ಧನವನ್ನೆಲ್ಲ ಕಳೆದುಕೊಂಡು ಕಾಡುಪಾಲಾಗಿ ಹೋಗುತ್ತಿರುವರು. ಇನ್ನುಮೇಲೆ ಇವರು ರಾಜಯೋಗ್ಯವಾದ ಯಾವ ಅಲಂಕಾರಕ್ಕೂ ಅರ್ಹರಲ್ಲ. ಇವರು ಧರಿಸಿರುವ ವಿಚಿತ್ರಕವಚಗಳನ್ನೂ, ಕಾಂತಿಯುಳ್ಳ ದಿವ್ಯವಸ್ತ್ರಗಳನ್ನೂ ತೆಗೆದಿಡಲಿ! ಶಕುನಿಯು ಮೊದಲು ಆಟಕ್ಕೆ ಮಾಡಿದ ನಿರ್ಣಯದಂತೆ ಇವರು ಜಿಂಕೆಯ ಚರ್ಮವನ್ನು ಉಟ್ಟುಕೊಳ್ಳಲಿ! ಲೋಕದಲ್ಲಿ ತನಗೆ ಸಮಾನರಿಲ್ಲವೆಂದು ಕುಳಿತಿದ್ದ ಈ ಪಾಂಡವರು, ಈಗ ಅದಕ್ಕೆ ವಿಪರೀತವಾದ ಸ್ಥಿತಿಗೆ ಬಂದು, ಎಳ್ಳಿನ ಜಳ್ಳುಕಾಳುಗಳಂತೆ ಯಾವ ಕೆಲಸಕ್ಕೂ ಬೇಡದಿರುವರು. ಈಗ ಅವರಿಗೆ ತಮ್ಮ ಸ್ಥಿತಿಯೇನೆಂದು ಚೆನ್ನಾಗಿ ತಿಳಿದಂತಾಯಿತು. ಬಹಳ ಅಹಂ

ಕಾರಪಡುತ್ತಿದ್ದ ಈ ಪಾಂಡವರು, ಈಗ ಕೃಷ್ಣಾಜಿನವನ್ನುಟ್ಟು ನಿಂತಿರುವುದು, ಯಜ್ಞದೀಕ್ಷೆಯಿಲ್ಲದವರು ಕೃಷ್ಣಾಜಿನವನ್ನುಡುವಂತೆ ಹಾಸ್ಯಾಸ್ಪದವಾಗಿರುವುದನ್ನು ನೋಡಿರಿ. ಅಯ್ಯೋ! ದ್ರುಪದನೋ ಮಹಾಪ್ರಾಜ್ಞನು ಉತ್ತಮವಾದ ಸೋಮಕವಂಶದಲ್ಲಿ ಹುಟ್ಟಿದವನು. ಅಂತವನು ತನ್ನ ಮಗಳನ್ನು ಪಾಂಡವರಿಗೆ ಕೊಟ್ಟುದರಿಂದ ಲೋಕದಲ್ಲಿ ಕೇವಲ ಭಾಗ್ಯಹೀನನೆನಿಸಿಕೊಂಡನು. ಅಂತಹ ರಾಜಕುಮಾರಿಗೆ ಕೇವಲ ಷಂಡರಂತಿರುವ ಈ ಪಾಂಡವರು ಗಂಡಂದಿರಾಗಿ ಗಂಟುಬಿದ್ದರು. ಎಲೆ ಯಾಜ್ಞಸೇನೀ! ಉಡುವುದಕ್ಕೆ ಬಟ್ಟೆಯಿಲ್ಲದೆ, ಮೃಗದ ಚರ್ಮವನ್ನುಟ್ಟು, ಧನವಾಗಲಿ, ಗೌರವವಾಗಲಿ ಇಲ್ಲದೆ ಕಾಡುಪಾಲಾಗಿ ಹೋಗುತ್ತಿರುವ ಈ ಪಾಂಡವರಿಂದ ನೀನು ಯಾವ ಸುಖವನ್ನು ಪಡೆಯುವೆ? ಈಗಲೂ ನೀನು ನಿನಗೆ ಬೇಕಾದ ಬೇರೊಬ್ಬ ಪತಿಯನ್ನು ವರಿಸು. ಇದೋ! ಇಲ್ಲಿ ಕೌರವರೆಲ್ಲರೂ ಒಂದಾಗಿ ಸೇರಿರುವರು. ಇವರೆಲ್ಲರೂ ತಾಳ್ಮೆಯುಳ್ಳವರು. ಇಂದ್ರಿಯಗಳನ್ನಡಗಿಸಿದವರು. ಒಳ್ಳೇ ಭಾಗ್ಯವಂತರು! ಇವರಲ್ಲಿ ಇಷ್ಟಬಂದ ಯಾವನೊಬ್ಬನನ್ನಾದರೂ ನಿನ್ನ ಪತಿಯನ್ನಾಗಿ ವರಿಸು. ನಿನ್ನ ಕಾಲವು ಹೀಗೆ ವಿಪರೀತವಾಗಿಯೇ ಕಳೆಯಬಾರದು. ಈಗ ಪಾಂಡವರು ಎಳ್ಳಿನ ಜಳ್ಳುಕಾಳುಗಳಂತೆಯೂ, ಬರೀಚರ್ಮದಿಂದ ಮಾಡಿದ ಮೃಗಗಳಂತೆಯೂ, ಭತ್ತದ ಹೊಟ್ಟುಗಳಂತೆಯೂ ಕೆಲಸಕ್ಕೆ ಬಾರದಂತಾಗಿರುವರು. ಹೀಗೆ ಹಳ್ಳಕ್ಕೆ ಬಿದ್ದುಹೋದ ಪಾಂಡವರಿಂದ ಇನ್ನುಮೇಲೆ ನಿನಗೇನಾಗಬೇಕು? ಇಂತಹ ಜಳ್ಳುಕಾಳುಗಳನ್ನು ಕೂಡಿಡುವುದರಿಂದ ನಿನಗೆ ಬರೀ ಶ್ರಮವೇ ಅಲ್ಲವೆ!" ಎಂದನು.

ಓ ಜನಮೇಜಯರಾಜಾ! ದುಶ್ಶಾಸನನು ಹೀಗೆ ಆ ಸಭೆಯಲ್ಲಿ ನುಡಿದ ಪರುಷವಾಕ್ಯಗಳನ್ನು ಕೇಳಿ ಸಹಿಸಲಾರದೆ ಭೀಮನು, ದೊಡ್ಡ ಹೂಂಕಾರದೊಡನೆ ಅವನನ್ನು ಹೆದರಿಸುತ್ತ, ತಾನಿದ್ದ ಸ್ಥಳದಿಂದ ಆ ದುಶ್ಶಾಸನನ ಸ್ಥಳಕ್ಕೆ ಥಟ್ಟನೆ ಹಾರಿಬಿದ್ದು, ಹಿಮಾಲಯಪರ್ವತದ ಸಿಂಹವು ನರಿಯನ್ನು ಹಿಡಿಯುವಂತೆ ಅವನ ಕೈಗಳೆರಡನ್ನೂ ಹಿಡಿದುಕೊಂಡು, "ಎಲೆ ದುರಾತ್ಮಾ! ಕ್ರೂರಾ? ಕೇವಲಪಾಪಿಗಳು ನುಡಿಯುವ ಕೆಲ

ಸಕ್ಕೆ ಬಾರದ ಪ್ರಲಾಪಗಳನ್ನು ಮಾಡುತ್ತಿರುವೆ. ಆ ಶಕುನಿಯ ಮೋಸದ ವಿದ್ಯೆಯಿಂದಲ್ಲವೇ ನೀವು ಇಷ್ಟು ದೂಕ್ಕೇರಿದುದು! ಈ ರಾಜಸಭಾಮಧ್ಯದಲ್ಲಿ ನೀವು ಇಷ್ಟೊಂದು ಆತ್ಮಸ್ತುತಿಯನ್ನು ಮಾಡಿಕೊಳ್ಳುವಂತಾದುದೂ ಆ ಜೂಜುಗಾರನ ತಂತ್ರದಿಂದದಲೇ! ಎಲ ದುರಾತ್ಮಾ! ಇರಲಿ. ಈಗ ನೀನು ಪರುಷವಾಕ್ಯಗಳಿಂದಮಾತ್ರ ನಮ್ಮ ಹೃದಯುವನ್ನು ನೋಯಿಸಿದೆ. ಮುಂದಿನ ಯುದ್ಧದಲ್ಲಿ ನಿನ್ನ ಹೃದಯುವನ್ನು ನಾನು ಕೈಯಿಂದಲೇ ಭೇದಿಸಿ, ಆಗ ನಿನಗೆ ಇದನ್ನು ಜ್ಞಾಪಕಕ್ಕೆ ತರುವೆನು! ಎಲ ಪಾಪೀ! ನಿನ್ನನ್ನು ಮಾತ್ರವಲ್ಲ. ಇಲ್ಲಿ ಯಾರು ಕ್ರೋಧಲೋಭಗಳಿಗೆ ವಶರಾಗಿ, ನಿನಗೆ ಅನುಕೂಲರಾಗಿರುವರೋ, ಅವರನ್ನೂ, ಅವರ ಕಡೆಯುವರನ್ನೂ ನಾನು ಯಮಲೋಕಕ್ಕೆ ಕಳುಹಿಸುವೆನು'' ಎಂದನು. ಜಿಂಕೆಯ ಚರ್ಮವನ್ನು ಮೈಮೇಲೆ ಧರಿಸಿದ್ದ ಹಾಗೆಯೇ ಭೀಮನು ಧರ್ಮಕ್ಕೆ ಕಟ್ಟುಬಿದ್ದು, ದುಡುಕಿ ಹೋಗಲಾರದೆ ಈ ಮಾತುಗಳನ್ನುಮಾತ್ರ ಆಡಿದನು. ಆದರೇನು? ನಾಚಿಕೆಯಿಲ್ಲದ ದುಶ್ಯಾಸನನು, ಆ ಸಭಾಮಧ್ಯದಲ್ಲಿ "ಹಸು! ಹಸು" ಎಂದು ಅವನನ್ನು ಕರೆಯುತ್ತ ಎಲ್ಲರಮುಂದೆ ನಾಚಿಕೆಯಿಲ್ಲದೆ ಕುಣಿಯುವುದಕ್ಕೆ ತೊಡಗಿದನು. ಆಗ ಭೀಮನು "ಎಲಾ ನೀಚಾ! ದುಶ್ಯಾಸನಾ! ಬಾಯಿಂದ ಹರಟುವುದೊಂದು ಮಾತ್ರ ನಿನಗೆ ಸಾಧ್ಯವು. ಮೋಸದಿಂದ ಸಂಪಾದಿಸಿದ ಧನಕ್ಕಾಗಿ ಆತ್ಮಸ್ತುತಿಮಾಡಿಕೊಳ್ಳುವವನು ನಿನ್ನಂತೆ ಲೋಕದಲ್ಲಿ ಬೇರೆ ಯಾವನುಂಟು. ಎಲೆ ಪಾತಕೀ! ಕುಂತಿಯ ಮಗನಾದ ವೃಕೋದರನು ರಣರಂಗದಲ್ಲಿ ನಿನ್ನ ಎದೆಯನ್ನು ಸೀಳಿ, ರಕ್ತವನ್ನು ಕುಡಿಯದಿದ್ದರೆ ಅವನಿಗೆ ಪುಣ್ಯಲೋಕಗಳೇ ಇಲ್ಲದಿರಲಿ! ಬಹುಶೀಘ್ರಕಾಲದಲ್ಲಿಯೇ ಎಲ್ಲಾ ಧನುರ್ಧಾರಿಗಳ ಕಣ್ಣಮುಂದೆ ಧೃತರಾಷ್ಟ್ರಪುತ್ರರನ್ನೆಲ್ಲ ಕೊಂದು ತೀರಿಸಿದಮೇಲಲ್ಲದೆ, ನನಗೆ ಶಾಂತಿಯಿಲ್ಲವೆಂದು ತಿಳಿ! ಇದೋ! ಸತ್ಯವಾಗಿ ಹೇಳುವೆನು'' ಎಂದು ಆ ಸಭೆಯಿಂದ ಹೊರಟನು.

ಓ ಜನಮೇಜಯರಾಜಾ! ಭೀಮನು ವೇಗದಿಂದ ಹೊರಟನು. ಪಾಂಡವರೂ ಸಭೆಯನ್ನು ಬಿಟ್ಟು ಹೊರಟರು. ಅದನ್ನು ನೋಡುತಿದ್ದ

ದುರ್ಯೋಧನನು, ಸಿಂಹದಂತೆ ಗಂಭೀರವಾದ ನಡೆಯಿಂದ ಹೋಗುತ್ತಿರುವ ಭೀಮನನ್ನು ನೋಡಿ, ಅವನನ್ನು ಹಾಸ್ಯಮಾಡುವುದಕ್ಕಾಗಿ, ಅವನಂತೆ ಆ ಸಭೆಯಲ್ಲಿ ತಾನೂ ಅಟ್ಟಹಾಸದಿಂದ ನಡೆದು ಅದನ್ನು ನಟಿಸಿದನು. ಇಷ್ಟರಲ್ಲಿಯೇ ಭೀಮನು ತನ್ನ ಅರ್ಧದೇಹವನ್ನು ತಿರುಗಿಸಿ, ಬುದ್ಧಿಗೆಟ್ಟ ಆ ದುರ್ಯೋಧನನ ಅಲ್ಪಸ್ವಭಾವವನ್ನು ನೋಡಿ, "ಎಲ ಮೂಢಾ! ಇಷ್ಟರಲ್ಲಿಯೇ ತೀರಿತೆಂದು ತಿಳಿಯಬೇಡ! ಬಹುಶೀಘ್ರದಲ್ಲಿಯೇ ನಿನ್ನನ್ನೂ, ನಿನ್ನ ಪರಿವಾರಗಳನ್ನೂ ನಾನು ಕೊಲ್ಲುವಾಗ ಇದನ್ನು ನಿನಗೆ ಜ್ಞಾಪಿಸುವೆನು" ಎಂದನು. ಭೀಮನು ಹೀಗೆ ತನಗಾದ ಅವಮಾನಗಳನ್ನೆಲ್ಲ ನೋಡಿಯೂ ಕೋಪವನ್ನಡಗಿಸಿಕೊಂಡು, ಧರ್ಮರಾಜನನ್ನು ಹಿಂಬಾಲಿಸಿ, ಸಭೆಯನ್ನು ಬಿಟ್ಟು ಹೊರಗೆ ಹೋಗುವಾಗ ಮತ್ತೊಮ್ಮೆ ಹಿಂತಿರುಗಿ, ಆ ಕೌರವಸಭೆಯನ್ನು ನೋಡಿ ಹೀಗೆಂದು ಹೇಳುವನು. "ಎಲೈ ರಾಜರೇ! ಸದಸ್ಯರೇ! ನೀವೆಲ್ಲರೂ ಕೇಳಿರಿ. ನಾನು ಈ ದುರ್ಯೋಧನನನ್ನು ಕೊಲ್ಲುವೆನು. ಈ ಧನಂಜಯನು ಕರ್ಣನನ್ನೂ, ಸಹದೇವನು ಮೋಸಗಾರನಾದ ಈ ಶಕುನಿಯನ್ನೂ ಕೊಲ್ಲುವನು. ಈ ಸಭಾಮಧ್ಯದಲ್ಲಿ ಇನ್ನೊಂದು ಮಾತನ್ನು ಹೇಳುವೆನು ಕೇಳಿರಿ! ಮುಂದಿನ ಯುದ್ಧದಲ್ಲಿ ದೈವವೇ ನಮ್ಮ ಪಕ್ಷಕ್ಕಿದ್ದು ನಮ್ಮ ಪ್ರತಿಜ್ಞೆಯನ್ನು ನೆರವೇರಿಸುವುದು ನಿಶ್ಚಯವು. ಈ ಪಾಪಿಯಾದ ದುರ್ಯೋಧನನನ್ನು ನನ್ನ ಗದೆಯಿಂದ ಭೇದಿಸಿ ಕೆಡಹುವೆನು. ಇವನ ತಲೆಯನ್ನು ನನ್ನ ಕಾಲಿಂದ ಮೆಟ್ಟುವೆನು. ಪರಮಪಾಪಿಯೂ, ಕ್ರೂರನೂ ಆದ ಈ ದುಶ್ಶಾಸನನ ಎದೆಯ ರಕ್ತವನ್ನು ನಾನು ಸಿಂಹದಂತೆ ಕುಡಿಯುವೆನು" ಎಂದನು. ಆಗ ಅರ್ಜುನನು "ಭೀಮಸೇನಾ! ನೀನೇಕೆ ಸುಮ್ಮನೆ ಕೂಗುವೆ? ಈಗ ನಿನ್ನ ವೈರವನ್ನು ತೋರಿಸುವುದಕ್ಕೆ ತಕ್ಕವರಾರೂ ಇಲ್ಲಿಲ್ಲ. ಮನೆಯಲ್ಲಿ ಸುಖವಾಗಿ ತಿಂದು ಬೆಳೆದವರಿಗೆ ಮುಂದೆ ಬರುವ ಮಹಾಭಯವೇನೂ ತಿಳಿಯಲಾರದು. ಮುಂದಿನ ಹದಿಮೂರುವರ್ಷಗಳು ಕಳೆದಮೇಲೆ, ಹದಿನಾಲ್ಕನೆಯ ವರ್ಷದ ಆರಂಭದಲ್ಲಿ ನಡೆಯುವುದನ್ನು ಇವರೆಲ್ಲರೂ ತಮ್ಮ ಕಣ್ಣಾರೆ ನೋಡುವರು. ನಡೆ" ಎಂದನು. ಆಗ ತಿರುಗಿ ಭೀಮನು "ಈ ದುರ್ಯೋಧನನು! ಈ ಕರ್ಣನು! ಈ ಶಕುನಿ! ಈ ದುಶ್ಶಾಸನನು ಈ ನಾಲ್ವರ

ರಕ್ತವನ್ನು ಭೂಮಿಯು ಕುಡಿಯುವುದು" ಎಂದನು. ಆಗ ಅರ್ಜುನನು "ಭೀಮಸೇನಾ! ನೀನು ಹೇಳಿದಂತೆಯೇ ಕೇವಲ ಅಸೂಯಾಪರನೂ, ನಮ್ಮನ್ನು ಹಾಸ್ಯಮಾಡಿ ಹರಟುವವನೂ, ಆತ್ಮಸ್ತುತಿಪರನೂ ಆದ ಈ ಕರ್ಣನನ್ನು ನಾನೇ ಕೊಲ್ಲತಕ್ಕವನು! ಇದೋ! ಭೀಮಸೇನನ ಸಂತೋಷಕ್ಕಾಗಿ ಈಗಲೇ ಅರ್ಜುನನು ಪ್ರತಿಜ್ಞೆಮಾಡುವನು. ಕರ್ಣನನ್ನೂ, ಕರ್ಣನ ಕಡೆಯುವರನ್ನೂ, ಇನ್ನೂ ಆ ಯುದ್ಧದಲ್ಲಿ ಬುದ್ಧಿಗೆಟ್ಟು, ನನ್ನನ್ನಿದಿರಿಸುವ ಎಲ್ಲಾ ರಾಜರನ್ನೂ ನನ್ನ ಬಾಣದಿಂದ ಯಮಲೋಕಕ್ಕೆ ಕಳುಹಿಸುವೆನು. ಈ ನನ್ನ ಪ್ರತಿಜ್ಞೆಯು ಸುಳ್ಳಾಗುವುದಾದರೆ, ಹಿಮಾಲಯವು ಚಲಿಸುವುದು, ಸೂರ್ಯನಲ್ಲಿ ತೇಜಸ್ಸೂ, ಚಂದ್ರನಲ್ಲಿ ಶೀತಲತ್ವವೂ, ಇಲ್ಲದೆ ಹೋಗುವುದು. ಮುಂದಿನ ಹದಿನಾಲ್ಕನೆಯ ವರ್ಷದಲ್ಲಿಯಾದರೂ ಈ ದುರ್ಯೋಧನನು ನಮ್ಮ ರಾಜ್ಯವನ್ನು ಮರ್ಯಾದೆಯೊಡನೆ ನಮಗೆ ತಂದೊಪ್ಪಿಸಿದರೆ ಸರಿ! ಹಾಗಿಲ್ಲದಿದ್ದರೆ ಈಗ ನಾನು ಹೇಳಿದುದೆಲ್ಲ ಸತ್ಯವೇ ಆಗುವುದು" ಎಂದನು. ಆಮೇಲೆ ಸಹದೇವನು ತಿರುಗಿನೋಡಿ, ಕೋಪಗೊಂಡ ಕಾಲಸರ್ಪದಂತೆ ಬುಸುಗುಟ್ಟುತ್ತ "ಗಾಂಧಾರಕುಲದ ಕೀರ್ತಿಯನ್ನೇ ಕೆಡಿಸಿದ ಎಲ ಪಾಪೀ! ನೀನು ದಾಳಗಳೆಂದು ಯಾವುದನ್ನು ತಿಳಿದಿರುವೆಯೋ ಅವು ಪಗಡೆಗಳೂ ಅಲ್ಲ! ದಾಳಗಳೂ ಅಲ್ಲ! ಅವು ನಿನ್ನ ಪ್ರಾಣಗಳನ್ನು ನೀಗಿಸತಕ್ಕ ತೀಕ್ಷ್ಣಬಾಣಗಳೆಂದು ತಿಳಿ! ಅಣ್ಣನಾದ ಭೀಮನು ಹೇಳಿದಂತೆಯೇ ನಿನ್ನನ್ನೂ, ನಿನ್ನ ಬಂಧುಗಳನ್ನೂ ಕೊಲ್ಲತಕ್ಕವನು ನಾನೇ! ಇನ್ನು ನೀನು ಜೀವದಿಂದ ನಡೆಸಬೇಕಾದ ಕಾರ್ಯಗಳೇನಿದ್ದರೂ ಅವನ್ನೆಲ್ಲ ಮುಗಿಸಿಕೊಂಡು ಸಿದ್ಧನಾಗಿರು! ಎಲ ದುರಾತ್ಮಾ! ಸೌಬಲಾ! ಈಗಲೂ ನೀನು ಕ್ಷತ್ರಿಯಧರ್ಮವನ್ನು ಹಿಡಿದು ಯುದ್ಧಕ್ಕೆ ನಿಲ್ಲುವುದಾದರೆ, ಈಗಲೇ ನಿನ್ನನ್ನೂ, ನಿನ್ನ ಬಂಧುಗಳನ್ನೂ ನಾನು ಕೊಂದುಬಿಡುತ್ತಿದ್ದೆನು" ಎಂದನು. ಆಮೇಲೆ ಲೋಕಾತಿಶಯಸೌಂದರ್ಯವುಳ್ಳ ನಕುಲನು ಸಭೆಗಿದಿರಾಗಿ ನಿಂತು "ಇಲ್ಲಿ ದುರ್ಯೋಧನಾನುವರ್ತಿಗಳಾದ ಯಾವ ಧೃತರಾಷ್ಟ್ರಪುತ್ರರು ದ್ರೌಪದಿಯನ್ನು ಹಾಸ್ಯಮಾಡಿ ಪರುಷವಾಕ್ಯಗಳನ್ನಾಡಿದರೋ, ಕಾಲಚೋದಿತರಾಗಿ ಮರಣೋನ್ಮುಖರಾದ ಅವರನ್ನೆಲ್ಲ ನಾನು ಯಮಪುರಿಗೆ ಕಳುಹಿಸುವೆನು. ಮತ್ತು ಶಕು

ನಿಯ ಪ್ರಿಯಪುತ್ರನೂ, ಕ್ರೂರನೂ, ನರಾಧಮನೂ ಆದ ಉಲೂಕನನ್ನೂ ನಾನೇ ಸಂಹರಿಸುವೆನು. ನಾನು ದ್ರೌಪದಿಯ ಕೋರಿಕೆಗಳಿಗೂ, ಧರ್ಮರಾಜನ ಆಜ್ಞೆಗೂ ಅನುಸಾರವಾಗಿ, ಧೃತರಾಷ್ಟ್ರರನ್ನು ನಿರ್ಮೂಲಮಾಡುವೆನು" ಎಂದನು. ಹೀಗೆ ಐದುಮಂದಿ ಪಾಂಡವರೂ ಅನೇಕಪ್ರತಿಜ್ಞೆಗಳನ್ನು ಮಾಡಿ, ಧೃತರಾಷ್ಟ್ರನ ಬಳಿಗೆ ಬಂದರು.

ಇದು ತೊಂಭತ್ತೊಂಭತ್ತನೆಯ ಅಧ್ಯಾಯವು.



ಧರ್ಮರಾಜನು ವನಪ್ರಯಾಣಕ್ಕಾಗಿ ಭೀಷ್ಮಾದಿಗಳ ಅನುಜ್ಞೆಯನ್ನು ಕೇಳಿದುದು. ಪಾಂಡವರಿಗೆ ವಿದುರನ ಹಿತವಾಕ್ಯಗಳು.

ಯುಧಿಷ್ಠಿರನು ಧೃತರಾಷ್ಟ್ರನ ಬಳಿಗೆ ಬಂದು ನಿಂತು, ಅಲ್ಲಿ ನೆರೆದಿದ್ದವರನ್ನೆಲ್ಲ ನೋಡಿ, "ಪೂಜ್ಯರೇ! ಪ್ರಯಾಣಕ್ಕಾಗಿ ನಿಮ್ಮೆಲ್ಲರ ಅನುಜ್ಞೆಯನ್ನು ಬೇಡುವೆನು. ಇಲ್ಲಿರುವ ಎಲ್ಲಾ ಭರತಕುಲಪ್ರಧಾನರೂ, ವೃದ್ಧಪಿತಾಮಹನಾದ ಭೀಷ್ಮನೂ, ಆಚಾರ್ಯರಾದ ಕೃಪ ದ್ರೋಣಾಶ್ವತ್ಥಾಮರೂ, ಸೋಮದತ್ತ ಬಾಹ್ಲೀಕಾದಿಸಮಸ್ತರಾಜರೂ, ಮಹಾತ್ಮನಾದ ವಿದುರನೂ, ತಂದೆಯಾದ ಧೃತರಾಷ್ಟ್ರನೂ, ಧೃತರಾಷ್ಟ್ರನ ಎಲ್ಲಾ ಮಕ್ಕಳೂ, ಮತ್ತು ಸೋಮದತ್ತಕುಮಾರ, ವಿಕರ್ಣ, ಯುಯುತ್ಸು, ಸಂಜಯರಾದಿಯಾಗಿ ಇಲ್ಲಿರತಕ್ಕ ಎಲ್ಲಾ ಸಭಾಸದರೂ ನನಗೆ ಅನುಜ್ಞೆಯನ್ನು ಕೊಡಬೇಕು. ಮಹಾತ್ಮಳಾದ ಗಾಂಧಾರಿ, ತಾಯಿಯಾದ ಕುಂತಿ, ಇವರನ್ನೂ ಪ್ರಾರ್ಥಿಸುವೆನು. ಇನ್ನು ನಾನು ಹೊರಡುವೆನು, ಹಿಂತಿರುಗಿ ಬಂದಮೇಲೆ ಪುನಃ ನಿಮ್ಮನ್ನೆಲ್ಲ ನೋಡುವೆನು" ಎಂದನು. ಜನಮೇಜಯರಾಜಾ! ಅಲ್ಲಿದ್ದವರೊಬ್ಬರೂ ಬಾಯೆತ್ತಿ ಮಾತಾಡಲಾರದೆ ಲಜ್ಜೆಯಿಂದ ತಲೆಬಗ್ಗಿಸಿಕೊಂಡಿದ್ದರು. ಆದರೆ ಅನೇಕರು ತಮ್ಮತಮ್ಮ ಮನಸ್ಸಿನಲ್ಲಿಯೇ ಪಾಂಡವರಿಗೆ ಕ್ಷೇಮವಾಗಲೆಂದು ಹಾರೈಸಿದರು. ಆಗ ವಿದುರನು ಧರ್ಮರಾಜನನ್ನು ಕುರಿತು "ಧರ್ಮಪುತ್ರಾ! ನಿನ್ನ ತಾಯಿಯಾದ ಕುಂತಿಯು ವನವಾಸಕ್ಕೆ ಅರ್ಹಳಲ್ಲ. ಅವಳು ಸ್ವಭಾವದಲ್ಲಿಯೇ ಸುಕುಮಾರ

ವಾದ ದೇಹವುಳ್ಳವಳು. ಇದರಮೇಲೆ ವೃದ್ಧಳು. ಯಾವಾಗಲೂ ಸೌಖ್ಯದಿಂದಲೇ ಬಳೆದವಳು. ಅವಳು ನನ್ನ ಮನೆಯಲ್ಲಿಯೇ ಸುಖವಾಗಿರಲಿ!'' ಎಂದನು. ಅದಕ್ಕಾ ಪಾಂಡವರು ''ಮಹಾತ್ಮಾ! ನೀನು ಹೇಳಿದಂತೆಯೇ ಆಗಲಿ! ನಮಗೆ ಚಿಕ್ಕತಂದೆಯಾದ ನೀನು ನಮ್ಮ ತಂದೆಗೆ ಸಮಾನನು. ನಾವು ನಿನ್ನನ್ನೇ ದಿಕ್ಕಾಗಿ ನಂಬಿದವರು. ನೀನೇ ನಮಗೆ ಗುರು. ನಿನ್ನ ಆಜ್ಞೆಗೆ ನಾವು ಬದ್ಧರಾಗಿರುವೆವು. ನಮ್ಮ ಮುಂದಿನ ಕರ್ತವ್ಯವೇನಾದರೂ ಇದ್ದರೆ ಅದನ್ನು ನಮಗೆ ತಿಳಿಸು'' ಎಂದರು. ಅದಕ್ಕಾ ವಿದುರನು ''ಯುಧಿಷ್ಠಿರಾ! ಬೇರೇನಿದೆ? ಆದರೂ ಒಂದು ತತ್ವವನ್ನು ಮಾತ್ರ ನೀನು ಮನಸ್ಸಿನಲ್ಲಿಡು. ಅಧರ್ಮದಿಂದ ವಂಚಿತನಾಗಿ ಪರಾಜಯವನ್ನು ಹೊಂದಿದನಾವನೂ, ಆ ತನ್ನ ಪರಾಜಯಕ್ಕಾಗಿ ದುಃಖಿಸಬಾರದು. ನೀನು ಧರ್ಮಗಳೆಲ್ಲವನ್ನೂ ಚೆನ್ನಾಗಿ ಬಲ್ಲವನು. ನಿನ್ನಲ್ಲಿ ಧರ್ಮವುಂಟು. ಅರ್ಜುನನಲ್ಲಿ ಪರಾಕ್ರಮವುಂಟು. ಯುದ್ಧದಲ್ಲಿ ಅವನಿಗೆ ಜಯವು ಸಿದ್ಧವು. ಭೀಮನು ಎಂತಹ ಶತ್ರುಗಳನ್ನಾದರೂ ನಿಗ್ರಹಿಸಬಲ್ಲವನು. ನಕುಲನು ಅರ್ಥಸಂಗ್ರಹದಲ್ಲಿ ನಿಪುಣನು. ಧೀಮಂತನಾದ ಸಹದೇವನು ಕಾಲೋಚಿತವಾಗಿ ನಿಮ್ಮನ್ನು ನಡೆಸುವುದರಲ್ಲಿ ಚತುರನು. ನಿಮ್ಮ ಪುರೋಹಿತನಾದ ಧೌಮ್ಯನು ಬ್ರಹ್ಮಜ್ಞಾನಿಗಳಲ್ಲಿ ಮೇಲೆನಿಸಿದವನು. ಧರ್ಮನಿರತೆಯಾದ ದ್ರೌಪದಿಯು ಧರ್ಮಾರ್ಥಗಳಲ್ಲಿ ನಿಪುಣೆಯೆನಿಸಿದವಳು. ನೀವೆಲ್ಲರೂ ದೃಢವಾದ ಅನ್ಯೋನ್ಯ ಪ್ರೇಮವುಳ್ಳವರು. ಎಲ್ಲರಿಗೂ ಪ್ರಿಯದರ್ಶನವುಳ್ಳವರು. ಯಾವಾಗಲೂ ಸಂತುಷ್ಟರಾಗಿರತಕ್ಕವರು. ಆದುದರಿಂದ ಯಾರೂ ನಿಮ್ಮಲ್ಲಿ ಭೇದವನ್ನುಂಟುಮಾಡಲು ಸಮರ್ಥರಲ್ಲ. ಈ ಲೋಕದಲ್ಲಿ ಮನಸ್ಸಿನಲ್ಲಿಯಾದರೂ ನಿಮ್ಮನ್ನು ಪ್ರೀತಿಸದವನೊಬ್ಬನಿಲ್ಲ. ಧರ್ಮಪುತ್ರಾ! ನಿನ್ನ ಮನೋದಾರ್ಢ್ಯವೊಂದೇ ನಿನ್ನ ಸಮಸ್ತಕಲ್ಯಾಣಗಳಿಗೂ ಮೂಲವೆಂದು ತಿಳಿ. ನಿನ್ನ ಶತ್ರುವು ಇಂದ್ರಸಮಾನನಾಗಿದ್ದರೂ ನಿನ್ನ ಗುಣಕ್ಕೆ ಇದಿರಾಗಿ ನಿಲ್ಲಲಾರನು. ಹಿಂದೆ ನೀನು ಹಿಮಾಲಯದಲ್ಲಿ ಮೇರುಸಾವರ್ಣಿಮುನಿಯಿಂದಲೂ, ವಾರಣಾವತದಲ್ಲಿ ವ್ಯಾಸಮಹರ್ಷಿಯಿಂದಲೂ, ಭೃಗುಕುಂಡದಲ್ಲಿ ಪರಶುರಾಮನಿಂದಲೂ, ದೃಷದ್ವತಿಯಲ್ಲಿ ಸಾಕ್ಷಾತ್ ಪರಮಶಿವನಿಂದಲೂ ಉಪದೇಶಹೊಂದಿದವನು. ಅಲ್ಲದೆ, ಕಲ್ಮಾಷೀ

ನದಿಯ ತೀರದಲ್ಲಿ ನೀನು ಭೃಗುಮುನಿಗೆ ಶಿಷ್ಯನಾಗಿರುವಾಗ ಅವನು ಧರ್ಮಪಾಲನದಿಂದ ಪ್ರಜೆಗಳನ್ನು ರಂಜಿಸುವ ಮಾರ್ಗವನ್ನು ನಿನಗೆ ಉಪ ದೇಶಿಸಿರುವನು. ಆಗಾಗ ನಾರದನು ನಿನ್ನಲ್ಲಿಗೆ ಬಂದು ಹೋಗುತ್ತಿರುವನು. ಧೌಮ್ಯನು ನಿನ್ನ ಪುರೋಹಿತನು. ನಿನ್ನ ದೃಢಬುದ್ಧಿಯು ಮಹರ್ಷಿಗಳಿಗೂ ಪ್ರಶಂಸಾರ್ಹವಾದುದು. ಆ ದೃಢಬುದ್ಧಿಯನ್ನುಮಾತ್ರ ನೀನು ಎಂತಹ ಆಪತ್ಕಾಲದಲ್ಲಿಯೂ ಬಿಡಬಾರದು. ಪಾಂಡುಕುಮಾರಾ! ನೀನು ಬುದ್ಧಿಯಲ್ಲಿ ಪುರೂರವನನ್ನೂ, ಶಕ್ತಿಯಲ್ಲಿ ಎಲ್ಲಾ ರಾಜರನ್ನೂ, ಧರ್ಮಾನುಷ್ಠಾನದಲ್ಲಿ ಋಷಿಗಳನ್ನೂ ಮೀರಿಸಿದವನು. ಇಂದ್ರನ ಜಯದಲ್ಲಿಯೂ, ಯಮನ ಕೋಪದಲ್ಲಿಯೂ, ಕುಬೇರನ ಕೋಶದಲ್ಲಿಯೂ, ವರುಣನ ಮನೋಜಯದಲ್ಲಿಯೂ ನಿನ್ನ ಮನಸ್ಸು ನೆಲೆಗೊಂಡಿರುವುದು. ನೀರಿನಿಂದ ಆತ್ಮತ್ಯಾಗ, ಶೀತಲತೆ, ಜೀವನಾಧಾರತ್ವ ಈ ಮೂರು ಗುಣಗಳನ್ನೂ ಭೂಮಿಯಿಂದ ತಾಳ್ಮೆಯನ್ನೂ, ಸೂರ್ಯನಿಂದ ಪೂರ್ಣತೇಜಸ್ಸನ್ನೂ, ವಾಯುವಿನಿಂದ ದೇಹಬಲವನ್ನೂ, ಸಮಸ್ತ ಭೂತಗಳಿಂದ ನಿನಗೆ ಬೇಕಾದ ಎಲ್ಲಾ ಸಂಪತ್ತುಗಳನ್ನೂ ಪಡೆಯುವನಾಗು. ಯುಧಿಷ್ಠಿರಾ! ನಿಮ್ಮೆಲ್ಲರಿಗೂ ಆರೋಗ್ಯವೂ, ಕ್ಷೇಮವೂ ಉಂಟಾಗಲಿ. ನೀವು ಹಿಂತಿರುಗಿ ಬಂದ ಮೇಲೆ ನಾನು ಬಂದು ನೋಡುವೆನು. ಆಪದ್ಧರ್ಮಗಳಲ್ಲಿಯೂ, ಸಂಕಟಗಳಲ್ಲಿಯೂ, ಬೇರೆ ಎಲ್ಲಾ ಕಾರ್ಯಗಳಲ್ಲಿಯೂ, ಕಾಲೋಚಿತವಾದ ಎಚ್ಚರದಿಂದ ನಡೆಯುತ್ತಿರು, ನಾನು ಹೋಗಿಬರುವೆನು. ನಿಮಗೆ ಶುಭವಾಗಲಿ. ನಿಮ್ಮ ಕಾರ್ಯವು ನೆರವೇರಿ ಕ್ಷೇಮದಿಂದ ಹಿಂತಿರುಗಿ ಬಂದ ನಿಮ್ಮನ್ನು ನಾನು ನೋಡಬೇಕು. ನಿಮ್ಮಲ್ಲಿ ಪೂರ್ವಜನ್ಮದ ಪಾಪಲೇಶವಾದರೂ ಇದ್ದಂತೆ ಯಾರೂ ಕಾಣರು" ಎಂದನು. ಆಗ ಧರ್ಮರಾಜನು "ಮಹಾತ್ಮಾ! ನಿನ್ನ ಆಜ್ಞೆಯಂತೆಯೇ ನಡೆಯುವೆವು" ಎಂದು ಹೇಳಿ ಭೀಷ್ಮನಿಗೂ, ದ್ರೋಣನಿಗೂ ನಮಸ್ಕರಿಸಿ, ಅಲ್ಲಿಂದ ಹೊರಟನು.

ಇದು ನೂರನೆಯ ಅಧ್ಯಾಯವು.



## ಪಾಂಡವರ ವನಪ್ರಯಾಣಕಾಲದಲ್ಲಿ ಪುರಜನರು ದುಃಖದಿಂದ ನುಡಿದ ಮಾತುಗಳು.

ಜನಮೇಜಯರಾಜಾ! ಧರ್ಮರಾಜನು ತನ್ನ ಸಹೋದರರೊಡನೆ ವನಪ್ರಯಾಣಮಾಡುವ ಕಾಲದಲ್ಲಿ, ಅವನನ್ನು ನೋಡುವುದಕ್ಕಾಗಿ ಪಟ್ಟಣದ ಜನರೆಲ್ಲರೂ ಆತುರಗೊಂಡು, ನಾನಾಕಡೆಗಳಿಂದ ಬಂದು ಸೇರಿದರು. ದಾರಿಯುದ್ದಕ್ಕೂ ಜನಗಳು ಕಿಕ್ಕಿರಿಸಿ ತುಂಬಿದರು. ಅನೇಕರು ಉಪ್ಪರಿಗೆಗಳನ್ನೂ, ದೇವಾಲಯಶಿಖರಗಳನ್ನೂ, ಗೋಪುರಗಳನ್ನೂ, ಮರಗಳನ್ನೂ ಏರಿ ನಿಂತರು. ಅನೇಕರು ಹೆಂಡಿರುಮಕ್ಕಳೊಡನೆ ಮನೆಗಳಮೇಲೇರಿ ನಿಂತು ನೋಡುತ್ತಿದ್ದರು. ಬೀದಿಯಲ್ಲಿ ಸಂಚಾರಕ್ಕೇ ಅವಕಾಶವಿಲ್ಲದಂತೆ ಜನಗಳ ಗುಂಪು ಕೂಡಿತು. ಎಲ್ಲರೂ ವ್ಯಸನದಿಂದ ಕಣ್ಣೀರುಬಿಡುತ್ತ, ಬಗ್ಗಿಬಗ್ಗಿ ಪಾಂಡವರನ್ನು ನೋಡುತ್ತಿದ್ದರು. ರಾಜಛತ್ರವಾಗಲಿ, ವಸ್ತ್ರಾಭರಣಗಳಾಗಲಿ ಇಲ್ಲದೆ, ಬರೀ ಕಾಲುನಡೆಯಿಂದ ಹೋಗುತ್ತಿದ್ದ ಆ ಪಾಂಡವರನ್ನು ನೋಡಿದ ಪುರಜನರೆಲ್ಲರೂ ವ್ಯಸನದಿಂದ ತಮ್ಮೊಳಗೆ ಒಬ್ಬರಿಗೊಬ್ಬರು ಹೀಗೆಂದು ಮಾತಾಡಿಕೊಳ್ಳುತಿದ್ದರು. “ಆಹಾ! ಏನೀವಿಪರೀತಕಾಲವು! ಯಾವನು ಮನೆಯಿಂದ ಹೊರಟಾಗ ಅವನ ಅಂಗರಕ್ಷಣೆಗಾಗಿಯೂ, ಗೌರವಕ್ಕಾಗಿಯೂ ದೊಡ್ಡ ಚತುರಂಗಸೈನ್ಯವೇ ಹಿಂಬಾಲಿಸುತಿದ್ದಿತೋ, ಅಂತವನು ಈಗ ಏಕಾಕಿಯಾಗಿ, ತನ್ನ ಪತ್ನಿಯೊಡನೆಯೂ, ಸಹೋದರರೊಡನೆಯೂ, ಪುರೋಹಿತನಾದ ಧೌಮ್ಯನೊಡನೆಯೂ ಹೋಗುತ್ತಿರುವನು. ಮಹಾತ್ಮನಾದ ಈ ಧರ್ಮರಾಜನು ತನಗೆ ಮೋಸಮಾಡಿದ ಈ ಶಕುನಿಯಮೇಲೆ ಆಯುಧವನ್ನೆತ್ತಿದ ತನ್ನ ಸಹೋದರರನ್ನೂ ಹಾಗೆ ಮಾಡದಂತೆ ನಿವಾರಿಸಿ, ರಾಜ್ಯವನ್ನೂ ಬಿಟ್ಟು, ಧರ್ಮಕ್ಕೇ ಬದ್ಧನಾಗಿರುವನು. ಇದಕ್ಕೆ ಮೊದಲು ಯಾವಳನ್ನು ದೇವತೆಗಳಾದರೂ ನೋಡಲಾರದಿದ್ದರೋ, ಆ ದ್ರೌಪದಿಯು ಈಗ ಎಲ್ಲಾ ಜನರ ದೃಷ್ಟಿಗೆ ಬೀಳುತ್ತ ರಾಜಬೀದಿಯಲ್ಲಿ ನಡೆದುಹೋಗುತ್ತಿರುವಳು. ಯಾವಾಗಲೂ ಗಂಧಪುಷ್ಪಾದಿಗಳಿಂದ ಸುವಾಸಿತವಾದ ಮೈಯುಳ್ಳ ಈ ಸುಕುಮಾರಿಗೆ ಇನ್ನುಮೇಲೆ ಮಳೆ, ಗಾಳಿ, ಬಿಸಿಲುಗಳ ಉಪಹತಿಯಿಂದ ದೇಹಲಾವಣ್ಯವು ಕಂದಿಹೋಗದಿರುವುದೆ? ಕುಂತೀದೇವಿಯು ತನ್ನ ಮಕ್ಕಳಿಗೆ ಬಂದ ಈ

ದುಸ್ಥಿತಿಯನ್ನು ನೋಡಿದರೆ, ಹುಚ್ಚುಹಿಡಿದಂತಾಗುವುದು ನಿಜವು. ಈಗ ಅವಳ ಕಣ್ಣಿಗೆ ಇವರನ್ನು ಬೀಳಿಸಲೇಬಾರದು. ಕೇವಲ ದುಷ್ಪುತ್ರನಾಗಿದ್ದರೂ ಅವನು ದುಃಪಡುವುದನ್ನು ನೋಡಿ ತಂದೆತಾಯಿಗಳು ಸಹಿಸಲಾರರು. ಹೀಗಿರುವಾಗ, ಯಾವನ ಗುಣಾತಿಶಯಗಳು ಲೋಕವನ್ನೆಲ್ಲ ವಶಗೊಳಿಸಿರುವುವೋ, ಅಂತಹ ಸತ್ಪುತ್ರನು ಕಷ್ಟಕ್ಕೀಡಾಗಿರುವುದನ್ನು ನೋಡುವಾಗ, ಇವನನ್ನು ಹೆತ್ತ ತಾಯಿಗೆ ಮನಸ್ಸು ಹೇಗಾಗುವುದೆಂಬುದನ್ನು ಕೇಳಬೇಕೆ? ಕ್ರೌರ್ಯವಿಲ್ಲದಿರುವಿಕೆ, ಕನಿಕರ, ದೃಢಮನಸ್ಸು, ಶಾಂತಿ, ದಾಂತಿ, ಶೀಲವೆಂಬೀ ಆರು ಗುಣಗಳಿಂದ ಅಲಂಕೃತನಾದ ಈ ಯುಧಿಷ್ಠಿರನ ಕಷ್ಟವನ್ನು ನೋಡಿ ಪ್ರಜೆಗಳು ಸಂಕಟಪಡದಿರುವರೆ? ಬೇಸಗೆಯಲ್ಲಿ ನೀರು ಬತ್ತಿಹೋದಾಗ, ಆ ನೀರಿನಲ್ಲಿ ಜೀವಿಸುತಿದ್ದ ಮೀನು ಮೊದಲಾದ ಸಮಸ್ತಪ್ರಾಣಿಗಳೂ ತತ್ತಳಿಸುವಂತೆ, ಪ್ರಜಾರಕ್ಷಕನಾದ ಇವನ ಕಷ್ಟಕ್ಕಾಗಿ ಲೋಕವೆಲ್ಲ ತಪಿಸುವುದು. ಬುಡವನ್ನು ಕಡಿದೊಡನೆ ಮರವು ತನ್ನಲ್ಲಿರುವ ಪುಷ್ಪಫಲಗಳೊಡನೆ ಬಾಡಿಹೋಗುವಂತೆ, ಪ್ರಜೆಗಳಿಗೆ ಬೇರಿನಂತೆ ಆಧಾರಭೂತನಾದ ಈ ಯುಧಿಷ್ಠಿರನ ವಿಪತ್ತಿಗಾಗಿ ಅವನನ್ನು ಆಧಾರವಾಗಿ ನಂಬಿದ್ದ ಪ್ರಜೆಗಳೆಂಬ ಪುಷ್ಪಫಲಗಳೆಲ್ಲ ಕೆಟ್ಟುಹೋಗುವುದೇನೂ ಆಶ್ಚರ್ಯವಲ್ಲ. ಆದುದರಿಂದ ಈಗ ನಾವೆಲ್ಲರೂ ನಮ್ಮ ಸರ್ವಸ್ವವನ್ನೂ ಸಾಗಿಸಿಕೊಂಡು, ಅವನ ಸಹೋದರರಂತೆ ಅವನನ್ನೇ ಹಿಂಬಾಲಿಸಿ ಹೋಗುವೆವು. ನಮ್ಮ ಮನೆಮಠಗಳನ್ನೂ, ಗದ್ದೆ ತೋಟಗಳನ್ನೂ ಬಿಟ್ಟುಹೋಗಿ, ಯುಧಿಷ್ಠಿರನ ಸುಖದುಃಖಗಳಿಗೆ ನಾವೂ ಸಮಭಾಗಿಗಳಾಗುವೆವು. ಪತಾಕೆಗಳು ಮುರಿದು, ಧನಧಾನ್ಯಾದಿವಸ್ತುಗಳೆಲ್ಲ ಸಾಗಿಸಲ್ಪಟ್ಟು, ಗುಡಿಸದೆ, ಸಾರಿಸದೆ ಎಲ್ಲೆಲ್ಲಿಯೂ ಧೂಳುಮುಚ್ಚಿ, ಗೃಹದೇವತೆಗಳೂ ಬಿಟ್ಟು ತೊಲಗಿ, ಇಲಿಗಳು ಕೊರೆದು, ಬಲಿಕರ್ಮ, ಯಾಗ ಮಂತ್ರ, ಜಪ, ಹೋಮಾದಿಗಳೆಲ್ಲ ನಿಂತುಹೋಗಿ, ಪಾತ್ರಪದಾರ್ಥಗಳೆಲ್ಲ ಒಡೆದುಬಿದ್ದು, ಕೆಟ್ಟಕಾಲದಿಂದ ಹಾಳುಬಿದ್ದಂತಿರುವ ನಮ್ಮ ಮನೆಗಳನ್ನೆಲ್ಲ ಆ ಶಕುನಿಯೇ ಬಂದು ಅನುಭವಿಸಲಿ! ಪಾಂಡವರಿರುವ ವನವೇ ನಗರವಾಗಲಿ! ನಾವು ಬಿಟ್ಟುಹೋದ ಊರೇ ಕಾಡಾಗಲಿ! ನಾವು ಹೋದ ಕಡೆಗಳಲ್ಲಿ ಸರ್ಪಗಳು ತಮ್ಮ ಹುತ್ತಗಳನ್ನೂ, ಆನೆ, ಸಿಹ್ಮ, ಮೊದಲಾದ

ಕ್ರೂರಮೃಗಗಳೂ, ಪಕ್ಷಿಗಳೂ, ಕಾಡುಗಳನ್ನು ಬಿಟ್ಟು ತೊಲಗಿ, ನಾವು ಬಿಟ್ಟುಹೋದ ಈ ಸ್ಥಳಗಳಿಗೆ ಅವು ಬಂದುಸೇರಲಿ! ಹುಲ್ಲು, ಹಣ್ಣು, ಮಾಂಸ ಮೊದಲಾದುವುಗಳನ್ನೂ, ಪ್ರಾಣಿಗಳಿರತಕ್ಕ ಸ್ಥಳವನ್ನೂ ಅವು ಬಿಟ್ಟು ತೊಲಗಲಿ! ನಾವು ಸುಖವಾಗಿ ಪಾಂಡವರೊಡನೆ ಕಾಡಿನಲ್ಲಿಯೇ ಇದ್ದುಬಿಡುವೆವು" ಎಂದರು. ಹೀಗೆ ಜನರು ನಾನಾವಿಧವಾಗಿ ಆಡಿಕೊಳ್ಳು ತ್ತಿದ್ದ ಮಾತುಗಳು ಧರ್ಮರಾಜನ ಕಿವಿಗೂ ಬೀಳುತಿದ್ದುವು. ಪಾಂಡವರು ಕೃಷ್ಣಾಜಿನವನ್ನೂ, ನಾರುಮುಡಿಯನ್ನೂ ಉಟ್ಟು, ಬಹಳ ದೀನದಶೆಯಲ್ಲಿ ಹೋಗುತ್ತಿರುವುದನ್ನು ಆ ಪುರದೊಳಗಿನ ನಾಲ್ಕುವರ್ಣದ ಸ್ತ್ರೀಯರೂ ತಮ್ಮತಮ್ಮ ಮನೆಯ ಉಪ್ಪರಿಗೆಯನೇರಿ ಕಿಟಿಕಿಗಳಲ್ಲಿ ತಲೆಯಿಕ್ಕಿ ನೋಡುತಿದ್ದರು. ಇದಕ್ಕೆಮೊದಲು ಯಾರ ಕಣ್ಣಿಗೂ ಬೀಳದಂತಿದ್ದ ದ್ರೌಪದಿಯು ಈಗ ರಜಸ್ವಲೆಯಾಗಿ, ಏಕವಸ್ತ್ರಧಾರಿಣಿಯಾಗಿ, ಕೆದರಿದ ಕೇಶಗಳೊಡನೆ, ಬೀದಿಯಲ್ಲಿ ಕಾಲುನಡೆಯಿಂದ ಹೋಗುತ್ತಿರುವುದನ್ನು ನೋಡಿ ಮಹಾವ್ಯಸನದಿಂದ ಮೈಮರೆತಂತೆ "ಹಾ! ಹಾ! ಧಿಕ್! ಧಿಕ್!" ಇಂತಹ ಕಷ್ಟವು ಬರಬಾರದು! ಎಂದು ವಿಲಪಿಸುತ್ತ ಕಣ್ಣೀರುಬಿಡುತಿದ್ದರು. ಇವನ್ನೆಲ್ಲ ಕಿವಿಯಿಂದ ಕೇಳುತ್ತ ಧರ್ಮರಾಜನು ಮುಂದೆಸಾಗುತಿದ್ದನು. ಹೀಗೆ ಎಲ್ಲರೂ ಹೋಗುತ್ತಿರುವಾಗ ದ್ರೌಪದಿಯು, ಅತ್ತೆಯಾದ ಕುಂತಿಯನ್ನೂ, ಇತರ ಸ್ತ್ರೀಯರನ್ನೂ ಕಂಡು ಅವರ ಅನುಮತಿಯನ್ನು ಪಡೆಯುವುದಕ್ಕಾಗಿ ಹೋದಳು. ದ್ರೌಪದಿಯನ್ನು ಕಂಡೊಡನೆ ಅಂತಃಪುರದಲ್ಲಿ ದೊಡ್ಡ ಕೋಲಾಹಲವಾಯಿತು. ಆಗ ಕುಂತಿಯು ದ್ರೌಪದಿಯನ್ನು ನೋಡಿ ಮಹಾವ್ಯಸನದಿಂದ ಸರಿಯಾಗಿ ಮಾತಾಡುವುದಕ್ಕೂ ಸಾಧ್ಯವಿಲ್ಲದೆ ಗದ್ಗದಕಂಠದಿಂದ ಬಹಳ ಕಷ್ಟದೊಡನೆ "ಕುಮಾರೀ! ನಿನಗೆ ಇಂತಹ ಕಷ್ಟವು ಪ್ರಾಪ್ತವಾದರೂ ಎದೆಗುಂದದಿರು! ಸ್ತ್ರೀಧರ್ಮವನ್ನು ನೀನು ಚೆನ್ನಾಗಿ ಬಲ್ಲವಳು! ಒಳ್ಳೇ ಶೀಲವತಿ! ಆಚಾರನಿಷ್ಠಳು! ಆದುದರಿಂದ ನಿನ್ನ ಪತಿಗಳ ವಿಷಯದಲ್ಲಿ ನೀನು ಹೇಗೆ ನಡೆದುಕೊಳ್ಳಬೇಕೆಂಬುದನ್ನು ನಾನೇನೂ ನಿನಗೆ ತಿಳಿಸಬೇಕಾಗಿಲ್ಲ. ಪರಮಸಾಧ್ವಿಯೂ, ಸಕಲ ಗುಣಸಂಪನ್ನಳೂ ಆದ ನಿನ್ನಿಂದ ನೀನು ಹುಟ್ಟಿದ ಮತ್ತು ಮೆಟ್ಟಿದ ಗೃಹಗಳೆರಡೂ ಭೂಷಿತವಾಗಿವೆ. ನಿನ್ನಿಂದ ಆಗಲೇ ದಗ್ಧರಾಗದೆ ಬದುಕಿದ

ಕುರುಗಳೇ ಭಾಗ್ಯಶಾಲಿಗಳೆಂದು ಹೇಳಬೇಕು. ನನ್ನ ಸ್ಮರಣೆಯಿಂದ ನೀನು ಉತ್ಸಾಹಗೊಂಡಿರು. ನಿನಗೆ ದಾರಿಯು ಕ್ಷೇಮಕರವಾಗಲಿ! ಉತ್ತಮಸ್ತ್ರೀಯರಿಗೆ ಎಂತಹ ಕಠಿನದಶೆಯಲ್ಲಿಯೂ ಮನಸ್ಸು ಕಲಗದು. ನಿನ್ನ ಉತ್ತಮಧರ್ಮವೇ ನಿನ್ನನ್ನು ಕಾಯುವುದು. ಅದರಿಂದಲೇ ನಿನಗೆ ಶ್ರೇಯಸ್ಸುಂಟು. ನನ್ನ ಕಿರಿಯಮಗನಾದ ಸಹದೇವನನ್ನು ನೀನು ಕಾಡಿನಲ್ಲಿ ಎಚ್ಚರದಿಂದ ಪೋಷಿಸುತ್ತ, ಧೀಮಂತನಾದ ಅವನು ವ್ಯಸನದಿಂದ ಕಂದದಂತೆ ನೋಡುತ್ತಿರು" ಎಂದಳು. ದ್ರೌಪದಿಯು ಈ ಮಾತನ್ನು ಕೇಳಿ ಕಣ್ಣೀರುಬಿಡುತ್ತ ಹಾಗೆಯೇ ಆಗಲೆಂದು ಹೇಳಿ, ಕೆದರಿದ ಕೇಶಗಳೊಡನೆಯೂ, ಏಕವಸ್ತ್ರದೊಡನೆಯೂ ಮುಂದೆ ಹೊರಟಳು. ಕುಂತಿಯು ಅವಳನ್ನು ಹಿಂಬಾಲಿಸಿ ತನ್ನ ಮಕ್ಕಳ ಬಳಿಗೆ ಬಂದಳು. ರಾಜಯೋಗ್ಯವಾದ ವಸ್ತ್ರಾಭರಣಗಳೇನೂ ಇಲ್ಲದೆ, ಮೈಮೇಲೆ ಕೃಷ್ಣಾಜಿನವನ್ನು ಹೊದೆದು ಲಜ್ಜೆಯಿಂದ ತಲೆಯನ್ನು ಬಗ್ಗಿಸಿ ನಿಂತಿದ್ದ ತನ್ನ ಪುತ್ರರನ್ನು ಕಂಡು ವ್ಯಸನದಿಂದ ಗೋಳಿಡುತ್ತ ಅವರನ್ನು ಪ್ರೇಮದಿಂದ ಆಲಿಂಗಿಸಿಕೊಂಡಳು. ಆಮೇಲೆ ಅವರನ್ನು ಕುರಿತು "ಮಕ್ಕಳಿರಾ! ನೀವು ಸಚ್ಚರಿತ್ರದಿಂದಲೂ, ಶೀಲದಿಂದಲೂ ಅಲಂಕೃತರಾದವರು; ಉದಾರಸ್ವಭಾವವುಳ್ಳವರು; ದೈವಭಕ್ತಿ ಯಾಗಾದಿಗಳಲ್ಲಿ ಆಸಕ್ತರು; ಇಂತಹ ನಿಮಗೆ ಈ ವ್ಯಸನವು ಹೇಗೆ ಬಂದಿತು? ಆಹಾ! ದೈವವ್ಯಾಪಾರವೇ ತಲೆಕೆಳಕಾಗಿದೆ. ನಿಮಗೆ ಯಾರ ಶಾಪದಿಂದ ಹೀಗಾಯಿತೋ ತಿಳಿಯದು! ಉತ್ತಮಗುಣವುಳ್ಳ ನಿಮಗೆ ಇಂತಹ ಕಷ್ಟವು ಬಂದುದು ನಿಮ್ಮ ತಪ್ಪಲ್ಲ. ನಿಮ್ಮನ್ನು ಗರ್ಭದಲ್ಲಿ ಹೊತ್ತ ನನ್ನ ಸೌಭಾಗ್ಯವೇ ಇದು! ಸತ್ಯ, ವೀರ್ಯ, ಬಲ, ತೇಜಸ್ಸು, ಉತ್ಸಾಹ ಮೊದಲಾದ ಗುಣಗಳಿಂದ ಮೇಲೆನಿಸಿದ ನೀವು ಕೇವಲ ಬಡವರಂತೆ ಕಾಡಿನಲ್ಲಿ ಹೇಗೆ ವಾಸಮಾಡುವಿರಿ? ನಿಮಗೆ ಈ ವಿಧವಾದ ವನವಾಸವು ಬರುವುದೆಂದು ನನಗೆ ಮೊದಲೇ ತಿಳಿದಿದ್ದರೆ, ನನ್ನ ಪತಿಯು ಮೃತನಾದಮೇಲೆ ನಾನು ಶತಶೃಂಗದಿಂದ ಹಸ್ತಿನಾವತಿಗೆ ಬರುತ್ತಲೇ ಇರಲಿಲ್ಲ. ನಿಮ್ಮ ಈ ದುಃಖವನ್ನು ನೋಡದೆ ಆಗಲೇ ಮೃತನಾದ ನಿಮ್ಮ ತಂದೆಯೇ ಭಾಗ್ಯಶಾಲಿ! ಅವನು ಒಳ್ಳೇ ಧೀಮಂತನಾದುದರಿಂದಲೇ ಈ ಸಮಯದಲ್ಲಿ ಸ್ವರ್ಗದಲ್ಲಿರುವುದೇ ಮೇಲೆಂದು ಭಾವಿಸಿದನು. ಹಾಗೆ

ಯೋ ಮಾದ್ರಿಯೂ ಪರೋಕ್ಷಜ್ಞಾನವುಳ್ಳವಳೆಂದು ತೋರುವುದು. ನಿಮಗೆ ಈ ಅನರ್ಥವು ಬರುವುದೆಂದು ತಿಳಿದೇ ಅವಳು ಪತಿಯೊಡನೆ ಸಹಗಮನವನ್ನು ಮಾಡಿ ಪ್ರಾಣವನ್ನು ಬಿಟ್ಟಳು. ಅದೊಂದನ್ನೂ ತಿಳಿಯಲಾರದೆ ಇದುವರೆಗೆ ಬದುಕಿದ್ದು, ಈ ನಿಮ್ಮ ಕಷ್ಟಗಳನ್ನೆಲ್ಲ ಕಣ್ಣಾರೆ ನೋಡುವ ನಾನಲ್ಲವೇ ಮಂದಭಾಗ್ಯಳು! ಆ ಮಾದ್ರಿಯು ಪತಿಯೊಡನೆ ರತಿಯಲ್ಲಿಯೂ, ಉತ್ತಮಗತಿಯಲ್ಲಿಯೂ, ಮತಿಯಲ್ಲಿಯೂ ನನ್ನನ್ನು ವಂಚಿಸಿಹೋದಳು. ಛೀ! ಇಂತಹ ಕಷ್ಟದಲ್ಲಿಯೂ ಬದುಕಿರುವುದಕ್ಕಾಗಿ ಆಸೆಪಡುವ ನನ್ನ ಜನ್ಮವನ್ನು ಸುಡಬೇಕು. ಅಯ್ಯೋ! ನಾನು ದುಃಖಕ್ಕೆ ಪಾಲಾದೆನು. ದಿಕ್ಕಿಲ್ಲದಾದೆನು. ಎಷ್ಟೋ ಕಷ್ಟದಿಂದ ಪಡೆದ ಪ್ರಿಯಪುತ್ರರಾದ ನಿಮ್ಮನ್ನು ನಾನು ಅಗಲಿರಲಾರೆನು. ನಾನೂ ನಿಮ್ಮೊಡನೆ ಕಾಡಿಗೆ ಬರುವೆನು. ದ್ರೌಪದೀ! ನನ್ನನ್ನು ಬಿಟ್ಟು ಹೋಗುವೆಯಾ? ಈ ಪ್ರಾಣವು ಎಂದಿದ್ದರೂ ಹೋಗತಕ್ಕುದೇ! ಇದು ಸ್ಥಿರವಲ್ಲ. ಒಂದುವೇಳೆ ಬ್ರಹ್ಮನು ನನಗೆ ಮಾತ್ರ ಸಾವನ್ನೇ ವಿಧಿಸಿಲ್ಲವೋ? ಅಥವಾ ಪ್ರಾಣವು ನನ್ನನ್ನು ಬಿಟ್ಟುಹೋಗಲು ಇಷ್ಟವಿಲ್ಲವೋ! ಹಾ ಕೃಷ್ಣಾ! ದ್ವಾರಕಾವಾಸೀ! ಎಲ್ಲಿರುವೆ? ನನ್ನನ್ನೂ, ನನ್ನ ಮಕ್ಕಳನ್ನೂ ದುಃಖದಿಂದ ಬಿಡಿಸಲಾರೆಯಾ? ಆದ್ಯಂತರಹಿತನಾದ ನಿನಗೆ ನಂಬಿದವರನ್ನು ಕಾಪಾಡತಕ್ಕವನೆಂಬ ಬಿರುದು ಹೇಗೆ ಸುಳ್ಳಾಯಿತು? ಕೀರ್ತಿ, ಧರ್ಮ, ಗೌರವ, ಪರಾಕ್ರಮಗಳಿಂದ ಮೇಲೆನಿಸಿದ ಈ ನನ್ನ ಮಕ್ಕಳು ಹೀಗೆ ದುಃಖಪಡುವುದು ನ್ಯಾಯವೇ? ಕೃಷ್ಣಾ! ಇವರಲ್ಲಿ ದಯೆಯನ್ನು ತೋರಿಸಬಾರದೆ? ನೀತಿವಿದರಾದ ಭೀಷ್ಮ, ದ್ರೋಣ, ಕೃಪಾದಿಗಳು, ನಮ್ಮ ಕುಲಕ್ಕೆ ಪ್ರಧಾನರಾಗಿರುವಾಗ, ಇವರಿಗೆ ಇಂತಹ ಕಷ್ಟವು ಹೇಗೆ ಬಂದಿತು? ಹಾ! ಪಾಂಡುಮಹಾರಾಜಾ! ಎಲ್ಲಿರುವೆ? ಸಾಧುಗಳಾದ ನಿನ್ನ ಮಕ್ಕಳು ಶತ್ರುಗಳ ಮೋಸಕ್ಕೊಳಗಾಗಿ ದೇಶಭ್ರಷ್ಟರಾಗಿ ಹೋಗುತ್ತಿರುವಾಗ ನೀನು ಸುಮ್ಮನಿರಬಹುದೇ? ಕುಮಾರಾ! ಸಹದೇವಾ! ನೀನು ಇಲ್ಲಿಯೇ ನಿಂತುಬಿಡು. ನನಗೆ ಪ್ರಾಣಕ್ಕಿಂತಲೂ ಪ್ರಿಯನಾದ ನೀನಾದರೂ ನನ್ನನ್ನಗಲಿ ಹೋಗದಿರು. ನಿನ್ನ ಸಹೋದರರು ಸತ್ಯಕ್ಕೆ ಕಟ್ಟುಬಿದ್ದು ಕಾಡಿಗೆ ಹೋದರೆಹೋಗಲಿ. ಅವರು ಆ ಧರ್ಮವನ್ನು ಕಾಪಾಡಿದರೆ ನೀನು ಇಲ್ಲಿಯೇ ಇದ್ದು ಮಾತೃರಕ್ಷಣ

ವೆಂಬ ಧರ್ಮವನ್ನು ಸಲ್ಲಿಸು" ಎಂದಳು. ಹೀಗೆ ಕುಂತಿಯು ಗೋಳಿಡುತ್ತಿರುವಾಗಲೇ ಪಾಂಡವರು ಅವಳಿಗೆ ನಮಸ್ಕರಿಸಿ ಹೊರಟುಬಿಟ್ಟರು. ವಿದುರನು ಬಹಳ ದುಃಖಿತನಾಗಿ ಕುಂತಿಗೆ ಅನೇಕ ಸಮಾಧಾನಗಳನ್ನು ಹೇಳಿ, ಅವಳನ್ನು ಮೆಲ್ಲಗೆ ತನ್ನ ಮನೆಗೆ ಕರೆದುಕೊಂಡುಹೋದನು. ಧೃತರಾಷ್ಟ್ರನ ಭಾರ್ಯೆಯರೆಲ್ಲರೂ ದ್ಯೂತಸಭೆಗೆ ದ್ರೌಪದಿಯನ್ನು ಸೆಳೆತಂದುದು, ದುಶ್ಶಾಸನನು ಅವಳ ವಸ್ತ್ರವನ್ನೆಳೆದುದು, ಈ ಸಂಗತಿಯನ್ನೆಲ್ಲ ಕೇಳಿ, ಕೌರವರನ್ನು ಬೈದು ರೋದಿಸುತ್ತ ಚಿಂತಾಕುಲರಾಗಿದ್ದರು. ಧೃತರಾಷ್ಟ್ರನು ತನ್ನ ಮಕ್ಕಳು ಮಾಡಿದ ಅಕ್ರಮಕ್ಕಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪಪಟ್ಟು ಕೊರಗುತಿದ್ದನು. ಅಲ್ಲದೆ ಅವನ ಮನಸ್ಸಿಗೆ ಭೀತಿಯೂ ಹುಟ್ಟಿತು. ಅದರಮೇಲೆ ಅವನು ವಿದುರನನ್ನು ಕರೆಸಿಕೊಂಡು ಅವನೊಡನೆ ಹೀಗೆಂದು ಹೇಳುವನು.

ಇದು ನೂರೊಂದನೆಯ ಅಧ್ಯಾಯವು.

ಧೃತರಾಷ್ಟ್ರನು ಭಯದಿಂದ ವಿದುರನೊಡನೆ ಆಲೋಚನೆಯನ್ನು ಮಾಡಿದುದು. ದುರ್ಯೋಧನಾದಿಗಳು ಮನಸ್ಸಿನಲ್ಲಿ ಭೀತಿಯಿಂದ ದ್ರೋಣನಲ್ಲಿಗೆ ಬಂದು ಮರೆಹುಗಲು ಅವರಿಗೆ ದ್ರೋಣನ ಹಿತವಾದಗಳು.

ಆಗ ಧೃತರಾಷ್ಟ್ರನು ಮನಸ್ಸಿನಲ್ಲಿ ಭಯಗೊಂಡು ವಿದುರನನ್ನು ಕುರಿತು "ವಿದುರಾ! ಪಂಚಪಾಂಡವರೂ, ಧೌಮ್ಯನೂ, ದ್ರೌಪದಿಯೂ, ಇಲ್ಲಿಂದ ಕಾಡಿಗೆ ಪ್ರಯಾಣ ಹೊರಟಾಗ ನಡೆದ ಸಂಗತಿಯೇನು? ಆಗ ಅವರು ನಡೆಸಿದ ಚೇಷ್ಟೆಗಳೇನು?" ಎಂದನು. ಅದಕ್ಕಾ ವಿದುರನು, "ರಾಜಾ! ಯುಧಿಷ್ಠಿರನು ಮುಖಕ್ಕೆ ಬಟ್ಟೆಯನ್ನು ಮುಸುಕುಹಾಕಿಕೊಂಡೇ ಹೋಗುತಿದ್ದನು. ಭೀಮನು ಉಬ್ಬಿದ ತನ್ನ ಎರಡು ಭುಜಗಳನ್ನೂ ಆಗಾಗ ನೋಡಿಕೊಳ್ಳುತ್ತಿದ್ದನು. ಅರ್ಜುನನು ಬೀದಿಯ ಮರಗಳನ್ನೆತ್ತಿ ಸುತ್ತಲೂ ಎರಚುತ್ತ ಧರ್ಮರಾಜನ ಹಿಂದೆ ಹೋದನು. ಸಹದೇವನು ಮುಖಕ್ಕೆ ವರ್ಣವನ್ನು ಬಳಿದುಕೊಂಡು ಹೋದನು. ನಕುಲನು

ಮಹಾ ವ್ಯಸನದಿಂದ ಮೈಗೆಲ್ಲಾ ಧೂಳನ್ನು ಸವರಿಕೊಂಡು ಹೋಗುತ್ತಿರುವನು. ದ್ರೌಪದಿಯು ಬಿಚ್ಚಿದ ತನ್ನ ತಲೆಕೂದಲನ್ನೇ ಮುಖಕ್ಕೆ ಮರೆಮಾಡಿಕೊಂಡು ರೋದಿಸುತ್ತ ಹೋಗುತ್ತಿರುವಳು. ಧೌಮ್ಯನು ದಾರಿಯಲ್ಲಿ ಸಿಕ್ಕಿದ ದರ್ಭೆಗಳನ್ನು ಕಿತ್ತುಕೊಂಡು, ರುದ್ರ, ಯಮ ಮಂತ್ರಗಳನ್ನು ಸ್ವರದೊಡನೆ ಜಪಿಸುತ್ತ ಹೋಗುತ್ತಿರುವನು" ಎಂದನು. ಆಗ ಧೃತರಾಷ್ಟ್ರನು "ವಿದುರಾ! ಪಾಂಡವರು ಈ ರೀತಿಯಾಗಿ ವಿವಿಧ ಚೇಷ್ಟೆಗಳನ್ನು ತೋರಿಸಿಕೊಂಡು ಹೋದ ಕಾರಣವೇನು?" ಎಂದು ಕೇಳಲು, ಅದಕ್ಕಾ ವಿದುರನು "ಮಹಾರಾಜಾ! ಧರ್ಮರಾಜನಿಗೆ ರಾಜ್ಯ ಧನಾದಿಗಳೆಲ್ಲವೂ ಹೋಗಿ ನಿನ್ನ ಮಕ್ಕಳಿಂದ ಅಂತಹ ಅವಮಾನವುಂಟಾದರೂ, ಅವನಿಗೆ ಮಾತ್ರ ನಿನ್ನ ಮಕ್ಕಳಲ್ಲಿ ಕನಿಕರವಿದ್ದೇ ಇದೆ. ಅವನ ಬುದ್ಧಿಯು ಎಂತಹ ಸ್ಥಿತಿಯಲ್ಲಿಯೂ ಧರ್ಮವನ್ನು ಬಿಟ್ಟು ಕದಲದು. ಅವನು ನಿನ್ನ ಮಕ್ಕಳ ಮೋಸಕ್ಕೊಳಗಾದುದರಿಂದ ಕೋಪಗೊಂಡಿದ್ದರೂ ತನ್ನ ಉಗ್ರದೃಷ್ಟಿಯಿಂದ ನೋಡಿದರೆ ಆಗಲೇ ನಿನ್ನ ಮಕ್ಕಳು ಸುಟ್ಟು ಬೂದಿಯಾಗುವರೆಂಬ ಭಯದಿಂದ, ತಾನು ಕಣ್ಣನ್ನು ತೆರೆಯದೆ ಇರುವನು. ಅದಕ್ಕಾಗಿಯೇ ಅವನು ದಾರಿಯಲ್ಲಿ ಹೋಗುವಾಗಲೂ, ಮುಖವನ್ನು ಮುಚ್ಚಿಕೊಂಡೇ ಹೋದನು ಅದರಂತೆಯೇ ಭೀಮನು ತನ್ನ ವಿಶಾಲ ಭುಜಗಳನ್ನು ನೋಡಿಕೊಂಡು ಹೋದುದಕ್ಕೂ ಕಾರಣವುಂಟು. ತನಗೆ ಬಾಹುಬಲದಲ್ಲಿ ಸಮಾನರಿಲ್ಲವೆಂದೂ' ತನಗಿರುವ ಈ ತೋಳಿನ ಭಾಗ್ಯಕ್ಕೆ ತಕ್ಕಂತೆ ಶತ್ರುಗಳಿಗೆ ಪ್ರತೀಕಾರವನ್ನು ಮಾಡುವೆನೆಂದೂ ತನ್ನ ಭುಜಗಳನ್ನು ನೋಡುತ್ತ ಹೋಗುವನು. ಅರ್ಜುನನು ತಾನು ಮುಂದಿನ ಯುದ್ಧದಲ್ಲಿ ಬಾಣಗಳನ್ನೆರಚುವ ರೀತಿಯನ್ನು ಜನಗಳಿಗೆ ತೋರಿಸುವುದಕ್ಕಾಗಿ, ಮರಳನ್ನೆರಚುತ್ತ ಹೋಗುವನು. ಸಹದೇವನು ಈ ಸ್ಥಿತಿಯಲ್ಲಿ ತನ್ನ ಮುಖವನ್ನು ಯಾರೂ ನೋಡಬಾರದೆಂದು ತನ್ನ ಮುಖಕ್ಕೆ ಬಣ್ಣವನ್ನು ಬಳಿದುಕೊಂಡಿರುವನು. ಸೌಂದರ್ಯದಲ್ಲಿ ಎಣೆಯಿಲ್ಲದ ನಕುಲನು, ದಾರಿಯಲ್ಲಿ ತನ್ನ ಆಕೃತಿಯು ಸ್ತ್ರೀಯರ ಮನಸ್ಸನ್ನಾಕರ್ಷಿಸಬಾರದೆಂದು ಮೈಗೆಲ್ಲಾ ಧೂಳನ್ನು ಸವರಿಕೊಂಡು ಹೋಗುತ್ತಿರುವನು. ತಲೆಕೂದಲನ್ನು ಬಿಚ್ಚಿ, ರಜಸ್ವಲೆಯಾಗಿ, ರಕ್ತದಕಲೆಯುಳ್ಳ ಒಂದೇ ಬಟ್ಟೆಯನ್ನುಟ್ಟು,

ಪತಿಗಳ ಹಿಂದೆ ರೋದಿಸುತ್ತ ಹೋಗುವಾಗ ಪಾಂಚಾಲಿಯು "ಯಾರಿಂದ ನಾನು ಇಂತಹ ಕಷ್ಟಕ್ಕೀಡಾದೆನೋ ಅವರ ಪತ್ನಿಯರೂ, ಇಲ್ಲಿಂದ ಹದಿನಾಲ್ಕನೆಯ ವರ್ಷದಲ್ಲಿ ಪತಿ, ಪುತ್ರ, ಬಂಧುಜನಗಳನ್ನೆಲ್ಲ ಕಳೆದುಕೊಂಡು ಬಂಧುಗಳ ರಕ್ತದಿಂದ ಲೇಪಿತವಾದ ಮೈಯುಳ್ಳವರಾಗಿ, ತಲೆಯನ್ನು ಬಿಚ್ಚಿಕೊಂಡು ಬಂಧುಗಳಿಗೆ ತರ್ಪಣವನ್ನು ನಡೆಸಿ, ಇದೇ ರೀತಿಯಲ್ಲಿ ಹಸ್ತಿನಪುರಕ್ಕೆ ಪ್ರವೇಶಿಸುವರು" ಎಂದು ಸ್ಪಷ್ಟವಾಗಿ ಹೇಳುತ್ತಲೇ ಹೋಗುವಳು. ಪುರೋಹಿತನಾದ ಧೌಮ್ಯನು ದಕ್ಷಿಣಪಶ್ಚಿಮದಿಕ್ಕುಗಳಲ್ಲಿರುವ ದರ್ಭೆಗಳನ್ನೆಲ್ಲ ಸಂಗ್ರಹಿಸಿಕೊಂಡು ಪಾಂಡವವೈರಿಗಳ ವಿನಾಶಕ್ಕಾಗಿ ರುದ್ರ, ಯಮಮಂತ್ರಗಳನ್ನು ಜಪಿಸುತ್ತ ಮುಂದೆ ಹೋಗುತ್ತಿರುವನು. ಮುಂದಿನ ಯುದ್ಧದಲ್ಲಿ ಭರತವಂಶದವರೆಲ್ಲರೂ ಹತರಾದಮೇಲೆ ಕೌರವಪುರೋಹಿತರು ಇಂತಹ ಅಪರಮಂತ್ರಗಳನ್ನೇ ಜಪಿಸುವರೆಂಬುದನ್ನು ತಿಳಿಸುವುದೂ ಅವನ ಉದ್ದೇಶವು" ಎಂದನು. ತಿರುಗಿ ಧೃತರಾಷ್ಟ್ರನು "ವಿದುರಾ! ಅದಾಯಿತು! ಅಲ್ಲಿ ಜೂಜಾಟಕ್ಕಾಗಿ ಕುಳಿತಿದ್ದವರು ಆಮೇಲೆ ಹೇಳಿದುದೇನು? ಪುರವಾಸಿಗಳೇನೆಂದರು? ಅವನ್ನೆಲ್ಲ ತಿಳಿಸು" ಎನಲು, ವಿದುರನು "ಮಹಾರಾಜಾ! ಬ್ರಾಹ್ಮಣಾದಿ ಚತುರ್ವರ್ಣದವರೊಡನೆ ಪುರವಾಸಿಗಳೆಲ್ಲರೂ ಪಾಂಡವರು ಹೋಗುವುದನ್ನು ನೋಡಿ ವ್ಯಸನದಿಂದ "ಹಾ! ಹಾ! ನಮ್ಮ ನಾಥರು ನಮ್ಮನ್ನೆಲ್ಲ ಬಿಟ್ಟುಹೋಗುವರಲ್ಲಾ! ಕೌರವರಲ್ಲಿ ವೃದ್ಧರೆನಿಸಿಕೊಂಡವರೂಕೂಡ ಬುದ್ಧಿಯಿಲ್ಲದ ಬಾಲಕರಂತೆ ಹೀಗೆ ಮಾಡಬಹುದೆ? ಛೀ! ಛೀ! ಏನನ್ಯಾಯವಿದು? ಆ ವೃದ್ಧರಾಜನು ರಾಜ್ಯದಲ್ಲಿ ಪೇರಾಸೆಯಿಂದ ಪಾಂಡುವಿನ ಮಕ್ಕಳನ್ನು ಊರುಬಿಟ್ಟು ಹೊರಡಿಸಿದನಲ್ಲಾ! ಅಂತಹ ಧರ್ಮಾತ್ಮರಾದ ಪಾಂಡವರು ಹೋದಮೇಲೆ ನಾವೆಲ್ಲ ಅನಾಥರಾದೆವು. ದುಷ್ಟರೂ, ಲೋಭಿಗಳೂ ಆದ ಕೌರವರಿಂದ ನಮಗೇನುಸುಖವಿದೆ?" ಎಂದು ಜನರೆಲ್ಲರೂ ನಮ್ಮನ್ನು ಬೈಯುತ್ತಲೇ ಇರುವರು. ಪಾಂಡವರಾದರೋ ಕೌರವಕುಲಕ್ಕೆ ನಾಶಸೂಚಕವಾದ ಚೇಷ್ಟೆಗಳನ್ನು ಜನರಿಗೆ ತೋರಿಸುತ್ತ ಪ್ರಯಾಣಮಾಡಿದರು. ಮಹಾರಾಜಾ! ಅವರು ಹೊರಡುವಾಗ ಕಾಣಿಸಿದ ಕೆಲವು ದುರ್ನಿಮಿತ್ತಗಳನ್ನು ತಿಳಿಸುವೆನು ಕೇಳು. ಅವರು ಹಸ್ತಿನಾಪುರವನ್ನು ಬಿಟ್ಟು ಹೊರಟಾಗ ಆಕಾಶ

ದಲ್ಲಿ ಮೇಘಗಳಿಲ್ಲದೆ ಮಿಂಚು ಹೊಡೆಯಿತು. ಭೂಮಿಯು ಅದಿರಿತು. ಅಮಾವಾಸ್ಯೆಯಿಲ್ಲದೆ ಸೂರ್ಯಗ್ರಹಣವು ಕಾಣಿಸಿತು. ಹಸ್ತಿನಾಪುರವನ್ನು ಅಪ್ರದಕ್ಷಿಣವಾಗಿ ಸುತ್ತುತ್ತ ಆಕಾಶದಿಂದ ಉಲ್ಕೆಯು ಬಿದ್ದಿತು. ಹದ್ದು, ಕಾಗೆ, ನರಿ ಮೊದಲಾದ ಮಾಂಸಾಹಾರಿಜಂತುಗಳು ದೇವಾಲಯಗಳಲ್ಲಿಯೂ, ಗೋಪುರಗಳಲ್ಲಿಯೂ, ಪ್ರಾಕಾರಗಳಲ್ಲಿ ಪ್ರಧಾನವೃಕ್ಷಗಳಮೇಲೆಯೂ, ಅಟ್ಟಲೆಗಳಮೇಲೆಯೂ ಬಂದು ನೆರೆದು ಕೂಗಿಡುತಿದ್ದುವು. ರಾಜಾ! ನಿನ್ನ ದುರಾಲೋಚನೆಯಿಂದ ಭರತಕುಲಕ್ಕೆ ನಾಶಸೂಚಕಗಳಾದ ಈ ಮಹೋತ್ಪಾತಗಳೆಲ್ಲ ತಲೆದೋರಿದುವು.

ಧೃತರಾಷ್ಟ್ರವಿದುರರಿಬ್ಬರೂ ಈ ಮಾತುಗಳನ್ನಾಡುತ್ತಿರುವ ಸಮಯಕ್ಕೆ ಸರಿಯಾಗಿ, ಆ ಸಭಾಮಧ್ಯದಲ್ಲಿ ಮಹರ್ಷಿಗಣಗಳೊಡನೆ ನಾರದಮುನಿಯು ಕಾಣಿಸಿಕೊಂಡು, ಅಲ್ಲಿದ್ದವರೆಲ್ಲರಿಗೂ ಅತ್ಯಂತ ಭೀತಿಹುಟ್ಟುವಂತೆ “ ಎಲೈ ಸದಸ್ಯರೇ ಕೇಳಿರಿ ! ಈ ದುರ್ಯೋಧನನು ನಡೆಸಿದ ಅಕ್ರಮಕ್ಕೆ ಫಲವಾಗಿ, ಇಂದಿನಿಂದ ಹದಿನಾಲ್ಕನೆಯ ವರ್ಷಾರಂಭದಲ್ಲಿ ಭೀಮಾರ್ಜುನರ ಬಲದಿಂದ ಕೌರವರಿಗೆಲ್ಲ ನಾಶವು ಸಿದ್ಧವು!” ಎಂಬೀ ಕಠೋರವಾಕ್ಯವನ್ನು ಹೇಳಿ, ಒಡನೆಯೇ ಆಕಾಶಮಾರ್ಗವಾಗಿ ಕಣ್ಮರೆಯಾಗಿಬಿಟ್ಟನು. ಜನಮೇಜಯರಾಜಾ ! ಈ ಮಾತು ಕಿವಿಗೆ ಬಿದ್ದಮೇಲೆ ದುರ್ಯೋಧನ ಕರ್ಣ ಶಕುನಿಗಳು ಮೂವರಿಗೂ ಎದೆ ನಡುಗಿತು. ಆ ಮೂವರೂ ಒಡನೆಯೇ ದ್ರೋಣನ ಬಳಿಗೆ ಬಂದು, ಅವನಲ್ಲಿ ಮರೆಹೊಕ್ಕು, ತಮ್ಮ ರಾಜ್ಯವನ್ನೇ ಅವನಿಗೆ ಒಪ್ಪಿಸಿಬಿಡುವುದಾಗಿ ಮೊರೆಯಿಟ್ಟರು. ಆಗ ದ್ರೋಣನು ಅವರೆಲ್ಲರನ್ನೂ ನೋಡಿ “ ಕೌರವರೇ ! ಈಗ ನಾನು ಮಾಡುವುದೇನಿದೆ? ಪಾಂಡವರು ದೇವಕುಮಾರರೆಂದೂ, ಅವರು ಎಂತವರಿಗೂ ಅವಧ್ಯರೆಂದೂ ಬ್ರಾಹ್ಮಣರು ಹೇಳುವರು. ಆದರೆ ನಾನೇನೋ ನನ್ನಿಂದಾದವರೆಗೆ ಮನಃಪೂರ್ವಕವಾಗಿ ನನ್ನನ್ನು ನಂಬಿದ ಧೃತರಾಷ್ಟ್ರನನ್ನೂ, ಅವನ ಮಕ್ಕಳನ್ನೂ ಕೈಬಿಡದೆ ಅವರನ್ನನುವರ್ತಿಸುತ್ತಿರುವೆನು. ಆದರೂ ದೈವವು ಬಹಳ ಬಲವತ್ತರವಾದುದು. ನಿಮ್ಮಿಂದ ಪರಾಜಿತರಾದ ಪಾಂಡವರೇನೋ ಧರ್ಮಕ್ಕೆ ಕಟ್ಟುಬಿದ್ದು ಈಗಲೇ ವನಕ್ಕೆ

ಹೋಗುವರು. ಅವರು ಅಲ್ಲಿ ಹನ್ನೆರಡುವರ್ಷಗಳೂ ಬ್ರಹ್ಮಚರ್ಯದಲ್ಲಿದ್ದು ಬಂದಮೇಲೆ, ಕ್ಷತ್ರಧರ್ಮವನ್ನು ಹಿಡಿದು ಕೋಪವಶರಾಗಿ ನಿಮ್ಮಮೇಲೆ ಹಗೆತೀರಿಸಿಕೊಳ್ಳದೆ ಬಿಡಲಾರರು. ಇದಲ್ಲದೆ ಓ ಧೃತರಾಷ್ಟ್ರಮಹಾರಾಜಾ! ಹಿಂದೆ ನಾನು ಬರೀ ಸ್ನೇಹದ ಕಲಹಕ್ಕಾಗಿ ದ್ರುಪದನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದೆನು. ಇದಕ್ಕಾಗಿ ಅವನು ನನ್ನನ್ನು ಕೊಲ್ಲತಕ್ಕ ಪುತ್ರನೊಬ್ಬನನ್ನು ಪಡೆಯಬೇಕೆಂದು ಯಾಗವನ್ನು ನಡೆಸಿದನು. ಆ ಯಾಗವನ್ನು ಮಾಡಿದ ಯಾಜೋಪಯಾಜಕರೆಂಬ ಮಹರ್ಷಿಗಳ ತಪಃಪ್ರಭಾವದಿಂದ, ಅಲ್ಲಿನ ಯಾಗವೇದಿಕೆಯಲ್ಲಿ ಧೃಷ್ಟದ್ಯುಮ್ನನೆಂಬ ಒಬ್ಬ ಮಗನೂ, ದ್ರೌಪದಿಯೆಂಬ ಕನ್ಯಾರತ್ನವೂ ಹುಟ್ಟಿದರು. ಪಾಂಡವರೂ ಧೃಷ್ಟದ್ಯುಮ್ನನೂ ಭಾವಮೈದಂದಿರು. ಆದುದರಿಂದ ಅವರಲ್ಲಿ ಅನ್ಯೋನ್ಯಪ್ರೀತಿಗೌರವಗಳುಂಟು. ಒಬ್ಬರನ್ನೊಬ್ಬರು ಬಿಟ್ಟುಕೊಡಲಾರರು. ಆ ಧೃಷ್ಟದ್ಯುಮ್ನನಿಂದ ನನಗಾದರೂ ಮರಣಭಯವು ತಪ್ಪಿದುದಲ್ಲ. ಧನುರ್ಬಾಣ ಯುದ್ಧಕವಚಗಳೊಡಗೂಡಿ, ಅಗ್ನಿಜ್ವಾಲೆಯಂತೆ ಜ್ವಲಿಸುತಿದ್ದ ಆ ಧೃಷ್ಟದ್ಯುಮ್ನನನ್ನು ಅಗ್ನಿದೇವನೇ ದ್ರುಪದನಿಗೆ ಕೊಟ್ಟಿರುವನು. ರಥಾತಿರಥರನ್ನು ಗಣನೆಮಾಡುವಾಗ ಮೊದಲನೆಯವನೆನಿಸಿಕೊಂಡ ಅರ್ಜುನನೊಡನೆ ನನಗೆ ಯುದ್ಧವು ಸಂಭವಿಸಿದಾಗ ನನಗೆ ಪ್ರಾಣವಿಯೋಗವೇನೋ ನಿಶ್ಚಯವೇ! ಕೌರವರೇ! ಲೋಕದಲ್ಲಿ ಮರಣಭಯಕ್ಕಿಂತಲೂ ದೊಡ್ಡ ದುಃಖವು ಬೇರೇನಿದೆ? “ದ್ರೋಣನಿಗೆ ಧೃಷ್ಟದ್ಯುಮ್ನನು ಮೃತ್ಯು” ವೆಂಬ ಮಾತು ಲೋಕವ್ಯಾಪಿಯಾಗಿದೆ. ಅವನು ಪಾಂಡವರ ಕಡೆಯಲ್ಲಿರುವುದಕ್ಕೂ ಅದೇ ಕಾರಣವೆಂದು ಜನರೆಲ್ಲ ಆಡಿಕೊಳ್ಳುವರು. ನಿಮ್ಮಿಂದ ನನಗೂ ಅಂತಹ ವಿಪರೀತಕಾಲವು ಬಂದೊದಗಿತು. ಇನ್ನಾದರೂ ನಿಮ್ಮ ಹಿತಕ್ಕೆ ದಾರಿಯನ್ನು ನೀವು ನೋಡಿರಿ. ಈಗ ನೀವು ಇಷ್ಟು ದೂರಕ್ಕೆ ಮಾಡಿದರೂ ಏನನ್ನೂ ಮಾಡಿದಂತಾಗಲಿಲ್ಲ. ಹಿಮಗಾಲದ ತಾಳವೃಕ್ಷಛಾಯೆಯಂತೆ ಈಗಿನ ನಿಮ್ಮ ರಾಜ್ಯವು ಅತ್ಯಲ್ಪಕಾಲದ ಸುಖವು. ಈಗಲೇ ಯಜ್ಞಗಳನ್ನೂ ದಾನಗಳನ್ನೂ ಮಾಡಿರಿ! ಸೌಖ್ಯವನ್ನನುಭವಿಸಿರಿ. ನಾಳೆ ಹದಿನಾಲ್ಕನೆಯ ವರ್ಷದ ಆರಂಭದಲ್ಲಿಯೇ ನಿಮಗೆಲ್ಲ ಆಪತ್ತು ನಿಶ್ಚಯವು. ಇನ್ನು ನಿಮ್ಮ ಇಷ್ಟವು. ದುರ್ಯೋಧನಾ!

ಈಗಲೂ ನೀನು ಧರ್ಮರಾಜನೊಡನೆ ಸಂಧಿಗೆ ಯತ್ನಿಸು'' ಎಂದನು. ಆಗ ಧೃತರಾಷ್ಟ್ರನು "ಗುರುವಾದ ದ್ರೋಣನ ಮಾತು ಸಾಧುವಾಗಿದೆ. ವಿದುರಾ! ಪಾಂಡವರನ್ನು ಹಿಂತಿರುಗಿಸಿ ಬೇಗನೆ ಕರೆದುಕೊಂಡು ಬಾ! ಒಂದುವೇಳೆ ಅವರು ಹಿಂತಿರುಗಿ ಬಾರದಿದ್ದರೂ, ೩ ನನ್ನ ಮಕ್ಕಳು ಶಸ್ತ್ರಾಸ್ತ್ರರಥಸೈನ್ಯಗಳೊಡನೆ ರಾಜಭೋಗವುಳ್ಳವರಾಗಿಯೇ ಹೋಗಲಿ'' ಎಂದನು.

ಇದು ನೂರೆರಡನೆಯ ಅಧ್ಯಾಯವು.



 ಧೃತರಾಷ್ಟ್ರ ಸಂಜಯರ ಸಂವಾದಗಳು. 

ಅತ್ತಲಾಗಿ ಪಾಂಡವರು ಕಾಡಿಗೆ ಹೊರಟುದದು ಮೊದಲು ಧೃತರಾಷ್ಟ್ರನ ಮನಸ್ಸಿಗೆ ಚಿಂತೆಹಿಡಿದು, ಸ್ವಲ್ಪವಾದರೂ ನೆಮ್ಮದಿಯಿಲ್ಲದೆ ಆಗಾಗ ನಿಟ್ಟುಸಿರು ಬಿಡುತ್ತ ಕೊರಗುತಿದ್ದನು. ಇದನ್ನು ನೋಡಿ ಸಂಜಯನು "ರಾಜಾ! ಪಾಂಡವರನ್ನು ಕಾಡಿಗಟ್ಟಿದುದಾಯಿತು. ಧನಸಮೃದ್ಧವಾದ ರಾಜ್ಯವೆಲ್ಲ ನಿನ್ನ ಕೈವಶವಾಯಿತು. ಇನ್ನು ನೀನೇಕೆ ದುಃಖಪಡುವೆ'' ಎಂದನು. ಅದಕ್ಕಾ ಧೃತರಾಷ್ಟ್ರನು "ಅಂತಹ ಪ್ರಬಲರಾದ ಪಾಂಡವರೊಡನೆ ವೈರವುಳ್ಳವರಿಗೆ ದುಃಖವಿಲ್ಲದಿರುವುದುಂಟೇ?'' ಎಂದನು. ಆಗ ಸಂಜಯನು "ಮಹಾರಾಜಾ! ವೈರವು ಪ್ರಬಲವಾಗಿ ಬೆಳೆದುದೇನೋ ನಿಜವೇ! ನೀನೇ ಅದನ್ನು ಬೆಳೆಸಿದವನು. ಲೋಕಕ್ಕೆಲ್ಲ ವಿನಾಶಕಾಲವೇನೋ ಬಂದೊದಗಿದೆ. ಭೀಷ್ಮನೂ, ದ್ರೋಣನೂ, ವಿದುರನೂ, ಬೇಡಬೇಡವೆಂದು ಎಷ್ಟೆಷ್ಟೋ ವಿಧವಾಗಿ ಹೇಳಿ ನಿವಾರಿಸಿದರೂ, ಬುದ್ಧಿಗೆಟ್ಟ ನಿನ್ನ ಮಗನು ಸ್ವಲ್ಪವಾದರೂ ನಾಚಿಕೆಯಿಲ್ಲದೆ ದ್ರೌಪದಿಯನ್ನು ಸೆಳೆದುತರುವಂತೆ ಸೂತಪುತ್ರನಾದ ಪ್ರಾತಿಕಾಮಿಗೆ ಆಜ್ಞಾಪಿಸಿದನು. ದೈವವು ಯಾವನನ್ನು ಕೆಡಿಸಬೇಕೆಂದೆಣಿಸುವುದೋ ಅವನ ಬುದ್ಧಿಯನ್ನು ಮೊದಲು ಕೆಡಿಸುವುದು. ಅಂತವನು ವಿಪರೀತ ಮಾರ್ಗಗಳನ್ನೇ ಹುಡುಕುವನು. ಕೇಡುಗಾಲಕ್ಕೆ ತಕ್ಕಂತೆ ಬುದ್ಧಿಯೂ ಕಲಗಿ, ಅನೀತಿ

ಯೇ ನೀತಿಯಂತೆ ತೋರುವುದು. ಕೇಡುಬರುವ ಕಾಲಕ್ಕೆ ಕೆಟ್ಟುದೆಲ್ಲ ಒಳ್ಳೆಯದಾಗಿಯೂ, ಒಳ್ಳೆಯದೆಲ್ಲ ಕೆಟ್ಟುದಾಗಿಯೂ ತೋರುವುದು. ನಿನ್ನ ಮಗನಿಗೂ ಹಾಗೆಯೇ ಬುದ್ಧಿಯು ವಿಪರೀತವಾದಂತಿದೆ. ಕಾಲವೆಂಬುದು ದಂಡವನ್ನೆತ್ತಿ ಯಾರ ತಲೆಯನ್ನೂ ಬಡಿಯುವುದಿಲ್ಲ. ಕಾರ್ಯಾಲೋಚನೆಗಳನ್ನು ತಲೆಕೆಳಗಾಗಿ ಮಾಡಿಸುವುದೇ ಕಾಲದ ಶಕ್ತಿಯೆಂದು ತಿಳಿ! ಅಯೋನಿಜೆಯೂ, ತಪಸ್ವಿನಿಯೂ, ಕುಲವತಿಯೂ, ರೂಪವತಿಯೂ ಆದ ಆ ಮಹಾಸಾಧ್ವಿಯನ್ನು ಸಭಾಮಧ್ಯಕ್ಕೆ ಎಳೆದಾಡಿಸಿದಾಗಲೇ, ನಿನ್ನ ಮಕ್ಕಳನ್ನು ಭಯಂಕರವಾದ ಕಾಲವು ಹಿಡಿದಿದೆಯೆಂಬುದು ಸ್ಪಷ್ಟವು. ರಾಜಾ! ಕಪಟದ್ಯೂತಕಾರನು ಹೊರತು ಬೇರೆ ಯಾವನು ತಾನೇ ಧರ್ಮಜ್ಞಳಾದ ಆ ಪರಮ ಪತಿವ್ರತೆಯನ್ನು ಬಲಾತ್ಕಾರದಿಂದ ಸಭಾಮಧ್ಯಕ್ಕೆ ಎಳೆಯಿಸುವನು? ಋತುಮತಿಯಾದುದರಿಂದ ಏಕವಸ್ತ್ರಧಾರಿಣಿಯಾಗಿದ್ದ ಆ ಪುಣ್ಯಕಾಂತೆಯನ್ನು ಸಭೆಗೆ ಸೆಳೆದಾಗ, ಅವಳು ಅತ್ತಲಾಗಿ ಸರ್ವಸ್ವವನ್ನೂ ಕಳೆದುಕೊಂಡು, ಧರ್ಮಪಾಶದಲ್ಲಿ ಕಟ್ಟುಬಿದ್ದು, ಪರಾಕ್ರಮಿಸಲು ಶಕ್ತಿಯಿಲ್ಲದವರಂತೆ ದೀನರಾಗಿ ಕುಳಿತಿದ್ದ ತನ್ನ ಪತಿಗಳನ್ನು ತನ್ನ ಕಡೆಗಣ್ಣಿಂದ ನೋಡಿದಳು. ದುಃಖಕ್ಕೆ ಅನರ್ಹಳಾದ ಆ ಸಾಧ್ವಿಯು ಅಂತಹ ದುಃಖದಲ್ಲಿ ಸಿಕ್ಕಿ ಕೋಪಗೊಂಡಿರುವಾಗ, ನಿನ್ನ ಮಗನೂ, ಕರ್ಣನೂ ಎಂತಹ ಕಠೋರವಾಕ್ಯಗಳನ್ನಾಡಿದರೋ ನೀನು ಕೇಳಲಿಲ್ಲವೇ? ಇವೆಲ್ಲ ವಿಪರೀತಕಾಲಕ್ಕಾಗಿಯೇ ನಡೆದುವೆಂದು ನನಗೆ ತೋರಿದೆ'' ಎಂದನು. ಆಗ ಧೃತರಾಷ್ಟ್ರನು ''ಸಂಜಯಾ! ವಾಸ್ತವವೇ! ದುಃಖಸೂಚಕವಾದ ಆ ದ್ರೌಪದಿಯ ದೃಷ್ಟಿಯೇ ಭೂಮಿಯನ್ನು ದಹಿಸಿಬಿಡುವುದು. ಇನ್ನು ನನ್ನ ಮಕ್ಕಳಲ್ಲಿ ಯಾವನೊಬ್ಬನಾದರೂ ದಗ್ಧನಾಗದೆ ಉಳಿಯುವುದು ನಿಶ್ಚಯವೇ? ಇಲ್ಲವೇ ಇಲ್ಲ. ಮಹಾಧಾರ್ಮಿಕಳಾದ ಆ ದ್ರೌಪದಿಯು ಬಂದುದನ್ನು ಕಂಡೊಡನೆ ಭಾರತವಂಶದ ರಾಜಪತ್ನಿಯರೆಲ್ಲರೂ ಗಾಂಧಾರಿಯೊಡನೆ, ಭಯಂಕರವಾಗಿ ಗೋಳಿಡತೊಡಗಿದರು. ಅವರು ತಮ್ಮ ಮಕ್ಕಳೊಡನೆ ಈಗಲೂ ಸದಾ ದುಃಖಿಸುತ್ತಲೇ ಇರುವರು. ಅದಿರಲಿ! ದ್ರೌಪದಿಯನ್ನು ಸೆಳೆದುದಕ್ಕಾಗಿ ಬ್ರಾಹ್ಮಣರೆಲ್ಲರೂ ಕೋಪಾವಿಷ್ಟರಾದರು. ಆಗ ಭಯಂಕರವಾದ ಬಿರುಗಾಳಿ ಬೀಸಿತು. ಆಕಾಶದಿಂದ ಕೊಳ್ಳಿಗಳು ಬಿದ್ದು

ವು. ಸೂರ್ಯನಿಗೆ ಪರ್ವಕಾಲವಿಲ್ಲದೆಯೇ ಗ್ರಹಣವು ಹಿಡಿಯಿತು. ಇವೆಲ್ಲ ಪ್ರಜೆಗಳಿಗೆ ಭಯಂಕರಗಳಾಗಿದ್ದುವು. ರಥಶಾಲೆಯಲ್ಲಿ ಬೆಂಕಿ ಹತ್ತಿತು. ಇದ್ದಕ್ಕಿದ್ದಹಾಗೆ ಭರತಕುಲಕ್ಕೆ ಕೇಡನ್ನು ಸೂಚಿಸುವಂತೆ ಧ್ವಜಗಳು ಮುರಿದುಬಿದ್ದುವು. ದುರ್ಯೋಧನನ ಅಗ್ನಿಶಾಲೆಯಲ್ಲಿ ನರಿಗಳು ಬಂದು ಊಳಿಡತೊಡಗಿದುವು. ಅದಕ್ಕೆ ಪ್ರತಿಯಾಗಿ ನಾಲ್ಕು ಕಡೆಗಳಿಂದಲೂ ಕತ್ತೆಗಳು ಕೂಗಿಡುತ್ತಿದ್ದುವು. ಒಡನೆಯೇ ಭೀಷ್ಮ, ದ್ರೋಣ, ಕೃಪ, ಸೋಮದತ್ತ, ಬಾಹ್ಲೀಕಾದಿಗಳು ಆ ಸ್ಥಳವನ್ನು ಬಿಟ್ಟುಹೋದರು. ಈ ವಿಚಾರವನ್ನೆಲ್ಲ ವಿದುರನು ನನಗೆ ತಿಳಿಸಿದಮೇಲೆ, ನಾನು ದ್ರೌಪದಿಯು ಕೇಳಿದ ವರಗಳನ್ನೆಲ್ಲ ಕೊಡುವುದಾಗಿ ಹೇಳಿದೆನು. ಅವಳು ತನ್ನ ಪತಿಗಳ ದಾಸ್ಯವನ್ನು ತಪ್ಪಿಸಬೇಕೆಂದಳು. ಅದರಂತೆ ನಾನು ಪಾಂಡವರನ್ನು ಬಿಡಿಸಿ, ಅವರ ರಥಚಾಪಗಳೊಡನೆ ಹೋಗುವಂತೆ ಕಳುಹಿಸಿಬಿಟ್ಟೆನು. ಆದರೇನು ? ಆಗಲೇ ಧರ್ಮಜ್ಞನಾದ ವಿದುರನು ನನ್ನನ್ನು ಕುರಿತು “ ರಾಜಾ! ನೀನು ಇನ್ನುಮೇಲೆ ಏನುಮಾಡಿದರೇನು? ದ್ರೌಪದಿಯನ್ನು ದುರ್ಯೋಧನನು ಸಭೆಗೆ ಎಳೆಯಿಸಿದುದೇ ಭರತವಂಶಕ್ಕೆ ಕೊನೆಗಾಲವು. ಆ ಪಾಂಚಾಲಿಯು ಶ್ರೀದೇವಿಯೇ ! ಲೋಕದಲ್ಲಿ ಅವಳಿಗೆ ಮೇಲಾದವಳೊಬ್ಬಳಿಲ್ಲ. ಅವಳು ದೇವಾಂಶದಿಂದ ಸೃಷ್ಟಿಸಲ್ಪಟ್ಟು ಪಾಂಡವರನ್ನು ಸೇರಿರುವಳು. ಅವಳಿಗಾದ ಭಂಗವನ್ನು ಪಾಂಡವರು ಎಂದಿಗೂ ಸಹಿಸಲಾರರು. ವೃಷ್ಣಿಗಳಾಗಲಿ, ಪಾಂಚಾಲರಾಗಲಿ ಇದನ್ನು ಸಹಿಸಿಕೊಂಡು ಸುಮ್ಮನಿರಲಾರರು. ಕೃಷ್ಣಸಹಾಯವುಳ್ಳ ಅರ್ಜುನನು ಪಾಂಚಾಲರೊಡಗೂಡಿ, ಹಗೆತೀರಿಸಿಕೊಳ್ಳುವುದಕ್ಕಾಗಿ ಬಾರದಿರನು. ದಂಡಧಾರಿಯಾದ ಯಮನಂತೆ ಅವರ ನಡುವೆ ಭೀಮನು ಗದೆಯನ್ನು ತಿರುಗಿಸುತ್ತ ಬರುವನು. ಅರ್ಜುನನ ಗಾಂಡೀವಘೋಷವೂ, ಭೀಮನ ಗದಾಧ್ವನಿಯೂ, ನಮ್ಮ ಕಡೆಯ ರಾಜರಿಗೆ ಕಿವಿಯಿಂದ ಕೇಳಿಸುವುದೇ ಅಶಕ್ಯವಾಗುವುದು. ಇದನ್ನೆಲ್ಲ ಯೋಚಿಸಿದರೆ, ಪಾಂಡವರೊಡನೆ ಸ್ನೇಹವೇ ಶ್ರೇಯಸ್ಕರವೆಂದು ನನಗೆ ತೋರಿದೆ. ಅವರನ್ನು ವಿರೋಧಿಸುವುದು ಸರಿಯಲ್ಲ. ಹೇಗೆ ನೋಡಿದರೂ ಕೌರವರಿಗಿಂತಲೂ ಪಾಂಡವರು ಬಲಿಷ್ಠರು. ಅಂತಹ ಜರಾಸಂಧನನ್ನು ಭೀಮನು ತನ್ನ ಕೈಯಿಂದಲೇ ಗುದ್ದಿ ಕೆಡಹಿದನಲ್ಲವೆ ?

ಆದುದರಿಂದ ನಿಮಗೆ ಪಾಂಡವರೊಡನೆ ಸಂಧಿಯೇ ಶ್ರೇಯಸ್ಕರವು. ಕೌರ ಪಾಂಡವರಿಬ್ಬರಿಗೂ ಹಿತವಾದ ಈ ಕಾರ್ಯವನ್ನು ನೀನು ನಡೆಸುವುದರಿಂದ ಕ್ಷೇಮವುಂಟು" ಎಂದನು.

ಸಂಜಯಾ! ವಿದುರನು ಎಷ್ಟು ಹೇಳಿದರೇನು? ಮಗನಮೇಲಿನ ಮೋಹದಿಂದ ಬುದ್ಧಿಗೆಟ್ಟ ನಾನು ಅವನ ಹಿತವಾದಗಳೊಂದನ್ನೂ ಕೇಳದೆ ಈ ಅವಸ್ಥೆಗೆ ಬಂದೆನು" ಎಂದನು.

ಇದು ನೂರಮೂರನೆಯ ಅಧ್ಯಾಯವು.

**ಇಲ್ಲಿಗೆ ಅನುದ್ಯೂತಪರ್ವವು ಮುಗಿದುದು.**

**ಸಭಾಪರ್ವವು ಸಮಾಪ್ತವು.**

ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ

**ಭದ್ರಂ! ಶುಭಂ!! ಮಂಗಳಂ!!!**



People's Printing & Publishing House, Ltd., Madras.